# ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

ಹನುಮಪ್ಪ

ಮಾರ್ಗದರ್ಶಕರು

ಡಾ. ಜಾಜಿ ದೇವೇಂದ್ರಪ್ಪ

ಸಂಯೋಜಕರು

ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಗಂಗಾವತಿ




ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಹನುಮಪ್ಪ**

ಮಾರ್ಗದರ್ಶಕರು

**ಡಾ. ಜಾಜಿ ದೇವೇಂದ್ರಪ್ಪ**

ಸಂಯೋಜಕರು

ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಗಂಗಾವತಿ





**ಜಾನಪದ ಅಧ್ಯಯನ ವಿಭಾಗ**

**ಸಮಾಜ ವಿಜ್ಞಾನಗಳ ನಿಕಾಯ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೨೦

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಹನುಮಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ., ಪದವಿಗಾಗಿ ಸ್ವಂತ ಪರಿಶ್ರಮದಿಂದ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಮೂಲವಾಗಿದ್ದು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಡಾ. ಜಾಜಿ ದೇವೇಂದ್ರಪ್ಪ**
ಸಂಯೋಜಕರು
ಸ್ನಾತಕೋತ್ತರ ಅಧ್ಯಯನ ವಿಭಾಗ
ಸರ್ಕಾರಿ ಪ್ರಥಮ ದರ್ಜೆ, ಕಾಲೇಜು
ಗಂಗಾವತಿ

ಸ್ಥಳ : ವಿದ್ಯಾರಣ್ಯ
ದಿನಾಂಕ: 01.12.2020

# ಸಂಶೋಧಕರ ಪ್ರಮಾಣ ಪತ್ರ

**"ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಜಾಜಿ ದೇವೇಂದ್ರಪ್ಪ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ ಸಮಾಜ ವಿಜ್ಞಾನಗಳ ನಿಕಾಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದೇನೆ. ಈ ಸಂಶೋಧನ ಮಹಾಪ್ರಬಂಧವು ಮೂಲವಾಗಿದ್ದು, ಇಡಿಯಾಗಿ ಇಲ್ಲವೆ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಂಶೋಧಕರು**


**ಹನುಮಪ್ಪ**
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬


ಸ್ಥಳ : ವಿದ್ಯಾರಣ್ಯ
ದಿನಾಂಕ: 01-12-2020

# ಪರಿವಿಡಿ

ಅಧ್ಯಾಯ – ಒಂದು ೧–೧೧

**ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ**

೧.೧. ಪ್ರಸ್ತಾವನೆ

೧.೨. ಅಧ್ಯಯನದ ಸ್ವರೂಪ

೧.೩. ಉದ್ದೇಶ

೧.೪. ವ್ಯಾಪ್ತಿ

೧.೫. ವೈಧಾನಿಕತೆ

ಅಧ್ಯಾಯ – ಎರಡು ೧೨–೩೧

**ಕನ್ನಡ ಅನುವಾದಿತ ಕಥೆಗಳ ಚಾರಿತ್ರಿಕ ಸಮೀಕ್ಷೆ**

೨.೧. ಪ್ರವೇಶ

೨.೨. ಬ್ರಿಟಿಷ್ ಮಿಷನರಿಗಳ ಕಾಲದ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೩. ತೆಲುಗು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೪. ಮಲಿಯಾಳಂ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೫. ಮರಾಠಿ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೬. ತಮಿಳು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ಅಧ್ಯಾಯ – ಮೂರು ೩೨–೧೧೭

**ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ**

೩.೧. ಪ್ರವೇಶ

೩.೨. ಶೋಷಿತರ ವೇದನೆ ಮತ್ತು ಶೋಷಕರ ದಬ್ಬಾಳಿಕೆ

೩.೩. ಕೂಲಿಕಾರರ ಕೂಗು ಮತ್ತು ಶೋಷಣೆಯ ಮೂಲ

೩.೪. ವರ್ಣ ವ್ಯವಸ್ಥೆಯಲ್ಲಿ ಸ್ಪೃಶ್ಯ ಮತ್ತು ಅಸ್ಪೃಶ್ಯರು

೩.೫. ದೇಶ ಮತ್ತು ಬಡತನವನ್ನು ಬಾಧಿಸುವ ಅಸಮಾನತೆ

ಅಧ್ಯಾಯ – ನಾಲ್ಕು ೧೧೮–೨೦೩

**ಕನ್ನಡ ಅನುವಾದಿತ ಕಥೆಗಳು : ಮಹಿಳಾ ಸಂವೇದನೆ**

೪.೧. ಪ್ರವೇಶ

೪.೨. ದಲಿತ ಮಹಿಳೆ ಮತ್ತು ವೇಶ್ಯಾ ಪದ್ಧತಿ

೪.೩. ಬಡತನದ ನೋವು ಮತ್ತು ದುರ್ಬಲರ ಮೇಲೆ ಅತ್ಯಾಚಾರ

೪.೪. ಮಹಿಳಾ ಶೋಷಣೆ ಮತ್ತು ದಲಿತ ಮಹಿಳಾ ಬದುಕಿನ ಚಿತ್ರಣ

೪.೫. ಮಹಿಳಾ ಅಸಹಾಯಕತೆ ಮತ್ತು ಬಂಡವಾಳಶಾಹಿಗಳ ದುರುಪಯೋಗ

ಅಧ್ಯಾಯ – ಐದು ೨೦೪–೨೭೮

**ಕನ್ನಡ ಕಥೆಗಳು ಮತ್ತು ಅನುವಾದಿತ ಕಥೆಗಳು : ದಲಿತ ಸಂವೇದನೆಯ ಸ್ವರೂಪ, ತಾತ್ವಿಕತೆಯ ತೌಲನಿಕ ನೋಟ**

೫.೧. ಪ್ರವೇಶ

೫.೨. ಜಾತಿ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರು

೫.೩. ಬಂಡವಾಳಶಾಹಿಗಳು ಮತ್ತು ಹಸಿದ ಹೊಟ್ಟೆಗಳ ಬದುಕು

೫.೪. ಜೀತ ಪದ್ಧತಿ ಮತ್ತು ಜಮೀನ್ದಾರರ ಒಡೆತನ

೫.೫. ದೇವದಾಸಿ ಪದ್ಧತಿ ಮತ್ತು ಜಾತಿ–ಭೇದದ ಸಂಘರ್ಷ

ಅಧ್ಯಾಯ – ಆರು

**ಅಧ್ಯಯನ ಫಲಿತಗಳು** ೨೭೯–೨೯೧

ಸಮಾರೋಪ

ಅಭ್ಯಾಸ ಗ್ರಂಥಗಳು

ಅಧ್ಯಾಯ : ಒಂದು

# ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಸ್ವರೂಪ

೧.೩ ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ವೈಧಾನಿಕತೆ

ಅಧ್ಯಾಯ : ಒಂದು

# ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

## ೧.೧. ಪ್ರಸ್ತಾವನೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಥೆ ಪ್ರಮುಖವಾದ ಪ್ರಕಾರ. ಪ್ರಾಚೀನ ಭಾರತೀಯ ಕರ್ನಾಟಕ ಪರಿಚಯದಲ್ಲಿ ಕಥೆ ಹೊಸದೇನಲ್ಲ. ಆದರೆ ಅದಕ್ಕೆ ನಿರ್ದಿಷ್ಟವಾದ ರೂಪರೇಷೆ (from) ಗುರುತಿಸಲು ಸಾಧ್ಯವಿಲ್ಲ. ಇಲ್ಲವೇ ಅದು ಸಾಂಪ್ರದಾಯಕವಾದದ್ದು. ವಸಾಹತುಶಾಹಿ ಕಾಲ ಸಂದರ್ಭದಲ್ಲಿ ಭಾರತೀಯ ಸಮಾಜದಲ್ಲಾದ ತೀವ್ರ ಆಧುನಿಕ ಪರಿಣಾಮವಾಗಿ ಹಲವು ಬದಲಾವಣೆಗಳು ಉಂಟಾದವು. ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತ್ಯಂತರಗಳಂತೆ ಸೃಜನಶೀಲತೆಯಲ್ಲಿಯೂ ಹಲವು ಕ್ರಾಂತಿಗಳು ಉಂಟಾದವು. ಅದರ ಫಲವಾಗಿ ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರಬಂಧ ಇತ್ಯಾದಿ ಪ್ರಕಾರಗಳ ಹೊಸ ನುಡಿ ನಿರೂಪಣೆಗಳು ಹುಟ್ಟಿಕೊಂಡವು. ಅದರಲ್ಲಿ ಸಶಕ್ತವಾದ ಸಮ್ಮೋಹನ ಸಾಧ್ಯತೆಯನ್ನು ಪಡೆದುಕೊಂಡು ಪ್ರಕಾರವೆಂದರೆ ಸಣ್ಣ ಕಥೆ. ಆಲನ್ ಅಡ್ಗರ್ ಪೋ ಎಂಬ ಜಗತ್ತಿನ ಸಣ್ಣಕಥೆಗಳ ಕರ್ತೃ ಇದಕ್ಕೆ ನಾಂದಿ ಹಾಡಿದವನು.

ಆಧುನಿಕತೆಯ ಒತ್ತಡದಲ್ಲಿ ಕೈಗಾರಿಕಾ ಕ್ರಾಂತಿಯ ಅಬ್ಬರದಲ್ಲಿ ಕಳೆದು ಹೋಗುತ್ತಿರುವ ಸೃಜನಶೀಲತೆಯನ್ನು ನಿರ್ಮಾಣ ಮಾಡಲು (Reconstructed) ಸಣ್ಣಕಥೆ ಎಂಬ ಪ್ರಕಾರ ಸೇತುಬಂಧವಾಗಿ ನಿಂತಿತು. ಕನ್ನಡ ಸಾಹಿತ್ಯದ ಸಂದರ್ಭದಲ್ಲಿಯೂ ಸಣ್ಣ ಕಥೆಯ ಪ್ರಕಾರ ಆರಂಭವಾಗಿದ್ದು ವಿಶೇಷ. ೧೮ನೇ ಶತಮಾನದಲ್ಲಿ ಕರ್ನಾಟಕಕ್ಕೆ ಬಂದ ಬ್ರಿಟಿಷ್ ಮಿಷನರಿಗಳು ಹಲವು ಜ್ಞಾನ ಕ್ಷೇತ್ರಗಳನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸುವ ಮೂಲಕ ಪರಿಚಯ ಮಾಡಿಕೊಟ್ಟರು. ಹಲವು ಮಿಷನರಿಗಳು ಹಲವು ಕಥೆಗಳನ್ನು (ಯೇಸುವಿನ ಕಥೆಗಳು) ಕನ್ನಡಕ್ಕೆ ಅನುವಾದಿಸಿದ್ದಾರೆ. ಇದರ ಮುಂದುವರಿಕೆಯ ಪರಂಪರೆಯಾಗಿ ಭಾರತೀಯ ಭಾಷೆಗಳ ಹಲವಾರು ಕಥೆಗಳು ಪರಸ್ಪರ ಅನುವಾದಗೊಳ್ಳುವ ಕಾಲ ಆರಂಭವಾಯಿತು. ಭಾರತೀಯ ಸಾಂಸ್ಕೃತಿಕ ಈ ಲೋಕದ ಕೇಂದ್ರ ಸ್ಥಾನವಾಗಿದ್ದ ಬೆಂಗಾಲಿ ಭಾಷೆಯ ಹಲವು ಕಥನಗಳು ಅಂದರೆ ಕಥೆ, ಕಾದಂಬರಿ, ನಾಟಕ ಕನ್ನಡಕ್ಕೆ ವಿಪುಲವಾಗಿ ಅನುವಾದಗೊಂಡಿವೆ.

ಅಷ್ಟೇ ಅಲ್ಲ ಸಂಸ್ಕೃತ ಭಾಷೆಯ ಹಲವು ಪುರಾಣೀಕೃತ ಕಥೆಗಳು ಕನ್ನಡಕ್ಕೆ ಸಣ್ಣ ಕಥೆಗಳಾಗಿ ರೂಪಾಂತರಗೊಂಡಿವೆ. ಮುಂದಿನ ಕಾಲಾವಧಿಯಲ್ಲಿ ಅಂದರೆ, ಮಿಷನರಿ ನಂತರದಲ್ಲಿ ಹಿಂದಿಯ

ಹಲವು ಕಥೆಗಳು ಅನುವಾದಗೊಂಡವು. ಅಲ್ಲದೆ ದ್ರಾವಿಡ ಭಾಷೆಗಳ ಹಲವು ಕಥೆಗಳು ಕನ್ನಡಕ್ಕೆ ಇಂದಿಗೂ ಅನುವಾದಗೊಳ್ಳುತ್ತಲೇ ಇವೆ. ಕನ್ನಡಕ್ಕೆ ಅನುವಾದಗೊಂಡ ಬೃಹತ್ ಕಥಾ ಪರಂಪರೆಯನ್ನು ಅವಲೋಕಿಸುತ್ತಾ ಹೋದಂತೆ ಅಲ್ಲಿ ದಲಿತ ವಿಶಿಷ್ಟ ಲೋಕ ತೆರೆದುಕೊಳ್ಳುವುದು ಸತ್ಯ. ಇಂತಹ ಅಧ್ಯಯನ ಕುತೂಹಲಕಾರಿಯಾದದ್ದು.

ಹೀಗೆ ಕನ್ನಡಕ್ಕೆ ಅನುವಾದಗೊಂಡ ಹಲವು ಭಾಷೆಯ ಕಥೆಗಳ ಸ್ವರೂಪ ವಿಭಿನ್ನವಾಗಿರುವುದರಿಂದ ಅಲ್ಲಿನ ದಲಿತ ಸಂವೇದನೆಯ ಸ್ವರೂಪವನ್ನು ಅಧ್ಯಯನ ಮಾಡುವ ಅಗತ್ಯವಿದೆ. ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧದಲ್ಲಿ ತೆಲುಗು, ತಮಿಳು, ಮಲೆಯಾಳಿ, ಮರಾಠಿ ಭಾಷೆಯ ಕನ್ನಡನುವಾದಿತ ಕಥೆಗಳನ್ನು ಆಯ್ದುಕೊಂಡು ಘಟನಾ ಪ್ರಧಾನ ಮತ್ತು ಪಾತ್ರಪ್ರಧಾನ ಕಥೆಗಳಲ್ಲಿರುವ ದಲಿತ ಸಂವೇದನೆಯನ್ನು ಶೋಧಿಸಿ, ಪ್ರಸ್ತುತ ಸಂದರ್ಭಕ್ಕೂ ಅನ್ವಯವಾಗುವ ವಿಷಯ ವಸ್ತುಗಳ ಕುರಿತು ಇಲ್ಲಿ ಅವಲೋಕನ ಮಾಡಲಾಗಿದೆ. ಮನುವಾದಿಗಳ ಸಾಮಾಜಿಕ ನಿಯಂತ್ರಣದ ನಿಯಮಗಳಿಂದ ನಲುಗಿದ ದಲಿತರ ಬದುಕಿನ ದುರಂತವನ್ನು ಕುರಿತು ಈ ಕಥೆಗಳ ಸಮ್ಮುಖವಾಗಿ ಅಧ್ಯಯನಶೀಲತೆಯನ್ನು ವಿಸ್ತರಿಸಿಕೊಳ್ಳಲಾಗಿದೆ.

ದಮನಿತರ ಧ್ವನಿಯಾಗಿ ನಿಂತ ದಲಿತ ಸಾಹಿತ್ಯದ ಕಥೆಗಳನ್ನು ಸಾಮಾಜಿಕ ಆಡಳಿತ ವ್ಯವಸ್ಥೆಗೆ ಪರಿವರ್ತನೆಯ ಹಾದಿಯಲ್ಲಿ ನಿಲ್ಲಿಸಿ ದಲಿತ ಚಿಂತನೆಗಳನ್ನು ಈ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿರುತ್ತದೆ. ಬಹುತ್ವದ ರಾಷ್ಟ್ರದಲ್ಲಿ ಬಹುಭಾಷಿಕ ಆಡಳಿತ ವ್ಯವಸ್ಥೆಯಲ್ಲಿ ಕಂಡುಬರುವ ದಲಿತರ ಒಡಲಾಳದ ನೋವಿನ ನೆಲೆಗಳನ್ನು ಈ ಸಂಶೋಧನೆಯ ಮೂಲಕ ಹುಡುಕಿಕೊಳ್ಳಲಾಗಿದೆ. ದಲಿತರ ಬದುಕಿನ ಬಗ್ಗೆ ಜಾಗೃತಿಯನ್ನು ಮೂಡಿಸುವ ಈ ಕಥೆಗಳು ಪಟ್ಟಭದ್ರ ಹಿತಾಸಕ್ತಿಗಳ ಕಪಿಮುಷ್ಠಿಯಿಂದ ಬಿಡುಗಡೆಯ ಆಶಯದೊಂದಿಗೆ ದಲಿತರ ಸ್ವತಂತ್ರತೆಯ ಸ್ವಾಭಿಮಾನದ ಬದುಕನ್ನು ಕಟ್ಟಲು ಹೋರಾಟ ನಡೆಸುತ್ತಿವೆ. ಇಂತಹ ದಲಿತ ಸಂವೇದನೆಯುಳ್ಳ ತೆಲುಗು, ತಮಿಳು, ಮಲಿಯಾಳಿ, ಮರಾಠಿ ಕನ್ನಡನುವಾದಿತ ಕಥೆಗಳಲ್ಲಿರುವ ದಲಿತಪರ ಕಾಳಜಿಯನ್ನು ಅಂಬೇಡ್ಕರ್‌ವಾದ, ಲೋಹಿಯವಾದ, ಮಾರ್ಕ್ಸವಾದ, ಲೆನಿನ್ ವಾದಗಳ ಮುಖೇನ ಇಲ್ಲಿನ ಚಿಂತನೆಗಳನ್ನು ನನ್ನ ಸಂಶೋಧನೆಯ ನೆಲೆಗೆ ಅಳವಡಿಸಿಕೊಳ್ಳಲಾಗಿದೆ.

ಮಾನವೀಯತೆ, ಮಾನವ ಪ್ರೇಮ, ಅನುಕಂಪ, ವಾತ್ಸಲ್ಯ ಭಾವನೆಗಳನ್ನು ಮೂಡಿಸುವ ಈ ಕಥೆಗಳನ್ನು ಬದುಕಿನ ವಾಸ್ತವದ ಗುಣಗಳಿಗೆ ಅಳವಡಿಸಿ ಸಂಶೋಧನಾ ಪ್ರಕ್ರಿಯೆಗೆ ತೊಡಗಿಸಿಕೊಳ್ಳಲಾಗಿದೆ. ದುಡಿಯುವ, ಶೋಷಿತರ ನಾಡಿಮಿಡಿತಕ್ಕೆ ತಕ್ಕಂತೆ ಇಲ್ಲಿನ ಕಥೆಗಳು ರಚನೆಯಾಗಿದ್ದು ಇವು ಅನ್ಯಾಯವನ್ನು ವಿರೋಧಿಸುವ ನಿಚ್ಚಳ ಧೋರಣೆಯನ್ನು ಹೊಂದಿರುತ್ತವೆ. ತಲತಲಾಂತರಗಳಿಂದ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದು ಹಾಗೂ ಉಳ್ಳವರ ತುಳಿತಕ್ಕೆ ಒಳಪಟ್ಟು ಸಮಾಜದಿಂದ ತಮಗೆ ಸಿಗಬೇಕಾದ ಎಲ್ಲಾ ಸವಲತ್ತುಗಳಿಂದ ವಂಚಿತರಾಗಿ ಇತರೆ ಪ್ರಾಣಿಗಳಿಗಿಂತಲೂ ಕೀಳು ಬದುಕನ್ನು ನಡೆಸುವಂತವರ ಕುರಿತು ಈ ಕಥೆಗಳ ಅವಲೋಕನದಿಂದ ದಲಿತರ ಸಂವೇದನೆಗಳನ್ನು

ಗುರುತಿಸಲಾಗಿದೆ. ಅಸ್ಪೃಶ್ಯರು, ಬಹಿಷ್ಕೃತರಾದ ದಲಿತರನ್ನು ಜಾತಿಯ ಹೆಸರಿನಿಂದ ಗುರುತಿಸಿ ಅವರನ್ನು ಆರ್ಥಿಕವಾಗಿ ದುರ್ಬಲರನ್ನಾಗಿ ಮಾಡಿ ಶೋಷಣೆಯನ್ನು ಶತಮಾನಗಳಿಂದಲೂ ಬಂಡವಾಳಶಾಹಿಗಳು ಮಾಡುತ್ತ ಬಂದಿದ್ದಾರೆ.

ಈ ದಿಶೆಯಲ್ಲಿ ಪ್ರಸ್ತುತ ಸಂದರ್ಭಕ್ಕನುಸಾರವಾಗಿ ಇಲ್ಲಿನ ದಲಿತ ಸಂವೇದನೆಗಳುಳ್ಳ ಕಥೆಗಳನ್ನು ನನ್ನ ಸಂಶೋಧನಾ ಅಧ್ಯಯನಕ್ಕೆ ಅಳವಡಿಸಿಕೊಂಡಿರುವುದು ತುಂಬಾನೇ ಅನಿವಾರ್ಯತೆ ಮತ್ತು ಅಗತ್ಯತೆಯನ್ನು ಹೊಂದಿರುತ್ತದೆ. ಸುಮಾರು ಇನ್ನೂರು ವರ್ಷಗಳಷ್ಟೂ ಸುದೀರ್ಘ ಚರಿತ್ರೆಯನ್ನು ಒಳಗೊಂಡಿರುವ ಸ್ತ್ರೀವಾದವು ಪಶ್ಚಿಮದಿಂದ ಭಾರತಕ್ಕೆ ಬಂದಿರುತ್ತದೆ. ಇದು ಯುರೋಪ್ ಖಂಡದ ಜರ್ಮನಿ, ನೆದರ್‌ಲ್ಯಾಂಡ್, ಫ್ರಾನ್ಸ್, ಇಟಲಿ, ಸ್ಕಾಂಡಿನೇವಿಯಾ ಮೊದಲಾದ ವಿವಿಧ ರಾಷ್ಟ್ರಗಳಲ್ಲಿ ಮತ್ತು ಬ್ರಿಟನ್, ಉತ್ತರ ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಮಹಿಳೆಯರ ಸ್ಥಾನಮಾನ ಮತ್ತು ಹಕ್ಕುಗಳಿಗಾಗಿ ಹೋರಾಟವನ್ನು ನಡೆಸಿಕೊಂಡು ಬಂದಿರುತ್ತದೆ. ಈ ಸ್ತ್ರೀವಾದದ ಹಿನ್ನೆಲೆಯಲ್ಲಿ ದಲಿತರ ಮಹಿಳೆಯರು ಅನುಭವಿಸುತ್ತಿರುವ ಮಾನಸಿಕ ಮತ್ತು ದೈಹಿಕ ಸಂಕಷ್ಟಗಳನ್ನು ಕುರಿತಾದ ವಿವೇಚನೆಯನ್ನು ಈ ದಲಿತ ಸಂವೇದನೆಯುಳ್ಳ ಕನ್ನಡ ಅನುವಾದಿತ ಕಥೆಗಳ ಮೂಲಕ ಸ್ತ್ರೀವಾದದ ಸೈದ್ಧಾಂತಿಕ ಚಹರೆಗಳನ್ನು ನನ್ನ ಅಧ್ಯಯನದ ಮುಖೇನ ರೂಪಿಸಿಕೊಳ್ಳಲಾಗಿದೆ.

೧೯೭೦ರ ಮಹಿಳಾ ವಿಮೋಚನಾ ಚಳುವಳಿಯ ಗುರಿಯನ್ನಿಟ್ಟುಕೊಂಡು ಮಹಿಳೆಯರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಶೋಷಣೆಗೆ ಒಳಪಟ್ಟ ಸಂಗತಿಗಳ ವಿರುದ್ಧ ಹೋರಾಟದ ತೀವ್ರತೆಯನ್ನು ಈ ಕಥೆಗಳ ಮೂಲಕ ನನ್ನ ಸಂಶೋಧನೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಮತ್ತು ಅದರ ವಿವಿಧ ಪಂಥಗಳ ಸೈದ್ಧಾಂತಿಕ ನೆಲೆಯಲ್ಲಿ ಅದರಲ್ಲಿ ಮುಖ್ಯವಾಗಿ ಕಪ್ಪು ಸ್ತ್ರೀವಾದ ಮತ್ತು ಮಾರ್ಕ್ಸವಾದಿ ಸ್ತ್ರೀವಾದಗಳ ಹಿನ್ನೆಯಲ್ಲಿ ಈ ಅನುವಾದಿತ ದಲಿತ ಕಥೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದೇನೆ. ದಲಿತ ಮಹಿಳೆಯ ಮೇಲೆ ಬಂಡವಾಳಶಾಹಿಗಳು ನಡೆಸುತ್ತಿರುವ ಶೋಷಣೆಯನ್ನು ಇಲ್ಲಿನ ಕಥೆಗಳು ವಾಸ್ತವ ಸಮಾಜಕ್ಕೆ ಕನ್ನಡಿ ಹಿಡಿಯುತ್ತಿವೆ. ಆದ್ದರಿಂದ ಇಂತಹ ದಲಿತ ಸಂವೇದನೆಗಳುಳ್ಳ ಕಥೆಗಳಲ್ಲಿರುವ ಮಹಿಳೆಯ ಪರ ಕಾಳಜಿಯ ಚಿಂತನೆಗಳನ್ನು ತೆಲುಗು, ತಮಿಳು, ಮಲಿಯಾಳಿ, ಮರಾಠಿ ಕಥೆಗಳಿಂದ ಕನ್ನಡನುವಾದ ಕಥೆಗಳಲ್ಲಿ ಸ್ತ್ರೀವಾದವನ್ನು ಗುರುತಿಸಿಕೊಂಡು ಅವುಗಳನ್ನು ನನ್ನ ಸಂಶೋಧನಾ ಚಿಂತನೆಯಲ್ಲಿ ಚರ್ಚೆಗೆ ಒಳಪಡಿಸಿರುತ್ತೇನೆ.

ಮಹಿಳಾ ಬದುಕಿನ ವಿವಿಧ ಮಜಲುಗಳನ್ನು ದಲಿತ ಸಂವೇದನೆಯುಳ್ಳ ನನ್ನ ಆಯ್ದ ಕಥೆಗಳಲ್ಲಿ ಕಾಣಬಹುದಾಗಿದೆ. ಹೀಗೆ ಮಹಿಳೆಯು ಸ್ವತಂತ್ರವಾಗಿ ಸ್ವಾಭಿಮಾನದಿಂದ ತನ್ನ ಸಂವಿಧಾನಿಕ ಹಕ್ಕುಗಳನ್ನು ಪಡೆದುಕೊಳ್ಳಬೇಕು. ಸ್ವತಂತ್ರ ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಂವಿಧಾನದ ಆಶಯದ ಅಡಿಯಲ್ಲಿ ನಿರ್ಭೀತಿಯಿಂದ ಬದುಕುವಂತಾಗಬೇಕು. ಅಂಬೇಡ್ಕರ್ ರವರ ಸ್ತ್ರೀಪರ ಕಾಳಜಿಯನ್ನು ನನ್ನ ಆಯ್ದ ಕಥೆಗಳಲ್ಲಿ ಗುರುತಿಸಿ ದಲಿತ ಮಹಿಳೆಯರ ಸಂಕಟಗಳನ್ನು ಮತ್ತು

ಪ್ರಸ್ತುತ ಮಹಿಳಾ ಬದುಕಿಗಿರುವ ಸವಾಲುಗಳನ್ನು ಅಧ್ಯಯನಕ್ಕೆ ಸಂಶೋಧನಾ ನೆಲೆಯಲ್ಲಿ ಅಳವಡಿಸಿಕೊಂಡಿದ್ದೇನೆ. ಸಮಾನತೆಯ ತತ್ವದಡಿಯಲ್ಲಿ ದಲಿತ ಮಹಿಳೆಯರಿಗೆ ಉತ್ತಮವಾದ ಸ್ಥಾನಮಾನಗಳು ಸಿಗುವಂತಾಗಬೇಕು.

ದಲಿತ ಮಹಿಳೆಯರ ಮೇಲೆ ನಡೆಸುತ್ತಿರುವ ದೌರ್ಜನ್ಯ, ಅತ್ಯಾಚಾರಗಳಂತಹ ಕೆಟ್ಟ ಚಟುವಟಿಕೆಗಳು ಬಂಡವಾಳಶಾಹಿಗಳಿಂದ ನಿಲ್ಲಬೇಕು ಎಂಬ ಸ್ತ್ರೀವಾದದ ಸೈದ್ಧಾಂತಿಕ ನೆಲೆಗಳಲ್ಲಿ ಮೂಡಿಬಂದಿರುವ ದಲಿತ ಕಥೆಗಳನ್ನು ಮನಶಾಸ್ತ್ರೀಯ ಹಿನ್ನೆಲೆಯಲ್ಲಿ ನನ್ನ ವಿಚಾರಗಳಲ್ಲಿ ಮಂಡಿಸಿರುತ್ತೇನೆ. ಮಹಿಳೆಯರು ಸ್ವತಂತ್ರತೆಯಿಂದ ಬದುಕುವ ಹಕ್ಕುವುಳ್ಳವರಾಗಿದ್ದಾರೆ. ಅವರ ಅಸಹಾಯಕ ಜೀವನಕ್ಕೆ ಸ್ವತಂತ್ರದ ಆರ್ಥಿಕಬಲ ಬೇಕಾಗಿರುತ್ತದೆ. ಅದನ್ನು ಕಟ್ಟಿಕೊಡುವ ಸಾಮಾಜಿಕ ವ್ಯವಸ್ಥೆ ರೂಪಿತವಾಗಬೇಕಾಗಿದೆ ಎಂಬುವುದನ್ನು ಈ ಕಥೆಗಳ ಮೂಲಕ ಸ್ತ್ರೀವಾದವನ್ನು ವಿಶ್ಲೇಷಣೆ ಮಾಡಲಾಗಿದೆ. ದಲಿತ ಸಾಹಿತ್ಯವನ್ನು ವಚನಕಾರರ ಮತ್ತು ದಾಸಸಾಹಿತ್ಯದ ಕಾಲಘಟ್ಟದಲ್ಲಿ ಇದರ ಪ್ರಾಚೀನತೆಯನ್ನು ಕಂಡುಕೊಳ್ಳಬಹುದಾದರೂ ಅದು ತನ್ನದೆಯಾದ ಗುರುತರದ ವಿಶಿಷ್ಟರೂಪ ಪಡೆದು ಪ್ರಚಾರಕ್ಕೆ ಬಂದದ್ದು ನವ್ಯಸಾಹಿತ್ಯ ಪಥದ ನಂತರವೆಂದು ಹೇಳಬಹುದು.

ಭಾರತವು ಸ್ವತಂತ್ರವನ್ನು ಪಡೆದ ನಂತರ ಅಕ್ಷರ ಸಂಸ್ಕೃತಿಯಿಂದ ವಂಚಿತವಾದ ಸಮುದಾಯವು ಮೀಸಲಾತಿಯ ಅನುಕೂಲಗಳನ್ನು ಪಡೆದುಕೊಂಡು ಅದರ ಉಪಯೋಗದ ಪರಿಹಾರವಾಗಿ, ಅಕ್ಷರ ಸಂಸ್ಕೃತಿಯಿಂದ ವಂಚಿತ ಸಮುದಾಯದವರು ದಾಖಲಿಸಿದ ಸಾಹಿತ್ಯವೇ 'ದಲಿತ ಸಾಹಿತ್ಯ'ವಾಗಿ ಮುಂದುವರೆಯಿತು. ಕರ್ನಾಟಕದ ದಲಿತ ಸಾಹಿತ್ಯದ ಹುಟ್ಟಿಗೆ ಮಹಾರಾಷ್ಟ್ರದ ದಲಿತ ಫ್ಯಾಂಥರ್ಸ್, ಆಂಧ್ರದ ವಿರಸಂ, ಕರ್ನಾಟಕದ ಬೂಸಾ ಪ್ರಕರಣ ಮುಂತಾದವುಗಳು ಕಾರಣವಾದವು. ದಲಿತರು ತಾವು ಅನುಭವಿಸಿದ ಅವಮಾನದ ಸಂಕಷ್ಟಗಳನ್ನು ತಮ್ಮ ಸಾಹಿತ್ಯದ ಮೂಲಕವಾಗಿ ಹೊರಗೆ ಹಾಕತೊಡಗಿದರು. ೧೯೭೩ರಲ್ಲಿ ಪ್ರಕಟಿತವಾದ ದೇವನೂರ ಮಹದೇವರವರು ಬರೆದ 'ದ್ಯಾವನೂರು' ಎಂಬ ಕಥಾಸಂಕಲನವು ದಲಿತ ಸಾಹಿತ್ಯಕ್ಕೆ ನಾಂದಿಯಾಯಿತು.

ದಲಿತರು ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ತಮಗೆ ಸಿಗಬೇಕಾದ ಮೂಲಭೂತ ಹಕ್ಕುಗಳಿಂದ ವಂಚಿತರಾಗಿ ಪಡುತ್ತಿರುವ ಮಾನಸಿಕ ವ್ಯಥೆಗಳು ಸಾಹಿತ್ಯ ರೂಪದಲ್ಲಿ ಹರಿಯತೊಡಗಿದವು. ಅದರಂತೆ ಸಿದ್ಧಲಿಂಗಯ್ಯನವರು ತಮ್ಮ ಸ್ವತಂತ್ರ ಆಲೋಚನಾ ಕಾವ್ಯಶಕ್ತಿಯಿಂದ ಪುರೋಹಿತಶಾಹಿಯನ್ನು, ಪಟ್ಟಭದ್ರ ವ್ಯವಸ್ಥೆಯ ವಿರುದ್ಧ ಧ್ವನಿಯೆತ್ತಿ ಧಿಕ್ಕರಿಸಿದರು. ಅವರ ಹೊಲೆ ಮಾದಿಗರ ಹಾಡು (೧೯೭೫) ದಲಿತ ಧ್ವನಿಯಾಗಿ ಮೂಡಿಬಂದಿತ್ತು. 'ಪಂಚಮ ಪತ್ರಿಕೆ'ಯ ಮೂಲಕವಾಗಿ ದಲಿತ ಸಾಹಿತ್ಯವನ್ನು ದೇವನೂರ ಮಹದೇವ, ಸಿದ್ಧಲಿಂಗಯ್ಯ, ಇಂದೂಧರ ಹೊನ್ನಾಪುರ, ಶಿವಾಜಿ ಗಣೇಶನ್, ರಾಮದೇವ ರಾಕಿ, ಶಿವಮಲ್ಲು, ಗೋವಿಂದಯ್ಯ, ಮನಜ, ಮಳ್ಳೂರ ನಾಗರಾಜ್ ಮುಂತಾದ ದಲಿತ ಬರಹಗಾರರು ದಲಿತ ಸಾಹಿತ್ಯವನ್ನು ಬೆಳಕಿಗೆ ತಂದರು. ವಾಸ್ತವದ ಜೀವನದ ಸಂಗತಿಗಳನ್ನು ಇದ್ದದ್ದನ್ನು ಇದ್ದಂತೆ ಹೇಳುವ ಮತ್ತು ದಲಿತರನ್ನು ಕಗ್ಗತ್ತಲೆಯಿಂದ ಬೆಳಕಿಗೆ ತರುವ ಪ್ರಕ್ರಿಯೆಯನ್ನು ಈ ಸಾಹಿತಿಗಳು ತಮ್ಮ ಬರವಣಿಗೆಯಿಂದಲೇ ಪ್ರಾರಂಭ ಮಾಡಿದರು.

ದಲಿತನೆಂದರೆ ಶೋಷಣೆಗೆ ಒಳಪಟ್ಟವನು ಎಂದರ್ಥ. ಈ ಶೋಷಣೆಗೆ ಯಾವುದೇ ಜಾತಿ, ವರ್ಗ, ಲಿಂಗ, ಭೇದಗಳಿರುವುದಿಲ್ಲ. ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಶೋಷಣೆಗೆ ಒಳಪಟ್ಟವರು ಎಲ್ಲರೂ ದಲಿತರಾಗಿದ್ದಾರೆ. ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಶೋಷಣೆಗೆ ಒಳಪಟ್ಟವರು ದಲಿತರೆಂದೇ ಹೇಳಬಹುದು. ಸಾಮಾನ್ಯವಾಗಿ 'ಅಸ್ಪೃಶ್ಯ' ಎಂಬ ಪದಕ್ಕೆ ಭಾರತದಾದ್ಯಂತ ಹೊಂದಿಕೆಯಾಗಿ ಉಪಯೋಗಿಸುವ ಒಂದೇ ಪದ ದಲಿತವಾಗಿರುತ್ತದೆ. ಡಾ.ಬಿ.ಆರ್.ಅಂಬೇಡ್ಕರ್‌ರವರು ತಮ್ಮ ಬರವಣಿಗೆ ಯುದ್ಧಕ್ಕೆ 'ಡಿಪ್ರೆಸ್ಟ್' (ದಲಿತ) ಎಂಬ ಪದವನ್ನು ಉಪಯೋಗಿಸಿದ್ದರು. ಅದರಂತೆ ಗಾಂಧೀಜಿಯವರು 'ಹರಿಜನ' ಎಂಬ ಪದವನ್ನು ಬಳಸಿದ್ದರು. ೧೭ನೇ ಶತಮಾನದಲ್ಲಿ ಹರಿದಾಸರು ಅಸ್ಪೃಶ್ಯರನ್ನು ಕುರಿತು 'ಹರಿಜನ' ಎಂಬ ಪದದಿಂದ ಕರೆದಿದ್ದರು. ನಂತರ ಗಾಂಧೀಜಿಯವರು ಬಳಸಿದರೆನ್ನಲಾಗಿದೆ. ಆದರೆ ೧೯೭೩ರಲ್ಲಿ ಬಿ.ಬಸವಲಿಂಗಪ್ಪನವರ ಬೂಸಾ ಪ್ರಕರಣದ ಪರಿಣಾಮವಾಗಿ ದಲಿತರೆಲ್ಲರೂ ಒಂದಾಗಿತಮ್ಮ ದಿಟ್ಟ ಸ್ವಾಭಿಮಾನದ ಮನಸ್ಸಿನಿಂದ 'ಅಸ್ಪೃಶ್ಯ' ಎಂಬ ಜಾತಿಯ ಹೆಸರಿನಿಂದಲೇ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ.

ನಾವು ಯಾರ ಮಕ್ಕಳು ಆಗುವುದು ಬೇಡ. ಯಾರ ಮತ್ತೊಬ್ಬರ ಮಕ್ಕಳೂಅಲ್ಲ. ನಾವು ಎಲ್ಲರಂತೆ ಮನುಷ್ಯರ ಮಕ್ಕಳು. ನಮ್ಮನ್ನು ಮನುಷ್ಯರೆಂದುನೋಡಿದರೆ ಸಾಕು. ಮನುಷ್ಯರೆಂದು ತಿಳಿದುಕೊಂಡು ಪ್ರತಿಯೊಬ್ಬ ಮನುಷ್ಯನಿಗಿರುವ ಸ್ಥಾನಮಾನಗಳನ್ನು ನೀಡಿ ದಲಿತರನ್ನು ಮನುಷ್ಯರಂತೆ ಬಾಳಲು ಬಿಡಬೇಕು ಎಂಬ ಪ್ರಜ್ಞೆ ದಲಿತರಲ್ಲಿ ಸ್ವಾಭಿಮಾನದ ಚಿಗುರೊಡೆಯಿತು. ಇದರ ಪ್ರತಿಫವಾಗಿ ಕಾಲಕಾಲಾಂತರಗಳಿಂದಲೂ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಶೋಷಣೆಗೆ ಶೋಷಣೆಗೊಳಪಟ್ಟ ಹಿಂದುಳಿದ ದಲಿತ ಜನಾಂಗದವರು ತಮ್ಮ ಒಡಲಾಳದ ನೋವನ್ನು ಹೊರಹಾಕಲು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಲು ಸೃಷ್ಟಿಯಾದ ಈ ದಲಿತ ಸಾಹಿತ್ಯದ ತೆಲುಗು, ತಮಿಳು, ಮಲಿಯಾಳಂ, ಮರಾಠಿಯ ಕನ್ನಡನುವಾದಿತ ಕಥೆಗಳಲ್ಲಿರುವ 'ದಲಿತ ಸಂವೇದನೆ'ಯನ್ನು ನನ್ನ ಅಧ್ಯಯನಶೀಲತೆಗೆ ತೆಗೆದುಕೊಂಡು ಮಹಾಪ್ರಬಂಧವನ್ನು ಸಂಶೋಧನಾ ವಿಧಾನಗಳಿಂದ ರೂಪಿಸಿರುತ್ತೇನೆ.

## ೧.೨. ಅಧ್ಯಯನದ ಸ್ವರೂಪ

ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ ಎಂಬ ಶೀರ್ಷಿಕೆಯ ನನ್ನ ಸಂಶೋಧನಾ ಮಹಾಪ್ರಬಂಧದಲ್ಲಿ ತೆಲುಗು, ತಮಿಳು, ಮಲಿಯಾಳಂ, ಮರಾಠಿ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡ ಆಯ್ದ ಕಥೆಗಳಲ್ಲಿ ದಲಿತ ಸಂವೇದನೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಹಾಗೆಯೇ ನಮ್ಮ ಕನ್ನಡದ ಪ್ರಸ್ತುತ ದಲಿತ ಕಥೆಗಳ ಸಂವೇದನೆಯನ್ನು ಕುರಿತು ತೌಲನಿಕವಾಗಿ ನನ್ನ ಸಂಶೋಧನೆಗೆ ಅಳವಡಿಸಿಕೊಂಡಿದ್ದೇನೆ. ಬಹುತ್ವದ ರಾಷ್ಟ್ರವಾಗಿ, ಬಹುಭಾಷಿಕ ರಾಜ್ಯಾಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡು, ಸಮಾನತೆಯ ಸಂವಿಧಾನದ ಆಶಯದಡಿಯಲ್ಲಿ ಬದುಕುತ್ತಿರುವ, ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆ ತುಂಬಿಕೊಂಡಿರುತ್ತದೆ. ಇದರ ಸಂಕಟದ

ಪ್ರತಿಫಲವಾಗಿ ನೊಂದವರು ತಮ್ಮ ಲೇಖನಿಯ ಮೂಲಕ ದಲಿತರ ಸಂಕಷ್ಟಗಳನ್ನು ತಮ್ಮ ಕಥೆಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಅಂತಹ ಕಥೆಗಳನ್ನು ತೆಗೆದುಕೊಂಡು ನನ್ನ ಅಧ್ಯಯನಕ್ಕೆ ಒಳಪಡಿಸಿದಾಗ ತೆಲುಗಿನ ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳಲ್ಲಿ ಜಮೀನ್ದಾರಿ ಒಡೆತನದ ಪದ್ಧತಿಯು ಅತೀ ಹೆಚ್ಚು ಕಂಡುಬರುತ್ತದೆ. ಅದರ ಪ್ರಮಾಣ ನಮ್ಮ ಕರ್ನಾಟಕದಲ್ಲಿ ಕಡಿಮೆ ಇರುತ್ತದೆ. ಆದ್ದರಿಂದಲೇ ಆಂಧ್ರ ಸಾಹಿತ್ಯದಲ್ಲಿ ಜಮೀನ್ದಾರಿ ಪದ್ಧತಿಯನ್ನು ವಿರೋಧಿಸುವ ಕಥೆಗಳನ್ನು ಅನೇಕ ಕಥೆಗಾರರು ಇಲ್ಲಿ ತಮ್ಮ ಬರಹದ ಮೂಲಕ ಅಭಿವ್ಯಕ್ತಿಸಿರುವುದು ಕಂಡುಬರುತ್ತದೆ.

ಅದರಂತೆ ಮಹಾರಾಷ್ಟ್ರದಲ್ಲಿ ದಲಿತರ ಮೇಲೆ ನಡೆಸುವ ಶೋಷಣೆಯು ಹೆಚ್ಚು ಇರುವುದರಿಂದ ಅಲ್ಲಿ ದಲಿತರ ಸಾಹಿತ್ಯವು ವಿಪುಲವಾಗಿ ಬೆಳೆದಿರುವುದು ಕಂಡುಬರುತ್ತದೆ. ಮರಾಠಿಯಲ್ಲಿ ಪ್ರಕಟವಾಗಿರುವ ಆತ್ಮಚರಿತ್ರೆಯ ದಲಿತ ಕೃತಿಗಳಂತೆ ಕನ್ನಡ ದಲಿತ ಸಾಹಿತ್ಯದಲ್ಲಿ ಮೂಡಿಬರಬೇಕಾಗಿದೆ. ಉತ್ತರ ಭಾರತದಲ್ಲಿ ಅತೀ ಹೆಚ್ಚು ದಲಿತರ ಮೇಲೆ ಅತ್ಯಾಚಾರದಂತಹ ಘಟನೆಗಳು ನಡೆಯುತ್ತಿರುತ್ತವೆ. ಕೇರಳದಲ್ಲಿ ಮಹಿಳೆಯರ ಮೇಲೆ ನಡೆದ ಅತ್ಯಾಚಾರದ ಕಥೆಗಳು ಅತೀ ಹೆಚ್ಚು ಆದ್ದರಿಂದ ಮಲಿಯಾಳಂ ಭಾಷೆಯಲ್ಲಿ ಮಹಿಳಾ ಸಂವೇದನೆಗಳುಳ್ಳ ಕಥೆಗಳು ಹೆಚ್ಚು ಇರುತ್ತವೆ. ಸ್ತ್ರೀವಾದದ ನೆಲೆಯಲ್ಲಿ ಮಲಿಯಾಳಿ ಕಥೆಗಾರರು ದಲಿತ ಸ್ತ್ರೀ ಸಂವೇದನೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಅದರಂತೆ ತಮಿಳುನಾಡಿನಲ್ಲಿ ದಲಿತರು ಆರ್ಥಿಕ ಅಸಮಾನತೆಯಿಂದ ನರಳಾಡುತ್ತಿದ್ದಾರೆ. ಇದರಿಂದಾಗಿ ತಮಿಳು ಕಥೆಗಾರರು ತಮ್ಮ ಕಥೆಗಳಲ್ಲಿ ದಲಿತ ಪರ ಕಾಳಜಿಯ ಕಥೆಗಳನ್ನು ನಿರೂಪಿಸಿದ್ದಾರೆ. ಹೀಗೆ ತೆಲುಗು, ತಮಿಳು, ಮಲಿಯಾಳಿ, ಮರಾಠಿ ಭಾಷೆಗಳಿಂದ ಮೂಡಿ ಬಂದ ಕನ್ನಡನುವಾದಿತ ಕಥೆಗಳನ್ನು ತೆಗೆದುಕೊಂಡು ನನ್ನ ಸಂಶೋಧನೆಗೆ ಅಳವಡಿಸಿದಾಗ ಕರ್ನಾಟಕದಲ್ಲಿ ದಲಿತರ ಮೇಲೆ ನಡೆಯುವಂತಹ ಅತ್ಯಾಚಾರ ಅನ್ಯಾಯಗಳು ಕಡಿಮೆ ಇರುವುದು ಕಂಡುಬರುತ್ತದೆ. ಆಗಂತ ಕರ್ನಾಟಕದಲ್ಲಿ ದಲಿತರ ಮೇಲೆ ಶೋಷಣೆ ಇಲ್ಲವೆಂದಲ್ಲ ಅದರ ಪ್ರಮಾಣ ಕಡಿಮೆ ಇರುತ್ತದೆ. ಆದರೆ ನಮ್ಮ ಕರ್ನಾಟಕದಲ್ಲೂ ದಲಿತ ಸಾಹಿತ್ಯ ಫಲವತ್ತತೆಯಿಂದ ಬೆಳೆದಿರುವುದು ಕಂಡುಬರುತ್ತದೆ. ಕನ್ನಡದ ದಲಿತ ಕಥೆಗಾರರು ದಲಿತ ಸಂವೇದನೆಗಳನ್ನು ಹೇರಳವಾಗಿ ತಮ್ಮ ಕಥೆಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಇಂತಹ ದಲಿತ ಸಂವೇದನೆವುಳ್ಳ ಕಥೆಗಳನ್ನು ನನ್ನ ಸಂಶೋಧನೆಗೆ ಬಳಸಿಕೊಂಡಿದ್ದೇನೆ.

"ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧದಲ್ಲಿ ಅಧ್ಯಯನ ಅನುಕೂಲಕ್ಕಾಗಿ ೬ ಅಧ್ಯಾಯಗಳಲ್ಲಿ ಇದರ ಸ್ವರೂಪ ಅನಾವರಣಗೊಳ್ಳುತ್ತದೆ.

ಅಧ್ಯಾಯ-೧ : ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ, ಮತ್ತು ವೈಧಾನಿಕತೆ ಎಂಬುದಾಗಿದ್ದು, ಇದರಲ್ಲಿ ಅಧ್ಯಯನಕ್ಕೆ ಬೇಕಾದ ತಾಂತ್ರಿಕ ಅಂಶಗಳನ್ನು ಚರ್ಚಿಸಲಾಗುತ್ತದೆ.

ಅಧ್ಯಾಯ–೨ : ಕನ್ನಡ ಅನುವಾದಿತ ಕಥೆಗಳ ಚರಿತ್ರೆ ಎಂಬುದಾಗಿದ್ದು, ಈವರೆಗೆ ಬ್ರಿಟಿಷ್ ಮಿಷನರಿಗಳಿಂದ ಇಲ್ಲಿವರೆಗೆ ಕನ್ನಡಕ್ಕೆ ಅನುವಾದಗೊಂಡ ಕಥೆಗಳ ಒಂದು ಅವಲೋಕನವನ್ನು ಮಾಡಲಾಗುತ್ತದೆ.

ಅಧ್ಯಾಯ–೩ : ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ ಇದು ಅಧ್ಯಯನದ ಪ್ರಮುಖ ಅಧ್ಯಯನವಾಗಿದೆ. ಇದರಲ್ಲಿ ಭಾರತೀಯ ಭಾಷೆಗಳಾದ ತೆಲುಗು, ತಮಿಳು, ಮಲಿಯಾಳಿ, ಮರಾಠಿಯಿಂದ ಕನ್ನಡಕ್ಕೆ ಬಂದ ಕಥಾ ಜಗತ್ತಿನಲ್ಲಿ ಅನಾವರಣಗೊಂಡ ದಲಿತ ಸಂವೇದನೆಯನ್ನು ಅಧ್ಯಯನ ಮಾಡಲಾಗುತ್ತದೆ.

ಅಧ್ಯಾಯ–೪ : ಕನ್ನಡ ಅನುವಾದಿತ ಕಥೆಗಳಲ್ಲಿ ಮಹಿಳಾ ಸಂವೇದನೆ ಎಂಬುದಾಗಿದ್ದು, ಇಲ್ಲಿ ದಲಿತ ಮಹಿಳೆಯರ ತಲ್ಲಣಗಳನ್ನು ಅಭಿವ್ಯಕ್ತಿಸಿದ ತೆಲುಗು, ತಮಿಳು, ಮಲಿಯಾಳಿ, ಮರಾಠಿ ಭಾಷೆಗಳ ಕನ್ನಡನುವಾದಿತ ಕಥೆಗಳ ಅಧ್ಯಯನ ಮಾಡಲಾಗುತ್ತದೆ.

ಅಧ್ಯಾಯ–೫ : ಕನ್ನಡ ಕಥೆಗಳು ಮತ್ತು ಅನುವಾದಿತ ಕಥೆಗಳು : ದಲಿತ ಸಂವೇದನೆಯ ಸ್ವರೂಪ, ತಾತ್ವಿಕತೆಯ ತೌಲನಿಕ ನೋಟ ಎಂಬುದಾಗಿದ್ದು, ಕನ್ನಡ ದಲಿತ ಕಥೆಗಳಲ್ಲಿ ಇರುವ ದಲಿತ ಸಮುದಾಯದ ಸಂವೇದನೆಯ ನೆಲೆಗಳಿಗೂ ಇತರೆ ಭಾಷೆಗಳಿಂದ ಬಂದ ದಲಿತ ಸಂವೇದನೆಗಳಿಗೆ ಇರುವ ಸಂವೇದನೆಯ ಸ್ವರೂಪವನ್ನು ನೋಡುವುದು ಮತ್ತು ಅದರ ತಾತ್ವಿಕತೆಯನ್ನು ತೌಲನಿಕವಾಗಿ ರಚಿಸಿಕೊಳ್ಳುವುದು ಇಲ್ಲಿನ ಮುಖ್ಯವಾದ ಅಧ್ಯಯನವಾಗಿದೆ.

ಅಧ್ಯಾಯ–೬ : ಅಧ್ಯಯನ ಫಲಿತಗಳು ಎಂಬುದಾಗಿದ್ದು, ಇಲ್ಲಿ ಇಡೀ ಸಂಶೋಧನಾ ನಿಬಂಧದ ಒಟ್ಟು ಅಧ್ಯಯನದ ಫಲಶೃತಿಯನ್ನು ವಿವರಿಸಲಾಗುತ್ತದೆ. ಕೊನೆಗೆ ಅನುಬಂಧದಲ್ಲಿ ಅಧ್ಯಯನ ಗ್ರಂಥಗಳು ಪ್ರಮುಖವಾದ ಕೆಲವು ಘಟನೆಗಳನ್ನು ವಿವರಿಸಲಾಗುತ್ತದೆ.

### ೧.೩. ಅಧ್ಯಯನದ ಉದ್ದೇಶ

೧. ತೆಲುಗು, ತಮಿಳು, ಮಲಿಯಾಳಿ, ಮರಾಠಿ ಕಥನ ಸಾಹಿತ್ಯದಲ್ಲಿರುವ ದಲಿತಲೋಕದ ಸಂಕಟಗಳನ್ನು ಹುಡುಕುವುದು.

೨. ದಲಿತ ಮತ್ತು ಬಂಡಾಯ ಸಾಹಿತ್ಯ ಚಳುವಳಿಗಳು ದಲಿತರ ನೋವಿಗೆ ಸ್ಪಂದಿಸಿ ಹೊಸ ಬದುಕಿನತ್ತ ಸಾಗಿಸಿದ ಪ್ರಮುಖ ಪಾತ್ರವನ್ನು ಕಥೆಗಳಿಂದ ತಿಳಿಯುವುದು.

೩. ದಲಿತರ ನೋವುಗಳು ಎಲ್ಲವೂ ಒಂದೇ ಆದರೂ ಆಯಾ ಪ್ರಾದೇಶಿಕ ವಾಪ್ತಿಯಲ್ಲಿರುವ ಅದರ ಭಿನ್ನ ಸ್ವರೂಪಗಳನ್ನು ಕಂಡುಕೊಳ್ಳುವುದು.

೪. ಆಂಧ್ರದ 'ವಿರಸಂ' ಸಂಘಟನೆಯು ದಲಿತ ಅಸ್ಪೃಶ್ಯ ಬಹುಜನರ ಆಶೋತ್ತರಗಳನ್ನು ಈಡೇರಿಸಿದ ಪ್ರಮುಖ ಪಾತ್ರವನ್ನು ಕಥೆಗಳಿಂದ ಅಧ್ಯಯನ ಮಾಡುವುದು.

೫. ಕನ್ನಡ ದಲಿತ ಸಂವೇದನೆಯ ಕಥೆಗಳಿಗೂ ಇತರೆ ಭಾಷಿಕ ದಲಿತ ಸಂವೇದನೆಗಳ ನೆಲೆಯನ್ನು ತೌಲನಿಕವಾಗಿ ಅಧ್ಯಯನ ಮಾಡಿ ದಲಿತರ ವಾಸ್ತವ ಸ್ಥಿತಿಗಳನ್ನು ಮಾಪನ ಮಾಡುವುದು.

೬. ಕನ್ನಡ ಅನುವಾದಿತ ಕಥೆಗಳನ್ನಿಟ್ಟುಕೊಂಡು ಸಮಕಾಲಿನ ಕತೆಗಳಿಗೆ ನೆಲೆಯಾಗಿ ನಿಂತ ಅಂಬೇಡ್ಕರ್‌ವಾದ, ಲೋಹಿಯವಾದ, ಮಾರ್ಕ್ಸವಾದ ಮತ್ತು ಲೆಲಿನ್‌ವಾದ, ಫೆಮಿನಿಸಂ ಚಿಂತನೆಗಳನ್ನು ದಲಿತ ಕಥನಗಳಿಂದ ಕ್ರಿಯಾಶೀಲವಾಗಿ ರೂಪಿಸಿಕೊಳ್ಳುವುದು.

೭. ಮಾರ್ಕ್ಸವಾದ ಮತ್ತು ಪ್ರಾದೇಶಿಕ ಎಡಪಂಥಿಯ ಸಂಘಟನೆಗಳ ಪ್ರಭಾವದಿಂದ ಕೇರಳದಲ್ಲಿ ದಲಿತ ಸಾಹಿತ್ಯ ಭಿನ್ನ ರೂಪದಲ್ಲಿರುವುದನ್ನು ಗುರುತಿಸುವುದು.

೮. ತಮಿಳಿನ ಜಮೀಂದಾರಿ ಆಕ್ರಮಣದಿಂದ ನಲುಗಿದ ದಲಿತ ಅನುಭವಗಳು ಬದುಕಿನ ಕರುಣಾಜನಕ ಸ್ಥಿತಿಗಳು ವಿಭಿನ್ನವಾಗಿರುವುದಕ್ಕೆ ಕಾರಣಗಳನ್ನು ವಿಶ್ಲೇಷಿಸುವುದು.

೯. ಮರಾಠಿ ದಲಿತ ಸಾಹಿತ್ಯವು ತುಂಬಾ ತೀವ್ರತರವಾದ ತಲ್ಲಣವನ್ನು ಕಥೆಗಳ ಮೂಲಕ ನೀಡಿದೆ. ಇದರ ಪ್ರತಿಫಲವಾಗಿ ಉಂಟಾದ ಸಾಮಾಜಿಕ ಬದಲಾವಣೆಗಳನ್ನು ಪರೀಕ್ಷಿಸುವುದು.

### ೧.೪. ಅಧ್ಯಯನದ ವ್ಯಾಪ್ತಿ

ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ ಎಂಬ ಈ ಶೀರ್ಷಿಕೆಯಲ್ಲಿ ಪ್ರಮುಖವಾಗಿ ತೆಲುಗು, ಮರಾಠಿ, ತಮಿಳು, ಮಲಿಯಾಳಿ ಈ ನಾಲ್ಕು ಭಾಷೆಗಳ ೭೦ರ ದಶಕದ ನಂತರದ ಆಯ್ದ ಕಥೆಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಲಾಗುತ್ತದೆ.

### ೧.೫. ಅಧ್ಯಯನದ ವೈಧಾನಿಕತೆ

ಕನ್ನಡ ಸಂಶೋಧನಾ ಅಧ್ಯಯನದಲ್ಲಿ ಈವರೆಗೆ ದಲಿತ ಸಂವೇದನೆಯ ಹಲವು ಅಧ್ಯಯನಗಳು ನಡೆದಿವೆ. ಕನ್ನಡ ಅನುವಾದಿತ ಕಥೆಗಳ ಅಧ್ಯಯನ ತುಂಬಾ ಅಗತ್ಯವಾದದ್ದು. ಆಯ್ಕೆ ಮಾಡಿಕೊಂಡ ನಾಲ್ಕು ಭಾಷೆಗಳಿಂದ ಕನ್ನಡಕ್ಕೆ ಬಂದ ಕತೆಗಳನ್ನು ಇಟ್ಟುಕೊಂಡು ಸಮಕಾಲೀನ ಕಥೆಗಳಿಗೆ ನೆಲೆಯಾಗಿ ನಿಂತ ಅಂಬೇಡ್ಕರ್‌ವಾದ, ಲೋಹಿಯವಾದ, ಮಾರ್ಕ್ಸ್ ಮತ್ತು ಲೆನಿನ್ ಚಿಂತನೆಗಳು, ಮಾವೋವಾದಿ ಚಿಂತನೆಗಳು ಮತ್ತು ಫೆಮಿನಿಷ್ಠ ಐಡಿಯಾಲಜಿಗಳು ಈ ಕಥನಗಳನ್ನು ರೂಪಿಸುವಲ್ಲಿ ತುಂಬಾ ಕ್ರಿಯಾಶೀಲವಾಗಿದೆ. ಇಂತವುಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿ ಒಟ್ಟು ಪ್ರಾದೇಶಿಕವಾರು ದಲಿತ ಅಸ್ಪೃಶ್ಯರ ಸಂವೇದನೆಯ ಹಲವು ತಾತ್ವಿಕ ನೆಲೆಗಳಿಂದ ವಿಶ್ಲೇಷಿಸಲಾಗಿರುತ್ತದೆ.

### ೧. ತೌಲನಿಕ ಅಧ್ಯಯನದ ವಿಧಾನ :

ತೆಲುಗು, ತಮಿಳು, ಮಲಿಯಾಳಿ, ಮರಾಠಿ ಕನ್ನಡ ಅನುವಾದಿತ ದಲಿತ ಕಥೆಗಳ ಸಂವೇದನೆಯನ್ನು ಕನ್ನಡ ದಲಿತ ಸಂವೇದನೆವುಳ್ಳ ಕಥೆಗಳಿಗೆ ತೌಲನಿಕ ಸಿದ್ಧಾಂತದ ನೆಲೆಯ ವಿಧಾನವನ್ನು ಅಳವಡಿಸಿ ಮಹಾಪ್ರಬಂಧದಲ್ಲಿ ಅಧ್ಯಯನವನ್ನು ಮಾಡಲಾಗಿದೆ.

**೨. ಇಸಂಗಳ ಮುಖೇನ ಆಲೋಚನಾ ಕ್ರಮಗಳನ್ನು ರೂಪಿಸುವುದು :**

ನನ್ನ ಸಂಶೋಧನೆಯ ಇಡೀ ದಲಿತ ಸಂವೇದನೆಯ ಕಥೆಗಳನ್ನು ಅಂಬೇಡ್ಕರ್‌ವಾದ, ಲೋಹಿಯಾವಾದ, ಮಾರ್ಕ್ಸ್‌ವಾದ, ಲೆನಿನ್‌ವಾದ ಮತ್ತು ಫೆಮಿನಿಸಂಗಳ ಮೂಲಕವಾಗಿ ದಲಿತ ಸಂವೇದನೆಗಳನ್ನು ಸೈದ್ಧಾಂತಿಕ ನೆಲೆಯಲ್ಲಿ ಕಟ್ಟಿಕೊಳ್ಳಲಾಗಿದೆ.

**೩. ದಲಿತ ಸಂಸ್ಕೃತಿಯ ನೆಲೆಗಳಾಧಾರದಿಂದ ಚಿಂತನೆಗಳನ್ನು ಮಂಡಿಸಲಾಗಿದೆ :**

ಈ ಪ್ರಬಂಧದಲ್ಲಿ ದಲಿತರ ಸಂಕಟಗಳ ಮೂಲವನ್ನು ಶೋಧಿಸಿ ದಲಿತರ ಸಂಸ್ಕೃತಿಯನೆಲೆಗಳ ಆಧಾರದಿಂದ ಕಥೆಗಾರರ ದಲಿತ ಚಿಂತನೆಗಳನ್ನು ಸೂಕ್ಷ್ಮಸಂವೇದನೆಗಳ ಮೂಲಕ ಗ್ರಹಿಸಿಕೊಂಡು ಸಂಶೋಧನೆಗೆ ಒಳಪಡಿಸಲಾಗಿದೆ.

**೪. ಮನಶಾಸ್ತ್ರೀಯ ಸೈದ್ಧಾಂತಿಕ ನೆಲೆಯನ್ನು ಅಳವಡಿಸಿಕೊಳ್ಳಲಾಗಿದೆ :**

ಈ ಪ್ರಬಂಧದಲ್ಲಿರುವ ದಲಿತ ಸಂವೇದನೆವುಳ್ಳ ಕಥೆಗಳಲ್ಲಿರುವ ಒಂದೊಂದು ಪಾತ್ರವನ್ನು ವ್ಯಕ್ತಿಗತವಾದ ಮನೋವಿಶ್ಲೇಷಣಾತ್ಮಕ ವಿಧಾನದಿಂದ ನೋಡಿ ಘಟನೆಗಳ ಕಾರಣವನ್ನು ಹುಡುಕಿಕೊಳ್ಳಲಾಗಿರುತ್ತದೆ.

**೫. ದೇಸಿವಾದದ ನೆಲೆಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ :**

ದೇಸಿತನವು ದಲಿತ ಸಂವೇದನೆಯಿಂದ ಕೂಡಿದೆ. ದಮನಿತರ ಧ್ವನಿ ದೇಸಿಯಲ್ಲಿ ದಟ್ಟವಾಗಿ ಹರಡಿಕೊಂಡಿದೆ. ದಲಿತ ಸಾಹಿತ್ಯವು ದೇಸಿ ಸಾಹಿತ್ಯವಾಗಿರುತ್ತದೆ. ಆದ್ದರಿಂದ ಈ ಪ್ರಬಂಧದ ಅಧ್ಯಯನಕ್ಕೆ ದೇಸಿವಾದದ ನೆಲೆಗಳನ್ನು ಬಳಸಿಕೊಳ್ಳಲಾಗಿದೆ.

**೬. ಕಪ್ಪು ಸ್ತ್ರೀವಾದ ಮತ್ತು ಮಾರ್ಕ್ಸ್‌ವಾದಿ ಸ್ತ್ರೀವಾದ ಪಂಥಗಳಿಂದ ಅಧ್ಯಯನ :**

ದಲಿತ ಕಪ್ಪು ಮಹಿಳೆಯರು ತಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಹಾಗೂ ಸಾಮಾಜಿಕ ಪರಿಸರದಲ್ಲಿ ತಮ್ಮ ಮಾನ್ಯತೆಗಾಗಿ ಹಾಗೂ ಗೌರವಯುತ ನೆಲೆಗಾಗಿ ಹೋರಾಟವನ್ನು ನಡೆಸುತ್ತಿದ್ದಾರೆ. ಅದರಂತೆ ಸಾಮಾಜಿಕ ವ್ಯವಸ್ಥೆಯ ಸಮಗ್ರ ಪರಿವರ್ತನೆಗೆ ಸಮಾನತೆಯ ಕಾರಣವೆಂದು ಆರ್ಥಿಕ ಸಮಾನತೆಗಾಗಿ ಮಹಿಳೆಯರು ಹೋರಾಟ ನಡೆಸುತ್ತಿದ್ದಾರೆ. ಆದ್ದರಿಂದ ಕಪ್ಪುಸ್ತ್ರೀವಾದ ಮತ್ತು ಮಾರ್ಕ್ಸ್‌ವಾದಿ ಸ್ತ್ರೀವಾದದ ವಿಧಾನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೭. ವ್ಯಕ್ತಿ ಅಧ್ಯಯನದ ವಿಧಾನದಿಂದ ಸೂಕ್ತ ಕಾರಣಗಳನ್ನು ಗುರುತಿಸಿದೆ :**

ವ್ಯಕ್ತಿ ಅಧ್ಯಯನದ ವಿಧಾನವು ಸಮಾಜ ವಿಜ್ಞಾನಗಳ ಸಂಶೋಧನೆಯಲ್ಲಿ ಪ್ರಮುಖವಾದ ಸಂಶೋಧನಾ ವಿಧಾನವಾಗಿರುತ್ತದೆ. ಆದ್ದರಿಂದ ಈ ವಿಧಾನದಲ್ಲಿ ಒಬ್ಬ ವ್ಯಕ್ತಿ ಅಥವಾ ನಡೆದಂಥ ಘಟನೆಯ ಬಗ್ಗೆ ಅಧ್ಯಯನ ಮಾಡಿ ಸೂಕ್ತವಾದ ಕಾರಣಗಳನ್ನು ಈ ವಿಧಾನದಿಂದ ಹುಡುಕಿಕೊಳ್ಳಲಾಗಿದೆ.

**೮. ಪ್ರಾಯೋಗಿಕ ವಿಧಾನದಿಂದ ನಿರ್ಣಯಗಳನ್ನು ನಿರ್ಧರಿಸಲಾಗಿದೆ :**

ನಡೆದಂತ ಘಟನೆಗಳ ಹಿಂದಿರುವ ಸತ್ಯಾಸತ್ಯತೆಯನ್ನು ಈ ಪ್ರಾಯೋಗಿಕ ವಿಧಾನವನ್ನು ಬಳಸಿಕೊಂಡು ನಿರ್ಣಯಗಳನ್ನು ಈ ಪ್ರಬಂಧದಲ್ಲಿ ನಿರ್ಧರಿಸಿಕೊಳ್ಳಲಾಗಿದೆ.

**೯. ವಿಶ್ಲೇಷಣಾತ್ಮಕ ವಿಧಾನದಿಂದ ವಾಸ್ತವತೆಯನ್ನು ಗ್ರಹಿಸಲಾಗಿದೆ :**

ದಲಿತ ಸಂವೇದನೆಯ ಅನುವಾದಿತ ಕಥೆಗಳನ್ನು ಪಾತ್ರಚಿತ್ರಣದಿಂದ ಘಟನೆಗಳಿಗೆ ಕಾರಣವಾದ ವಾಸ್ತವ ಅಂಶಗಳನ್ನು ವಿಶ್ಲೇಷಣಾ ನೆಲೆಯಿಂದ ಪ್ರಬಂಧದಲ್ಲಿ ವಿವರಿಸಲಾಗಿದೆ.

ಅಧ್ಯಾಯ : ಎರಡು

# ಕನ್ನಡ ಅನುವಾದಿತ ಕಥೆಗಳ ಚಾರಿತ್ರಿಕ ಸಮೀಕ್ಷೆ

೨.೧. ಪ್ರವೇಶ

೨.೨. ಬ್ರಿಟಿಷ್ ಮಿಷನರಿಗಳ ಕಾಲದ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೩. ತೆಲುಗು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೪. ಮಲಿಯಾಳಂ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೫. ಮರಾಠಿ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

೨.೬. ತಮಿಳು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ಅಧ್ಯಾಯ : ಎರಡು

# ಕನ್ನಡ ಅನುವಾದಿತ ಕಥೆಗಳ ಚಾರಿತ್ರಿಕ ಸಮೀಕ್ಷೆ

## ೨.೧. ಪ್ರವೇಶ

ಒಬ್ಬ ಸಂತನಲ್ಲಿ ಉತ್ಪತ್ತಿಯಾದ ಜ್ಞಾನವಲಯಗಳನ್ನು ಗುರುತಿಸಿಕೊಂಡು ಅವುಗಳನ್ನು ದಾಖಲಿಸಬಹುದು. ಆದರೆ ಆ ಸಂತನಲ್ಲಿ ಜ್ಞಾನವು ಬೆಳೆಯಲು ಕಾರಣವಾದ ಅಂಶಗಳನ್ನು ಅದರ ಗುರುತಿನ ಹೆಜ್ಜೆಗಳನ್ನು ದಾಖಲಿಸಿಕೊಂಡು ಹೇಳಲು ಸಾಧ್ಯವಾಗುವುದಿಲ್ಲ. ಅದರಂತೆ ಅನುವಾದದ ಪ್ರಕ್ರಿಯೆಗಳಿಗೆ ನಿಖರವಾದ ಮಾಹಿತಿಗಳು ಲಭ್ಯವಾಗುವುದಿಲ್ಲ. ಅನುವಾದ ಆಧುನಿಕ ಪರಿಭಾಷೆಯಾಗಿರುತ್ತದೆ. ಅದು ವಸಾಹತು ಕಾಲಘಟ್ಟದಲ್ಲಿ ಬೆಳಕಿಗೆ ಬಂದಿರುತ್ತದೆ. ಅದರ ಪ್ರಕ್ರಿಯೆಯು ಮಾತ್ರ ಪ್ರಾಚೀನವಾಗಿರುತ್ತದೆ. ಮಾನವನ ಭಾಷೆಯ ಕಲಿಕೆಯಲ್ಲಿಯೇ ಅನುವಾದವು ಅಡಕವಾಗಿರುತ್ತದೆ. ಭಾವನೆಗಳ ಅಭಿವ್ಯಕ್ತಿಯಿಂದ ಸೃಷ್ಟಿಯಾದ ಭಾಷೆಯಲ್ಲಿ ಅನುವಾದದ ಪ್ರಕ್ರಿಯೆಯು ನಡೆದಿರುತ್ತದೆ. ಕನ್ನಡದ ಅನುವಾದ ಪರಂಪರೆಯು ಮೌಖಿಕವಾಗಿಯೇ ಮೊದಲು ಉದಯವಾಗಿರಬೇಕು ಆಗ ಕನ್ನಡನಾಡನ್ನು ಆಳುತ್ತಿರುವ ಇತರೆ ಭಾಷೆಯ ಜನರು ಕನ್ನಡ ನಾಡಿನವರ ಜೊತೆ ವ್ಯವಹರಿಸುವಾಗ ಮೌಖಿಕವಾಗಿ ಅನುವಾದ ಪ್ರಕ್ರಿಯೆಗಳು ನಡೆದಿರುತ್ತವೆ. ಇದರಿಂದಾಗಿ ಕನ್ನಡನಾಡಿಗೆ ಬಂದು ಹೋಗುವ ವ್ಯಾಪಾರಿಗಳು, ಯಾತ್ರಿಕರು ಇಲ್ಲಿನ ಜನರ ಜೊತೆ ತಮ್ಮ ವ್ಯಾಪಾರದ ವೈವಾಟಗಳಲ್ಲಿ ತೊಡಗಿಸಿಕೊಂಡಾಗ ಅನುವಾದದ ಪ್ರಕ್ರಿಯೆಗಳು ನಡೆದಿರುತ್ತವೆ.

ಕ್ರಿ.ಶ ೨-೩ರ ಸುಮಾರಿಗೆ ದಕ್ಷಿಣ ಭಾರತದಲ್ಲಿ ಕನ್ನಡ ಮತ್ತು ತಮಿಳು ಭಾಷೆಗಳು ತಮ್ಮದೇ ಆದ ಸಾಹಿತ್ಯ ಸೃಷ್ಟಿಯಲ್ಲಿ ನಿರಂತರವಾದರೂ ಇದರಿಂದ ಸಂಸ್ಕೃತ, ಪ್ರಾಕೃತ, ಪಾಳಿಗಳು ಈ ಭಾಷೆಗಳಿಗೆ ಆಕಾರವನ್ನು ಒದಗಿಸಿದವು. ಹಾಗೆಯೇ ನಿರ್ಮಾಣವಾದ ಅನುವಾದದ ಪರಂಪರೆ ಕನ್ನಡದ್ದಾಗಿರುತ್ತದೆ. ಕನ್ನಡದಲ್ಲಿ ಜೈನಧರ್ಮ ತನ್ನ ಪ್ರಾಬಲ್ಯವನ್ನು ಪಡೆದುಕೊಂಡಿದ್ದರಿಂದ ಜೈನಧರ್ಮದ ವಿಚಾರಗಳನ್ನು ಧಾರ್ಮಿಕ ಕಾವ್ಯಗಳಲ್ಲಿ ರಚಿಸುವುದರ ಮೂಲಕ ಕನ್ನಡನುವಾದ ಪರಂಪರೆಯು ಪ್ರಾರಂಭವಾಯಿತು. ತನ್ನ ಮಾತೃಭಾಷೆಯಲ್ಲಿ ತಾನು ಪರಿಣಿತಿ ಪಡೆದುಕೊಂಡಿರುವ ಇನ್ನೊಂದು ಭಾಷೆಯ ಕೃತಿಯನ್ನು ತನ್ನ ಭಾಷೆಯ ಜನರಿಗೆ ಓದಲು ಅನುಕೂಲವಾಗುವಂತೆ ಪರಿಚಯ ಮಾಡಿಕೊಡುವುದು ಅನುವಾದವಾಗಿರುತ್ತದೆ. ಇದರಿಂದಾಗಿ ಮತ್ತೊಂದು ಭಾಷೆಯ ಜ್ಞಾನವನ್ನು

ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಆದರೆ ಅನುವಾದಕನು ಮೂಲ ಕೃತಿಗೆ ಯಾವುದೇ ಧಕ್ಕೆಬರದಂತೆ ತುಂಬಾ ಎಚ್ಚರಿಕೆಯಿಂದ ಅನುವಾದದ ಪ್ರಕ್ರಿಯೆಯನ್ನು ಮಾಡಬೇಕಾಗುತ್ತದೆ.

ಆದರೆ ಅನುವಾದಕನನ್ನು ಮೀರಿ ತನಗೆ ಗೊತ್ತಿಲ್ಲದಂತೆ ಆತನ ವಿಚಾರಗಳು ಅನುವಾದದ ಪ್ರಕ್ರಿಯೆಯಲ್ಲಿ ನಡೆದಿರುತ್ತವೆ. ಲೋಕದಲ್ಲಿರುವ ಜ್ಞಾನವನ್ನು ಲೋಕಕ್ಕೆಲ್ಲ ಹಂಚುವುದಕ್ಕೆ ಈ ಅನುವಾದದಿಂದ ಸಾಧ್ಯವಾಗುತ್ತದೆ. ಇದರಿಂದಾಗಿ ಮತ್ತೊಂದು ನಾಡಿನ ಕಲೆ, ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯ, ಆಚಾರ –ವಿಚಾರಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ನನ್ನ 'ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ' ಎಂಬ ಈ ಮಹಾಪ್ರಬಂಧದಲ್ಲಿ ತೆಲುಗು, ತಮಿಳು, ಮಲಿಯಾಳಂ, ಮರಾಠಿ ಭಾಷೆಗಳಿಂದ ಬಂದ ಅನುವಾದಿತ ಕಥೆಗಳ ಚಾರಿತ್ರಿಕ ಸಮೀಕ್ಷೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿರುತ್ತದೆ. ಈ ಚಾರಿತ್ರಿಕ ನೋಟದಿಂದ ದಲಿತ ಸಂವೇದನೆವುಳ್ಳ ಆಯ್ದ ಕಥೆಗಳನ್ನು ನನ್ನ ಅಧ್ಯಯನಕ್ಕೆ ಅಳವಡಿಸಿಕೊಂಡಿದ್ದೇನೆ. ಇದರಿಂದಾಗಿನನ್ನ ಸಂಶೋಧನಾ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗುವಂತಹ ಅನುವಾದಿತ ಚಾರಿತ್ರಿಕ ಸಮೀಕ್ಷೆಯನ್ನು ಈ ಮುಂದಿನಂತೆ ಕೈಗೊಂಡಿರುತ್ತೇನೆ.

## ೨.೨. ಬ್ರಿಟಿಷ್ ಮಿಷನರಿಗಳ ಕಾಲದ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ನಮ್ಮ ಭಾರತ ದೇಶಕ್ಕೆ ಬ್ರಿಟಿಷರು ಬಂದ ನಂತರ ಇಂಗ್ಲೀಷ್ ಭಾಷೆಯ ಪ್ರಭಾವ ಉಂಟಾಯಿತು. ದಿನದಿಂದ ದಿನಕ್ಕೆ ಇಂಗ್ಲೀಷ್ ಭಾಷೆಯು ಪ್ರಚಾರ ಪಡೆದುಕೊಳ್ಳುವುದರ ಫಲವಾಗಿ ಭಾರತೀಯರಿಗೆ ಇಂಗ್ಲೀಷ್ ಭಾಷೆಯು ಪರಿಚಯವಾಗತೊಡಗಿತು. ಅದರಂತೆ ನಮ್ಮ ಕರ್ನಾಟಕದಲ್ಲೂ ಇಂಗ್ಲೀಷಿನ ಪ್ರಚಾರ ಬಿರಿಸಿನಿಂದ ಮುಂದುವರೆಯಿತು. ಇದರ ಪರಿಣಾಮವಾಗಿ ತುಂಬಾ ಶ್ರೀಮಂತವೂ ಹಾಗೂ ಸಂಕೀರ್ಣವೂ ಆದ ಇಂಗ್ಲೀಷ್ ಭಾಷೆಯ ಸಾಹಿತ್ಯವು ನಮ್ಮ ಆಧುನಿಕ ಸಾಹಿತಿಗಳ ಮೇಲೆ ಪ್ರಭಾವ ಬೀರಿತು. ಈ ದಿಶೆಯಿಂದಲೇ ಕನ್ನಡ ಸಾಹಿತ್ಯದ ಸಾಹಿತ್ಯದ ಮೇಲೆ ಇಂಗ್ಲೀಷ್ ಸಾಹಿತ್ಯದ ಗಾಢವಾದ ಪ್ರಭಾವ ಉಂಟಾಯಿತು. ಇಂಗ್ಲೀಷ್ ಸಾಹಿತ್ಯದ ಸ್ಫೂರ್ತಿಯ ನೆರವಿನಿಂದ ಕನ್ನಡ ಸಾಹಿತ್ಯಕ್ಕೆ ಸಾಹಿತ್ಯದ ಅನೇಕ ಪ್ರಕಾರಗಳು ಹೊರಹೊಮ್ಮಿ ಬರಲು ಪ್ರಾರಂಭಿಸಿದವು. ಇಂಗ್ಲೀಷ್ ಭಾಷೆಯ ಸಂಪರ್ಕದಿಂದಲೇ ಇಂಗ್ಲೀಷ್‌ನಿಂದ ಕನ್ನಡಕ್ಕೆ ಸಾಹಿತ್ಯ ಅನುಕರಣೆಯಾಗಿ ಅನುವಾದದ ರೂಪದಲ್ಲಿ ಜನ್ಮತಾಳಿದವು. ಅದರಂತೆ ಇಂಗ್ಲೀಷ್ ಸಾಹಿತ್ಯದ ಬೆಳಕಿನಿಂದ ಐರೋಪ್ಯ ಸಾಹಿತ್ಯದ ಪರಿಚಯವು ಕನ್ನಡಿಗರಿಗೆ ಲಭಿಸಿತು. ಗ್ರೀಕ್, ಲ್ಯಾಟಿನ್, ಫ್ರೆಂಚ್, ಜರ್ಮನ್, ಇಟಾಲಿನ್, ರಷ್ಯನ್ ಇತ್ಯಾದಿ ಸಾಹಿತ್ಯದ ಭಾಷಿಕ ರೂಪಗಳೆಲ್ಲವೂ ಇಂಗ್ಲೀಷಿನಿಂದಲೇ ಪರಿಚಯವಾಯಿತು.

ಇಂಗ್ಲೀಷ್ ಸಾಹಿತ್ಯದ ಪ್ರಭಾವವೆಂಬುವುದು ಅದು ಪಾಶ್ಚಾತ್ಯ ಸಾಹಿತ್ಯದ ಪ್ರಭಾವವೇ ಆಗಿರುತ್ತದೆ. ಪಾಶ್ಚಾತ್ಯದ ಗಾಳಿಯು ಬೀಸುವಿಕೆಯಿಂದಾಗಿ ೧೯ನೇ ಶತಮಾನದಲ್ಲಿ ಕನ್ನಡ ಸಾಹಿತ್ಯವಾಹಿನಿಯು ಉಲ್ಲಾಸಭರಿತವಾಗಿ ಹರಿಯಿತು. ಬ್ರಿಟಿಷರ ಆಡಳಿತ ವ್ಯವಸ್ಥೆಯ ಪರಿಣಾಮವಾಗಿ ಹಲವಾರು ಬದಲಾವಣೆಗಳು ಉಂಟಾದವು. ಅವರ ಕ್ರೈಸ್ತಮತದ ಪ್ರಚಾರದಿಂದ ಹಾಗೂ ಹೊಸ ಶಿಕ್ಷಣ ನೀತಿಯಿಂದ ಪಾಶ್ಚಾತ್ಯ ನಾಗರಿಕತೆಯ ಪ್ರಭಾವ ಭಾರತೀಯರ ಜೀವನದೃಷ್ಟಿಯ ಮೇಲೆ

ಪರಿಣಾಮಗಳು ಬೀರಿ ಮಾನಸಿಕ ಬದಲಾವಣೆಗಳು ಕಂಡುಬಂದವು. ಅವರ ಮುದ್ರಣಯಂತ್ರ, ವಿಚಾರಗಳ ಸಂಘರ್ಷದಿಂದ ಭಾರತೀಯರಲ್ಲಿ ಲೌಕಿಕ ವ್ಯವಹಾರದ ಮನೋಧರ್ಮ ಭಿನ್ನ ನೆಲೆಯಲ್ಲಿ ಹರಿಯತೊಡಗಿದವು. ಬ್ರಿಟಿಷರ ಹೊಸ ಶಿಕ್ಷಣ ನೀತಿಯು ಭಾರತೀಯರಿಗೆ ಹೊಸದೊಂದು ಪ್ರಪಂಚವನ್ನು ತೋರಿಸಿಕೊಟ್ಟಿತು. ಇಂಗ್ಲೀಷ್ ಶಿಕ್ಷಣದ ಕ್ರಾಂತಿಯಿಂದ ಹಿಂದಿಲ್ಲದ ಅನುಭವಗಳು ಗೋಚರಿಸಿದವು.

"ಕ್ರೈಸ್ತರ ಅಧಿಕಾರಿಗಳು ಕ್ರೈಸ್ತಧರ್ಮಾಭಿಮಾನಿಗಳು ತಮ್ಮ ಮತಧರ್ಮವನ್ನು ನಮ್ಮ ದೇಶದಲ್ಲಿ ಪ್ರಚಾರ ಮಾಡಲು ನಮ್ಮ ಜನರ ಆಚಾರ, ವಿಚಾರ, ಮನೋಧರ್ಮ, ಕಲೆ, ಸಂಸ್ಕೃತಿ ಮೊದಲಾದ ವಿಷಯಗಳನ್ನು ಅರಿತುಕೊಳ್ಳಲು ಕನ್ನಡ ಪಂಡೀತರ ಸಹಾಯದಿಂದ ಕನ್ನಡ ಕಲಿತು ಕನ್ನಡ ಭಾಷೆಗೆ ನಾನಾ ರೂಪಗಳಲ್ಲಿ ದುಡಿದು ಆಡಳಿತ ಶಿಕ್ಷಣ, ಸಾಹಿತ್ಯ, ಕಲೆ, ಜಾನಪದ ಮೊದಲಾದ ವಿಷಯಗಳಲ್ಲಿ ಕನ್ನಡ ಸಾಹಿತ್ಯಕ್ಕೆ ಚಿರಸ್ಮರಣೆಯ ಸೇವೆ ಸಲ್ಲಿಸಿದ್ದಾರೆ."೧ ಇದರ ತತ್ಪರಿಣಾಮದ ಫಲವಾಗಿ ಭಾರತದಲ್ಲಿ ಬದುಕಿನ ಆಲೋಚನಾ ಕ್ರಮಗಳು ಬದಲಾದವು. ಈ ಹಿಂದೆ ಇದ್ದ ಮತಧರ್ಮದ ವಾತಾವರಣದಲ್ಲಿ ಇಂಗ್ಲೀಷ್ ಶಿಕ್ಷಣದ ಕ್ರಾಂತಿಯಿಂದ ರಾಷ್ಟ್ರೀಯ ಭಾವನೆ, ಸ್ವಾಭಿಮಾನ, ಸ್ವತಂತ್ರ ವಿಚಾರದ ಕ್ರಿಯೆಗಳು ಬೆಳೆದವು. ಕ್ರೈಸ್ತ ಮಿಷನರಿಯಂತ್ರದ ಸಾಧನದಿಂದ ಸಾಹಿತ್ಯ ಸೃಷ್ಟಿಗೆ ಸ್ಫೂರ್ತಿ ದೊರೆತಂತಾಗುತ್ತದೆ. ಭಾರತೀಯರು ಈ ಇಂಗ್ಲಿಷ್ ಶಿಕ್ಷಣವನ್ನು ಪಡೆದುಕೊಂಡು ಹೊಸ ಸಾಹಿತ್ಯ ಸೃಷ್ಟಿಗೆ ಕಾರಣರಾದರು. ನಾಡಿನ ಪ್ರೇಮವನ್ನು ಬೆಳೆಸಿಕೊಂಡರು. ಹೊಸ ಸಾಹಿತ್ಯದ ಪರಿಚಯದಿಂದ ಹೊಸತನವನ್ನು ಪಡೆದುಕೊಂಡು ಇಂಗ್ಲೀಷ್ ಸಾಹಿತ್ಯಕ್ಕೆ ಋಣಿಯಾದರು. ಇದರಿಂದಾಗಿ ಬ್ರಟಿಷ್ ಮಿಷನರಿಗಳ ಕೊಡುಗೆ ಕನ್ನಡ ಸಾಹಿತ್ಯಕ್ಕೆ ದಟ್ಟವಾದ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಈ ಕ್ರೈಸ್ತಮಿಷನರಿಗಳಿಂದಲೇ ಹೊಸಗನ್ನಡದ ಅರುಣೋದಯ ಪ್ರಾರಂಭವಾಯಿತು. ಕನ್ನಡದ ಚಂಪೂ ಸಾಹಿತ್ಯಕ್ಕೆ ಜೈನ ಕವಿಗಳ ಕೊಡುಗೆಯಾದಂತೆ,ಆಧುನಿಕ ಕನ್ನಡ ಸಾಹಿತ್ಯಕ್ಕೆ ಬ್ರಿಟಿಷ್ ಮಿಷನರಿಗಳ ಕೊಡುಗೆ ಅನನ್ಯವಾದುದು.

ಅದರಂತೆ ಕನ್ನಡ ಸಾಹಿತ್ಯವನ್ನು ಒಂದು ವ್ಯವಸ್ಥಿತ ಚೌಕಟ್ಟಿನಲ್ಲಿ ಅಧ್ಯಯನ ಮಾಡಿ ರೂಪರೇಷೆಗಳನ್ನು ಮಿಷನರಿಗಳು ಹಾಕಿಕೊಟ್ಟರು. ಅದು ಅನುವಾದದ ಪ್ರಕ್ರಿಯೆಯಿಂದ ಎಂದು ಹೇಳಬಹುದು. ಕನ್ನಡಿಗರು ಮಾಡಬೇಕಾದ ಸಾಹಿತ್ಯಿಕ ಚಟುವಟಿಕೆಗಳನ್ನು ಕ್ರೈಸ್ತಮಿಷನರಿಗಳೇ ಮಾಡಿ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕಾರಣವಾಗಿದ್ದಾರೆ ಎಂದರೆ ಅದು ತಪ್ಪಾಗಲಾರದು. ಲಿಯೋನಾರ್ಡೋ ಸಿನ್ನಾಮಿ, ರೀವ್, ಬಿ.ಎಲ್.ರೈಸ್, ಜೆ.ಎಫ್.ಫ್ಲೀಟ್, ಹರ್ಮನ್ ಮೋಗ್ಲಿಂಗ್, ಫರ್ಡಿನೆಂಡ್ ಕಿಟೆಲ್, ಕೆ. ಮೆಕೆಂಝಿ, ಬಿ. ಲೂಯಿ ರೈಸ್, ಜಾನ್ ಗ್ಯಾರೆಟ್ ಮುಂತಾದ ಬ್ರಿಟಿಷ್ ಅಧಿಕಾರಿಗಳು ಕನ್ನಡ ಸಾಹಿತ್ಯಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಕ್ರೈಸ್ತ ಮಿಷನರಿಗಳು ಸು. ೧೮೧೧ ರಿಂದಲೇ ಗ್ರಂಥ ರಚನೆಯ ಕಾರ್ಯವನ್ನು ಪ್ರಾರಂಭಿಸಿದರು. ಆಗ ನಮ್ಮ ಕನ್ನಡಿಗರು ಸಾಹಿತ್ಯದ ಕಡೆ ಗಮನಹರಿಸಲಿಲ್ಲ. ತದನಂತರ ಅಂದರೆ ೧೮೬೧ ರಿಂದ ದೇಶಿಯರು ಸಾಹಿತ್ಯ

ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅದರಂತೆ ಹಳೆಯ ಗ್ರಂಥಗಳನ್ನು ಪರಿಷ್ಕರಣದಲ್ಲಿ ಮತ್ತು ಅನುವಾದದ ಪ್ರಕ್ರಿಯೆಯನ್ನು ಪ್ರಾರಂಭಿಸಿದರು. ೧೮೮೧ ರಿಂದ ನಂತರದ ನವೋದಯ ಕಾಲದಲ್ಲಿ ಕನ್ನಡ ಲೇಖಕರು ಸ್ವಾತಂತ್ರ ಸಾಹಿತ್ಯ ಸೃಷ್ಟಿಯನ್ನು ಹಾಗೂ ಅನುವಾದ ಕೃತಿಗಳನ್ನು ಬೆಳಕಿಗೆ ತಂದರು.

ಇಂಗ್ಲಿಷ್ ಶಿಕ್ಷಣದ ಕ್ರಮದಿಂದ ನಾಡಿನಲ್ಲಿ ಶಿಕ್ಷಣವನ್ನು ಪಡೆದವರ ಸಂಖ್ಯೆ ಅಧಿಕವಾಗತೊಡಗಿತು. ಇದರ ಪರಿಣಾಮದಿಂದ ಸಮಾಜದಲ್ಲಿ ಸುಧಾರಣೆಯ ಕಾಲ ಪ್ರಾರಂಭವಾಯಿತು. ಸ್ವತಂತ್ರ ವಿಚಾರದ ಅಭಿವ್ಯಕ್ತಿಗಳು ಹರಿದಾಡಿದವು. ಇಂತಹ ಸ್ವತಂತ್ರ ಅಭಿವ್ಯಕ್ತಿಯಿಂದ ನಾಡಿನೆಲ್ಲಡೆ ವಾಸ್ತವದ ಪ್ರಜ್ಞೆ ಮೂಡಿತು. ಇದು ಬ್ರಿಟಿಷ್ ಮಿಷನರಿಗಳು ತಮ್ಮ ಶಿಕ್ಷಣದ ಮೂಲಕ ಮಾಡಿದ ಸಾಮಾಜಿಕ ಪರಿವರ್ತನೆಯೇ ಎಂದು ಹೇಳಬಹುದು. ಬ್ರಿಟಿಷ್ ಅಧಿಕಾರಿಗಳು ಮುದ್ರಣಾಲಯವನ್ನು ಸ್ಥಾಪನೆ ಮಾಡಿದರು. ಕನ್ನಡದ ಪ್ರಾಚೀನ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದನೆ ಮಾಡಿದರು. ಕನ್ನಡ ಸಾಹಿತ್ಯದ ವ್ಯಾಕರಣ, ಛಂದಸ್ಸು, ನಿಘಂಟುಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಪ್ರಕಟಿಸಿದರು. ವಿಲಿಯಂ ಕೇರಿಯ ವ್ಯಾಕರಣ ಸಾಹಿತ್ಯದ ಆದ್ಯ ಕೃತಿಯಾಗಿದೆ. ಅದರಂತೆ ಮಿಷನರಿಗಳು ಕ್ರೈಸ್ತ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದ ಮಾಡಿದರು. ೧೮೧೦ ರಲ್ಲಿ ಜಾನ್ ಹ್ಯಾಂಡ್ಸ್ ಕರ್ನಾಟಕಕ್ಕೆ ಬರುತ್ತಾರೆ. ಇದನ್ನು ಸಾಹಿತ್ಯದ ದೃಷ್ಟಿಯಿಂದ ಮಹತ್ತರ ವರ್ಷವೆಂದು ಹೇಳಬಹುದು.ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಲೇ ಹೊಸಗನ್ನಡ ಸಾಹಿತ್ಯಪರ್ವ ಪ್ರಾರಂಭವಾಗುತ್ತದೆ. ೧೮೧೨ ರಲ್ಲಿ ಜಾನ್ ಹ್ಯಾಂಡ್ಸ್ ಹೊಸಗನ್ನಡದ ಗದ್ಯರೂಪದಲ್ಲಿ ಬೈಬಲ್‌ನ್ನು ಅನುವಾದ ಮಾಡುತ್ತಾನೆ. ಇದರ ಹಿಂದೆ ಅಂದರೆ ೧೭ ನೇ ಶತಮಾನದಲ್ಲಿ ಲಿಯೋನಾರ್ಡೋ ಸಿನ್ನಾಮಿ ಕರ್ನಾಟಕಕ್ಕೆ ಬಂದಿದ್ದನು.

ಆದರೆ ಈ ಮಿಷನರಿಯ ಯಾವ ಗಂಥವೂ ಲಭ್ಯವಿರುವುದಿಲ್ಲ. ಈತನನ್ನು ಹೊಸಗನ್ನಡದ ಪ್ರಥಮ ಗ್ರಂಥ ಕರ್ತೃ ಎಂದು ಕರೆಯಲಾಗುತ್ತದೆ. ಬೈಬಲ್‌ನಲ್ಲಿರುವ ಹೊಸ ಒಡಂಬಡಿಕೆಯ ನಾಲ್ಕು ಸುವಾರ್ತೆಗಳನ್ನು ಮತ್ತು ಹಳೆ ಒಡಂಬಡಿಕೆಯ ಭಾಗವನ್ನು ಜಾನ್ ಹ್ಯಾಂಡ್ಸ ಅನುವಾದ ಮಾಡಿ ಹೊರ ತರುವುದಕ್ಕಿಂತಲೂ ಮುಂಚೆ ೧೮೦೯ ರಲ್ಲಿ ವಿಲಿಯಂ ಕೇರಿ ಕನ್ನಡಕ್ಕೆ ಬೈಬಲನ್ನು ಅನುವಾದ ಮಾಡಿದ್ದನು.ಆದರೆ ಆ ಕೃತಿಯ ಹಸ್ತಪ್ರತಿಗಳು ಸುಟ್ಟುಹೊಗುತ್ತವೆ. ನಂತರ ಕೇರಿಯು ಅದನ್ನು ೧೮೨೩ ರಲ್ಲಿ ಪುನಃ ಪ್ರಕಟಿಸುತ್ತಾನೆ. ಇದನ್ನು ಹೊಸಗನ್ನಡದ ಚೊಚ್ಚಲ ಗದ್ಯಗ್ರಂಥವೆಂದು ಕರೆಯುತ್ತಾರೆ. ನಂತರ ಬೈಬಲ್‌ನ ಸಂಕ್ಷಿಪ್ತ ರೂಪವನ್ನು ಎ.ಬೌಥೇಲೋ ಎಂಬ ಕ್ರೈಸ್ತ ಮಿಷನರಿಯು ಕನ್ನಡದಲ್ಲಿ ಪ್ರಕಟಿಸುತ್ತಾನೆ. ಅದರಂತೆ ೧೮೨೦ ರಲ್ಲಿ 'ಯೇಸು ಕ್ರಿಸ್ತನ ಅವತಾರ' ಎಂಬ ಅನುವಾದದಿಂದ ಬೈಬಲ್‌ನಲ್ಲಿರುವ ಹಳೆಯ ಒಡಂಬಡಿಕೆಯ ಹಲವು ಪರ್ವಗಳನ್ನು ರೀವ್ ಎಂಬುವವನು ಕನ್ನಡಕ್ಕೆ ಅನುವಾದಗೊಳಿಸುತ್ತಾನೆ. ೧೮೪೪ ರಲ್ಲಿ ವೇದ ಸಂಗ್ರಹ ಎಂಬ ಹೆಸರಿನಲ್ಲಿ ಬೈಬಲ್ ನಲ್ಲಿರುವ ನೂರು ಪ್ರಮುಖ ಅಂಶಗಳನ್ನು ಟಿಪ್ಪಣಿಸಹಿತವಾಗಿ ಬಿ. ಎಚ್.ರೈಸ್ ಪ್ರಕಟಿಸುತ್ತಾನೆ. ಇದಕ್ಕೆ ಸಿವೆಲ್‌ನ ಸಹಾಯವನ್ನು ಪಡೆದುಕೊಳ್ಳುತ್ತಾನೆ. 'ಪಿಲ್ಗ್ರಿಮ್ಸ್ ಪ್ರೋಗ್ರೆಸ್'

ಎಂಬ ಕೃತಿಯನ್ನು ಜಾನ್ ಬುನ್ಯನ್'ದೇಶಾಂತ್ರಿಯ ಪಯಣ' ಎಂಬ ಹೆಸರಿನಿಂದ ಅನುವಾದ ಮಾಡುತ್ತಾನೆ. ೧೮೬೨ರಲ್ಲಿ ಸ್ಯಾಂಡರ್ಸನ್ 'ಕಂಟು ಜೀಸಸ್' ಎಂಬ ಕೃತಿಯನ್ನು ಅನುವಾದಿಸಿದನು.

೧೮೬೩ ರಲ್ಲಿ 'ದೈವ ಪರೀಕ್ಷೆ', ೧೮೫೨ ರಲ್ಲಿ 'ಸತ್ಯವೇದ ಪರೀಕ್ಷೆ', ೧೮೬೨ ರಲ್ಲಿ 'ದಿವ್ಯ ಮಾತೃಕೆ', ೧೮೬೬ ರಲ್ಲಿ 'ಸುಕೃತ ಮಂತ್ರಗಳು' ಎಂಬ ಕೃತಿಗಳನ್ನು ಚೌರ್ಭೋನಾ ಎಂಬ ಮಿಷನರಿಯವನು ಕನ್ನಡಕ್ಕೆ ಅನುವಾದಿಸುತ್ತಾನೆ. ಜಾತಿ ವಿಚಾರಣೆ ಮತ್ತು ದೇವ ವಿಚಾರಣೆ ಎಂಬ ಕೃತಿಗಳನ್ನು ಮೊಂಗ್ಲಿಂಗ್‌ನು ಹೊರಗಡೆ ತರುತ್ತಾನೆ. ಅದರಂತೆ ಯೇಸುವಿನ ಸುವಾರ್ತೆಗಳನ್ನು ಹೆನ್ರಿ ಹೆಗ್ ಕನ್ನಡಕ್ಕೆ ಅನುವಾದಿಸುತ್ತಾನೆ. ೧೮೪೯ರಲ್ಲಿ ಮೂಡಿಬಂದ 'ಯಾಂತ್ರಿಕನ ಸಂಚಾರ' ಎಂಬ ಕೃತಿಯನ್ನು ಮೊಂಗ್ಲಿಂಗನು ಪ್ರಕಟಿಸುತ್ತಾನೆ. ಇದು ಪಿಲ್ಗ್ರಿಮ್ಸ್ ಮತ್ತು ಪೋಗ್ರೆಸ್‌ನ ಅನುವಾದವಾಗಿರುತ್ತದೆ. ಇದೊಂದು ಸುದೀರ್ಘವಾದ ಕನ್ನಡದ ಮೊದಲ ಕಥೆಯಾಗಿರುತ್ತದೆ. ಹಾಕ್ ಎಂಬ ವಿದ್ವಾಂಸರು ಯೇಸುವಿನ ಪ್ರವಚನಕ್ಕೆ ಸಂಬಂಧಿಸಿದ ಅನೇಕ ಕ್ರೈಸ್ತ ಗೀತೆಗಳನ್ನು ಕನ್ನಡನುವಾದ ಮಾಡಿರುತ್ತಾನೆ. ವೈಗಲ್ ಮತ್ತು ಮೊಂಗ್ಲಿಂಗನು ಈ ಪ್ರಕ್ರಿಯೆಯನ್ನು ಯಶಸ್ವಿಗೊಳಿಸುತ್ತಾರೆ. ಲಿಟ್ಸ್ ವಿಲಿಯಮ್ ಎನ್ನುವಾತ ೧೮೩೨ ರಲ್ಲಿ ಕ್ರೈಸ್ತನ ಚರಿತ್ರೆಯನ್ನು ಕಥನ ರೂಪದಲ್ಲಿ ಕನ್ನಡಕ್ಕೆ ಅನುವಾದ ಮಾಡಿರುತ್ತಾನೆ. ನಂತರ ೧೮೬೨ ರಲ್ಲಿ ಎಫ್.ಕಿಟೆಲ್ ಮಿಷನರಿಯು 'ಕಥಾಮಾಲೆ' ಎಂಬ ಹೆಸರಿನಲ್ಲಿ ಬೈಬಲ್‌ನಲ್ಲಿರುವ ಯೇಸುವಿನ ಕಥೆಗಳನ್ನು ಕನ್ನಡನುವಾದ ರೂಪಕ್ಕೆ ತರುತ್ತಾನೆ. ಹೀಗೆ ಬ್ರಿಟಿಷ್ ಮಿಷನರಿಗಳ ಕಾಲದ ಅನುವಾದಿತ ಕತೆಗಳ ಚಾರಿತ್ರಿಕ ನೋಟವನ್ನು ಕಾಣಬಹುದಾಗಿದೆ.

### ೨.೩. ತೆಲುಗು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ಆಂಧ್ರಪ್ರದೇಶವು ಕರ್ನಾಟಕದ ಗಡಿಭಾಗದ ಪ್ರದೇಶವಾಗಿರುತ್ತದೆ. ಈ ಎರಡೂ ರಾಜ್ಯಗಳ ಜನರಾಡುವ ಭಾಷೆಗಳು ದ್ರಾವಿಡ ಭಾಷೆಯ ಒಂದೇ ವರ್ಗಕ್ಕೆ ಸೇರಿರುತ್ತವೆ. ಈ ಹಿಂದೆ ಈ ಎರಡೂ ರಾಜ್ಯಗಳನ್ನು ಒಂದೇ ರಾಜಮನೆತನದವರು ನೂರಾರು ವರ್ಷಗಳ ಕಾಲ ಆಳ್ವಿಕೆಯನ್ನು ಮಾಡಿರುತ್ತಾರೆ. ಇದರ ಪರಿಣಾಮವಾಗಿ ಕರ್ನಾಟಕದಲ್ಲಿ ತೆಲುಗು ಭಾಷೆಯನ್ನು ಹಾಗೂ ಆಂಧ್ರಪ್ರದೇಶ ಮತ್ತು ತೆಲಂಗಾಣ ರಾಜ್ಯಗಳಲ್ಲಿ ಕನ್ನಡವನ್ನು ಸುಲಭವಾಗಿ ಮಾತನಾಡುವ ಜನರಿರುತ್ತಾರೆ. ಇದರಿಂದಾಗಿ ಈ ಎರಡೂ ಪ್ರಾಂತ್ಯಗಳಲ್ಲಿ ಪರಸ್ಪರ ಕೊಡುಕೊಳ್ಳುವಿಕೆಯ ಸಂಬಂಧಗಳು ನಡೆದಿರುತ್ತವೆ. ಈಗಲೂ ಸಹ ನಡೆಯುತ್ತಿರುತ್ತವೆ. ಭಾಷೆಯ ದೃಷ್ಟಿಯಿಂದ ಹಾಗೂ ಕಲೆ, ಸಾಹಿತ್ಯ, ಸಂಸ್ಕೃತಿಗಳು ಪರಸ್ಪರ ಎರಡೂ ರಾಜ್ಯಗಳಲ್ಲಿ ಬೆರೆತುಕೊಂಡಿರುವುದು ಸಹಜವಾಗಿ ಕಂಡುಬರುತ್ತವೆ. ಭಾರತದೊಳಗಿನ ಇತರೆ ಭಾಷಿಕ ಕೃತಿಗಳು ಕನ್ನಡಕ್ಕೆ ಅನುವಾದವಾಗಿ ಮೂಡಿಬರಲು ಗಡಿಭಾಗದಲ್ಲಿ ಪರಸ್ಪರ ಕೆಲಸ ಮಾಡುವುದು ಮತ್ತು ವ್ಯವಹರಿಸುವುದು ಕಾರಣವಾಗಿರುತ್ತದೆ. ಈ ಸಂಬಂಧಗಳಿಂದಾಗಿ ಒಂದು ಪ್ರಾಂತ್ಯದ ತಿಳುವಳಿಕೆಯ ಜ್ಞಾನವನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ. ಅದರಂತೆ ಪಕ್ಕದ ರಾಜ್ಯವಾದ ತೆಲುಗು ದೇಶದಿಂದ ಹಲವಾರು ಸಾಹಿತ್ಯಿಕ ಕೃತಿಗಳನ್ನು ಅನುವಾದ ಮಾಡಲಾಗಿರುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳ ಲಿಪಿ ಮತ್ತು ಛಂದಸ್ಸು ವ್ಯಾಕರಣಗಳಲ್ಲಿ ಸಮಾನತೆಯು

ಕಂಡುಬರುತ್ತದೆ. ಆ ನೆಲದ ಸಂವೇದನೆಗಳನ್ನು ಕನ್ನಡವಾಗಿಸುವಲ್ಲಿ ಅನುವಾದ ಸಾಹಿತ್ಯದಿಂದ ಸಾಧ್ಯವಾಗಿರುತ್ತದೆ. ಈ ಎರಡೂ ನೆಲದ ನೆಲೆಯ ಧ್ವನಿಗಳನ್ನು ಒಗ್ಗೂಡಿಸುವ ಸಾಧನೆಯನ್ನು ಈ ಅನುವಾದದ ಪ್ರಕ್ರಿಯೆಯು ಮಾಡಿರುತ್ತದೆ.

ಹೊಸಗನ್ನಡ ಪ್ರಾರಂಭದಿಂದ ಮತ್ತೊಂದು ಜಗತ್ತನ್ನು ಪರಿಚಯಿಸುವ ಕನ್ನಡಿಕರಣದ ಕಾರ್ಯ ನಡೆದಿರುತ್ತದೆ. ಮತ ಧರ್ಮಗಳ ಪ್ರಭಾವವೂ ಈ ಎರಡೂ ಭಾಷೆಗಳ ಸಂಬಂಧಗಳು ಗಟ್ಟಿಯಾಗುವುದಕ್ಕೆ ಕಾರಣವಾಗಿರುತ್ತದೆ. ವೀರಶೈವ ಮತ್ತು ವೈಷ್ಣವ ಧರ್ಮದ ಸಂತರು, ಶರಣರು, ದಾಸರು ಇಂತಹ ಸಂಬಂಧವನ್ನು ಹಿಂದೆಯೇ ಬೆಸೆದು ಹೋಗಿರುವುದು ಕಂಡು ಬರುತ್ತದೆ. ಅನ್ನಮಯ್ಯ, ಪುರಂದರದಾಸರು, ತ್ಯಾಗರಾಜರ ಕೀರ್ತನೆಗಳು ಇದಕ್ಕೆ ಪ್ರೇರಕ ಶಕ್ತಿಗಳಾಗಿರುತ್ತವೆ. ಪಂಪ ಮತ್ತು ನನ್ನಯ, ವೇಮನ ಮತ್ತು ಸರ್ವಜ್ಞ, ತಿಕ್ಕನ ಮತ್ತು ಕುಮಾರವ್ಯಾಸ ಸಂಗಮದ ಅವಳಿ–ಜವಳಿತನವನ್ನು ಅವರ ಸಾಹಿತ್ಯ ಕೃತಿಗಳಿಂದ ಕಾಣಬಹುದಾಗಿದೆ. ಇವರ ಕೊಡುಕೊಳ್ಳುವಿಕೆಯ ಸಂಬಂಧಗಳು ಅಂದಿನಿಂದ ಇಂದಿನವರೆಗೂ ನಡೆದುಕೊಂಡು ಬಂದಿರುತ್ತವೆ. ಇವುಗಳ ಸಂಬಂಧವು ಆಧುನಿಕ ಯುಗದ ಸಾಹಿತ್ಯದ ಮೇಲೆ ಪ್ರಭಾವಿಸಿರುವುದು ಕಂಡುಬರುತ್ತವೆ.

ತೆಲುಗಿನ ಸಾಹಿತ್ಯವನ್ನು ಅವಲೋಕಿಸಿದಾಗ ಅದು ನಡೆದುಬಂದ ದಾರಿಯು ಧರ್ಮದ ಪ್ರಚಾರದ ಉದ್ದೇಶದಿಂದಲೇ ರಚನೆಯಾಗಿರುವುದು ತಿಳಿದುಬರುತ್ತದೆ. ಕನ್ನಡ ಸಾಹಿತ್ಯ ಲೋಕವು ಜೈನರಿಂದ ತೆರೆದುಕೊಂಡರೆ, ತೆಲುಗು ಸಾಹಿತ್ಯವು ಬ್ರಾಹ್ಮಣರಿಂದ ರೂಪುಗೊಂಡಿರುತ್ತದೆ. ಅನುವಾದದ ಪ್ರಕ್ರಿಯೆಯಿಂದಲೇ ತೆಲುಗು ಸಾಹಿತ್ಯ ಆರಂಭವಾಗಿದೆ. ಸಂಸ್ಕೃತದ ಮಹಾಕಾವ್ಯವಾದ ಮಹಾಭಾರತವನ್ನು ಕನ್ನಡನುವಾದ ಮಾಡಿದಂತೆ, ತೆಲುಗಿನಲ್ಲಿಯೂ ಈ ಕಾವ್ಯವನ್ನು ಅನುವಾದ ಮಾಡಿರುವುದು ತಿಳಿಯುತ್ತದೆ. ಇದರ ಅನುವಾದ ಇಂದಿಗೂ ನಡೆಯುತ್ತಲೇ ಇದೆ. ಮಹಾಭಾರತದ ಅನುವಾದ ಎರಡು ಭಾಷೆಗಳಲ್ಲೂ ಪ್ರಸ್ತುತವಾಗಿ ರೂಪಗೊಳ್ಳುತ್ತಿರುವುದನ್ನು ಗಮನಿಸಬಹುದು. ತೆಲುಗು ಕವಿ ನನ್ನಯ್ಯನ ಭಾರತವೇ ತೆಲುಗು ಸಾಹಿತ್ಯಕ್ಕೆ ಮೂಲಾಧಾರವಾಗಿದೆ. ನನ್ನಯ, ತಿಕ್ಕನ, ಎರ್ರನರನ್ನು ತೆಲುಗು ಸಾಹಿತ್ಯ ಲೋಕದ ಕವಿತ್ರಯರೆಂದು ಗುರುತಿಸಲಾಗಿದೆ.

ಶಿವಕವಿ ಕವಿಗಳಿಂದ ವೀರಶೈವ ಸಾಹಿತ್ಯದ ರಚನೆಯು ನನ್ನಯನ ನಂತರದ ಅವಧಿಯಲ್ಲಿ ಪ್ರಾರಂಭವಾಗುತ್ತದೆ. ಗುರುಸ್ವರೂಪಿಯಾದ ಪಾಲ್ಕುರಿಕಿ ಸೋಮನಾಥನು ಶಿವಕವಿಗಳ ಸಮೂಹಕ್ಕೆ ಸೇರುತ್ತಾನೆ. ಈತನ ತರುವಾಯ ತೆಲುಗಿನ ಕವಿಗಳೆಲ್ಲರೂ ಸಂಸ್ಕೃತದ ಶ್ರೇಷ್ಠ ಕಾವ್ಯಗಳನ್ನು ಅಧ್ಯಯನ ಮಾಡಿ ಅವುಗಳ ಸಾರವನ್ನು ಅರಿತು, ತಮ್ಮ ನಾಡಿನ ಜನತೆಗೆ ಆ ಕಾವ್ಯಗಳ ಮಹತ್ವವನ್ನು ತಿಳಿಸಲು ಅನುವಾದದ ಪ್ರಕ್ರಿಯೆಯನ್ನು ಪ್ರಾರಂಭಿಸಿದರು. ಆಧುನಿಕ ಸಾಹಿತ್ಯದ ಉಗಮದಿಂದ ಇಂಗ್ಲೀಷ್ ಸಾಹಿತ್ಯದ ಪ್ರೇರಣೆಯ ಪ್ರಭಾವದಿಂದ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಾವ್ಯ, ಕಾದಂಬರಿ, ನಾಟಕ, ಸಣ್ಣಕಥೆ ಇತ್ಯಾದಿ ಗ್ರಂಥಗಳು ಅನುವಾದದ ರೂಪದಲ್ಲಿ ಪ್ರಕಟಗೊಂಡವು. ಸಂಸ್ಕೃತ ಮತ್ತು ಇಂಗ್ಲೀಷ್ ಸಾಹಿತ್ಯದ ಬೆಳವಣಿಗೆಯು ದೇಶಿ ಸಾಹಿತ್ಯವನ್ನು ಶ್ರೀಮಂತಗೊಳಿಸಲು

ಅನುವಾದ ಸಾಹಿತ್ಯ ಪೂರಕವಾಗಿ ಕೃತಿ ರಚನೆಗೆ ಕಾರಣವಾಯಿತು. ಇದರಿಂದಾಗಿ ಅನುವಾದ ಸಾಹಿತ್ಯ ತನ್ನ ಮಹತ್ವವನ್ನು ಪಡೆದುಕೊಂಡಿರುವುದು ತಿಳಿದುಬರುತ್ತದೆ. ಅದರಂತೆ ಕನ್ನಡ ಮತ್ತು ತೆಲುಗು ಸಾಹಿತ್ಯದ ಬರವಣಿಗೆಯನ್ನು ಶೋಧಿಸಿದಾಗ ತೆಲುಗಿನಿಂದ ಕನ್ನಡ ಭಾಷೆಗೆ ಅನುವಾದಗೊಂಡು ಬಂದಂತಹ ಕಥೆಗಳನ್ನು ಈ ಮುಂದಿನಂತೆ ಸಮೀಕ್ಷೆ ಮಾಡಲಾಗಿದೆ.

ಸಾಹಿತ್ಯ ಪ್ರಕಾರದ ಸಣ್ಣಕಥೆ ಎನ್ನುವುದು ಸಾಹಿತ್ಯ ಲೋಕದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದೆ. ಇದೊಂದು ಸ್ವತಂತ್ರ ಅಭಿವ್ಯಕ್ತಿಯಿಂದ ಮೂಡಿಬಂದ ಸಾಹಿತ್ಯರೂಪವಾಗಿರುತ್ತದೆ. ಒಂದು ಬಲವಾದ ಉದ್ದೇಶವನ್ನು ಇಟ್ಟುಕೊಂಡು ಕಥೆಯು ಘಟನೆಗಳ ಮೂಲಕ ತೆಗೆದುಕೊಳ್ಳುತ್ತಾ ಸಾಗುತ್ತದೆ. ಇದು ಜನಸಾಮಾನ್ಯರ ಹಿತದೃಷ್ಟಿಯಿಂದ ಮತ್ತು ಅವರ ಬೌದ್ಧಿಕ ಪ್ರೇರಕಶಕ್ತಿಯಾಗಿ ರಚಿತವಾಗಿರುತ್ತದೆ. ಇಂತಹ ಸಣ್ಣಕಥೆಯ ಪ್ರಕಾರವನ್ನು ತೆಲುಗಿನಲ್ಲಿ ಚಿನ್ನಕಥಾ, ಕಥಾನಕ ಎಂದು ಕರೆಯಲಾಗುತ್ತದೆ. ಈ ಸಣ್ಣ ಕಥೆಗಳು ಮೊದಲು ಅನುವಾದ ರೂಪದಲ್ಲಿ ಪ್ರಕಟವಾಗಿರುವುದು "೧೯೫೦ ರಲ್ಲಿ ಪಿ.ವೆಂಕೋಬಾಚಾರ್ ಅವರು ತೆಲುಗು ಸಣ್ಣ ಕಥೆಗಳನ್ನು 'ಹೂ ಅರಳಿತು' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. 'ನನ್ಮೇಲೆ ಕತೆ ಬರೆಯಲ್ವೆ' ಎಂಬ ಕಥಾ ಸಂಗ್ರಹದಲ್ಲಿ ತೆಲುಗಿನ ಅತ್ಯುತ್ತಮವಾದ ಸಣ್ಣಕಥೆಗಳನ್ನು ವೀರಭದ್ರ ಅವರು ಅನುವಾದ ಮಾಡಿದ್ದಾರೆ."[೨] ಎಂಬುವುದು ತಿಳಿದುಬರುತ್ತದೆ.

ಈ ಕಥಾ ಸಂಕಲನದಲ್ಲಿರುವ ಕಥೆಗಳು ಸ್ತ್ರೀ ಸಂವೇದನೆಯುಳ್ಳ ಕಥೆಗಳಾಗಿರುತ್ತವೆ. ಹ.ಕ ರಾಜೇಗೌಡರವರು 'ಅನುಕ್ತ ಡೈರಿ' ಕಥೆಯನ್ನು ಮತ್ತು 'ಗುಲಾಬಿ ಅತ್ತರು' ಎಂಬ ಕಥಾಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಇವುಗಳ ಮೂಲ ಕಥೆಗಾರರು ತೆಲುಗಿನ ಶ್ರೀಪಾದ ಸುಬ್ರಹ್ಮಣ್ಯ ರವರಾಗಿದ್ದಾರೆ. ಆರ್ಬ್ರೀಯಸ್ ಸುಂದರಮ್ ರವರು ಪಾಲಗುಮ್ಮಿ ಪದ್ಮರಾಜು ರವರ 'ಗಾಲಿವಾನ' ಎಂಬ ಕಥಾಸಂಕಲನವನ್ನು 'ಬಿರುಗಾಳಿ' ಎಂಬ ಹೆಸರಿನಲ್ಲಿ ಕನ್ನಡ ಅನುವಾದ ಮಾಡಿದ್ದಾರೆ. ೧೯೮೧ರಲ್ಲಿ ವಂಶಿರವರು 'ಚಿತ್ತ ಭ್ರಮಣ' ಎಂಬ ಕಥಾಸಂಕಲನವನ್ನು ಅನುವಾದ ಮಾಡಿದ್ದಾರೆ. ಇದೊಂದು ಮಾನಸಿಕವಾಗಿ ಅಸ್ವಸ್ಥಗೊಂಡವರ ಕಥಾಸಂಕಲನವಾಗಿರುತ್ತದೆ. ೧೯೭೪ ರಲ್ಲಿ ೧೬ ಕಥೆಗಳನ್ನು ಒಳಗೊಂಡಿರುವ 'ಆಂಧ್ರಕಥಾ ಮಂಜೂಷ' ಎಂಬ ಕಥಾ ಸಂಕಲನವನ್ನು ಕೊ.ಚೆನ್ನಬಸಪ್ಪ ರವರು ಕನ್ನಡನುವಾದ ಮಾಡಿದ್ದಾರೆ.

ಇದನ್ನು ಸ್ವಾಮಿ ಶಿವಶಂಕರ ರವರು ತೆಲುಗಿನಲ್ಲಿ ಸಂಕಲನ ಮಾಡಿದ್ದಾರೆ. ಅದರಂತೆ ೨೭ ಸಣ್ಣಕಥೆಗಳ 'ಕಥಾ ಭಾರತಿ' ಎಂಬ ಕಥಾಸಂಕಲನವನ್ನು ಎಚ್.ಜಿ ಹನುಮಪ್ಪ ರವರು ಕನ್ನಡ ಅನುವಾದ ಮಾಡಿದ್ದಾರೆ. ಇದನ್ನು ಸುಬ್ರಹ್ಮಣ್ಯ ಶರ್ಮ ಮತ್ತು ವಾಕಾಟಿ ಪಾಂಡುರಂಗ ಅವರು ಸಂಪಾದನೆ ಮಾಡಿದ್ದಾರೆ. ೧೬ ಸಣ್ಣಕಥೆಗಳ ಕಥಾಸಂಕಲನವನ್ನು ಕಾರುಪಲ್ಲಿ ಜಾನಕಿ ರಾಮಯ್ಯ ರವರು ತೆಲುಗಿನಲ್ಲಿ ವಿವಿಧ ಲೇಖಕರು ಬರೆದಂತಹ ಕಥೆಗಳನ್ನು ಅನುವಾದ ಮಾಡಿದ್ದಾರೆ. ೨೦೦೧ ರಲ್ಲಿ 'ಒಂದು ಪೀಳಿಗೆಯ ತೆಲುಗು ಕಥೆಗಳು' ಎಂಬ ಕಥಾ ಸಂಕಲನವನ್ನು ವೀರಭದ್ರರವರು

ಅನುವಾದ ಮಾಡಿದ್ದಾರೆ. ಇದನ್ನು ಡಿ.ರಾಮಲಿಂಗಂ ರವರು ಕಥೆಗಳ ಸಂಪಾದನೆ ಮಾಡಿದ್ದರೆ. ೧೯೮೮ ರಲ್ಲಿ ೨೦ ಕಥೆಗಳುಳ್ಳ ಕಥಾಸಂಕಲನವನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮೈಸೂರಿನಲ್ಲಿ ದ್ರಾವಿಡ ಭಾಷೆಗಳ ಸಣ್ಣಕಥೆಗಳ ಅನುವಾದ ಕಮ್ಮಟದಿಂದ ಪ್ರಕಟಿಸಿರುತ್ತದೆ. ಇದರಲ್ಲಿ ತೆಲುಗಿನ ಪ್ರಮುಖ ಕಥೆಗಾರರ ಕಥೆಗಳು ಒಳಗೊಂಡಿರುತ್ತವೆ. ಇಲ್ಲಿ ತೆಲುಗು ಸಾಹಿತ್ಯ ಸ್ವಭಾವದಿಂದ ಬದಲಾಗುತ್ತಾ ಬಂದಿರುವುದನ್ನು ಅವಲೋಕನ ಮಾಡಲಾಗಿರುತ್ತದೆ.

ಈ ಸಾಧನೆಯ ಕಥೆಗಾರರ ವಿವಿಧ ಮುಖಗಳು ಇಲ್ಲಿ ಕಾಣಿಸುತ್ತವೆ. ಅದರಲ್ಲಿ ತೆಲುಗಿನ ಪ್ರಮುಖ ಕಥೆಗಾರರು ಎಂದರೆ ಕಾಳೀ ಪಟ್ನಂ, ರಾಮಾರಾವ್, ರಾಚಕೊಂಡ ವಿಶ್ವನಾಥ ಶಾಸ್ತ್ರೀ, ಮಧುರಾಂತಕಂ ರಾಜಾರಾಮ್, ಬೀನಾದೇವಿ, ಪಾಲಗುಮ್ಮಿ ಪದ್ಮರಾಜು, ರಂಗನಾಯಕಮ್ಮ, ವಾಸಿರೆಡ್ಡಿ ಸೀತಾದೇವಿ, ಪುರಾಣಂ ಸುಬ್ರಹ್ಮಣ್ಯ ಶರ್ಮ, ಕೊಡವಟಿಗಂಟಿ ಕುಟುಂಬರಾವ್, ಬುಚ್ಚಿ ಬಾಬು, ಬಲಿವಾಡ ಕಾಂತರಾವು, ರಾವೂರಿ ಭರಧ್ವಾಜ್ ಮುಂತಾದವರು. ಇವರ ಕತೆಗಳನ್ನು ಕನ್ನಡಕ್ಕನುವಾದ ಮಾಡಿದ ಪ್ರಮುಖ ಅನುವಾದಕರೆಂದರೆ ಎಚ್.ಎಸ್.ಸುಜಾತ, ವೀರಭದ್ರ, ಶಾರದಾ ಪ್ರಸಾದ್, ನಿರುಪಮ, ಸ.ರಘುನಾಥ ಮುಂತಾದವರಾಗಿದ್ದಾರೆ. ಹೀಗೆ ತೆಲುಗು ಅನುವಾದಿತ ಕಥೆಗಳ ಚಾರಿತ್ರಿಕ ನೋಟವನ್ನು ಕಾಣಬಹುದಾಗಿದೆ.

### ೨.೪. ಮಲಿಯಾಳಿ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ದ್ರಾವಿಡದ ಇತರ ಭಾಷೆಗಳಂತೆ ಮಲಿಯಾಳಿ ಭಾಷೆಯು ಸಾಹಿತ್ಯ ಲೊಕದಲ್ಲಿ ತನ್ನದೇ ಆದ ಕೊಡುಗೆಗಳನ್ನು ನೀಡಿರುತ್ತದೆ. ಈ ದಿಶೆಯಲ್ಲಿ ಸಣ್ಣ ಕಥೆಗಳ ಸಾಹಿತ್ಯ ಪ್ರಕಾರದಲ್ಲೂ ತನ್ನ ಗರಿಮೆಯನ್ನು ಹೊಂದಿರುವುದನ್ನು ಕಾಣಬಹುದು. ಈ ಭಾಷೆಯ ಕಥೆಗಾರರು ಮಹತ್ತರವಾದ ಕಥೆಗಳನ್ನು ಕಥಾಲೋಕಕ್ಕೆ ಕಾಣಿಕೆಯಾಗಿ ನೀಡಿದ್ದಾರೆ. ಇಂತಹ ಕಥೆಗಳನ್ನು ಅನುವಾದಕರು ಕನ್ನಡ ನಾಡುನುಡಿಗೆ ಸ್ಪಂದಿಸುವ ಹಾಗೆ ಸ್ವಚ್ಛಂದವಾಗಿ ಕಥಾ ಸಂಕಲನಗಳನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಈ ಅನುವಾದದ ಪ್ರಕ್ರಿಯೆಯ ಹಿನ್ನೆಲೆಯ ಚಾರಿತ್ರಿಕ ನೋಟವನ್ನು ನೋಡುವುದಾದರೆ ಸು.೧೬ನೇ ಶತಮಾನದಲ್ಲಿ ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳಲ್ಲಿ ಮಲಿಯಾಳಂನಿಂದ ಕನ್ನಡಕ್ಕೆ ಅನುವಾದದ ಕಾರ್ಯವನ್ನು ಗುರುತಿಸಬಹುದಾಗಿದೆ. ಇದು ಮಲಿಯಾಳಂನ ಕೊಟ್ಟಾರಕ್ಕರ ಮಹಾರಾಜನ ರಾಮಾಯಣದ ಅನುವಾದವಾಗಿರುತ್ತದೆ. ಈ ಕಾವ್ಯದ ಅನೇಕ ಪದ್ಯಗಳನ್ನು ಮೂಲ ಮಲಿಯಾಳಂನಲ್ಲಿರುವಂತೆ ಅನುವಾದವನ್ನು ಮಾಡಲಾಗಿರುತ್ತದೆ.

ಇದರಿಂದ ಕನ್ನಡದ ಯಕ್ಷಗಾನ ಪ್ರಸಂಗಗಳಿಗೆ ಮಲಿಯಾಳಂನ ಕಾವ್ಯಗಳ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಕುಕ್ಕಿಲ ಕೃಷ್ಣಭಟ್ಟರು 'ಪಾರ್ತಿ ಸುಬ್ಬನ ಯಕ್ಷಗಾನ ಪ್ರಸಂಗಗಳು' ಎಂಬ ಕೃತಿಯ ಕನ್ನಡ ಅನುವಾದಕರು ಆಗಿದ್ದಾರೆ. ಮಲಿಯಾಳಿ ರಾಮಾಯಣದ ಮೂಲ ಪದ್ಯಗಳನ್ನು ಅಚ್ಚುಕಟ್ಟಾಗಿ ಕನ್ನಡ ಭಾಷೆಗೆ ಒಗ್ಗುವ ಹಾಗೆ ಅನುವಾದ ಮಾಡಿ ಯಶಸ್ವಿಯಾಗಿದ್ದಾರೆ. ಇವರಿಂದ ಅನುವಾದದ ಕಾರ್ಯ ಮುಂದಿನ ತಲೆಮಾರಿನವರಿಗೆ ಸ್ಫೂರ್ತಿಯಾಯಿತೆಂದು ಹೇಳಬಹುದು.

ಪಾರ್ತಿಸುಬ್ಬನ ಯಕ್ಷಗಾನ ಪ್ರಸಂಗಗಳೇ ಮಲಿಯಾಳಂನಿಂದ ಕನ್ನಡಕ್ಕೆ ಬಂದ ಮೊದಲ ಅನುವಾದದ ಕಾರ್ಯವೆಂದು ವಿದ್ವಾಂಸರು ಗುರುತಿಸಿದ್ದಾರೆ. ಪ್ರಾಯೋಗಿಕವಾಗಿ ನೋಡಿದಾಗ ಇದು ಮಲಿಯಾಳಿ ಭಾಷೆಯು ಕನ್ನಡದ ಮೇಲೆ ಇರುವ ಪ್ರಭಾವವನ್ನು ತೋರಿಸಿಕೊಡುತ್ತದೆ. ಅದರಂತೆ ರಾಮಾಯಣದಿಂದ ತೆಗೆದುಕೊಂಡು ಅನುವಾದವಾದಂತಹ ಸೃಜನಶೀಲ ಕೃತಿಯು ಇದಾಗಿರುತ್ತದೆ. ನಂತರ ಮಲಿಯಾಳಂನ ಅನುವಾದ ಸಾಹಿತ್ಯ ಚರಿತ್ರೆಯು ೧೯ನೇ ಶತಮಾನದ ಮುಕ್ತಾಯದಲ್ಲಿ ಕನ್ನಡದಲ್ಲಿ ಪ್ರಾರಂಭವಾಗುತ್ತದೆ. 'ತೂವನ್ನಿಲಾವ್' ಎಂಬ ಕೃತಿಯನ್ನು ೧೮೮೫ರಲ್ಲಿ ಶ್ರೀಗಣೇಶ ಶಾಂತಯ್ಯ ಕಾರಬಯ್ಲೇಕರ್ ರವರು ನಿರೂಪಿಸಿರುತ್ತಾರೆ.

ಇದೊಂದು ವಿಷ ವೈದ್ಯ ಗ್ರಂಥವಾಗಿರುತ್ತದೆ. ಅನುವಾದದ ನೆಲೆಯಲ್ಲಿ ಇದು ಮಲಿಯಾಳಂನಿಂದ ಕನ್ನಡಕ್ಕೆ ಬಂದ ಮೊದಲ ಕೃತಿಯಾಗಿರುತ್ತದೆ. ಈ ಕೃತಿಯು ಯಾವುದೇ ವಿಷ ಜೀವಿಯಿಂದ ಭಾದೆಗೆ ಮನುಷ್ಯ ಒಳಪಟ್ಟರೆ ಅದಕ್ಕೆ ಪರಿಹಾರವಾಗಿ ಆಯುರ್ವೇದದ ಪದ್ಧತಿಯಿಂದ ಚಿಕಿತ್ಸೆಯನ್ನು ತಿಳಿಸುವ ವೈಜ್ಞಾನಿಕ ಗ್ರಂಥವಾಗಿರುತ್ತದೆ. ಮೂಲ ಮಲಿಯಾಳಂನಲ್ಲಿ ಹೇಳಲಾದ ಸ್ಪಷ್ಟ ಔಷಧದ ಬಗೆಗಳನ್ನು ಕನ್ನಡಕ್ಕೆ ಅನುವಾದ ಮಾಡಲಾಗಿರುತ್ತದೆ. ಆದ್ದರಿಂದಲೇ ಹೆಚ್ಚು ಜನಪ್ರಿಯವಾಗ ಗ್ರಂಥವಾಗಿರುತ್ತದೆ. ಇದು ಒಂದು ಸಮುದಾಯಕ್ಕೆ ಉಪಯೋಗವಾಗುವ ಯೋಗ್ಯ ಗ್ರಂಥವಾಗಿ ಲೋಕದ ಉಪಕಾರಕ್ಕೆಂದು ಅನುವಾದ ಪ್ರಕ್ರಿಯೆಯನ್ನು ಮಾಡಲಾಗಿದೆ. ವಿಷ ಜಂತುಗಳು ಮಾನವರಿಗೆ ಕಚ್ಚಿದಾಗ ಅದಕ್ಕೆ ಪರಿಹಾರವಾಗಿ ಔಷಧಿ ಸಸ್ಯಗಳನ್ನು ತಿಳಿಸಲಾಗಿದೆ. ಸುತ್ತಮುತ್ತಲಿನ ಪರಿಸರದಲ್ಲಿ ಸಿಗುವ ಔಷಧಿ ಸಸ್ಯಗಳು ಇವಾಗಿರುವುದರಿಂದ ಜನರಿಗೆ ಅನುಕೂಲವಾಗಲೆಂದು ಈ ಕೃತಿಯನ್ನು ೧೮೮೫ ರಲ್ಲಿ ೨೦೦೦ ಪ್ರತಿಗಳನ್ನು ಮುದ್ರಿಸಲಾಗಿರುತ್ತದೆ. ಈ ಕೃತಿಯು ೭೯ ಪುಟಗಳನ್ನು ಒಳಗೊಂಡಿರುತ್ತದೆ.

ಹೀಗೆ ಅನುವಾದ ಪ್ರಕ್ರಿಯೆಯು ಅಂದಿನಿಂದ ಇಂದಿನವರೆಗೆ ನಡೆದುಕೊಂಡು ಬಂದಿರುವ ಮಲಿಯಾಳಂನ ಕನ್ನಡ ಅನುವಾದಿತ ಕಥೆಗಳ ಸಮೀಕ್ಷೆಯನ್ನು ನೋಡುವುದಾದರೆ "ಮಲಿಯಾಳಂನಲ್ಲಿ ಸಣ್ಣ ಕಥೆಗಳ ಫಸಲು ಹುಲುಸಾಗಿದೆ. ಮಲಿಯಾಳಂನಲ್ಲಿ ಮೊದಲ ಸಣ್ಣ ಕಥೆ ೧೯ನೇ ಶತಮಾನದ ಕೊನೆಯ ದಶಕದಲ್ಲಿಯೇ ರಚನೆಯಾಗಿದೆ. ಆದರೆ ಸಣ್ಣಕಥೆ ಕನ್ನಡಕ್ಕೆ ಸಂಕಲನದ ರೂಪದಲ್ಲಿ ಎಸ್.ಜೆ ಕಾಮತ್ ಅನುವಾದಿಸಿ ಪ್ರಕಟವಾದದ್ದು ೧೯೫೧ರಲ್ಲಿ ಟಿ.ಎಸ್.ಪಿಳ್ಳೆ ಮೊದಲಾದ ವಿವಿಧ ಲೇಖಕರ ಮಲಿಯಾಳಂ ಕಥೆಗಳನ್ನು ಒಳಗೊಂಡ ಸಂಕಲನವದು. ಸಮುದಾಯ ಸಾಹಿತ್ಯ ಮಾಲೆ ಹುಬ್ಬಳ್ಳಿ ಇದನ್ನು ಪ್ರಕಟಿಸಿದೆ."[5] ೧೯೭೨ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಮಲಿಯಾಳಂ ಕತೆಗಳು ಎಂಬ ಕಥಾ ಸಂಕಲನವನ್ನು ಕೆ.ಎಸ್‌ಕರುಣಾಕರನ್ ರವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ಒಟ್ಟು ೧೨ ಕತೆಗಾರರ ೧೨ ಕಥೆಗಳಿರುತ್ತವೆ.

ಪೋನಕುನ್ನಂ ವರ್ಕಿ (ದನಿಗೈಯುವ ನೇಗಿಲು), ಎಮ್ ಮುಕುಂದನ್ (ಬಚ್ಚಲು ಮನೆ), ಎಂ.ಟಿ ವಾಸುದೇವನ್ ನಾಯರ್ (ನಡುದಾರಿಯಲ್ಲಿ ನೆನಪಿನ ನೆರಳು) ಮುಂತಾದವು. ೧೯೭೩ರಲ್ಲಿ

ನ್ಯಾಷನಲ್ ಬುಕ್ ಟ್ರಸ್ಟ್ ಪ್ರಕಟಿಸಿದ ಮಲಿಯಾಳಿ ಕಥೆಗಳು ಎಂಬ ಕಥಾ ಸಂಕಲನವನ್ನು ಕುಮಾರತನಯ ರವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ಒಟ್ಟು ೧೭ ಕಥೆಗಳಿರುತ್ತವೆ. ಟಿ.ಪದ್ಮನಾಭನ್ (ಓರ್ವ ಕಲಾವಿದನ ಕುಂಬದಲ್ಲಿ), ಕೆ.ವಿ.ಮಹಮ್ಮದ್ (ನಗುತ್ತಿರುವ ಕತ್ತಿ), ನಾಗವಳ್ಳಿ ಆರ್.ಸಿ ಕುರುಪ್ (ಮಾಂಗಲ್ಯ), ನಂದನಾರ್ (ಯಜ್ಞ ಪಶುಗಳು) ಮುಂತಾದವು. ೧೯೮೯ರಲ್ಲಿ ಸಾಹಿತ್ಯ ಅಕಾಡಮಿ ಪ್ರಕಟಿಸಿರುವ 'ಮಲಿಯಾಳಂ ಸಣ್ಣ ಕಥೆಗಳು' ಎಂಬ ಕಥಾ ಸಂಕಲನವನ್ನು ಕೆ.ಕೆ. ನಾಯರ್ ರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿ ಒಟ್ಟು ೨೦ ಕಥೆಗಳಿರುತ್ತವೆ. ಪುಳಿಯಾನ್ ಪರಮೇಶ್ವರನ್ ಪಿಳ್ಳೆ (ಮೋಚಿಯ ಮಗಳು), ಪುಂಜಿದೇವನ್ ನಾಯರ್ (ಶ್ರೀ ಖಡ್ಗ ಮತ್ತು ಕಾಲ ಗಗ್ಗರ), ಪೋನ್ ಕುನ್ನಂ ವರ್ಕಿ (ಅಂಗಡಿಯ ಕೀಲಿ), ಕೆ.ಸರಸ್ವತಿ ಅಮ್ಮ (ಚದುರಿದ ಇಸ್ಪಿಟೆಲೆ), ಕೆ.ಸುಕುಮಾರನ್ (ಹಿತವಾದ ಮೋಸ) ಮುಂತಾದವು.

೧೯೮೯ ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಿಸಿದ ಮಲಿಯಾಳಂ ಕಥಾ ಸಂಕಲನ ಎಂಬ ಕಥಾ ಸಂಕಲನವನ್ನು ವಿವಿಧ ಲೇಖಕರು ಅನುವಾದ ಮಾಡಿರುತ್ತಾರೆ. ಇದರಲ್ಲಿ ಒಟ್ಟು ೨೦ ಕಥೆಗಳಿರುತ್ತವೆ. ಯು.ಎ.ಖಾದರ್ (ಚೂರ್ಣಿ ನದಿತೀರದ ಗೆಳೆಯ ಮಹಾಶಯ), ಕಾಕನಾಡನ್ (ಅಶ್ವತ್ಥಾಮನ ನಗು), ಸಿ.ವಿ.ಶ್ರೀರಾಮನ್(ಘಟಶ್ರಾದ್ಧ), ಸೇತು(ಕುಲ ಕಸುಬು), ಕಾರೂರ್ ನೀಲಕಂಠ ಪಿಳ್ಳೆ (ಮರದ ಬೊಂಬೆಗಳು) ಮುಂತಾದವುಗಳು. ೧೯೯೪ರಲ್ಲಿ ನವಕರ್ನಾಟಕದ ಪ್ರಕಾಶನ ಪ್ರಕಟಿಸಿರುವ ಚಿದಂಬರಂ ಎಂಬ ಕಥಾ ಸಂಕಲನವನ್ನು ಅಶೋಕ ಕುಮಾರ್‌ರವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ೧೬ ಕಥೆಗಳನ್ನು ಸಿ.ವಿ.ಶ್ರೀರಾಮನ್ ರವರು ಬರೆದಿರುತ್ತಾರೆ. ೨೦೦೫ರಲ್ಲಿ ಸಾಹಿತ್ಯ ಅಕಾಡಮಿ ಪ್ರಕಟಿಸಿದ ಸಿ.ವಿ.ಶ್ರೀರಾಮನ್ ಕಥೆಗಳು ಎಂಬ ಕಥಾ ಸಂಕಲನದಲ್ಲಿ ೭೫ ಕಥೆಗಳಿರುತ್ತವೆ. ೧೯೯೬ ರಲ್ಲಿ 'ವೈಕಂ ಕಥೆಗಳು' ಎಂಬ ಕಥಾ ಸಂಕಲನದಲ್ಲಿ ೧೭ ಕಥೆಗಳಿವೆ.

ಇದನ್ನು ಗಂಗಾಧರಯ್ಯ ಎ.ಎಸ್ ರವರು ಕನ್ನಡ ಅನುವಾದ ಮಾಡಿದ್ದಾರೆ. ೧೯೯೯ರಲ್ಲಿ ಬಷೀರ್ ಕಥೆಗಳು ಎಂಬ ಕಥಾ ಸಂಕಲನವನ್ನು ಮೋಹನ್ ಕುಂಟಾರ್ ರವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ೧೧ ಕಥೆಗಳಿರುತ್ತವೆ. ೧೯೯೯ರಲ್ಲಿ ಎಮ್.ಟಿ. ವಾಸುದೇವನ್ ನಾಯರ್ ರವರು ಬರೆದ ಕಥಾಸಂಕಲನವನ್ನು ಬರೆದ ಕೆ.ಕೆ.ನಾಯರ್ ರವರು 'ಕುಟ್ಯಕ್ಕ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ೯ ಕಥೆಗಳಿರುತ್ತವೆ. ಇದರಂತೆ ೨೦೦೧ ರಲ್ಲಿ ಮೋಹನ್ ಕುಂಟಾರ್ ರವರು ವಾಸುದೇವನ್ ನಾಯರ್ ಕಥೆಗಳು ಎಂಬ ಕಥಾ ಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ೧೦ ಕಥೆಗಳಿರುತ್ತವೆ. ೨೦೦೧ರಲ್ಲಿ ಯುಗಾಂತ ಮತ್ತು ಇತರ ಕಥೆಗಳು ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ ಐತಾಳ್ ರವರು ಕನ್ನಡನುವಾದ ಮಾಡಿದ್ದಾರೆ. ೨೦೦೩ರಲ್ಲಿ ಮಲಿಯಾಳಂ ಕಥೆಗಳು ಎಂಬ ಕಥಾ ಸಂಕಲನವನ್ನು ಕೆ.ಕೆ ಗಂಗಾಧರನ್ ಅವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ೮ ಕಥೆಗಳಿರುತ್ತವೆ.

೨೦೦೪ರಲ್ಲಿ ಕನ್ನಡ ವಿಶ್ವವಿದ್ಯಾಯ ಹಂಪಿ ಪ್ರಕಟಿಸಿರುವ ಮಲಿಯಾಳಂ ಕಥೆಗಳು ಎಂಬ ಕಥಾ ಸಂಕಲನವನ್ನು ವಿವಿಧ ಲೇಖಕರು ಕನ್ನಡನುವಾದ ಮಾಡಿದ್ದಾರೆ.

ಒಟ್ಟು ೧೪ ಕಥೆಗಳಿರುತ್ತವೆ. ಎಮ್. ಮುಕುಂದನ್, ಮಾಧವನ್, ಸಿ.ವಿ ಬಾಲಕೃಷ್ಣನ್, ಎಮ್.ಟಿ ವಾಸುದೇವನ್ ನಾಯರ್, ಎಸ್.ಪ್ರಭಾಕರನ್, ಸಿ.ಅಯ್ಯಪ್ಪನ್, ಕುಇಬ್ದುಲ್ ಇತ್ಯಾದಿ ಕಥೆಗಾರರಾಗಿರುತ್ತಾರೆ. ೨೦೦೪ ರಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿದ ಮಲಿಯಾಳಂ ೧೦ ಕಥೆಗಾರ್ತಿಯರು ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ. ಐತಾಳ್ ರವರು ಕನ್ನಡನುವಾದ ಮಾಡಿದ್ದಾರೆ. ೨೦೦೯ ರಲ್ಲಿ ಮಲಿಯಾಳಂನ ಮೂರು ನೀಳ್ಗತೆಗಳು ಎಂಬ ಎನ್. ಪ್ರಭಾಕರನ್ ರವರ ಕಥಾ ಸಂಕಲನವನ್ನು ಕೆ. ಕಮಲಾಕ್ಷಿ ಯವರು ಕನ್ನಡನುವಾದ ಮಾಡಿದ್ದಾರೆ. ೨೦೦೯ ರಲ್ಲಿ ಲಂಕೇಶ್ ಪ್ರಕಾಶನ ಪ್ರಕಟಿಸಿದ ಕಮಲಾದಾಸ್ ಕಥೆಗಳು ಎಂಬ ಕಮಲಾದಾಸ್ ಅವರ ಕಥಾ ಸಂಕಲನವನ್ನು ಕೆ.ಕೆ. ಗಂಗಾಧರನ್ ರವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿ ೧೭ ಕಥೆಗಳಿರುತ್ತವೆ.

೨೦೧೩ ರಲ್ಲಿ ಬೆಂಗಳೂರಿನ ಹೇಮಂತ್ ಸಾಹಿತ್ಯ ಪ್ರಕಾಶನ ಪ್ರಕಟಿಸಿದ 'ಕಮಲಾದಾಸ್ ಸಮಗ್ರ ಕಥೆಗಳು' ಎಂಬ ಕಥಾ ಸಂಪುಟಗಳನ್ನು ಕೆ.ಕೆ. ಗಂಗಾಧರನ್ ಅನುವಾದ ಮಾಡಿದ್ದಾರೆ. ಇದರಲ್ಲಿ ೧೦೧ ಸಣ್ಣ ಕಥೆಗಳಿರುತ್ತವೆ. ೨೦೧೧ ರಲ್ಲಿ ಕ್ರೈಸ್ಟ ಯುನಿವರ್ಸಿಟಿ ಪ್ರಕಟಿಸಿದ ಗೌರಿ ಎಂಬ ಕಥಾ ಸಂಕಲನವನ್ನು ಕೆ.ಕೆ ಗಂಗಾಧರನ್ ಅನುವಾದ ಮಾಡಿದ್ದಾರೆ. ಇದರಲ್ಲಿ ವಿವಿಧ ಲೇಖಕರ ಒಟ್ಟು ೧೮ ಕಥೆಗಳಿರುತ್ತವೆ. ಇದರಲ್ಲಿ ಪ್ರಮುಖವಾದ ಕಥೆಗಾರರು ಟಿ.ಪದ್ಮನಾಭನ್, ಪುನತ್ತಿಲ್ ಕುಇಬ್ದುಲ್, ಪ್ರಭಾಕರನ್, ಪಳಸ್ಸಿ, ಉಮಾದೇವಿ, ಕಮಲಾದಾಸ್, ಮಹಮ್ಮದ್ ಬಷೀರ್ ಮುಂತಾದವರು. ೨೦೧೨ ರಲ್ಲಿ ಬೆಂಗಳೂರಿ ಕ್ರೈಸ್ಟ ಯುನಿವರ್ಸಿಟಿ ಪ್ರಕಟಿಸಿದ ಟಿ.ಪದ್ಮನಾಭನ್ ರವರ ನಳಿನ ಕಾಂತಿ ಎಂಬ ಕಥಾ ಸಂಕಲನವನ್ನು ಕೆ.ಕೆ ನಾಯರ್ ಮತ್ತು ಅಶೋಕ ಕುಮಾರ್ ರವರು ಕನ್ನಡನುವಾದ ಮಾಡಿದ್ದಾರೆ. ೨೦೧೪ ರಲ್ಲಿ ನವಕರ್ನಾಟಕ ಪ್ರಕಾಶನವು ಪ್ರಕಟಿಸಿದ ವಿವಿಧ ಲೇಖಕರ 'ಮಲಿಯಾಳಂನ ಶ್ರೇಷ್ಠ ಕಥೆಗಳು' ಎಂಬ ಕಥಾ ಸಂಕಲನವನ್ನು ಕೆ.ಕೆ. ಗಂಗಾದರನ್ ರವರು ಅನುವಾದ ಮಾಡಿದ್ದಾರೆ. ಇದರಲ್ಲಿ ೨೫ ಸಣ್ಣ ಕಥೆಗಳಿರುತ್ತವೆ. ಹೀಗೆ ಮಲಿಯಾಳಂ ಸಾಹಿತ್ಯವು ಸಮಾಜಪರ ಚಿಂತನೆಗಳನ್ನು ಇಟ್ಟುಕೊಂಡು ಕಥಾಸಾಹಿತ್ಯ ರಚನೆಯಾಗಿರುತ್ತದೆ. ಹೀಗೆ ಮಲಿಯಾಳಿ ಅನುವಾದಿತ ಕಥೆಗಳ ಚಾರಿತ್ರಿಕ ನೋಟವನ್ನು ಕಾಣಬಹುದಾಗಿದೆ.

## ೨.೫. ಮರಾಠಿ ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ಕನ್ನಡ ಮತ್ತು ಮರಾಠಿ ಭಾಷೆಯ ನಡುವೆ ಸು.೭ರಿಂದ ೮೦೦ವರ್ಷಗಳ ಸಂಬಂಧವಿರುವುದು ಕಂಡುಬರುತ್ತದೆ. ಆದ್ದರಿಂದ ಈ ಎರಡೂ ಭಾಷಿಕ ಜನರ ನಡುವೆ ಕೊಡುಕೊಳ್ಳುವಿಕೆಯ ಸಂಬಂಧಗಳು ಸಹಜವಾಗಿಯೇ ನಡೆದಿರುತ್ತವೆ. ಈ ಎರಡೂ ಭಾಷೆಗಳು ನೆರೆ ಹೊರೆಯ ಭಾಷೆಗಳಾಗಿರುತ್ತವೆ. ಪರಸ್ಪರ ಒಂದೇ ಸಂಸ್ಕೃತಿಯನ್ನು ಹೊಂದಿದ್ದರೂ ಭಾಷಾವರ್ಗದ ದೃಷ್ಟಿಯಿಂದ ಎರಡೂ ಭಾಷೆಗಳು

ಭಿನ್ನವಾದ ಭಾಷಾವರ್ಗಕ್ಕೆ ಸೇರುತ್ತವೆ. ಮರಾಠಿ ಭಾಷೆಯು ಇಂಡೋ ಆರ್ಯನ್ ಭಾಷಾವರ್ಗಕ್ಕೆ ಸೇರಿದರೆ, ಕನ್ನಡ ಭಾಷೆಯು ದ್ರಾವಿಡ ಭಾಷಾವರ್ಗಕ್ಕೆ ಸೇರಿರುತ್ತದೆ. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಕನ್ನಡ ಸಾಹಿತ್ಯವು ದೇಶಿ ಮತ್ತು ಮಾರ್ಗಗಳ ಸಂಯೋಗದಿಂದ ಬೆಳೆದುಕೊಂಡು ಬಂದಿರುತ್ತದೆ. ಕವಿ ಪಂಪನಿಂದ ಕನ್ನಡ ಸಾಹಿತ್ಯವು ಸಂಸ್ಕೃತದ ಮಡಿಲನ್ನು ಆಶ್ರಯಿಸಿಕೊಂಡು ತನ್ನತನದ ದೇಶಿಯತೆಯಲ್ಲಿ ಹೆಮ್ಮರವಾಗಿರುವುದನ್ನು ಕಾಣಬಹುದಾಗಿದೆ. ಅದರಂತೆ ಸಂಸ್ಕೃತ ಮೂಲವೇ ಆಗಿರುವ ಪ್ರಾಕೃತ ಭಾಷೆಯಲ್ಲಿ ನಾಲ್ಕು ಬಗೆಯ ಪ್ರಭೇದಗಳಿರುತ್ತವೆ. ಅವುಗಳೆಂದರೆ ಲಾಟೀ, ಮಾಗಧಿ, ಪೈಶಾಚಿ ಮತ್ತು ಮಹಾರಾಷ್ಟ್ರಿ. ಈ ಮಹಾರಾಷ್ಟ್ರಿ ಭಾಷೆಯಲ್ಲಿ ಪ್ರಾಕೃತವೇ ಅತಿ ಹೆಚ್ಚು ತನ್ನ ಪ್ರಭಾವವನ್ನು ಬೀರಿರುತ್ತದೆ. ಇದರಿಂದಾಗಿ ನಮಗೆ ತಿಳಿದುಬರುವುದೇನೆಂದರೆ ಹಾಲರಾಜನ 'ಗಾಥಾ ಸಪ್ತಸತಿ', ಮುಕುಂದರಾಜನ 'ವಿವೇಕ ಸಿಂಧು', ಜ್ಞಾನೇಶ್ವರನ 'ಜ್ಞಾನೇಶ್ವರಿ' ಕೃತಿಗಳು ಈ ಮಹಾರಾಷ್ಟ್ರಿ ಪ್ರಾಕೃತಿ ಭಾಷೆಯಲ್ಲಿಯೇ ರಚನೆಯಾಗಿರುತ್ತವೆ. ಕಾಲನುರುಳಿಕೆಯಲ್ಲಿ ಈ ಮಹಾರಾಷ್ಟ್ರಿ ಪ್ರಾಕೃತ ಭಾಷೆಯು ಅಪಭ್ರಂಶವಾಗಿ ಇಂದಿನ ಮರಾಠಿ ಭಾಷೆಯು ಹುಟ್ಟಿಕೊಂಡಿರುತ್ತದೆ.

ಇದರಿಂದಾಗಿ ಕ್ರಿ.ಶ ಸು. ೧ನೇ ಶತಮಾನದಿಂದಲೇ ಕನ್ನಡ ಮತ್ತು ಮರಾಠಿ ಭಾಷೆಗಳ ನಡುವೆ ಗಾಢವಾದ ಸಂಬಂಧವಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ ಸು. ೧ನೇ ಶತಮಾನದಲ್ಲಿ ರಚಿತವಾದ 'ಗಾಥಾ ಸಪ್ತಸತಿ' ಕೃತಿಯಲ್ಲಿ ತುಪ್ಪ, ತೀರ್, ಪೊಟ್ಟೆ, ಮುಂತಾದ ಕನ್ನಡ ಪದಗಳು ಇರುವುದು ಕಂಡುಬರುತ್ತದೆ. ಇದರಿಂದ ಕನ್ನಡ ಮತ್ತು ಮರಾಠಿ ಸಾಹಿತ್ಯದ ನಡುವೆ ಪರಸ್ಪರ ಸಾಹಿತ್ಯಿಕ ಸಂಬಂಧಗಳು ಇದ್ದವೆಂಬುವುದು ಗೋಚರಿಸುತ್ತದೆ. ಅದರಂತೆ ಐತಿಹಾಸಿಕ ಹಿನ್ನೆಲೆಯಿಂದ ನೋಡಿದರೆ ಶಾತವಾಹನರಿಂದ, ಪೂರ್ವ ಚಾಲುಕ್ಯರು, ರಾಷ್ಟ್ರಕೂಟರು, ಉತ್ತರ ಚಾಲುಕ್ಯರು, ಹೊಯ್ಸಳರ ಕಾಲದಿಂದ ಕನ್ನಡ ಮತ್ತು ಮರಾಠಿ ಭಾಷಿಕರ ನಡುವೆ ಉತ್ತಮವಾದ ಬಾಂಧವ್ಯವಿರುವುದನ್ನು ಕಾಣಬಹುದು.ಕ್ರಿ.ಶ ೯ನೇ ಶತಮಾನದ ಶ್ರವಣಬೆಳಗೋಳದ ಚಾವುಂಡರಾಯನ ಶಾಸನದಲ್ಲಿ 'ಚಾವುಂಡರಾಯ ಸುತ್ತಾಲೆ ಕರವಿಯಲೆ' ಎಂಬ ಮರಾಠಿ ವಾಕ್ಯಗಳು ಕಂಡುಬರುತ್ತವೆ. ಮರಾಠಿಯ ಚಕ್ರಧರನ ಲೀಳಾ ಚರಿತ್ರೆ, ಮುಕುಂದರಾಜನ ವಿವೇಕ ಸಿಂಧು, ಸಂತ ಜ್ಞಾನೇಶ್ವರನ ಜ್ಞಾನೇಶ್ವರಿ ಕೃತಿಗಳು ಮರಾಠಿ ಭಾಷೆಯ ಪ್ರಾರಂಭದ ಕೃತಿಗಳಾಗಿವೆ.

ಆದರೆ ಮಹಾರಾಷ್ಟ್ರಿ ಪ್ರಾಕೃತ ಭಾಷೆ ಅಪಭ್ರಂಶವಾಗಿ ಮರಾಠಿ ಭಾಷೆಯಾಗಿ ಆಗುವುದಕ್ಕಿಂತ ಮೊದಲು ಕೃತಿಗಳು ರಚನೆಯಾಗಿದ್ದವು. ಆದರೆ ಚಕ್ರಧರ, ಮುಕುಂದರಾಜ, ಸಂತ ಜ್ಞಾನೇಶ್ವರರ ಕೃತಿಗಳು ಬರುವುದಕ್ಕಿಂತ ಪೂರ್ವದಲ್ಲಿಯೇ ಪಂಪ ಸಾಹಿತ್ಯ, ಶರಣ ಸಾಹಿತ್ಯ, ಕನ್ನಡ ಸಾಹಿತ್ಯ ಲೋಕದಲ್ಲಿ ಬಂದು ಹೋಗಿತ್ತು. ಇದರ ಪರಿಣಾಮವಾಗಿ ಮರಾಠಿ ಭಾಷೆಯನ್ನು ದೇವಭಾಷೆಯನ್ನಾಗಿಸಲು ಹಾಗೂ ಕನ್ನಡದ ಶರಣರು ದೇವರ ಸಾಹಿತ್ಯದಿಂದ ಕಂಡುಕೊಂಡಂತೆ ಮರಾಠಿಯ ಚಕ್ರಧರ, ಮುಕುಂದರಾಜ, ಜ್ಞಾನೇಶ್ವರರು ಮರಾಠಿ ಭಾಷೆಯ ಅಸ್ಮಿತೆಗೆ ಕಾರಣರಾಗಿದ್ದಾರೆ.

ಮಧ್ಯಕಾಲದಲ್ಲಿ ಇವರ ಪ್ರಭಾವ ಗಾಢವಾಗಿ ಕನ್ನಡ ಸಾಹಿತ್ಯದ ಮೇಲೆ ಆಗಿರುವುದು ಕಂಡುಬರುತ್ತದೆ. ಕುಮಾರವ್ಯಾಸ, ಹರಿದಾಸರ ಕೀರ್ತನೆಗಳ ಮೇಲೆ ಇವರ ಪ್ರಭಾವವಿರುತ್ತದೆ.

ಮಹಾರಾಷ್ಟ್ರದಲ್ಲಿ ಸಂತ ಜ್ಞಾನೇಶ್ವರನ 'ಜ್ಞಾನೇಶ್ವರಿ' ಕೃತಿ, ಅದರಂತೆ ಕನಾಟಕದಲ್ಲಿ ಕುಮಾರವ್ಯಾಸನ 'ಕರ್ನಾಟ ಭಾರತ ಕಥಾ ಮಂಜರಿ' ಕೃತಿಯು ಅರಮನೆಯಿಂದ ತಮ್ಮ ಮಹತ್ವವನ್ನು ಪಡೆದುಕೊಂಡು ಜನಸಾಮಾನ್ಯರ ಮನೆಯಲ್ಲೂ ಮಹಾಕಾವ್ಯಗಳು ಸಂಚರಿಸುವಂತಾದವು. ಜ್ಞಾನೇಶ್ವರನ ಅಭಂಗಗಳು ಅದರಂತೆ ಹರಿದಾಸರ ಕೀರ್ತನೆಗಳು ಕರ್ನಾಟಕದ ಮತ್ತು ಮಹಾರಾಷ್ಟ್ರದಲ್ಲಿ ಮನೆಮನಗಳನ್ನು ಮುಟ್ಟಿದವು. ಹೀಗೆ ಕನ್ನಡ ಮತ್ತು ಮರಾಠಿ ಭಾಷೆಗಳು ಪರಸ್ಪರ ಅವಿನಾಭಾವ ಸಂಬಂಧವನ್ನು ಹಿಂದಿನಿಂದಲೂ ಇಟ್ಟುಕೊಂಡು ಬಂದಿರುವುದನ್ನು ಗಮನಿಸಬಹುದು. ಮರಾಠಿಯ ಚಂದ್ರಾತ್ಮ ಜರುದ್ರ ಎಂಬ ಕವಿಯು ಕುಮಾರವ್ಯಾಸನ 'ಕರ್ನಾಟ ಭಾರತ ಕಥಾ ಮಂಜರಿ' ಕಾವ್ಯವನ್ನು ಮರಾಠಿ ಭಾಷೆಗನುವಾದ ಮಾಡಿದ್ದಾನೆ. ಅದರಂತೆ ಮುಕ್ತೇಶ್ವರ ಎಂಬ ಕವಿಯು ಕುಮಾರವ್ಯಾಸನ ಪ್ರಭಾವದಿಂದ ಮರಾಠಿಯಲ್ಲಿ 'ವ್ಯಾಸ ಭಾರತ'ವನ್ನು ರಚಿಸಿದ್ದಾರೆ. ಅದರಂತೆ ಶಿವದಾಸರು ಎಂಬ ಮರಾಠಿ ಕವಿಯು ರಾಘವಾಂಕನ 'ಸಿದ್ಧರಾಮ ಚರಿತ್ರೆ' ಕಾವ್ಯವನ್ನು ಮರಾಠಿ ಭಾಷೆಗೆ 'ಸಿದ್ದೇಶ್ವರ ಚರಿತೆ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ.

ನಂತರ ಚಾಮರಸನ 'ಪ್ರಭುಲಿಂಗಲೀಲೆ'ಯನ್ನು ಬ್ರಹ್ಮದಾಸ ಎಂಬ ಕವಿಯು 'ಲೀಲಾ ವಿಶ್ವಂಭರ' ಎಂದು ಮರಾಠಿ ಭಾಷೆಗೆ ಅನುವಾದ ಮಾಡಿದ್ದಾನೆ. ಇದರಿಂದಾಗಿ ಮರಾಠಿ ಭಾಷೆಯು ಕನ್ನಡ ಸಾಹಿತ್ಯದಿಂದ ಬೆಳೆದುಕೊಂಡಿದೆ ಎಂದು ತಿಳಿದುಬರುತ್ತದೆ. ಆದರೆ ಕವಿ ಪಂಪನ ಕಾವ್ಯಗಳಲ್ಲಿ, ಜನ್ನನ ಕಾವ್ಯಗಳಲ್ಲಿ, ಆಂಡಯ್ಯನಲ್ಲಿ, ಕುಮಾರವ್ಯಾಸನ ಕಾವ್ಯದಲ್ಲಿ ಮರಾಠಿ ಭಾಷೆಯ ಪದವಾಕ್ಯಗಳು ಇರುವುದು ಕಂಡುಬರುತ್ತದೆ. ಅದರಂತೆ ಮರಾಠಿ ಕವಿಯ ಕಾವ್ಯಗಳಲ್ಲಿ ಕನ್ನಡದ ಪದ ವಾಕ್ಯಗಳು ಇರುವುದು ಕಂಡುಬರುತ್ತದೆ. ಅದರಂತೆ ಮಹಾರಾಷ್ಟ್ರದ ಹಲವು ಊರುಗಳ ಮೂಲ ಕನ್ನಡದ್ದಾಗಿರುತ್ತದೆ. ಹಾಗೂ ಮಹಾರಾಷ್ಟ್ರದಲ್ಲಿ ಕನ್ನಡದ ದೇವರ ಹೆಸರುಗಳನ್ನು ಇಂದೀಗೂ ಸ್ತುತಿಸುತ್ತಾರೆ. ಇವೆಲ್ಲ ಅಂಶಗಳಿಂದ ಕನ್ನಡ ಮತ್ತು ಮರಾಠಿ ಭಾಷೆಗಳು ಪರಸ್ಪರ ಪ್ರಭಾವ, ಪ್ರೇರಣೆ ಇರುವುದು ಕಂಡುಬರುತ್ತದೆ. ಎರಡೂ ಭಾಷಿಕರು ಸಾಹಿತ್ಯವನ್ನು ಪೋಷಣೆಯನ್ನು ಮಾಡಿರುವುದು ಹೆಮ್ಮೆಯ ಸಂಗತಿಯಾಗಿರುತ್ತದೆ.

೨೦ನೇಯ ಶತಮಾನದಲ್ಲಿ ಸಂತ ಜ್ಞಾನೇಶ್ವರರ 'ಜ್ಞಾನೇಶ್ವರಿ' ಎಂಬ ಕಾವ್ಯವು ಕನ್ನಡ ಭಾಷೆಗೆ ಅನುವಾದಗೊಂಡಿರುತ್ತದೆ. ಕ್ರಿ.ಶ. ೧೮೬೯ ರಲ್ಲಿ ಮರಾಠಿಯ ಬಾಬಾ ಪದಮುಂಜಿಯವರ 'ಯಮುನಾ ಪರ್ಯಟನ' ಎಂಬ ಕಾದಂಬರಿಯನ್ನು ಸಾಲೋಮ್ ಬಾಸ್ಕರ್ ರವರು 'ಯಮುನಾಬಾಯಿಯ ಸಂಚಾರ' ಎಂದು ಕನ್ನಡಕ್ಕೆ ಅನುವಾದಿಸಿದರು. ಈ ವರ್ಷದಿಂದಲೇ ಅನುವಾದ ಪ್ರಕ್ರಿಯೆಯು ಆರಂಭವಾಯಿತು. "ಕಾದಂಬರಿಗಳಂತೆ ಮರಾಠಿ ಭಾಷೆಯಲ್ಲಿ ಸಣ್ಣ ಕಥೆಗಳೂ ಬಹಳ ಪ್ರಸಿದ್ಧವಾದ ಪ್ರಕಾರ. ಕ್ರಿ.ಶ ೧೯೦೦ ರ ಸ್ವಲ್ಪ ಹಿಂದೆ ಮುಂದಿನ ಕಾಲದಿಂದಲೇ

ಸಣ್ಣ ಕಥೆಗಳು ಕನ್ನಡಕ್ಕೆ ಅನುವಾದಗೊಳ್ಳುತ್ತಿದ್ದವು. ಬೆಹರೆ ಅವರ 'ಅಹಲ್ಯೋದ್ಧಾರ' (೧೯೩೪)ವು ನಾರಾಯಣ ವೆಂಕಟೇಶ ಕುರುಡಿ ಅವರಿಂದ ಅನುವಾದಗೊಂಡು ಕೃತಿ ರೂಪದಲ್ಲಿ ಪ್ರಕಟವಾಗಿ ಜನಮಾನಸದ ಮೇಲೆ ಪ್ರಭಾವ ಬೀರಿತು."೪

ಚಳುವಳಿಗಳ ನಾಡಾದ ಮಹಾರಾಷ್ಟ್ರವು ಪ್ರಗತಿಪರ ಹೋರಾಟಗಳನ್ನು ಮಾಡುತ್ತ, ಸಮಾನತೆಗಾಗಿ ಅಲ್ಲಿನ ಸಾಹಿತ್ಯ ಕಥಾ ಸಾಹಿತ್ಯದ ರೂಪದಲ್ಲಿ ತನ್ನ ಸಂವೇದನೆಗಳನ್ನು ದಾಖಲಿಸಿಕೊಳ್ಳುತ್ತ ಸಾಗುತ್ತದೆ. ಇದರ ಪರಿಣಾಮವಾಗಿ ಮರಾಠಿ ಕಥಾ ಸಾಹಿತ್ಯವನ್ನು ಅನುವಾದ ಮಾಡುವ ಪ್ರಕ್ರಿಯೆಯು ಅಗತ್ಯವೆಂದು ಪರಿಗಣಿಸಿದರು. ಈ ಮುಂದಿನಂತೆ ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ಕಥೆಗಳ ಚಾರಿತ್ರಿಕ ಸಮೀಕ್ಷೆಯನ್ನು ಮಾಡಲಾಗಿದೆ. ೧೯೪೮ ರಲ್ಲಿ ಸಾನೆ ಗುರುಜಿ ಅವರ ಕಥೆಗಳನ್ನು ತೆಗೆದುಕೊಂಡು ಬಾಸ್ಕರ ಗೋವಿಂದರಾವ್ ಗೋಗಲೆಯವರು 'ಸೊಗಸಿನ ಕಥೆ' ಭಾಗ–೧,೨ ಎಂದು ಕನ್ನಡನುವಾದ ಮಾಡಿದ್ದಾರೆ. ೧೯೫೬ ರಲ್ಲಿ ವಿನೀತ ರಾಮಚಂದ್ರರಾಯರು ಪ್ರಭುದಾಸಿ ನಿವೇದಿತರವರ 'ಅಮೃತ ಕುಂಭ' ಎಂಬ ಕೃತಿಯನ್ನು ಕನ್ನಡನುವಾದ ಮಾಡಿದ್ದಾರೆ. ೧೯೬೫ ರಲ್ಲಿ ಎಮ್.ಎಸ್. ಅನಂತ್‌ರಾವ್ ರವರು ಮರಾಠಿಯ ನಾ.ಸಿ. ಫಡಕೆಯವರ ಕಥೆಗಳನ್ನು ತೆಗೆದುಕೊಂಡು 'ಜೋನಿ ಮತ್ತು ಇತರ ಕಥೆಗಳು' ಎಂಬ ಕಥಾಸಂಕಲನವನ್ನು ಕನ್ನಡ ಅನುವಾದ ಮಾಡಿದ್ದಾರೆ. ೧೯೭೫ ರಲ್ಲಿ ಮರಾಠಿಯ ಶ್ರೇಷ್ಠ ಕಥೆಗಳನ್ನು ಅಚ್ಯುತ ಕೇಶವ ಭಾಗವತ ರವರು ಸಂಪಾದನೆ ಮಾಡಿದ್ದಾರೆ. ಇವುಗಳನ್ನು 'ಮರಾಠಿಯ ಸಣ್ಣಕತೆಗಳ ಕಣಜ' ಎಂಬ ಕಥಾಸಂಕಲನವನ್ನು ಲ.ಜಿ ಬೇಂದ್ರೆಯವರು ಕನ್ನಡನುವಾದ ಮಾಡಿದ್ದಾರೆ.

೧೯೯೨ ರಲ್ಲಿ ಜಯವಂತ ದಳವಿಯವರ ಕಥೆಗಳು ಮತ್ತು ೧೯೮೮ ರಲ್ಲಿ 'ಬದುಕಿನ ಸಂಜೆ' ಎಂಬ ಕಥಾಸಂಕಲನಗಳನ್ನು ರತ್ನಾಕರ ಶೆಟ್ಟಿಯವರು ಮರಾಠಿಯಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕಥಾಸಂಕಲನದಲ್ಲಿ ಮರಾಠಿಯ ಪ್ರಸಿದ್ಧ ವಿವಿಧ ಕಥೆಗಾರರು ಬರೆದಿರುವ ಕಥೆಗಳಿರುತ್ತವೆ. ೨೦೦೫ ರಲ್ಲಿ 'ಗಂಗಾಧರ ಗಾಡಗೀಳರ ಪ್ರಾತಿನಿಧಿಕ ಕಥೆಗಳು', ೨೦೦೭ರಲ್ಲಿ 'ಆಧುನಿಕ ಮರಾಠಿ ಕಥೆಗಳು', ೨೦೦೭ ರಲ್ಲಿ 'ಮೇಘನಾ ಪೇಠೆಯವರ ಕಥೆಗಳು', ೨೦೦೮ರಲ್ಲಿ 'ಪ್ರಿಯಾ ತೆಂಡೋಲ್ಕರ್ ಕಥೆಗಳು', ೨೦೦೮ ರಲ್ಲಿ ಕಮಲಾದೇಸಾಯಿಯವರ 'ಕಪ್ಪು ಸೂರ್ಯ ಮತ್ತು ಹ್ಯಾಟು ಧರಿಸಿದ ಹೆಣ್ಣು', ೨೦೧೧ ರಲ್ಲಿ 'ಕಮಲಾದೇಸಾಯಿಯವರ ಕಥೆಗಳು', ೨೦೧೨ ರಲ್ಲಿ 'ಪ್ರಜ್ಞಾದಯಾ ಪವಾರ ಕಥೆಗಳು', ೨೦೧೪ ರಲ್ಲಿ 'ಆಶಾ ಬಗೆಯವರ ಕಥೆಗಳು', ೨೦೧೪ರಲ್ಲಿ ಜಿ.ಎ. ಕುಲಕರ್ಣಿಯವರ 'ಕಾಡಿಗೆ ಮಾಯೆ' ಇತ್ಯಾದಿ ಕಥೆಗಳನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಚಂದ್ರಕಾಂತ ಪೋಕಳೆ ಯವರು ಮರಾಠಿ ಸಾಹಿತ್ಯದ ಅನುವಾದದ ಪ್ರಕ್ರಿಯೆಯಲ್ಲಿ ನಿರತರಾಗಿ ಈ ಕಥಾಸಂಕಲನಗಳನ್ನು ಕನ್ನಡನುವಾದ ಮಾಡಿದ್ದಾರೆ.೨೦೧೩ ರಲ್ಲಿ ಪ್ರಮೀಳಾ ಮಾಧವ್ ರವರು ಮರಾಠಿಯ ಶರಣಕುಮಾರ ಲಿಂಬಾಳೆಯವರ ಕಥಾಸಂಕಲನವನ್ನು 'ದಲಿತ ಬ್ರಾಹ್ಮಣ'ವೆಂಬ ಕನ್ನಡನುವಾದ ಮಾಡಿದ್ದಾರೆ. ಮರಾಠಿಯ ಪ್ರಮುಖ ಕಥೆಗಾರರಾದ ಜಿ.ಎ.ಕುಲಕರ್ಣಿ,

ಪ್ರಜ್ಞಾದಯಾ ಪವಾರ, ಗಂಗಾಧರ ಗಾಡಗೀಳ, ವಿ.ಸ.ಖಾಂಡೇಕರ ಮುಂತಾದವರ ಸುಮಾರು ಐವತ್ತಕ್ಕಿಂತ ಹೆಚ್ಚು ಮರಾಠಿಯಿಂದ ಕನ್ನಡಕ್ಕೆ ಕಥಾಸಂಕಲನಗಳು ಅನುವಾದಗೊಂಡಿರುತ್ತವೆ. ಹೀಗೆ ಮರಾಠಿಯಿಂದ ಕನ್ನಡಕ್ಕೆ ಅನುವಾದಗೊಂಡ ಕಥೆಗಳ ಚಾರಿತ್ರಿಕ ನೋಟವನ್ನು ಕಾಣಬಹುದಾಗಿದೆ.

### ೨.೬. ತಮಿಳು ಅನುವಾದಿತ ಕಥೆಗಳ ಚಾರಿತ್ರಿಕ ನೋಟ

ಕ್ರೈಸ್ತ ಮತದ ಪ್ರಚಾರವಾಗಿ ಭಾರತ ದೇಶಕ್ಕೆ ಬಂದಿದ್ದ ಇಟಲಿ ದೇಶದ ಪಾದ್ರಿಯಾದ ರೆವರೆಂಡ್ ಕಾನ್ಸ್ಟಂಟೈನ್ ಬೆಸ್ಕಿಯವರು ತಮಿಳಿನ ಸಣ್ಣಕಥೆಯ ಪ್ರಕಾರಕ್ಕೆ ಅಡಿಪಾಯವನ್ನು ಹಾಕಿದ್ದಾರೆ. ಪಂಡೀತರ ಭಾಷೆಯನ್ನು ಧಿಕ್ಕರಿಸಿ ಅಂದಿನ ಆಡುಭಾಷೆಯಲ್ಲಿ 'ಪರಮಾರ್ಥ ಗುರುಕದೈ' ಎಂಬ ಕಥಾಸಂಕಲನವನ್ನು ತಮಿಳಿನ ಗದ್ಯಶೈಲಿಯಲ್ಲಿ ಬರೆದರು. ಹೀಗಾಗಿ ಈ ಶತಮಾನದ ಆದಿಯಲ್ಲಿ 'ಸಣ್ಣಕಥೆ' ಎಂಬ ವಿಶಿಷ್ಟ ಸಾಹಿತ್ಯ ಪ್ರಕಾರ ತಮಿಳಿನಲ್ಲಿ ಜನ್ಮತಾಳುತ್ತದೆ. ಮುಂದೆ ದಿನಕಳೆದಂತೆ ತಮಿಳು ಕಥಾ ಪರಂಪರೆಯು ಸಮೃದ್ಧಿಯಾಗಿ ಬೆಳೆಯತೊಡಗುತ್ತದೆ. ಗ್ರಂಥಸ್ತ ಭಾಷೆಗಳೆಂದು ಗುರುತಿಸಿಕೊಂಡಿರುವ ತೆಲುಗು, ತಮಿಳು, ಮಲಿಯಾಳಂ, ಕನ್ನಡ ಮತ್ತು ತುಳು ಭಾಷೆಗಳು ದಕ್ಷಿಣ ಭಾರತದ ದ್ರಾವಿಡ ಭಾಷಾವರ್ಗಕ್ಕೆ ಸೇರಿರುತ್ತವೆ. ಇವು ಸಾಹಿತ್ಯಿಕವಾಗಿ ತುಳುವನ್ನು ಹೊರತುಪಡಿಸಿ ಉಳಿದ ಭಾಷೆಗಳು ತುಂಬಾ ಘನವಾದ ಕೊಡುಗೆಗಳನ್ನು ನೀಡಿರುತ್ತವೆ. ತಮ್ಮ ನಾಡಿಗೆ ಒಂದು ಅಧಿಕೃತ ಭಾಷೆಯನ್ನು ಹೊಂದಿ ಹಲವಾರು ಕಲೆ, ಸಂಸ್ಕೃತಿ, ಸಾಹಿತ್ಯಗಳಿಂದ ಮೇಳೈಸುತ್ತಿವೆ.

ಮೂಲ ದ್ರಾವಡ ಭಾಷೆಯಿಂದ ಕವಲೊಡೆದುಕೊಂಡು ಭಿನ್ನ ಭಿನ್ನವಾಗಿ ತಮ್ಮದೇ ಆದ ತಮ್ಮತನದಲ್ಲಿ ಬೆಳೆದುಕೊಂಡಿದ್ದರೂ ಅವುಗಳ ಒಳಧಮನಿಯಲ್ಲಿ ಒಂದೇ ರಕ್ತ ಹರಿಯುತ್ತಿರುವುದು ಕಂಡುಬರುತ್ತದೆ. ಮೂಲ ಸಂಸ್ಕೃತಿಯ ನೆಲೆಗಳನ್ನು ಈ ಭಾಷೆಗಳಲ್ಲಿ ಗುರುತಿಸಬಹುದು. ದ್ರಾವಿಡ ಭಾಷೆಯ ಸಂಸ್ಕೃತಿಯನ್ನೇ ಈ ಎಲ್ಲ ಭಾಷೆಗಳು ಉಳಿಸಿಕೊಂಡು ಸಾಗುತ್ತಿವೆ. ಕನ್ನಡ ಭಾಷೆಗೆ ಮಲಿಯಾಳಂ ಬಿಟ್ಟರೆ ತುಂಬಾ ಹತ್ತಿರವಾದ ಭಾಷೆ ಎಂದರೆ ತಮಿಳು. ಈ ಎರಡೂ ಭಾಷೆಗಳ ನಡುವೆ ಕೊಡುಕೊಳ್ಳುವಿಕೆಯ ಸಂಬಂಧಗಳು ಸಾಹಿತ್ಯಿಕವಾಗಿ ತುಂಬಾ ನಡೆದಿವೆ. ಇವೆರಡು ಭಾಷೆಗಳಲ್ಲಿ ಪ್ರಾಚೀನ ಶಾಸನಗಳು ಮತ್ತು ಸಾಹಿತ್ಯ ಗ್ರಂಥಗಳು ತುಂಬಾ ವಿಪುಲವಾಗಿ ರಚನೆಯಾಗಿರುತ್ತವೆ. ತಮಿಳು ಭಾಷೆಯಲ್ಲಾದ ಸಾಹಿತ್ಯಿಕ ಪರಿವರ್ತನೆಗಳು ಉಳಿದ ಸೋದರ ಭಾಷೆಗಳಲ್ಲಿ ಆಗಲಿಲ್ಲವೆಂದು ಹೇಳಬಹುದು. ತಮಿಳು ನಾಗರಿಕರು ಸಾಹಿತ್ಯ, ಸಂಸ್ಕೃತಿ ಭಾಷೆಗಳ ಮೇಲೆ ಅಪಾರವಾದ ಅಭಿಮಾನವುಳ್ಳವರಾಗಿದ್ದಾರೆ.

ಅದರಂತೆ ದ್ರಾವಿಡ ಕಳಗಂ ಮತ್ತು ದ್ರಾವಿಡ ಮುನ್ನೇತ್ರ ಕಳಗಂ ಮೊದಲಾದ ಸಾಮಾಜಿಕ ಸಂಸ್ಥೆಗಳಲ್ಲಿ ಕೆಲಸ ಮಾಡಿದ ಲೇಖಕರು ತಮ್ಮ ಸಾಹಿತ್ಯದಿಂದ ಸಾಮಾಜಿಕ ಪರಿವರ್ತನೆಯ ಕಡೆಗೆ ಹೆಚ್ಚು ಗಮನಹರಿಸಿದರು. ಇದರಿಂದ ತಮಿಳು ಭಾಷೆಯಲ್ಲಿ ಪ್ರಭಾವಶಾಲಿ ಲೇಖಕರು ಸಾಹಿತ್ಯಲೋಕದಲ್ಲಿ ಹುಟ್ಟುವುದಕ್ಕೆ ಕಾರಣವಾಗುತ್ತದೆ. ಒಂದು ಭಾಷಿಕ ಸಾಹಿತ್ಯವನ್ನು ತಿಳಿಯಬೇಕಾದರೆ

ಅನುವಾದಗೊಳಿಸುವುದು ಅನಿವಾರ್ಯವಾಗಿರುತ್ತದೆ. ಈ ಕಾರಣದಿಂದಲೇ ಅನುವಾದವು ಜಾಗತಿಕ ಮಟ್ಟದಲ್ಲಿ ತನ್ನ ಸ್ಥಾನವನ್ನು ವಿಸ್ತರಿಸಿಕೊಂಡಿದೆ. ಒಂದು ನೆಲದ ಸಂಸ್ಕೃತಿಯಲ್ಲಿ ಹುಟ್ಟಿಕೊಂಡ ಸಾಹಿತ್ಯದಿಂದ ಆ ನೆಲ ಸಂಸ್ಕೃತಿ, ದೇಶಿತನದ ಸೊಗಡನ್ನು ಮತ್ತೊಂದು ನೆಲದ ನಾಗರಿಕ ವರ್ಗದವರು ತಿಳಿಯಲು ಅನುವಾದ ಪ್ರಕ್ರಿಯೆಯಿಂದ ಸಾಧ್ಯವಾಗುತ್ತದೆ.

ಒಂದು ಭಾಷೆಯಲ್ಲಿ ಸೃಷ್ಟಿಯಾದ ಜ್ಞಾನವಲಯದ ಸಾಹಿತ್ಯವನ್ನು ತೌಲನಿಕವಾಗಿ ತಾಳೆನೋಡಲು ಅನುವಾದವು ಸ್ನೇಹಿತನಂತೆ ಕಾರ್ಯ ಮಾಡುತ್ತದೆ. ಹಾಗೂ ಸಾಹಿತ್ಯ ಸೃಷ್ಟಿಯಲ್ಲಿರುವ ಉದ್ದೇಶ ಅದರ ಮಹತ್ವ ಅದರ ಪರಿಣಾಮದ ಫಲಿತಾಂಶವನ್ನು ಕ್ರೋಢೀಕರಿಸಿಕೊಂಡು ಮತ್ತೊಂದು ಭಾಷಿಕ ನೆಲೆಯ ನಾಗರಿಕರಿಗೆ ತಲುಪಿಸುವ ಕ್ರಿಯೆಯನ್ನು ಈ ಅನುವಾದ ಸಾಹಿತ್ಯವು ಮಾಡುತ್ತದೆ. ಈ ದಿಶೆಯಿಂದ ಸ್ವಾತಂತ್ರ್ಯ ನಂತರದ ಕಾಲಘಟ್ಟದಲ್ಲಿ ತಮಿಳಿನಿಂದ ಕನ್ನಡಕ್ಕೆ ಅನುವಾದ ಪ್ರಕ್ರಿಯೆಗಳು ನಡೆದಿರುವುದು ತಿಳಿಯುತ್ತದೆ. ಕೇಂದ್ರಸಾಹಿತ್ಯ ಅಕಾಡಮಿ ಮತ್ತು ನ್ಯಾಷನಲ್ ಬುಕ್ ಟ್ರಸ್ಟ್‌ಗಳ ಮೂಲಕವೇ ತಮಿಳಿನಿಂದ ಕನ್ನಡಕ್ಕೆ ಅನುವಾದಗೊಂಡ ಹೆಚ್ಚು ಕೃತಿಗಳು ಪ್ರಕಟವಾಗಿರುತ್ತವೆ. ಸಾಹಿತ್ಯ ಅಕಾಡಮಿಯು ಸಾಹಿತ್ಯ ಕ್ಷೇತ್ರದಲ್ಲಿ ಶ್ರೇಷ್ಠ ಲೇಖಕರನ್ನು ಗುರುತಿಸಿ ಪ್ರಶಸ್ತಿಗಳನ್ನು ನೀಡಲು ಪ್ರಾರಂಭಿಸುತ್ತದೆ. ಇದರಿಂದ ಸೃಜನಶೀಲ ಕೃತಿಗಳನ್ನು ಆಯ್ದುಕೊಂಡು ತಮಿಳಿನಿಂದ ಕನ್ನಡಕ್ಕೆ ಅನುವಾದ ಪ್ರಕ್ರಿಯೆಗಳು ನಡೆಯಲು ಪ್ರಾರಂಭವಾದವು. ಅನುವಾದ ಸಾಹಿತ್ಯದಲ್ಲಿ ಕನ್ನಡದಿಂದ ತಮಿಳು ಭಾಷೆಗೆ ಹೋದ ಕೃತಿಗಳಿಗಿಂತ ತಮಿಳಿನಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳು ಹೆಚ್ಚಾಗಿರುತ್ತವೆ.

ಪ್ರಾಚೀನ ತಮಿಳು ಕೃತಿಗಳನ್ನು ಮುದ್ರಿಸುವ ವಿಶ್ವವಿದ್ಯಾಲಯ ಹಾಗೂ ಕಾಮರಾಜ ವಿಶ್ವವಿದ್ಯಾಲಯಗಳ ಪ್ರಸಾರಾಂಗವು ಕನ್ನಡ ಅನುವಾದ ಮಾಡಿ ಪ್ರಕಟಿಸಿರುತ್ತವೆ. ಜೈನ, ಬೌದ್ಧ, ವೈಷ್ಣವ ಧರ್ಮಗಳ ಪ್ರಭಾವ ಕನ್ನಡ ಮತ್ತು ತಮಿಳು ಸಾಹಿತ್ಯದಲ್ಲಿ ಸಮವಾಗಿ ಕಂಡುಬರುತ್ತದೆ. ತಿರುಕ್ಕುರಳ್, ಪೆರಿಯ ಪುರಾಣ, ಕಂಬ ರಾಮಾಯಣ ಇವು ತಮಿಳಿನಿಂದ ಕನ್ನಡಕ್ಕೆ ಬಂದಿರುತ್ತವೆ. ಇವು ತಮಿಳಿನ ಪ್ರಾಚೀನ ಕೃತಿಗಳಾಗಿವೆ. ಅವ್ವೈಯಾರ್ ರಚಿಸಿದ ಸಾಹಿತ್ಯವನ್ನು ತಮಿಳಿನ ನರಸಿಂಹಚಾರ್ಯರು 'ನೀತಿ ಮಂಜರಿ' ಎಂದು ೧೯೮೬ ರಲ್ಲಿ ಅನುವಾದ ಮಾಡಿದ್ದಾರೆ.ಇದು ತಮಿಳು ಸಾಹಿತ್ಯದಿಂದ ಬಂದ ಮೊದಲ ಅನುವಾದವಾಗಿರುತ್ತದೆ. ಅದರಂತೆ ತಮಿಳಿನಿಂದ ಕನ್ನಡಕ್ಕೆ ಅನುವಾದಗೊಂಡ ಕತೆಗಳ ಸಮೀಕ್ಷೆಯನ್ನು ನೋಡುವುದಾದರೆ, ಆಧುನಿಕ ಶಿಕ್ಷಣ ಕ್ರಮದಿಂದ ಸಾಹಿತ್ಯ ಕ್ಷೇತ್ರದ ಪರಿವರ್ತನೆಯ ಪರ್ವ ಆರಂಭವಾಗುತ್ತದೆ. ಅದರಲ್ಲಿ ಸಣ್ಣಕತೆ ಎಂಬ ಸಾಹಿತ್ಯ ಪ್ರಕಾರವೂ ಒಂದಾಗಿದೆ. ಈ ಕಥೆಯು ಭಾರತೀಯರಿಗೆ ಹೊಸದೇನಲ್ಲ. ಅದರಂತೆ ಜಗತ್ತಿನ ಎಲ್ಲಾ ಭಾಷಿಕರಲ್ಲಿಯೂ ಕಥೆ ಕಂಡುಬರುತ್ತದೆ.

ಭಾರತದಲ್ಲಿ ಮೊದಲಿಗೆ ಬಂಗಾಲಿ ಮತ್ತು ಮರಾಠಿ ಭಾಷೆಗಳಲ್ಲಿ ಸಣ್ಣಕಥೆಯು ಕಾಣಿಸಿಕೊಂಡು ನಂತರ ಎಲ್ಲಾ ಭಾಷೆಯಲ್ಲಿ ತನ್ನ ಪ್ರಭಾವವನ್ನು ಬೀರುತ್ತದೆ. ಅದರಂತೆ ತಮಿಳಿನಲ್ಲಿಯೂ ಹೆಚ್ಚಿನ

ಸಂಖ್ಯೆಯಲ್ಲಿ ಕಥೆಗಳು ಸೃಷ್ಟಿಯಾಗುತ್ತವೆ. ಅದರಲ್ಲಿ ಕೆಲವು ಕಥಾಸಂಕಲನಗಳು ಕನ್ನಡ ಭಾಷೆಗೆ ಅನುವಾದಗೊಂಡಿರುತ್ತವೆ. “ಪ್ರಾಕೃತಿಕ ಮೂಲದ ‘ಬೃಹತ್ ಕಥಾಕೋಶ’ದ ಮೂಲದಿಂದ ತಮಿಳಿನಲ್ಲಿ ರಚಿತವಾದ ‘ಪರುಂಗತ್ತೈ’ನ ಕೆಲವು ಕಥೆಗಳನ್ನು ಎಲ್.ಗುಂಡಪ್ಪ ಅವರು ‘ಉದಯನ ಕತೆ’ ಎಂದು ಕನ್ನಡಕ್ಕೆ ೧೯೫೪ ರಲ್ಲಿ ಗದ್ಯಾನುವಾದ ಮಾಡಿದ್ದಾರೆ. ನೀತಿಪ್ರದವಾದ ಉಪನಿಷತ್ತಿನ ಕಥೆಗಳನ್ನು ಕೆ.ಸಂಪದ್ಗಿರಿರಾಯರು ಮಕ್ಕಳಿಗಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ‘ಕಥಾ ಭಾರತಿ’ ತಮಿಳು ಸಣ್ಣಕಥೆಗಳ ಸಂಕಲನವಾಗಿದ್ದು ಇದರಿಂದ ಉತ್ತಮ ಇಪ್ಪತ್ತು ಕತೆಗಾರರ ಕತೆಗಳನ್ನು ಶೇಷನಾರಾಯಣ ಅವರು (೧೯೭೧) ಕನ್ನಡಕ್ಕೆ ಅನುವಾದಿಸಿದ್ದಾರೆ.”[೫] ಅದರಂತೆ ೧೯೪೩ ರಲ್ಲಿ ‘ಕಲಾವಿದನ ತ್ಯಾಗ ಮತ್ತು ಇತರೆ ಕತೆಗಳು’ ಎಂಬ ಕಥಾಸಂಕಲನವನ್ನು ವಿಜಯಲಕ್ಷ್ಮೀಯವರು ಕನ್ನಡನುವಾದ ಮಾಡಿದ್ದಾರೆ.

ಇದರ ಮೂಲ ತಮಿಳಿನ ಜಗನ್ನಾಥ ಕಿ.ವಾ.ರವರಾಗಿದ್ದಾರೆ. ೧೯೫೭ ರಲ್ಲಿ ಕೆ.ಸಂಪದ್ಗಿರಿರಾವ್ ರವರು ‘ಕಲ್ಪನೆಯ ಹಾಡು’ ಎಂಬ ಕಥಾಸಂಕಲನವನ್ನು ಮಕ್ಕಳಿಗಾಗಿ ಕನ್ನಡನುವಾದ ಮಾಡಿದ್ದಾರೆ. ಇದರ ಮೂಲ ಕತೆಗಾರರು ತಮಿಳಿನ ಚಕ್ರವರ್ತಿ ರಾಜಗೋಪಾಲಚಾರ್ಯ ರವರಾಗಿದ್ದಾರೆ. ೧೯೫೨ ರಲ್ಲಿ ಗೋರೂರು ರಾಮಸ್ವಾಮಿ ಅಯ್ಯಂಗಾರ್ ರವರು ‘ಕೊನೆಷ್ಪೈ ಕತೆಗಳು’ ಎಂಬ ಕಥಾಸಂಕಲನವನ್ನು ಅನುವಾದ ಮಾಡಿದ್ದಾರೆ. ಇದರ ಮೂಲ ನ್ಯಾಯಾಧೀಶರಾಗಿದ್ದ ಕೊನೆಷ್ಪೈರವರಾಗಿದ್ದಾರೆ. ೧೯೪೬ ರಲ್ಲಿ ಜಯಲಕ್ಷ್ಮೀ ಶ್ರೀನಿವಾಸನ್ ರವರು ‘ಚಿನ್ನದ ಬಳೆ ಮತ್ತು ಇತರೆ ಕಥೆಗಳು’ ಎಂಬ ಕಥಾಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಇದರ ಮೂಲ ತಮಿಳಿನ ಪುರಸು ಬಾಲಕೃಷ್ಣನ್‌ರವರಾಗಿದ್ದಾರೆ. ೧೯೭೭ ರಲ್ಲಿ ‘ಜಯಕಾಂತನ್ ಅವರ ಕಥೆಗಳು’ ಎಂಬ ತಮಿಳಿನ ಜಯಕಾಂತನ್ ರವರ ಕಥೆಗಳನ್ನು ಎಚ್.ವಿ ನಾರಾಯಣ್ ರವರು ಅನುವಾದ ಮಾಡಿದ್ದಾರೆ.

೧೯೪೧ ರಲ್ಲಿ ಆ.ತಿ. ಶಾಮಾಚಾರ್ಯ ರವರು ತಮಿಳು ಸಣ್ಣಕಥೆಗಳನ್ನು ಅನುವಾದ ಮಾಡಿದ್ದಾರೆ. ಅದರಂತೆ ೧೯೮೮ ರಲ್ಲಿ ಕನ್ನಡದ ವಿವಿಧ ಲೇಖಕರು ಅನುವಾದಿಸಿದ ‘ತಮಿಳು ಕಥಾಸಂಕಲನ’ವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿದೆ. ಇದರ ಸಂಪಾದಕರು ಜಿ. ವೆಂಕಟಸುಬ್ಬಯ್ಯ ಮತ್ತು ರಾಮಚಂದ್ರ ಶರ್ಮರವರಾಗಿದ್ದಾರೆ. ೧೯೭೧ ರಲ್ಲಿ ಶೇಷನಾರಾಯಣರವರು ತಮಿಳಿನ ಪ್ರಸಿದ್ಧ ಕಥೆಗಾರರಾದ ರಾಜಾಜಿ ೨೦ ಕಥೆಗಳ ಸಂಕಲನವನ್ನು ಅನುವಾದ ಮಾಡಿದ್ದಾರೆ. ೧೯೬೪ ರಲ್ಲಿ ಕೆ. ಸಂಪದ್ಗಿರಿರಾಯರು ‘ತಮಿಳು ಸಣ್ಣ ಕಥೆಗಳ ಕಣಜ’ ಎಂಬ ಕಥಾಸಂಕಲನವನ್ನು ಪ್ರಕಟಿಸಿದ್ದಾರೆ. ೧೯೪೫ ರಲ್ಲಿ ‘ವೀಣೆಭವಾನಿ ಮತ್ತು ಇತರೆ ಕಥೆಗಳು’ ಎಂಬ ಕಥಾಸಂಕಲನವನ್ನು ಕೆ. ಸಂಪದ್ಗಿರಿರಾಯರು ಅನುವಾದ ಮಾಡಿದ್ದಾರೆ. ಇದರ ಮೂಲ ಕಥೆಗಾರರು ತಮಿಳಿನ ರಾಜಾಜಿ, ಮತ್ತು ರಾ.ಕೀ ಯವರಾಗಿದ್ದಾರೆ. ೧೯೬೧ ರಲ್ಲಿ ‘ತಿರುಕನ ಪ್ರೇಯಸಿ’ ಎಂಬ ಕಥಾಸಂಕಲನವನ್ನು ಕೆ.ಎಮ್ ಸಂಪಂಗಿ ರಾಮಯ್ಯನವರು ಅನುವಾದಿಸಿದ್ದಾರೆ.

೧೯೭೫ರಲ್ಲಿ ಕೆ.ಸುಬ್ರಹ್ಮಣ್ಯ ರವರು 'ಮರಿಕತೆಗಳು' ಎಂಬ ಕಥಾಸಂಕಲನವನ್ನು ಅನುವಾದಿಸಿದ್ದಾರೆ. ಇದರ ಮೂಲ ಕಥೆಗಾರರು ಇ.ಆರ್ ಕಣ್ಣದಾಸನ್‌ರವರಾಗಿದ್ದಾರೆ. ೨೦೦೭ ರಲ್ಲಿ ಪಾ.ಶ ಶ್ರೀನಿವಾಸ ರವರು 'ಪ್ರಸಾದ' ಎಂಬ ಸಣ್ಣ ಕಥೆಗಳ ಸಂಕಲನವನ್ನು ಪ್ರಕಟಿಸಿದ್ದಾರೆ. ೧೯೯೮ ರಲ್ಲಿ ಎಚ್.ಎನ್.ನರಹರಿರಾವ್ ರವರು 'ಕುಂಕುಮದ ಸುಂದರಿ' ಎಂಬ ಕಥಾಸಂಕಲನವನ್ನು ಅನುವಾದಿಸಿದ್ದಾರೆ. ಇದರ ಮೂಲ ತಮಿಳಿನ ಎ.ವಿ. ರಾಜಗೋಪಾಲರವರಾಗಿದ್ದಾರೆ. ಇದರಲ್ಲಿ ಒಟ್ಟು ೨೦ ಕತೆಗಳಿರುತ್ತವೆ. ಅದರಂತೆ ಶೇಷನಾರಾಯಣ ರವರು ಟಿ.ಜಾನಕಿರಾಮನ್ ರವರ 'ಶಕ್ತಿ ವೈದಿಯನ್' ಎಂಬ ಕಥಾಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಮುಂದುವರೆದು ಹಲವಾರು ಅನುವಾದಕರು ತಮಿಳು ಕಥೆಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡಿದ್ದಾರೆ. ಹೀಗೆ ತಮಿಳು ಅನುವಾದಿತ ಕಥೆಗಳ ಚಾರಿತ್ರಿಕ ನೋಟವನ್ನು ಕಾಣಬಹುದಾಗಿದೆ.

## ಅಡಿಟಿಪ್ಪಣಿಗಳು

೧) ಚಿ.ಸಿ. ನಿಂಗಣ್ಣ – ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ – ಪು.ಸಂ – ೬೦.

೨) ಮೋಹನ್ ಕುಂಟಾರ್ – ಅನುವಾದ ಸಾಹಿತ್ಯ – ಪು.ಸಂ – ೨೫೮.

೩) ಅದೇ ಪು. ಸಂ – ೩೦೪.

೪) ಅದೇ ಪು. ಸಂ – ೨೭೫.

೫) ಅದೇ ಪು. ಸಂ – ೩೩೦.

ಅಧ್ಯಾಯ : ಮೂರು

# ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ

೩.೧. ಪ್ರವೇಶ

೩.೨. ಶೋಷಿತರ ವೇದನೆ ಮತ್ತು ಶೋಷಕರ ದಬ್ಬಾಳಿಕೆ

೩.೩. ಕೂಲಿಕಾರರ ಕೂಗು ಮತ್ತು ಶೋಷಣೆಯ ಮೂಲ

೩.೪. ವರ್ಣ ವ್ಯವಸ್ಥೆಯಲ್ಲಿ ಸ್ಪೃಶ್ಯ ಮತ್ತು ಅಸ್ಪೃಶ್ಯರು

೩.೫. ದೇಶ ಮತ್ತು ಬಡತನವನ್ನು ಬಾಧಿಸುವ ಅಸಮಾನತೆ

## ಅಧ್ಯಾಯ : ಮೂರು

# ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ

### ೩.೧. ಪ್ರವೇಶ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹೊಸ ಹೆಜ್ಜೆಯನ್ನು ಇಟ್ಟು ತನ್ನ ಗುರುತಿನ ಮೂಲಕ ಒಂದು ವಿಶಿಷ್ಟವಾದ ಸ್ಥಾನಮಾನವನ್ನು ಪಡೆದುಕೊಂಡ ಸಾಹಿತ್ಯವೇ ಅದು ದಲಿತ ಸಾಹಿತ್ಯವಾಗಿದೆ. ಅದಕ್ಕೆ ಅದರದೇ ಆದ ವಿಶಿಷ್ಟವಾದ ಒಳಧ್ವನಿ ಇದೆ. ಸಮಾಜವನ್ನು ಕೇಂದ್ರೀಕರಿಸಿ ವಾಸ್ತವದ ನೆಲೆಯಲ್ಲಿ ಹೊರಹೊಮ್ಮಿ ಬಂದ ದಮನಿತರ ಕೂಗು ಇದಾಗಿದೆ. ಇದು ಸಮಾನತೆಯ ಆಶಯವನ್ನು ಇಟ್ಟುಕೊಂಡು ಶೋಷಣೆಯ ವಿರುದ್ಧ ಪ್ರತಿಭಟನೆಯನ್ನು ಮಾಡುತ್ತದೆ. ಮಹಾರಾಷ್ಟ್ರದಲ್ಲಿ ನಡೆದ ದಲಿತ ಚಳುವಳಿಯಿಂದ ಕರ್ನಾಟಕದಲ್ಲಿ 'ದಲಿತ' ಪದ ಬಳಕೆಗೆ ಬರಲು ಮೂಲ ಕಾರಣ ಮತ್ತು ಪ್ರೇರಣೆಯಾಗಿದೆ. ೧೯೭೩ ರಲ್ಲಿ ಬುದ್ಧಣ್ಣ ಹಿಂಗಮಿರೆ ಮತ್ತು ಇತರರು ಸೇರಿಕೊಂಡು 'ದಲಿತ' ಪತ್ರಿಕೆಯನ್ನು ಪ್ರಾರಂಭಿಸಿದರು. ಮುಂದೆ ಪ್ರಗತಿ ಪಂಥದಲ್ಲಿ ಒಂದು ಅಂಗವಾಗಿ 'ದಲಿತ ಪಂಥ' ಕಾಣಿಸಿಕೊಳ್ಳುತ್ತದೆ.

ಇದಕ್ಕೆ ಮೂಲ ಕಾರಣ ಬಿ.ಬಸವಲಿಂಗಪ್ಪನವರ 'ಬೂಸಾ ಪ್ರಕರಣ' ಆನಂತರ ೧೯೭೪-೭೫ರ ವೇಳೆಗೆ ಬಿ. ಕೃಷ್ಣಪ್ಪನವರ ನೇತೃತ್ವವದಲ್ಲಿ 'ದಲಿತ ಸಂಘರ್ಷ ಸಮಿತಿ' ಹುಟ್ಟಿಕೊಂಡಿತು. ಇದೇ ಸಂದರ್ಭದಲ್ಲಿ ರೂಪುಗೊಂಡ 'ದಲಿತ ಲೇಖಕರ ಮತ್ತು ಕಲಾವಿದರ ಒಕ್ಕೂಟ ದಲಿತ ಸಂಘರ್ಷ ಸಮಿತಿ'ಯೊಂದಿಗೆ ಸೇರಿಕೊಂಡು ಹಲವಾರು ಕಾರ್ಯಕ್ರಮ, ಜಾಥಾಗಳ ಮೂಲಕ 'ಪಂಚಮ' ಪತ್ರಿಕೆಯ ಮೂಲಕ ಎಲ್ಲರ ಗಮನ ದಲಿತರ ಕಡೆಗೆ ಸೆಳೆಯುವಂತೆ ಮಾಡುತ್ತದೆ. ಕೆಲವು ವಿದ್ವಾಂಸರ ಹೇಳಿಕೆಗಳ ಪ್ರಕಾರ ೧೯೪೩ರಲ್ಲಿ ಪ್ರಾರಂಭವಾದ ಪ್ರಗತಿಶೀಲ ಚಳುವಳಿಯು ಪುನಃ ೧೯೭೫ರಲ್ಲಿ 'ಪ್ರಗತಿ ಪಂಥ' ಎಂಬ ಹೆಸರಿನಿಂದ ಆರಂಭವಾದ ಸಂದರ್ಭದಲ್ಲಿ 'ದಲಿತ' ಎಂಬ ಪದವು ಮೊದಲ ಬಾರಿಗೆ ಬಳಕೆಯಾಗಿರುತ್ತದೆ. 'ದಲಿತ', 'ದಲಿತರು', 'ದಲಿತ ಪ್ರಜ್ಞೆ' ಎಂಬ ಮೊದಲಾದ ತಾತ್ವಿಕ ಪರಿಕಲ್ಪನೆಗಳ ಅರಿವು ದಲಿತ ಸಾಹಿತ್ಯದಲ್ಲಿ ಕಂಡುಬರುತ್ತದೆ.

ದಲಿತ ಎಂಬ ಪದಕ್ಕೆ 'ದಳ', 'ಗುಂಪು', 'ಸೈನ್ಯ', 'ಶೋಷಿತ', 'ದಮನಕ್ಕೆ ಒಳಗಾದವರು' ಎಂಬ ವಿವಿಧ ಅರ್ಥಗಳನ್ನು ಶಬ್ದಕೋಶದಲ್ಲಿ ಕಾಣಬಹುದು. ಭಾರತದಾದ್ಯಂತ ಅಸ್ಪೃಶ್ಯತೆಗೆ

'ದಲಿತ' ಎಂಬ ಸಮಾನಾರ್ಥದ ಪದದಿಂದ ಬಳಸಲಾಯಿತು. ಈ ಮೊದಲು ಡಾ.ಬಿ.ಆರ್.ಅಂಬೇಡ್ಕರ್ ರವರು 'ಡಿಪ್ರೆಸ್ಟ್' ಎಂಬ ಪದವನ್ನು ಬಳಸಿದ್ದರು. ಮರಾಠಿ ಭಾಷೆಯಲ್ಲಿ 'ದಲಿತ' ಪದಕ್ಕೆ ಬದಲಾಗಿ ಬೌದ್ಧ ಶಬ್ದವನ್ನು ಬಳಸುವ ಪ್ರಯತ್ನವು ನಡೆಯಿತು. ದಲಿತರೆಂದರೆ ಯಾರು ಎಂಬುದನ್ನು ಕುರಿತು ಹಲವಾರು ಚರ್ಚೆಗಳನ್ನು ಮಾಡಿ ವಿದ್ವಾಂಸರು ತಮ್ಮದೇ ಆದ ವಿಭಿನ್ನ ನೆಲೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಈ ಶೋಷಣೆ ಎಂಬ ಪದಕ್ಕೆ ಯಾವುದೇ ಜಾತಿಭೇದವಿರುವುದಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಶೋಷಣೆಗೆ ಒಳಗಾದವರೆಲ್ಲ ಜನರನ್ನು ದಲಿತರೆಂದು ಮಾರ್ಕ್ಸವಾದಿಗಳು ವ್ಯಾಖ್ಯಾನಿಸಿದ್ದಾರೆ. ಪಂಚಮ ಅಥವಾ ಬಹಿಷ್ಕೃತರು ಎಂದು ಕರೆಸಿಕೊಳ್ಳುವ ಅಸ್ಪೃಶ್ಯರೆಲ್ಲರು ದಲಿತರೆಂದು ಅಂಬೇಡ್ಕರ್‌ವಾದಿಗಳು ಪ್ರತಿಪಾದಿಸಿದ್ದಾರೆ. ಆದರೆ ಲೋಹಿಯಾವಾದಿಗಳು ಅಸ್ಪೃಶ್ಯರೂ ಸೇರಿದಂತೆ ಎಲ್ಲಾ ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಶೋಷಣೆಗೆ ಒಳಗಾದ ಬಡವರು ದಲಿತರೆಂದು ಕರೆದಿದ್ದಾರೆ. ಇಂತವರನ್ನು ಕುರಿತು 'ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ' ಎಂಬ ಈ ಅಧ್ಯಾಯದಲ್ಲಿ ಭಾರತೀಯ ಭಾಷೆಗಳಾದ ತೆಲುಗು, ತಮಿಳು, ಮಲಿಯಾಳಿ, ಮರಾಠಿಯಿಂದ ಕನ್ನಡಕ್ಕೆ ಬಂದ ಕಥಾ ಜಗತ್ತಿನಲ್ಲಿ ಅನಾವರಣಗೊಂಡ ದಲಿತ ಸಂವೇದನೆಗಳನ್ನು ಅಧ್ಯಯನ ಮಾಡಲಾಗಿರುತ್ತದೆ.

### ೩.೨. ಶೋಷಿತರ ವೇದನೆ ಮತ್ತು ಶೋಷಕರ ದಬ್ಬಾಳಿಕೆ

ಪಾಲಗುಮ್ಮಿ ಪದ್ಮರಾಜುರವರು ಬರೆದಿರುವ 'ಬಿರುಗಾಳಿ' ಎಂಬ ತೆಲುಗು ಕಥಾ ಸಂಕಲನವನ್ನು ಆರ್ಪ್ಲಿಯಸ್ ಸುಂದರಂನವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಕೂಲಿ ಜನ' ಎಂಬ ಕತೆಯು ಕೆಳವರ್ಗದವರೆಂದು ಕೆರೆಯಲ್ಪಟ್ಟಿರುವ ದಲಿತರು ತಮ್ಮ ಹೊಟ್ಟೆಪಾಡಿನ ಬದುಕಲ್ಲಿ ಕೂಲಿ ಮಾಡಿಕೊಂಡು ಮೇಲ್ವರ್ಗದವರು ಮಾಡುತ್ತಿರುವ ಅವಮಾನಗಳನ್ನು ಸಹಿಸಿಕೊಂಡು, ತಮ್ಮ ಅಸಹಾಯಕ ಜೀವನ ಪರಿಸ್ಥಿತಿಯಿಂದ ಶೋಷಣೆಗೆ ಒಳಗಾಗಿರುವುದನ್ನು ಈ ಕಥೆಯು ದಲಿತರ ಸಂವೇದನೆಗಳನ್ನು ಅಭಿವ್ಯಕ್ತಿಸುತ್ತದೆ. ಬಡತನದ ಬದುಕಿನಲ್ಲಿ ಅನ್ನಕ್ಕಾಗಿ ಬಳಲುವ ಜನ ಕೂಲಿ ಮಾಡಿಯೇ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕು. ಕೂಲಿ ಸಿಕ್ಕರೆ ಮಾತ್ರ ಕೂಳು, ಇಲ್ಲದಿದ್ದರೆ ಇಲ್ಲ ಇಂತಹ ಹಸಿದ ಹೊಟ್ಟೆಯಿಂದ ಕೂಲಿ ಮಾಡುವ ಜನರು ಕೂಲಿಗಾಗಿ ಪಡುವ ಶ್ರಮ, ಆ ಶ್ರಮಕ್ಕೆ ಬೆಲೆಯಿಲ್ಲದ ವ್ಯಥೆ, ಮೇಲ್ವರ್ಗದವರ ದಬ್ಬಾಳಿಕೆ, ನಮ್ಮಂತೆ ಅವರು ಎನ್ನುವ ಭಾವನೆ ಇಲ್ಲದಿರುವ ದೌರ್ಜನ್ಯ ಕೂಲಿಗಳ ಒಳನೋವು ಸಾಮಾಜಿಕ ಅಸಮಾನತೆ, ಅಸ್ಪೃಶ್ಯತೆ ಎಲ್ಲವನ್ನು ಈ ಕತೆಯು ಬಿತ್ತರಿಸುತ್ತದೆ.

ಕೂಲಿ ಎಂಬ ಪದವು ಶ್ರಮವಹಿಸಿ ದೈಹಿಕವಾಗಿ ದುಡಿಯುವಂತದ್ದಾಗಿದೆ. ತಮ್ಮ ಬೆವರ ಹನಿಗಳನ್ನು ಸುರಿಸಿ ಅದರಿಂದಲೇ ಅನ್ನವನ್ನು ಕಾಣುವಂತ ಸ್ಥಿತಿ ಕೂಲಿ ಜನಗಳದ್ದಾಗಿದೆ. ಆದ್ದರಿಂದ ಕೂಲಿಯೆಂದರೆ ಬೇಕಾದಾಗ ದುಡಿಸಿಕೊಳ್ಳುವುದು ಆ ಶ್ರಮಕ್ಕೆ ಅಷ್ಟೊ ಇಷ್ಟೊ ಕೊಟ್ಟು ಕಳಿಸುವುದು ಕೂಲಿ ಸಿಕ್ಕದಿನವೇ ಕೂಲಿಗಳಿಗೆ ಹಬ್ಬವಾಗಿರುತ್ತದೆ. ಹಬ್ಬದ ದಿನಗಳಲ್ಲಿ ಕೂಲಿ

ಸಿಗದಿದ್ದರೆ ಆ ದಿನದ ಹಬ್ಬ ಉಪವಾಸವಾಗುತ್ತದೆ. ಕೂಲಿ ಮಾಡಿಬಂದ ದುಡ್ಡಿನಲ್ಲಿಯೇ ಅವರು ತಮ್ಮ ಬದುಕಿನ ಚಟುವಟಿಕೆಗಳನ್ನು ಮಾಡಬೇಕು. ಅದರಿಂದಲೇ ಕಾಳು ತಂದುಕೊಳ್ಳುವುದು, ಬಟ್ಟೆ ತರುವುದು. ಏನೇ ಮಾಡಿದರೂ ಆ ಕೂಲಿಯ ದುಡ್ಡಿನಲ್ಲಿಯೇ ಮಾಡಬೇಕು ಆದರೆ ಕೂಲಿಯ ಮಾಡಿಸಿಕೊಂಡವರು ಶ್ರಮಕ್ಕೆ ತಕ್ಕ ಕೂಲಿಯನ್ನು ನೀಡದೆ ಮಾಲೀಕರು ವಂಚನೆಯನ್ನು ಮಾಡುತ್ತಾರೆ. ಇದರಿಂದಾಗಿ ಕೂಲಿಜನಗಳ ಜೀವನ ಅಸ್ವಸ್ಥದಿಂದ ಕೂಡಿರುತ್ತದೆ. ಕೂಲಿ ಜನರು ಕೂಲಿಗಾಗಿ ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಿ ಕೂಲಿ ಮಾಡಿಕೊಂಡು ಬರುತ್ತಾರೆ.

ಅಗತ್ಯವಿದ್ದರೆ ಅಲ್ಲಿಯೇ ವಾಸ ಮಾಡುತ್ತಾರೆ. ಅಲ್ಲಿ ಸಿಕ್ಕ ಕಟ್ಟಿಗೆಗಳನ್ನು ತೆಗೆದುಕೊಂಡು ಕಲ್ಲಿನ ಮೇಲೆ ಅಡುಗೆಯನ್ನು ಮಾಡಿಕೊಂಡು ಊಟ ಮಾಡಿ ಅಲ್ಲಿಯೇ ಮಲಗಿಕೊಳ್ಳುತ್ತಾರೆ. ಮತ್ತೆ ಬೆಳಿಗ್ಗೆ ಕೂಲಿಗಾಗಿ ಸಿದ್ಧರಾಗುತ್ತಾರೆ. ಅದೆಷ್ಟು ದೇಹ ದಂಡಿಸಿಕೊಂಡು ದುಡಿದರೂ ಅವರ ಕೂಲಿಯು ಅವರ ಹೊಟ್ಟೆ ಬಟ್ಟೆಗೆ ಮಾತ್ರ ಸರಿಯಾಗುತ್ತದೆ. ಇದರಿಂದಾಗಿ ಕೂಲಿ ಜನಗಳ ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ಅವರೂ ಸಹ ಕೂಲಿಗಳಾಗಿ ದುಡಿಯಲು ಪ್ರಾರಂಭಿಸುತ್ತಾರೆ. ದಿನ ರಾತ್ರಿಯಾದರೆ ಮರುದಿನ ಕೂಲಿಗಾಗಿ ಎಲ್ಲಿ ಹೋಗಬೇಕೆಂಬ ಚಿಂತೆಯಲ್ಲಿಯೇ ಮಲಗಿಕೊಳ್ಳುತ್ತಾರೆ. ಕೂಲಿಯಿಂದಲೇ ಬದುಕುತ್ತಿರುವುದರಿಂದ ಕಥೆಗಾರರು ಇವರನ್ನು 'ಕೂಲಿಜನ' ಎಂದು ಕರೆದು ಅವರು ನಂಬಿಕೊಂಡು ಕೂಲಿಯಿಂದ ಅವರಿಗಾಗುವ ಶೋಷಣೆಯನ್ನು ಈ ಕತೆಯನ್ನು ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಕೂಲಿ ಜನರ ಸಾಮಾನ್ಯ ಕುಂದು ಕೊರೆತಗಳನ್ನು, ಅವರಿಗಿರುವ ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಿ ಅವರ ನೋವಿನ ಸಂವೇದನೆಗಳನ್ನು ಈ ಕಥೆಯಿಂದ ನಿರೂಪಿಸಿದ್ದಾರೆ.

ಕಾಲುವೆಯ ಕಟ್ಟೆದಡ ಕೆಟ್ಟು ಹೋಗಿದೆ ಅದರಿಂದಾಗಿ ಊರಿನ ಜಮೀಂದಾರರಿಗೆ ತೊಂದರೆ ಉಂಟಾಗಿದೆ. ಅದನ್ನು ಸರಿಪಡಿಸಲು ಕೂಲಿ ಜನ ಬೇಕಾಗಿದೆ. ಅದಕ್ಕಾಗಿ ಕಂಟ್ರಾಕ್ಟರು ಕೂಲಿ ಕೆಲಸಕ್ಕೆಂದು ಬಡಜನರಿರುವ ಪ್ರದೇಶಕ್ಕೆ ಹೋಗಿ, ನಿರ್ದಿಷ್ಟ ಕೂಲಿಯನ್ನು ಮಾತನಾಡಿ ನಾಳೆಯಿಂದ ಕಾಲುವೆಯ ಕೂಲಿ ಕೆಲಸಕ್ಕೆ ಬರಬೇಕೆಂದು ಹೇಳಿ ಹೋಗುತ್ತಾರೆ. ಅವರ ಮಾತಿನಂತೆ ಬಡಜನರು ತಮ್ಮ ಹೊಟ್ಟೆ ಹಸಿವನ್ನು ನೀಗಿಸಿಕೊಳ್ಳಲು ಮುಂಜಾನೆ ಬೇಗನೆ ಎದ್ದು ಹೆಣ್ಣುಮಕ್ಕಳೆಲ್ಲ ಅಡುಗೆಯನ್ನು ಮಾಡಿ ಬುತ್ತಿಕಟ್ಟಿಕೊಂಡು ಅವಸರವಾಗಿ ಊಟ ಮಾಡಿಕೊಂಡು ಕೂಲಿಗಾಗಿ ತಮ್ಮಲ್ಲಿರುವ ಸಲಿಕೆ, ಬುಟ್ಟಿ, ಪಿಕಾಸಿ, ಇತರೆ ಕೆಲಸದ ಸಾಮಾಗ್ರಿಗಳನ್ನು ಹೊತ್ತುಕೊಂಡು ಸಣ್ಣ ಸಣ್ಣ ಮಕ್ಕಳನ್ನು ಹೆಗಲಮೇಲೆ ಕೂರಿಸಿಕೊಂಡು ಕಾಲುವೆಯ ಕೆಲಸಕ್ಕೆ ನಡೆದುಕೊಂಡು ಹೋದರು.

ಕಾಲುವೆ ಮುಟ್ಟುವುದರೊಳಗೆ ಅವರು ಊಟ ಮಾಡಿರುವ ಶಕ್ತಿಯೇ ಕಡಿಮೆಯಾಗಿತ್ತು. ನಡೆದುಕೊಂಡು ಬಂದ ದಣಿವಿನಲ್ಲಿ ಎಲ್ಲಾ ಬಡಕೂಲಿಗಳು ಕಾಲುವೆಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡರು ಹೆಣ್ಣುಮಕ್ಕಳು ಬುಟ್ಟಿಯಲ್ಲಿ ಗಂಡಸರು ಹಾಕಿದ ಮಣ್ಣನ್ನು ತೆಗೆದುಕೊಂಡು ಹೋಗಿ ಕಾಲುವೆಯ ಕಟ್ಟೆದಡವನ್ನು ಹದಗೊಳಿಸುವುದಕ್ಕೆ ಸುರಿಯುತ್ತಿದ್ದರೆ, ಗಂಡಸರುಮಣ್ಣನ್ನು ಅಗೆಯುತ್ತಿದ್ದರು. ನೆತ್ತಿಯ ಮೇಲೆ ಉರಿವ ಸೂರ್ಯ ತನ್ನ ಬೆಂಕಿಯನ್ನು ಸುರಿಯುತ್ತಿದ್ದನು.

ಬಡಜನರು ಯಾವ ಬಿಸಿಲಿನ ಉರಿಯನ್ನು ಲೆಕ್ಕಿಸದೆ ಅವರ ದೇಹದಿಂದ ನೀರಿನ ಬೆವರ ಹನಿಗಳನ್ನು ಸುರಿಸುತ್ತಿದ್ದರು. ಒಬ್ಬರಿಗೊಬ್ಬರು ಸಹಕಾರದಿಂದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದರು. ಒಣಗಿದ ಮಣ್ಣು ಬಿಗಿಯಾಗಿರುವುದರಿಂದ ತುಂಬಾ ಕಷ್ಟಪಟ್ಟು ಭೂಮಿಯನ್ನು ಕೂಲಿಗಳು ಅಗೆಯುತ್ತಿದ್ದರು. ಸಣ್ಣಮಕ್ಕಳು ಬಿಸಿಲಿನ ತಾಪಕ್ಕೆ ತತ್ತಿರಿಸುತ್ತಿದ್ದವು. ಆದರೂ ಅವುಗಳನ್ನು ಕೆಲಸ ಮಾಡುತ್ತಿರುವ ಸ್ಥಳದ ಪಕ್ಕದಲ್ಲಿ ಕೂರಿಸಿ ಕೈಯಲ್ಲಿ ಆಟದ ಸಾಮಾನುಗಳನ್ನು ಕೊಟ್ಟು ತಲೆಯ ಮೇಲೆ ತಮ್ಮ ಟವಲನ್ನು ಹಾಕಿದ್ದರು.

ಅತ್ತಾಗ ಮಾತ್ರ ಹೆಣ್ಣುಮಕ್ಕಳು ಹಾಲುಕೊಟ್ಟು ಬರುತ್ತಿದ್ದರು. ಹೀಗೆ ಕೆಲಸವನ್ನು ನಿಲ್ಲಿಸದೆ ಕೂಲಿಗಳು ನಿರಂತವಾಗಿ ಕೆಲಸದಲ್ಲಿ ಮಗ್ನರಾಗಿ ದುಡಿಯುತ್ತಿದ್ದರು. ಅವರನ್ನು ವೀಕ್ಷಿಸುತ್ತಾ ಅವರ ಹಿಂದೆ ಕಂಟ್ರಾಕ್ಟರು ನಿಂತುಕೊಂಡು ಕೆಲಸ ಮಾಡಿಸುತ್ತಿದ್ದನು. ನೀವು ಒಂದುನೂರು ಗಜಗಳಷ್ಟು ಕಾಲುವೆಯ ಕೆಲಸವನ್ನು ಮಾಡಿ ಮುಗಿಸಿಕೊಡಬೇಕು, ಮುಗಿಸಿ ಕೊಡದಿದ್ದರೆ ನಿಮಗೆ ಸರ್ಕಾರದವರು ಕೂಲಿಯನ್ನು ಕೊಡುವುದಿಲ್ಲವೆಂದು ಹೆದರಿಸುತ್ತಿದ್ದನು. ಈ ಭಯದಿಂದಲೇ ಎಲ್ಲಾ ಕೂಲಿಗಳು ಗಾಳಿಯಿಲ್ಲದ ಸುಡುವ ಬಿಸಿಲಿನಲ್ಲಿ ಕಷ್ಟಪಟ್ಟು ಹಾರೆಗಳಿಂದ ಮಣ್ಣನ್ನು ಅಗೆದು ಬುಟ್ಟಿಯಲ್ಲಿ ತುಂಬಿ ಹೆಣ್ಣುಮಕ್ಕಳ ತಲೆಯ ಮೇಲೆ ಹೊರಿಸುತ್ತಿದ್ದರು. ಅವರು ಬೇಗ ಬೇಗನೇ ಹೋಗಿ ಕಾಲುವೆಯ ಕಟ್ಟೆದಡದ ಮೇಲೆ ಸುರಿಯುತ್ತಿದ್ದರು. ಅದನ್ನು ಹದಗೊಳಿಸುತ್ತಿದ್ದರು. ಕಂಟ್ರಾಕ್ಟರರು ನಾಳೆ ಮಳೆಗಾಲದಲ್ಲಿ ಕಾಲುವೆ ಕಟ್ಟೆದಡ ಭದ್ರವಾಗಿರಬೇಕು, ಒಂದು ವೇಳೆ ಕಟ್ಟೆದಡ ಏನಾದರೂ ಬಿರುಕು ಉಂಟಾದರೆ ಅದಕ್ಕೆ ನೀವೇ ಕಾರಣವಾಗುತ್ತಿರಿ ಆದ್ದರಿಂದ ಮಣ್ಣನ್ನು ಭದ್ರವಾಗಿ ತುಳಿದು ಹದಗೊಳಿಸಿ ಗಟ್ಟಿ ಮಾಡಿಕೊಡಬೇಕು. ಬೇಗ ಬೇಗಮಣ್ಣನ್ನು ಹಾಕಿರಿ ಎಂದು ಹೇಳುತ್ತಲೇ ಇದ್ದನು.

ಇದರಿಂದಾಗಿ ಕೂಲಿ ಜನರು ಕಾಲುವೆಯ ಕೆಲಸವನ್ನು ಇಂದೇ ಪೂರ್ಣಗೊಳಿಸಿಕೊಡಬೇಕೆಂದು ಸ್ವಲ್ಪವೂ ವಿಶ್ರಾಂತಿಯನ್ನು ಕುಳಿತುಕೊಂಡು ತೆಗೆದುಕೊಳ್ಳದೆ ನಿರಂತರದ ಕೆಲಸದ ಪ್ರಕ್ರಿಯಗಳಲ್ಲಿ ತಮ್ಮನ್ನು ತಾವೇ ಮರೆತು ಹೋಗಿದ್ದರು. ಬಿಸಿಲಿನ ತಾಪಕ್ಕೆ ಭೂಮಿಯೇ ಬಾಯಿ ತೆರೆದುಕೊಂಡು ನಿಂತಿದೆ. ಇಂತಹ ಪರಿಸ್ಥಿತಿಯಲ್ಲಿ ಬೆವರನ್ನಿಳಿಸುತ್ತಿರುವ ಕೂಲಿಗಳು ಬಾಯಾರಿಕೆಯಿಂದ ನೀರು, ನೀರು ಎನ್ನುತ್ತಿದ್ದಾರೆ. ಕುಡಿಯಲು ಅಲ್ಲಿ ಎಲ್ಲಿಯೂ ನೀರು ಇರುವುದಿಲ್ಲ ಆದರೆ ಕಾಲುವೆಯ ಒಂದು ಕಡೆ ಮಾತ್ರ ಸ್ವಲ್ಪ ನೀರು ನಿಂತುಕೊಂಡಿವೆ. ಅದೇ ನೀರನ್ನು ಕೂಲಿಗಳೆಲ್ಲ ಸೇರಿಕೊಂಡು ಹೋಗಿ ಕುಡಿಯಬೇಕೆಂದುಕೊಂಡಾಗ ಅಲ್ಲಿರುವ ಊರಿನ ಗೌಡನು ಆ ನೀರನೆಲ್ಲ ತನ್ನ ಕಾಲಿನಿಂದ ಕಲಕಿಸಿ ಬಿಡುತ್ತಾನೆ. ಇದರಿಂದಾಗಿ ಇದ್ದ ನೀರೆಲ್ಲವೂ ರಾಡಿಯಾಗಿ ಹೋಗುತ್ತವೆ. ಆಗ ಕೂಲಿ ಮಾಡಿಕೊಂಡು ದಣಿದುಬಂದಿದ್ದ ಎಲ್ಲ ಗಂಡು-ಹೆಣ್ಣು ಅವರ ಮಕ್ಕಳು ಒಣಗಿದ ತುಟಿಗಳಿಂದ, ದಾಹದ ಗಂಟಲಿನಿಂದ, ದಣಿದ ದೇಹದಿಂದ, ಹಸಿದ ಹೊಟ್ಟೆಯಿಂದ ಆ ರಾಡಿಯ ನೀರನ್ನು ಕಂಡು ಅಯ್ಯೋ ದೇವರೇ ಎಂದು ನೊಂದುಕೊಳ್ಳುತ್ತಾರೆ.

ಆಗ ಆ ಕೂಲಿಗಳಲ್ಲಿರುವ ಹೊಲೆಯ 'ಪದ್ದಾಲು' ಹೀಗೆ ಕೇಳುತ್ತಾನೆ. "ಏನ್ ಗೌಡ್ರೇ ನೀರೆಲ್ಲ ಕಲಕಿ ಬಿಟ್ರೆ ಕುಡಿಯೋದು ಹೆಂಗೆ...? ಕೂಳ್ ತಿನ್ ಬೇಡ್ವಾ...? "ಕೂಳು ತಿನ್ನೊ ಹೊತ್ಗೆ ತಿಳಿಯಾಯ್ತದೆ" ಎಂದ ಶೆಟ್ಟಿ ಬಣಸಿಗ."[੭] ಗೌಡರು ತಮ್ಮ ಕಾಲುಗಳನ್ನು ತೊಳೆದುಕೊಂಡು ರಾಡಿ ಮಾಡಿರುವ ನೀರನ್ನೇ ಕುಡಿಯುವ ಹಾಗೆ ಮಾಡಿರುವುದು ಕೂಲಿಗಳನ್ನು ಉಳ್ಳವರು ಕಾಣುವ ಮನಸ್ಥಿತಿ ಮತ್ತು ದಲಿತ ಕೂಲಿಗಳ ನಿಜಜೀವನದ ಪರಿಸ್ಥಿತಿ ಎರಡನ್ನೂ ಈ ಕಥೆಯು ಅನಾವರಣಗೊಳಿಸುತ್ತದೆ. ಕೂಲಿಗಳಿಗೆ ಸರಿಯಾದ ಕೂಲಿಯೂ ಇಲ್ಲ ಅವರ ಬದುಕಿನ ಬೆವರಿಗೆ ಬೆಲೆಯೂ ಇಲ್ಲದಂತಾಗಿದೆ. ಬಂಡವಾಳಶಾಹಿಗಳ ಮನದಲ್ಲಿ ಕೂಲಿಗಳೆಂದರೆ ತುಸುಕಾಳಿಗಾಗಿ ಚಿಲ್ಲರೆ ಕಾಸಿಗಾಗಿ ಬದುಕುವವರು ಎಂದು ತಿಳಿದುಕೊಂಡಿದ್ದಾರೆ.

ದಲಿತರಿಗೆ ಅವರದೇಯಾದ ಮಾನ, ಸ್ವಾಭಿಮಾನಗಳು ಇರುತ್ತವೆ ಎಂಬ ಕಲ್ಪನೆಯೂ ಅವರಿಗೆ ಇರುವುದಿಲ್ಲ. ಹಸಿದ ಹೊಟ್ಟೆಯ ಸ್ಥಿತಿ ಹೇಗಿರುತ್ತದೆ ಎಂಬುವುದರ ಅರಿವು ಅವರಿಗಿರುವುದಿಲ್ಲ. ಕುಡಿಯುವ ನೀರನ್ನು ಕಲಕಿ ರಾಡಿಮಾಡಿ ಕೂಲಿಗಳಿಗೆ ಕುಡಿಯಿರಿ ಎಂದು ಹೇಳುವಾಗ ಅದೇ ನೀರನ್ನು ನಾವಾದರೆ ಕುಡಿಯಲು ಸಾಧ್ಯವೇ...? ಎಂಬ ಸೂಕ್ಷ್ಮ ಆಲೋಚನೆಯು ಅವರಿಗಿರುವುದಿಲ್ಲ ಏಕೆಂದರೆ ಅವರು ನಮ್ಮಂತೆ ಮನುಷ್ಯರೆಂದು ಕೂಲಿಗಳನ್ನು ಕಾಣುವುದಿಲ್ಲ. ಅವರಲ್ಲಿರುವ ದುಡ್ಡಿನ ಅಹಂಕಾರ ಅವರನ್ನು ಆ ರೀತಿಯಾಗಿ ದಲಿತರ ಮೇಲೆ ದೌರ್ಜನ್ಯವನ್ನು ಮಾಡಿಸುತ್ತದೆ. ಈ ದಲಿತ ಕೂಲಿಗಳು ಆರ್ಥಿಕತೆಯಿಂದ ನಿರ್ಗತಿಕರಿರುವಾಗ ಹೊರಗು ಒಳಗೂ ಎರಡೂ ನೋವನ್ನು ಅನುಭವಿಸಬೇಕಾಗುತ್ತದೆ. ಕೂಲಿ ಮಾಡುವಾಗ ಕಾಲುವೆಯ ವಾತಾವರಣದಲ್ಲಿ ನೆರಳಿಲ್ಲ, ಗಾಳಿಯಿಲ್ಲದ ಸುಡು ಬಿಸಿಲಿಗೆ ತಮ್ಮ ಮೈಯೊಡ್ಡಿಗೊಂದು ಇಡೀ ದೇಹವನ್ನೇ ದಂಡಿಸಬೇಕು. ಅವರ ನೋವಿನ ಉಸಿರು ಬೆವರಿನ ರೂಪದಲ್ಲಿ ಭೂಮಿಗೆ ಬೀಳುತ್ತದೆ.

ಈ ನಿಸರ್ಗಕ್ಕೂ ದಲಿತರ ಮೇಲೆ ಕನಿಕರ ಇರುವುದಿಲ್ಲ. ಇದು ಅವರು ಅನುಭವಿಸುತ್ತಿರುವ ಹೊರಗಿನ ದೈಹಿಕ ನೋವಾಗಿದ್ದರೆ ಇನ್ನೂ ಒಳನೋವು ಈ ಹೊರ ನೋವಿಗಿಂತಲೂ ತುಂಬಾ ಹರಿತವಾಗಿರುತ್ತದೆ. ಅದು ಅವರ ಮನಸಿನ ನೋವು. ಅವರು ಮಾಡುವ ಕಾಯಕಕ್ಕೆ ಗೌರವವಿರುವುದಿಲ್ಲ. ಹಾಗೆ ಕಷ್ಟಪಟ್ಟು ದುಡಿದ ದಲಿತರ ಬೆವರಿಗೆ ಬೆಲೆ ಇರುವುದಿಲ್ಲ. ಅವರು ಸಾಮಾಜಿಕವಾಗಿ ಬದುಕಲು ಸ್ವತಂತ್ರವಿರುವುದಿಲ್ಲ. ಸಾಮಾಜಿಕ ವ್ಯವಸ್ಥೆಯಲ್ಲಿ ಮನ್ನಣೆ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ದೇವರು ನಮ್ಮನ್ನು ಯಾಕೆ ಹುಟ್ಟಿಸಿದ್ದಾನೆ ಎಂಬ ಹತಾಸೆಯ ನೋವು ಅವರದು ಅದೇ ಅವರ ಒಳಗಿನ ಮಾನಸಿಕ ವ್ಯಥೆಯಾಗಿರುತ್ತದೆ. ಇದನ್ನೇ ಈ 'ಕೂಲಿ ಜನ' ಎಂಬ ಕತೆಯು ತನ್ನ ನಿಲುವನ್ನು ಪ್ರತಿಪಾದಿಸುತ್ತದೆ. ದಲಿತರಿಗೆ ಕೂಲಿ ಇಲ್ಲದಿದ್ದರೆ ಕೂಳು ಇರುವುದಿಲ್ಲ ಆದರೆ ಅದಕ್ಕಿಂತ ಕೂಲಿ ಮಾಡಿದರೂ ಇಲ್ಲಿ ಕುಡಿಯುವುದಕ್ಕೆ ಶುದ್ಧವಾದ ನೀರು ಇಲ್ಲವೆಂದರೇ ದಲಿತರಿಗಿರುವ ಸಾಮಾಜಿಕ ಸ್ಥಿತಿಗಳು ಹೇಗಿರುತ್ತವೆ ಎಂಬ ಪ್ರಶ್ನೆಯನ್ನು ಈ ಕಥೆಯು ಸೂಕ್ಷ್ಮವಾಗಿ ತಿಳಿಸಿಕೊಡುತ್ತದೆ.

ಕೂಲಿಗಳೆಂದರೆ ಕೂರುವುದಕ್ಕೂ ಯೋಗ್ಯರಿಲ್ಲವೆ...? ಎಂಬ ಪ್ರಶ್ನೆ ದಲಿತರನ್ನು ಕಾಡುತ್ತದೆ. ಒಂದು ವೇಳೆ ಕೂಲಿಗಳೇ ಇಲ್ಲದಿದ್ದರೆ ಗೌಡರಾದವರು ಜೀವಿಸುವುದಾದರೂ ಹೇಗೆ ಎಂಬ ಅರಿವು ಅವರಿಗೆ ಬಂದರೆ ಕೂಲಿಗಳ ಬೆಲೆ ಅವರಿಗೆ ಅರ್ಥವಾಗುತ್ತದೆ. ಕೂಲಿಗಳನ್ನು ಕೇವಲ ಕೂಲಿಗಳಾಗಿ ಕಾಣದೆ ಅವರನ್ನು ಮನುಷ್ಯರಂತೆ ಕಾಣಬೇಕು. ಎಲ್ಲರಂತೆಯೇ ದಲಿತರಿಗೆ ಹಸಿವು, ಬಾಯಾರಿಕೆ, ನಿದ್ದೆ ಎಲ್ಲವೂ ಇವೆ ಅವುಗಳನ್ನು ಕಸಿದುಕೊಳ್ಳಬೇಡಿ ಎಂಬ ಆಶಯವನ್ನು ಈ ಕತೆಯಲ್ಲಿ ಕಾಣಬಹುದು. ಅದರಂತೆ ಕೂಳಿಲ್ಲದೆ ಕೂಲಿಗಾಗಿ ದುಡಿಯುವ ಕೂಲಿಗಳನ್ನು ಬಂಡವಾಳಶಾಹಿಗಳು ಸರಿಯಾದ ಕೂಲಿಯನ್ನು ನೀಡದೆ ಆರ್ಥಿಕ ಶೋಷಣೆಯನ್ನು ಮಾಡುತ್ತಾರೆ. ಕೂಲಿಗಳ ಶ್ರಮದಿಂದ ತಮ್ಮ ಬಂಡವಾಳವನ್ನು ಹೆಚ್ಚಿಸಿಕೊಂಡು ಮನೆಗಳ ಮೇಲೆ ಮನೆಕಟ್ಟಿಕೊಂಡು ಕಾರಿನಲ್ಲಿ ವಿಮಾನಿನಲ್ಲಿ ತಿರುಗುತ್ತಾರೆ.

ಬಡವರು ಮಾತ್ರ ಕೂಳಿಲ್ಲದೆ ಕೂಲಿ ಮಾಡಿಕೊಂಡು ಒಂದು ಸರಿಯಾದ ಗುಡಿಸಲನ್ನು ಹಾಕಿಕೊಳ್ಳಲು ಸಾಧ್ಯವಾಗದೆ ಬರಿಗಾಲಿನಲ್ಲಿಯೇ ತಿರುಗಬೇಕಾಗುತ್ತದೆ. ಇಂತಹ ಪರಿಸ್ಥಿತಿಯ ಪರಿಣಾಮವಾಗಿ ದಲಿತರು ಸರಿಯಾದ ಶಿಕ್ಷಣವನ್ನು ಪಡೆದುಕೊಳ್ಳಲು ಸಾಧ್ಯವಾಗದೆ ಯಾವ ಹುದ್ದೆಗಳನ್ನು ಪಡೆದುಕೊಳ್ಳಲು ವಿಫಲರಾಗಿ ಅನಿವಾರ್ಯತೆಯಿಂದ ಬಂಡವಾಳಶಾಹಿಗಳ ಬಳಿಯಲ್ಲಿ ಅವರು ಹೇಳಿದಂತೆ ಕೂಲಿ ಮಾಡಿಕೊಂಡು ತಮ್ಮ ಬದುಕನ್ನು ನಡೆಸುವುದಕ್ಕೆ ಕಾರಣವಾಗಿರುತ್ತದೆ. ದಲಿತರಲ್ಲಿರುವ ಅಸಹಾಯಕತೆಯನ್ನು ಅವರ ಸಹನೆಯನ್ನು ಒಂದು ಅವಕಾಶವನ್ನಾಗಿಸಿಕೊಂಡು ದಲಿತರಿಗೆ ಸಿಗಬೇಕಾಗಿರುವ ಮೂಲಭೂತ ಹಕ್ಕುಗಳನ್ನು ಸಿಗದಂತೆ ಬಂಡವಾಳಶಾಹಿಗಳು ತಮ್ಮ ಕುತಂತ್ರ ಬುದ್ಧಿಯಿಂದ ಶೋಷಣೆ ಮಾಡುತ್ತಿದ್ದಾರೆ. ಸಾಮಾಜಿಕ ಅಸಮಾನತೆಯಲ್ಲಿ ಬದುಕುತ್ತಿರುವ ದಲಿತರಿಗೆ ಯಾವ ಕಾನೂನುಗಳು ಕಾಪಾಡುತ್ತಿಲ್ಲ. ಅಧಿಕಾರಿಶಾಹಿವರ್ಗದವರು ದಲಿತರಿಗೆ ದೊರೆಯಬಹುದಾದ ಕನಿಷ್ಠ ವೇತನ, ಅವರಿಗೆ ಸಿಗಬೇಕಾದ ಭೂಮಿಯ ಒಡೆತನವನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ.

ಆಳುವ ಸರ್ಕಾರದವರು ದಲಿತರ ಮತಗಳನ್ನು ಮಾತ್ರ ಪಡೆದುಕೊಂಡು ದಲಿತರಿಗಿರುವ ಸಮಸ್ಯೆಗಳನ್ನು ಕುರಿತು ಒಂದು ಮಾತನ್ನು ಎತ್ತದೆ ಅವರನ್ನು ಬಡತನದ ಬೇಗೆಯಲ್ಲಿ ಬದುಕುವಂತೆ ಮಾಡಿದ್ದಾರೆ. ಈ ಕೂಲಿ ಜನ ಕಥೆಯಲ್ಲಿ ಕೂಲಿಗಾಗಿ ಪಡುತ್ತಿರುವ ದಲಿತರ ಸಂಕಷ್ಟಗಳಿಗೆ ಗೌಡರಂತ ಬಂಡವಾಳಶಾಹಿಗಳು ಕಾರಣವಾಗಿದ್ದಾರೆ. ಕೂಲಿಗಳನ್ನು ಅವರ ಜಾತಿಯ ನಿಂದನೆಯಲ್ಲಿ ನರಳಾಡುವಂತೆ ಮಾಡಿದ್ದಾರೆ. ಸಾಮಾಜಿಕವಾಗಿ ಶೋಷಣೆ ಮಾಡಿ ಅವರನ್ನು ತುಳಿತಕ್ಕೆ ಒಳಪಡಿಸಿದ್ದಾರೆ. ಯಾವ ಮೋಸ ವಂಚನೆಯನ್ನು ಮಾಡಿದಿರುವ ಕೂಲಿ ಜನರು ಉಳ್ಳವರ ದರ್ಪದಡಿಯಲ್ಲಿ ಗುಲಾಮರಂತೆ ಬದುಕುತ್ತಿದ್ದಾರೆ. ಈ ಕೂಲಿ ಜನರ ಹಕ್ಕುಗಳ ಕುರಿತು ತಮಗೆ ತಾವೇ ಶಿಕ್ಷಣ, ಸಂಘಟನೆ, ಮತ್ತು ಹೋರಾಟದಿಂದ ದಲಿತರು ಧ್ವನಿಯೆತ್ತಿ ಸಾಮಾಜಿಕ ಸಮಾನತೆಯನ್ನು ಪಡೆದುಕೊಳ್ಳಬೇಕು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇನ್ನೂ ಗುಲಾಮರಂತೆ ಜೀವನವನ್ನು ನಡೆಸುತ್ತಿರುವುದು ಸಂವಿಧಾನವು ನೀಡಿರುವ ಮೂಲಭೂತ ಹಕ್ಕುಗಳನ್ನು ಪಡೆದುಕೊಳ್ಳದಿರುವುದೇ ಕಾರಣವಾಗಿರುತ್ತದೆ.

ಹೀಗಾಗಿ ಈ ಕಥೆಯಲ್ಲಿ ಕಥೆಗಾರರು ಕೂಲಿಜನಗಳು ಅನುಭವಿಸುತ್ತಿರುವ ಸಾಮಾಜಿಕ ಅಸಮಾನತೆಯ ನೋವುಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಕೂಲಿ ಮಾಡುವವರು ಸಮಾಜದಲ್ಲಿ ತಲೆ ಎತ್ತಿ ಬದುಕಬೇಕು. ಬಂಡವಾಳಶಾಹಿಗಳ ಮತ್ತು ಅಧಿಕಾರಿಶಾಹಿಗಳು ಮಾಡುವ ಶೋಷಣೆಯ ವಿರುದ್ಧ ಹೋರಾಟ ಮಾಡಬೇಕು. ಸಮಾನವಾಗಿ ಬದುಕುವ ಹಕ್ಕು ಎಲ್ಲರಿಗೂ ಇದೆ. ಶೋಷಣೆಯಲ್ಲಿ ಬದುಕುವುದು ಪ್ರಜಾಪ್ರಭುತ್ವ ವ್ಯವಸ್ಥೆಗೆ ವಿರುದ್ಧವಾಗಿದೆ. ಆದ್ದರಿಂದ ದಲಿತರಾದ ಕೂಲಿಗಳು ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳಲು ಶಿಕ್ಷಣ, ಸಂಘಟನೆ, ಹೋರಾಟವನ್ನು ನಡೆಸಬೇಕಾದ ಅನಿವಾರ್ಯತೆ ಇದೆ ಎಂಬುವುದನ್ನು ಈ ಕತೆಯು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಿಂದ ಪ್ರತಿಪಾದಿಸುತ್ತದೆ.

'ವಾಸುದೇವನ್ ನಾಯರ್ ಕತೆಗಳು' ಎಂಬ ಕಥಾ ಸಂಕಲನವನ್ನು ಮೋಹನ ಕುಂಟಾರ್‌ರವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಮಲಿಯಾಳಂನಲ್ಲಿ ವಾಸುದೇವನ್‌ನಾಯರ್ ರವರು ಬರೆದ 'ಕರ್ಕಿಡಗಂ' ಎಂಬ ಕಥೆಯೇ ಕನ್ನಡದ 'ಕರ್ಕಟಕ' ಕಥೆಯು ಶಾಲಾಬಾಲಕನ ಹಸಿವಿನ ಅಗಾಧತೆಯನ್ನು ಚಿತ್ರಿಸುತ್ತದೆ. ಕರ್ಕಿಟಕ ಎಂದರೆ ಜೂನ್ ತಿಂಗಳ ಸಂಕ್ರಮಣದಿಂದ ಜುಲೈ ತಿಂಗಳ ಸಂಕ್ರಮಣದವರೆಗಿನ ಕಾಲ. ಈ ಕರ್ಕಟಿಕ ತಿಂಗಳೆಂದರೆ ಕೃಷಿಕರಿಗೆ ಅತ್ಯಂತ ಕಷ್ಟತುಂಬಿದ ದಿನಗಳಾಗಿರುತ್ತದೆ. ಬಡಜನರು ಬಡತನದ ಹಸಿವಿನಿಂದ ತತ್ತರಿಸುವ ತಿಂಗಳು ಇದಾಗಿರುತ್ತದೆ. ಮೂರು– ನಾಲ್ಕು ತಿಂಗಳ ಮಳೆಗಾಲದ ಕೊನೆಯ ದಿನಗಳಾಗಿರುತ್ತವೆ. ಕೆಲಸವಿಲ್ಲದೆ ಮಳೆಗಾಲದಲ್ಲಿ ಕುಳಿತುಕೊಂಡು ಊಟ ಮಾಡಲು ತೆಗೆದಿಟ್ಟುಕೊಂಡಿರುವಂತ ಮನೆಯ ದವಸ ಧಾನ್ಯಗಳು ಮುಗಿದಿರುತ್ತವೆ.

ಮಳೆಗಾಲದಲ್ಲಿ ನೆಟ್ಟಿರುವ ಗಿಡಗಳು ಅವು ಕಾಯಿಬಿಡಲು ಇನ್ನೂ ಎರಡು ತಿಂಗಳು ಕಾಯಬೇಕು. ದುಡಿಯುವ ವರ್ಗದವರಿಗೆ ದುಡಿಮೆಯೇ ಇಲ್ಲದೆ ಮಧ್ಯಮ ವರ್ಗದ ಕುಟುಂಬಗಳು ಆಹಾರಕ್ಕಾಗಿ ಅಲೆದಾಡುವಂತ ಈ ದಿನಗಳಲ್ಲಿ ಅಡವಿಯಲ್ಲಿರುವ ನಿಸರ್ಗದತ್ತವಾಗಿ ಬೆಳೆದಿರುವವಂತಹ ಗೆಡ್ಡೆ ಗೆಣಸುಗಳು, ಬಾಳೆ ಗೆಡ್ಡೆಗಳು, ನುಗ್ಗೆ, ತಗಟೆ ಮೊದಲಾದ ಹಲವಾರು ಸೊಪ್ಪುಗಳನ್ನು ತಿಂದುಕೊಂಡು ತಮ್ಮ ಹಸಿವನ್ನು ಹಿಂಗಿಸಿಕೊಳುವ ಕಾಲ ಬಡವರ ಬರಗಾಲದ ದಿನಗಳೇ ಈ ಕರ್ಕಟಿಕ. ಈ ಕಥೆಯಲ್ಲಿ ಬರುವ ಹಸಿವು ಕೇವಲ ಒಂದು ವಸ್ತುವಾಗಿ ಬಂದಿರುವುದು. ಅದು ಆ ಶಾಲಾ ಬಾಲಕನ ತರವಾಡು ಮನೆತನಕ್ಕೆ ಬಂದಿರುವ ಭೀಕರ ಹಸಿವಿನ ಬಾಧೆಯಾಗಿರುತ್ತದೆ. ತರವಾಡು ಒಂದು ಪ್ರತಿಷ್ಠಿತವಾದ ಮನೆತನವಾಗಿದೆ. ಗಂಡನ ಮನೆಯಿಂದ ಯಾವುದೇ ಪ್ರತಿಫಲಾಪೇಕ್ಷೆಗಳು ಇಲ್ಲದೆ ಬಂದ ಸಂಬಂಧಿಕನಿಗೆ ತಮ್ಮ ಮನೆಯಲ್ಲಿರುವ ಹಸಿವು ತಿಳಿಯಬಾರದು ಎಂದುಕೊಂಡು ಆ ತರವಾಡು ಮನೆಯಲ್ಲಿ ಶಾಲಾ ಬಾಲಕನೊಬ್ಬನಿಗೆ ಹಸಿವಿನ ಬೆಂಕಿ ಹೊಟ್ಟೆಯನ್ನು ಸುಡುತ್ತಿದ್ದರೂ, ನಟನೆಯಿಂದ ಆ ಅಥಿತಿಯನ್ನು ಸತ್ಕಾರ ಮಾಡಿ ಮನೆಯಲ್ಲಿನ ಹಸಿವನ್ನು ತಡೆದುಕೊಳ್ಳುತ್ತಾರೆ.

ಬಡತನದಲ್ಲಿ ಹಸಿವಿನ ಪರಿಣಾಮ ಎಷ್ಟು ಭೀಕರವಾಗಿರುತ್ತದೆಂಬುದನ್ನು ಈ ಕಥೆ ತೋರಿಸುತ್ತದೆ. ಶಾಲಾ ಬಾಲಕನು ಸದಾ ಹಸಿವಿನ ಚಿಂತೆಯನ್ನು ಮಾಡುತ್ತಾ ಹೇಗೆ ತನ್ನ ಜೀವನದ ದಿನಗಳನ್ನು ಕಳೆಯುತ್ತಾನೆ ಎಂಬುದನ್ನು ವಿವರಿಸುತ್ತದೆ. ಶಾಲೆಗೆ ಹೋಗುವಾಗ ಮಳೆ ಬಂದರೆ ಶಾಲೆಗೆ ಹೋಗುವುದು ಕಷ್ಟವಾಗುತ್ತದೆ. ಅದರ ಜೊತೆ ಹಸಿವು ಕೂಡ ಬಾಲಕನನ್ನು ಬಾಧಿಸುತ್ತಿರುತ್ತದೆ. ಬೆಳಿಗ್ಗೆ ಗಂಜಿ ಕುಡಿದು ಬಾಲಕ ಶಾಲೆಗೆ ಹೋದರೆ ಮತ್ತೆ ಸಂಜೆ ಮನೆಗೆ ಬಂದ ಮೇಲೆಯೇ ಆ ಬಾಲಕನ ಊಟ. ತಂದೆಯ ಮನಿಯಾರ್ಡರ ದುಡ್ಡಿನಿಂದಲೇ ಇಡೀ ತುಂಬಿದ ಕುಟುಂಬ ಸಾಗುತ್ತಿರುತ್ತದೆ. ಅದು ಬಂದಾಗ ಮಾತ್ರ ಬಾಲಕನಿಗೆ ನಾಲ್ಕು ದಿನ ಎರಡಾಣೆ ಸಿಗುತ್ತಿರುತ್ತದೆ. ಶಾಲೆಯಲ್ಲಿ ಮಧ್ಯಾಹ್ನ ಊಟಕ್ಕೆ ಏನೂ ಇರುವುದಿಲ್ಲ ಹೋಟಲಿನ ಹಿಂಭಾಗದಲ್ಲಿ ಹೋಗಿ ಖಾಲಿ ಹೊಟ್ಟೆಗೆ ನೀರು ಕುಡಿಯುತ್ತಾನೆ. ಮಳೆಗಾಲ ಬಂದರೆ ಬಾಯಾರಿಕೆ ಇರುವುದಿಲ್ಲ ಕೇವಲ ಹಸಿವು ಮಾತ್ರ ಇರುತ್ತದೆ.

ಮನೆಯಿಂದ ಶಾಲೆಗೆ ಹೋಗಲು ನಾಲ್ಕು ಮೈಲು ದೂರ ನಡೆದುಕೊಂಡು ಹೋಗಬೇಕು. ಶಾಲೆ ಮುಟ್ಟುವುದೊರಳಗಾಗಿಯೇ ಹೊಟ್ಟೆ ಹಸಿದು ಬಿಡುತ್ತದೆ. ಶಾಲೆಯ ನಾಲ್ಕನೇ ಪೀರಿಯಡ್ಡಾಗುವಾಗ ಹಸಿವಿನ ಬೆಂಕಿ ಹೊಟ್ಟೆಯಲ್ಲಿ ತಾಕುತ್ತಿರುತ್ತದೆ. ಮತ್ತೆ ಖಾಲಿಹೊಟ್ಟೆಗೆ ನೀರನ್ನು ಕುಡಿಯಬೇಕು. ಹೀಗೆ ಕಲ್ಪಡತ್ತೂರಿನಿಂದ ಬರುವ ರಂಗ, ಕುಟ್ಟಿಪಾಲದ ಶಿವದಾಸ, ವಿಳಕತ್ರಗೋವಿಂದ ಮತ್ತು ಕಥೆಗಾರನ ಜೀವನ ನಿತ್ಯ ತನ್ನ ಶಾಲಾ ಗೆಳೆಯರೊಂದಿಗೆ ಸಾಗುತ್ತಿರುತ್ತದೆ. ಹೀಗೆ ದಿನವೆಲ್ಲ ಹಸಿವಿನಲ್ಲಿ ಹುಟ್ಟಿ ಕೊನೆಗೆ ಹೊಟ್ಟೆಯಲ್ಲಿ ಹಸಿವೇ ಸತ್ತುಹೋಗುವ ದಿನಗಳನ್ನು ಶಾಲಾ ಬಾಲಕ ಕಳೆಯುತ್ತಿರುತ್ತಾನೆ. ಹಸಿದುಕೊಂಡು ಮನೆಗೆ ಬರುತ್ತಾನೆ ಮನೆಯಲ್ಲಿ ತಿನ್ನಲು ಗಂಜಿ ಏನಾದರೂ ಸಿಗುವುದೇ ಎಂದು ಚಿಕ್ಕಮ್ಮನನ್ನು ಕೇಳುತ್ತಾನೆ. ಚಿಕ್ಕಮ್ಮ ಉತ್ತರಿಸುವುದಿಲ್ಲ ತೊಯ್ದ ಬಟ್ಟೆಯಲ್ಲಿಯೇ 'ಮೀನಾಕ್ಷ' ಅಕ್ಕನನ್ನು ಕೇಳುತ್ತಾನೆ. ಎಲ್ಲಿ ಹೋಗಿದ್ದಾಳೆ ಅಮ್ಮ ಎಂದಾಗ ಮನೆಯಲ್ಲಿ ಇಲ್ಲ ಹೊರಗಡೆ ಹೋಗಿದ್ದಾಳೆ ಎಂದು ಹೇಳುತ್ತಾಳೆ.

ಕೊನೆಗೆ ಅಮ್ಮ ಬರುವಿಕೆಯನ್ನೇ ಕಾಯುತ್ತ ಕುಳಿತಿರುವ ಶಾಲಾ ಬಾಲಕನಿಗೆ ಅಮ್ಮ ಬರುತ್ತಿರುವದನ್ನು ಕಂಡು ಆನಂದ ಪಡುತ್ತಾನೆ. ಅವಳು ಬರಿಗೈಯಿಂದಲೇ ಬಂದಿರುತ್ತಾಳೆ ಕೊನೆಗೆ ಅಂಗಡಿಯವರ ಹತ್ತಿರ ಹೋಗಿ ಕೇಳಿ ಏನಾದರೂ ತೆಗೆದುಕೊಂಡು ಬಾ ಎಂದು ಮೀನಾಕ್ಷಿಗೆ ಹೇಳುತ್ತಾಳೆ. ಮಗ ಬೆಳಗಿನಿಂದ ಏನೂ ತಿಂದಿಲ್ಲ, ಬೇಗ ಹೋಗಿ ಯಾರನ್ನಾದರೂ ಕೇಳಿ ಅಕ್ಕಿ ಇಸಿದುಕೊಂಡು ಗಂಜಿ ಮಾಡಿಕೊಡು ಎಲ್ಲರೂ ಊಟ ಮಾಡೋಣವೆಂದು ಹೇಳಿ ಕಳಿಸುತ್ತಾಳೆ. ಸೂರಾರು ಕಡೆ ಅಲೆದಾಡಿ ಮೂರು ಪಾವು ಅಕ್ಕಿ ತೆಗೆದುಕೊಂಡು ಬಂದಾಗ ಮನೆಗೆ ಒಬ್ಬ ನೆಂಟನ ಆಗಮನವಾಗುತ್ತದೆ. ಮತ್ತೆ ಹಸಿವಿನ ಚಿಂತೆ ಸಾಗುತ್ತದೆ. ಅಂಡತೋಡಿನಲ್ಲಿರುವ ಶಂಕುಣಿಯಣ್ಣ ಬರುತ್ತಿದ್ದಾನೆಂದು ಮೀನಾಕ್ಷ ಎಲ್ಲರಿಗೂ ಸುದ್ದಿಯನ್ನು ತಿಳಿಸುತ್ತಾಳೆ. ಮನೆಯಲ್ಲಿ ನೋಡಿದರೆ ತಿನ್ನುವುದಕ್ಕಾಗಿ ಏನೂ ಇಲ್ಲ. ಬಂದ ನೆಂಟನನ್ನು ಉಪಚರಿಸಿ ಸರಿಯಾಗಿ ಸತ್ಕರಿಸದಿದ್ದರೆ ಅವನು

ತಮ್ಮ ಊರಿಗೆ ಹೋಗಿ ಅಲ್ಲಿ ನಮ್ಮ ಮನೆಯ ಮಾನ ಮರ್ಯಾದೆಯನ್ನು ತೆಗೆಯುತ್ತಾನೆಂದು ಅಮ್ಮ ಹೇಳುತ್ತಾಳೆ.

ಇತ್ತ ಶಾಲೆಯ ಬಾಲಕ ಹಸಿದುಕೊಂಡು ಬಂದು ಮೂಲೆಯಲ್ಲಿ ಕುಳಿತು ಕೊಂಡಿರುತ್ತಾನೆ. ಮನೆಯಲ್ಲಿರುವ ಉಳಿದದ್ದು ಬಳಿದದ್ದನ್ನು ಸೇರಿಸಿಕೊಂಡು ಬಂದ ನೆಂಟನಿಗೆ ಹಪ್ಪಳ ಸಹಿತ ಕೊಬ್ಬರಿ ಎಣ್ಣೆಯೊಂದಿಗೆ ಅನ್ನ ಸಾರನ್ನು ಮಾಡಿ ತಾವೆಲ್ಲರೂ ಉಪವಾಸದಿಂದ ನೆಂಟನಿಗೆ ಊಟವನ್ನು ಹಾಕುತ್ತಾರೆ. ನೆಂಟನು ಮನೆಯಲ್ಲಿ ಸುಖವಾದ ನಿದ್ರೆಯನ್ನು ಮಾಡುತ್ತಿರುವಾಗ ಇತ್ತ ಶಾಲಾ ಬಾಲಕನಿಗೆ "ಒಳಗೆ ಹಸಿವು ಬೆಂಕಿಯುಂಡೆಯಾಗಿ, ಬಿಸಿಯಾದ ಹಬೆಯಾಗಿ, ನೋವಾಗಿ ಸುತ್ತ ಹರಡುತ್ತಿದೆ. ಮಂಪರು ಬರುವಂತೆ ಅನ್ನಿಸಿತು. ಗೊತ್ತಿಲ್ಲದೆ ತಕ್ಷಣ ಕಣ್ಣು ತೆರೆದೆ. ಅಜ್ಜಿಯ ಗೂರಲು ಕೆಮ್ಮೆ ಮತ್ತು ದೂರದಿಂದ ಜೀರುಂಡೆಗಳ ಚೀರಾಟ ಕೇಳಿಸುತ್ತಿದೆ. ದೂರದ ಗದ್ದೆಗಳಲ್ಲಿ ವಟಗುಟ್ಟುವ ಕಪ್ಪೆಗಳ ದನಿ ಕೆಲವೊಮ್ಮೆ ಹೆಚ್ಚು ಹೆಚ್ಚಾಗಿ ಕಿವಿಯ ಸಮೀಪ ಬಂದಂತೆ ಭಾಸವಾಗುತ್ತದೆ. ಮತ್ತೆ ದೂರಾಗುತ್ತಿತ್ತು."[೨]

ಹೀಗೆ ಮನೆಯವರೆಲ್ಲರೂ ಹಸಿವಿನ ತತ್ತರಿಸುವಿಕೆಯಿಂದ ರಾತ್ರಿ ನಿದ್ರೆಮಾಡದೆ ಮಲಗಿಕೊಂಡಿರುವುದು ಕೊನೆಗೂ ಆ ಶಾಲಾ ಬಾಲಕ ಹಸಿವಿನಿಂದ ನರಳುತ್ತಿರುವ ಇಂತಹ ಸ್ಥಿತಿಗೆ ಬಂಡವಾಳಶಾಹಿಗಳು ತಮ್ಮಲ್ಲಿರುವ ಅಧಿಕವಾದ ಆರ್ಥಿಕ ಸಬಲತೆಯನ್ನು ಇತರರಿಗೂ ಸಮವಾಗಿ ಹಂಚದಿರುವುದೇ ಇಂತಹ ಅಸಮತೋಲನದ ವ್ಯವಸ್ಥೆಗೆ ಕಾರಣವಾಗಿರುತ್ತದೆ. ಆರ್ಥಿಕ ಭದ್ರತೆ ಸರ್ವರಿಗೂ ಸಮವಾಗಿ ಹಂಚಲ್ಪಡಬೇಕು. ಬಂಡವಾಳ ಕೆಲವೇ ವ್ಯಕ್ತಿಗಳಲ್ಲಿ ಸೀಮಿತವಾದರೆ ಇಂತಹ ಭೀಕರ ಹಸಿವಿನ ಬಾಧೆಗಳು ಬಡವರನ್ನು ಸುತ್ತುವರಿಯುತ್ತದೆ. ದೇಶದಲ್ಲಿ ಆರ್ಥಿಕ ಅಸಮಾನತೆಯಿಂದ ಬಡವರು ಹಸಿವಿನಿಂದ ಬಳಲಲು ಕಾರಣವಾಗುತ್ತದೆ. ಆದ್ದರಿಂದ ನೊಂದ ದಲಿತರಿಗೆ ಸಮರ್ಪಕವಾದ ಆರ್ಥಿಕ ಬಲ ಹಂಚಿಕೆಯಾಗಬೇಕೆಂದು ಈ ಕಥೆ ತನ್ನ ಆಶಯವನ್ನು ವ್ಯಕ್ತಪಡಿಸುತ್ತದೆ. ಬಡತನದಲ್ಲಿರುವ ಮಕ್ಕಳಿಗೆ ಶಾಲಾ ಶಿಕ್ಷಣ ತಲೆಯಲ್ಲಿ ಉಳಿಯಬೇಕಾದರೆ ಅವರ ಹಸಿದುಕೊಂಡಿರುವ ಹೊಟ್ಟೆ ತುಂಬಿರಬೇಕು. ಇಲ್ಲದಿದ್ದರೆ ಶಿಕ್ಷಣದ ಕಲಿಕೆಯು ವ್ಯರ್ಥವಾಗುತ್ತದೆ. ಶಾಲಾ ಮಕ್ಕಳು ಸರಿಯಾದ ಸಮಯಕ್ಕೆ ಒಳ್ಳೆಯ ಆಹಾರವನ್ನು ಸೇವನೆ ಮಾಡಿದರೆ ಅವರಲ್ಲಿ ಚೇತನಾಶಕ್ತಿ ಬರುತ್ತದೆ. ಇದರಿಂದ ಕೇಳುವ ಆಸಕ್ತಿ ವೃದ್ಧಿಸುತ್ತದೆ. ಆಗ ಕಲಿಸುವ ಶಿಕ್ಷಣ ಬಡಮಕ್ಕಳ ಮೆದುಳಿನಲ್ಲಿ ಶಾಶ್ವತವಾಗಿ ಅಳಿಯದೆ ಉಳಿಯಲು ಸಾಧ್ಯವಾಗುತ್ತದೆ.

ಶಾಲಾ ಮಕ್ಕಳು ಹೊಟ್ಟೆತುಂಬ ಊಟ ಮಾಡಿ ಗೆಳೆಯರೊಂದಿಗೆ ನಲಿಯುತ್ತ ಆಟವಾಡಿಕೊಂಡು ಪಾಠ ಕಲಿಯುತ್ತಿದ್ದರೆ ಬಾಲ್ಯದ ಭವಿಷ್ಯತ್ತಿನ ಬೆಳವಣಿಗೆ ಪ್ರಗತಿಯ ಗುರಿಯನ್ನು ತಲುಪಲು ಸಾಧ್ಯವಾಗುತ್ತದೆ. ಊಟ, ಆಟ, ಪಾಠಗಳಿಂದ ಮಕ್ಕಳ ಬೆಳವಣಿಗೆ ಬೌದ್ಧಿಕವಾಗಿ ವಿಕಾಸ ಹೊಂದುವುದಕ್ಕೆ ಸಹಕಾರಿಯಾಗುತ್ತದೆ. ಆದರೆ ಬಡತನದಿಂದ ಬಂದ ದಲಿತ ಕುಟುಂಬದ ಮಕ್ಕಳಿಗೆ ಅನ್ನ ಸಿಗದೆ ಹಸಿದ ಹೊಟ್ಟೆಯಲ್ಲಿ ಬಂದು ಶಾಲೆಯಲ್ಲಿ ನೀರು ಕುಡಿದುಕೊಂಡು ಹಾಗೆ ಹಸಿದ ಹೊಟ್ಟೆಯಲ್ಲಿ

ಮನೆಗೆ ಹೋಗುವ ಶಾಲಾ ಬಾಲಕನ ಬಡತನದ ದುಸ್ಥಿತಿಗೆ ಬಂಡವಾಳಶಾಹಿಗಳು ಸಮಾಜದಲ್ಲಿ ಮಾಡಿರುವ ಆರ್ಥಿಕ ಅಸಮಾನತೆಯೇ ಕಾರಣವಾಗಿರುತ್ತದೆ. ಅಷ್ಟೇ ಅಲ್ಲದೆ ಸರಕಾರದ ಆಡಳಿತ ಅಧಿಕಾರಿಗಳು ಇಂತಹ ಬಡಮಕ್ಕಳ ಜೀವನ ಸ್ಥಿತಿಯನ್ನು ಗಮನಕೊಡದೆ ಅಲಕ್ಷ್ಯತನದಿಂದ ದಲಿತ ಬಡಮಕ್ಕಳ ಭವಿಷ್ಯವನ್ನು ಕಟ್ಟಿಕೊಡಲು ಶಿಕ್ಷಣ ವ್ಯವಸ್ಥೆಯಿಂದ ವಿಫಲರಾಗುತ್ತಿದ್ದಾರೆ.

ಬಡಮಕ್ಕಳು ಶಿಕ್ಷಣದಿಂದ ಹಿಂದುಳುವಿಕೆಗೆ ಮತ್ತು ಶಿಕ್ಷಣದಿಂದ ವಂಚಿತರಾಗುತ್ತಿರುವುದಕ್ಕೆ ಕಾರಣಗಳನ್ನು ಹುಡುಕಿಕೊಂಡು ಅದಕ್ಕೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕಾಗುವುದು ಅಧಿಕಾರಿಶಾಹಿಗಳ ಆದ್ಯ ಕರ್ತವ್ಯವಾಗಬೇಕು. ಈ ಹಿನ್ನೆಲೆಯಲ್ಲಿ ಕಥೆಗಾರರು ದಲಿತರ ಮಕ್ಕಳ ಭವಿಷ್ಯಕ್ಕೆ ಶಿಕ್ಷಣವೇ ಮೂಲಾಧಾರವಾಗಿರುತ್ತದೆ. ಈ ಶಿಕ್ಷಣ ವ್ಯವಸ್ಥೆಯಲ್ಲಿ ಕಲಿಕೆಯಲ್ಲಿ ತೊಡಗಿಕೊಂಡಿರುವ ದಲಿತ ಬಡಮಕ್ಕಳಿಗೆ ಸರಿಯಾದ ಮೂಲ ಸೌಕರ್ಯಗಳಾದ ಆಹಾರ, ಆಶ್ರಯ, ವಸ್ತ್ರ, ನೀರು ಸಿಗಬೇಕು. ಇವುಗಳಿಂದಲೇ ಮಕ್ಕಳು ಕಲಿಕೆಯ ಪ್ರಕ್ರಿಯೆಯಲ್ಲಿ ತಮ್ಮನ್ನು ಪಾಲ್ಗೊಳ್ಳುವುದಕ್ಕೆ ಸಹಕಾರಿಯಾಗಲು ಸಾಧ್ಯವಾಗುತ್ತದೆ.

ಇಲ್ಲದಿದ್ದರೆ ದಲಿತ ಬಡ ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ರಾಷ್ಟ್ರದ ಆರ್ಥಿಕತೆಯಲ್ಲಿ ಅಸಮಾನತೆ ಉಂಟಾಗಲು ಕಾರಣವಾಗುತ್ತದೆ. ಇದರಿಂದಾಗಿ ಆಳುವ ಅಧಿಕಾರಿಗಳು ಮತ್ತು ಬಂಡವಾಳಶಾಹಿಗಳು ದಲಿತ ಬಡಮಕ್ಕಳ ಭವಿಷ್ಯಕ್ಕಾಗಿ ರಾಷ್ಟ್ರದ ಸಮಾನತೆಗಾಗಿ ಶ್ರಮಿಸಬೇಕು. ದೇಶದಲ್ಲಿ ಯಾವ ಶಾಲಾ ಮಕ್ಕಳು ಹಸಿವಿನಿಂದ ಬಳಲಬಾರದೆಂಬ ಆಶಯದೊಂದಿಗೆ ದಲಿತ ಬಡಕುಟುಂಬಗಳ ತಮ್ಮ ಅಸಹಾಯಕ ಜೀವನ ಸ್ಥಿತಿಯಿಂದ ಅನುಭವಿಸುತ್ತಿರುವ ಎದೆನೋವುಗಳನ್ನು ಈ ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ದಲಿತರು ಶಿಕ್ಷಣದಿಂದ ಬದಲಾಗಲು ಸಾಧ್ಯ ಅದಿಲ್ಲದಿದ್ದರೆ ಮತ್ತೊಬ್ಬರಿಗೆ ಗುಲಾಮರಂತೆ ಬದುಕಬೇಕಾಗುತ್ತದೆ. ಆದ್ದರಿಂದ ಶಿಕ್ಷಣದ ಮೂಲಕವಾಗಿ ಸಂವಿಧಾನವು ನಮಗೆ ನೀಡಿರುವ ಹಕ್ಕುಗಳನ್ನು ಪಡೆದುಕೊಂಡು, ಉತ್ತಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕು ಎಂಬ ಆಶಯದೊಂದಿಗೆ ದಲಿತರು ಅನುಭವಿಸುತ್ತಿರುವ ಹಾಗೂ ಅವರಿಗಿರುವ ತೊಂದರೆಗಳನ್ನು ಕಥೆಗಾರರು ಅಂಬೇಡ್ಕರವಾದ ಮತ್ತು ಲೋಹಿಯವಾದದ ನೆಲೆಯಿಂದ ಈ ಕಥೆಯಲ್ಲಿ ಸಮರ್ಪಕವಾಗಿ ತೋರಿಸಿಕೊಟ್ಟಿದ್ದಾರೆ.

ತೆಲುಗಿನ ರಾವೂರಿ ಭರಧ್ವಾಜರವರು ಬರೆದಿರುವ "ನೊಂದವರ ಸತ್ಯ ಕಥೆಗಳು" ಎಂಬ ಉಪಶೀರ್ಷಿಕೆಯನ್ನೊಳಗೊಂಡ 'ಜೀವನ ಸಮರ' ಎಂಬ ಕಥಾ ಸಂಕಲನದಲ್ಲಿ 'ಬೆವರಿನ ಬೆಲೆ' ಯ ಕಥೆಯಲ್ಲಿ ಜೀವನವೆಂದರೆ ಸಮರ ಅದು ಯಾವಾಗಲೂ ನಿರಂತವಾದುದು ಜೀವನದ ಹುಡುಕಾಟಕ್ಕೆ ಕೊನೆಯೇ ಇಲ್ಲ. ಜೀವನದ ಸಮರ ಜೀವನವಿರುವವರೆಗೂ ಇದ್ದೆ ಇರುತ್ತದೆ. ಆದರೆ ಜೀವನದ ಪರಿಸ್ಥಿತಿಗೆ ನಡೆಸುವ ಸಮರ ಕೊನೆಗಾಣಬೇಕಿಲ್ಲ ಅದು ಯಾವಾಗ ಎಂಬ ಪ್ರಶ್ನೆಯನ್ನು 'ಬೆವರಿನ ಬೆಲೆ' ಯ ಕಥೆಯು ನೊಂದವರ ಜೀವನದ ಮೂಲಕ ಇಡೀ ಮನುಕುಲವನ್ನೇ ಪ್ರಶ್ನಿಸುತ್ತದೆ. ಮನುಷ್ಯ ಜೀವನದ ಯಾವುದೋ ಒಂದು ಭಾಗವನ್ನು ಸ್ಪರ್ಶಿಸಿದ ಮಾತ್ರಕ್ಕೆ ಆತ

ಪರಿಪೂರ್ಣವಾಗಲಾರನು. ಯಾವ ಜೀವಿಯೂ ಸುಲಭವಾಗಿ ನಿಸರ್ಗದಲ್ಲಿ ಸುಲಭವಾಗಿ ಬದುಕಲಾರದು. ಆ ಬದುಕಿಗಾಗಿ ಪಡುವ ಕಷ್ಟಕಾರ್ಪಣ್ಯಗಳು ಮನುಷ್ಯ ಜೀವನದ ಪಾಡು ಆತನ ವೃತ್ತಿಯೇ ಅದೆಂದರೂ ಅದರಲ್ಲಿನ ಅಸಂಖ್ಯಾತವಾಗಿರುವ ಆತನ ಒಡಲ ನೋವುಗಳು ಈ 'ಬೆವರಿನ ಬೆಲೆ' ಯ ಕಥೆಯಲ್ಲಿ ಅಂತರ್ಗತವಾಗಿ ರಾವೂರಿ ಭರಧ್ವಾಜರವರು ನಿರೂಪಿಸಿದ್ದಾರೆ.

"ಗನ್ನವರಂ ವಿಮಾನ ನಿಲ್ದಾಣ, ತೆನಾಲಿಯ ರೈಲ್ವೆ ಸೇತುವೆ, ರಾಜ ಮಹೇಂದ್ರಿಯ ಬಳಿಯ ಅಣೆಕಟ್ಟು, ಹೈದರಾಬಾದಿನ ಹೋಟಲ್, ಅನಂತಪುರದಲ್ಲಿನ ಚಲನಚಿತ್ರ ಮಂದಿರಗಳನ್ನು ನೋಡಿದವರಿಗೆ ಸಹ ಶೇಷಯ್ಯನ ಹೆಸರು ತಿಳಿಯುವ ಅವಕಾಶ ಇಲ್ಲ. ಇವುಗಳ ನಿರ್ಮಾಣದಲ್ಲಿ ಪಾಲುಗೊಂಡ ನೂರಾರು ಕೂಲಿಗಳಲ್ಲಿ ಶೇಷಯ್ಯನೂ ಒಬ್ಬ. ಆದ್ದರಿಂದಲೇ ಆತನಿಗೆ ಒಂದು ಊರು ಎಂಬುದು ಇಲ್ಲ."[೩] ಇದುವೇ ಕಥಾನಾಯಕನಾದ ಶೇಷಯ್ಯನ ಜೀವನ ಅದೇ ಆತನ ಸಮರ. ಶೇಷಯ್ಯ ಕಡುಬಡತನದಲ್ಲಿ ಹುಟ್ಟಿದವನಾದ್ದರಿಂದ ಬಾಲ್ಯದಿಂದ ಶಿಕ್ಷಣವನ್ನು ಪಡೆದುಕೊಳ್ಳಲಾಗಲಿಲ್ಲ, ಆದ್ದರಿಂದ ಆತನದು ಅಲೆ ಮಾರಿಯ ಜೀವನ. ಮನೆ ಕಟ್ಟುವ ಕೆಲಸವನ್ನು ತುಂಬಾ ಚೆನ್ನಾಗಿ ಕಲಿತುಕೊಂಡಿದ್ದಾನೆ. ಕಟ್ಟಡಕ್ಕಾಗಿ ಎಷ್ಟು ಸಿಮೆಂಟು ಹಾಕಬೇಕು, ಎಷ್ಟು ನೀರು ಹಾಕಬೇಕು, ಕಾಂಕ್ರೇಟ್ ಹೇಗೆ ಹಾಕಬೇಕು ಎಲ್ಲವೂ ಈತನಿಗೆ ಚೆನ್ನಾಗಿ ತಿಳಿದಿದೆ. ಈತನದು ಅಕ್ಷರ ಕಲಿಕೆಯಲ್ಲದಿದ್ದರು ಕಾಯಕದ ಕಲಿಕೆಯಲ್ಲಿ ತುಂಬಾ ಪ್ರವೀಣನಾಗಿದ್ದಾನೆ.

ಆದ್ದರಿಂದಲೇ ಈತನ ಶ್ರಮದಪಾಲು ಆಂಧ್ರದ ನನ್ನವರಂ ವಿಮಾಣ ನಿಲ್ದಾಣ, ತೆನಾಲಿಯ ರೈಲ್ವೆ ಸೇತುವೆ, ರಾಜ ಮಹೇಂದ್ರಿಯ ಬಳಿಯ ಅಣೆಕಟ್ಟು, ಹೈದರಾಬಾದಿನ ಹೋಟಲ್, ಅನಂತಪುರದಲ್ಲಿನ ಚಲನಚಿತ್ರ ಮಂದಿರಗಳ ನಿರ್ಮಾಣದಲ್ಲಿ ಇದೆ. ಆದ್ದರಿಂದಲೇ ಈತನದು ತನ್ನದೆಯಾದ ಒಂದು ಊರು ಇಲ್ಲ. ತನ್ನದೆಯಾದ ಸ್ವಂತ ಮನೆ ಇರುವುದಿಲ್ಲ. ಒಂದು ದಿನಕ್ಕೆ ೧೫ ರೂಪಾಯಿ ಸಂಪಾದನೆಯಾಗುತ್ತದೆ. ಈ ಲೆಕ್ಕದಂತೆ ಆತನ ಸಂಪಾದನೆ ತಿಂಗಳಿಗೆ ೪೫೦ ರೂಪಾಯಿ ಆಗುವುದಿಲ್ಲ ಏಕೆಂದರೆ ತಿಂಗಳದ ಕೊನೆತನಕ ಕೆಲಸ ಸಿಗುವುದಿಲ್ಲ. ಮತ್ತೆ ಮಳೆಗಾಲ ಬಂತೆಂದರೆ ನಾಲ್ಕು ತಿಂಗಳು ಯಾವ ಕೆಲಸವಿಲ್ಲದೆ ಮನೆಯಲ್ಲೆ ಕೂರಬೇಕಾಗುತ್ತದೆ. ಶೇಷಯ್ಯನಿಗೆ ೪ ಜನ ಮಕ್ಕಳಿದ್ದಾರೆ. ಎಲ್ಲರಿಗಾಗಿ ಮನೆಯನ್ನು ಕಟ್ಟಿಕೊಡುವ ಈತ ತಾನೇ ಮನೆಯಿಲ್ಲದವನಾಗಿದ್ದಾನೆ. ಕಷ್ಟಪಟ್ಟು ಬೆವರನ್ನು ಸುರಿಸಿ ಹಗಲಿರುಳೆನ್ನದೆ ದುಡಿದರೂ ಬೆವರಿಗೆ ತಕ್ಕಂತೆ ಬೆಲೆಯಿಲ್ಲದೆ ಒಂದು ಸ್ವಂತ ಮನೆ ಕಾಣದ ಶೇಷಯ್ಯನ ಜೀವನ ಸಮರವೇ ಆಗಿದೆ. ಮನೆಯನ್ನು ಕಟ್ಟಿಸಿಕೊಳ್ಳುವವರು ಮನೆಗಳ ಮೇಲೆ ಮನೆ ಕಟ್ಟಿಕೊಳ್ಳುತ್ತಲೇ ಇರುತ್ತಾರೆ.

ಆದರೆ ಮನೆಯನ್ನು ಕಟ್ಟಿಕೊಡುವ ದಣಿಕನಿಗೆ ಒಂದು ಮನೆಯಿಲ್ಲದಿರುವುದು ಬೆವರಿಗೆ ಇಲ್ಲದ ಬೆಲೆ ಇದು ಸಮಾಜದಲ್ಲಿರುವ ದಣಿಕರು ಮತ್ತು ಧನಿಕರ ನಡುವೆ ಇರುವ ದೂರವನ್ನು ಸೂಚಿಸುತ್ತದೆ. ಇದು ಸಂವಿಧಾನದ ಸಮಾನತೆಯ ಮೂಲಭೂತ ಹಕ್ಕಿಗೆ ಧಕ್ಕೆಯನ್ನು ತರುತ್ತದೆ. ಬೆವರಿನ ಬೆಲೆಯ ಈ ಕಥೆಯು ಬಂಡವಾಳಶಾಹಿಗಳ ಅಟ್ಟಹಾಸವನ್ನು ಸೂಚಿಸುತ್ತದೆ. ಉಳ್ಳವರು

ಉಳ್ಳದವರ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯನ್ನು, ಮನುಷ್ಯನಲ್ಲಿರುವ ಬುದ್ಧಿಶಕ್ತಿಯೂ ಮೋಸವಾಗಿ ಪರಿವರ್ತನೆಯಾಗುತ್ತಿರುವುದನ್ನು ತೋರಿಸುತ್ತದೆ. ಕಷ್ಟಪಟ್ಟು ಬೆವರನ್ನು ಸುರಿಸಿದರೂ ಸರಿಯಾದ ಕೂಲಿಯಿಲ್ಲದೆ ಸರಿಯಾದ ಆಹಾರ ವಸತಿಯಿಲ್ಲದಿರುವುದಕ್ಕೆ ಕಾರಣವನ್ನು ಇದಕ್ಕೆ ಪರಿಹಾರವೇನು ಎಂಬುದನ್ನು ಸಹ ಈ ಕಥೆಯು ಶೇಷಯ್ಯನ ಮೂಲಕವಾಗಿ ಬೇಡಿಸುತ್ತಿದೆ. ಇದು ಕೇವಲ ಶೇಷಯ್ಯನೊಬ್ಬನ ಜೀವನ ಸಮರವಲ್ಲ, ಸಮಸ್ತ ಶೋಷಿತವರ್ಗದವರ ಒಳಧ್ವನಿಯನ್ನು ಈ ಕತೆಯು ಎತ್ತಿ ಹಿಡಿಯುತ್ತಿದೆ.

ಶೋಷಣೆ ಮಾಡುವವರು ನಿರಂತರವಾಗಿ ಶೋಷಣೆಯನ್ನು ಮಾಡುತ್ತಲೇ ಇರುವಾಗ ದಲಿತ ಬಲಿತನಾಗುವುದಾದರೂ ಹೇಗೆ...? ಯಾವಾಗ...? ದಲಿತರ ಅಭಿವೃದ್ಧಿಯೇ ದೇಶದ ಅಭಿವೃದ್ಧಿ. ಯಾರೂ ಮೇಲಲ್ಲ, ಯಾವ ವೃತ್ತಿಗಳೂ ಕೀಳಲ್ಲ. ಎಲ್ಲರಿಗೂ ಎಲ್ಲ ವೃತ್ತಿಗಳಿಗೂ ತನ್ನದೆಯಾದ ಮಹತ್ವವಿದೆ. ಸಾಮಾಜಿಕ ಮನ್ನಣೆ ದೊರೆಯಬೇಕಾಗಿರುವುದು ಪ್ರಸ್ತುತ ಸಮಾಜಕ್ಕೆ ಅನಿವಾರ್ಯವಾಗಿದೆ. ಪ್ರತಿಯೊಂದು ಜೀವಿಗೂ ಸಹಜವಾಗಿ ಜೀವಿಸುವ ಹಕ್ಕು ಇದೆ. ಅದರಡಿಯಲ್ಲಿ ಎಲ್ಲರೂ ಎಲ್ಲವೂ ಸಮಾನವಾಗಿರಬೇಕು. ವ್ಯಕ್ತಿ ವ್ಯಕ್ತಿಗಳ ನಡುವೆ ವೃತ್ತಿ ವೃತ್ತಗಳ ನಡುವೆ ಅಂತರ ನಿಲ್ಲಬೇಕು. ಪ್ರತಿಯೊಬ್ಬ ವ್ಯಕ್ತಿಗೂ ಆ ವ್ಯಕ್ತಿಯ ವೃತ್ತಿಗೂ ತಕ್ಕ ಬೆಲೆ ಸಿಗಲೇಬೇಕು. ಬೆವರಿಗೆ ಬೆಲೆ ಇಲ್ಲವಾದರೆ ಸಮಾಜದ ಅಸ್ಥಿರತೆಯನ್ನು ಹೊಂದುತ್ತದೆ. ಅಸಮಾನತೆನೆಯ ಅಸಮಧಾನ ಹೆಚ್ಚಾದಾಗ ರಾಷ್ಟ್ರದ ಐಕ್ಯತೆ ಬರಿದಾಗುತ್ತಾ ಹೋಗುತ್ತದೆ. ಇದು ರಾಷ್ಟ್ರವನ್ನು, ಸಮಾಜವನ್ನು, ಕುಟುಂಬವನ್ನು, ವ್ಯಕ್ತಿಯನ್ನು, ಅಭಿಮಾನ ಹೀನರನ್ನಾಗಿಸುತ್ತದೆ. ಆದ್ದರಿಂದ ರಾವೂರಿ ಭರಧ್ವಾಜರವರು 'ಬೆವರಿನ ಬೆಲೆ' ಕಥೆಯಲ್ಲಿ ಶ್ರಮಿಕನ ಶ್ರಮದ ಮಹತ್ವವನ್ನು ಕಥೆಯ ಹಂದರದ ಮೂಲಕ ಉಲ್ಲೇಖಿಸಿದ್ದಾರೆ.

ಶ್ರಮಪಡುತ್ತಿರುವುದು ದಲಿತರು ಅದರ ಪ್ರತಿಫಲವನ್ನು ಅನುಭವಿಸುತ್ತಿರುವುದು ಬಲಿಷ್ಠರೆಂಬ ಶ್ರೀಮಂತರು ಇದರಿಂದಾಗಿ ಬಡವರ ಬೆವರಿನ ಬೆಲೆಯು ಉಳ್ಳವರ ಪಾಲಾಗುತ್ತಿದೆ. ಬಡವರು ಬಡವರಾಗಿಯೇ ಶ್ರಮವಹಿಸಿ ತಮ್ಮ ಶ್ರಮವನ್ನು ಇತರರ ಶ್ರೇಯಸ್ಸಿಗಾಗಿ ಶ್ರಮಿಸಬೇಕಾದ ದುಸ್ಥಿತಿಯನ್ನು ಈ 'ಬೆವರಿನ ಬೆಲೆ' ಕಥೆಯು ಅನಾವರಣಗೊಳಿಸುತ್ತದೆ. ಬೆವರನ್ನು ಸುರಿಸಿ ಕಷ್ಟಪಟ್ಟು ದುಡಿಯುವ ವರ್ಗದವರು ಬೆಲೆಯಿಲ್ಲದಂತೆ ನಿರಾಶ್ರಿತರಾಗಿ ಬದುಕುತ್ತಿದ್ದಾರೆ. ಅವರ ಶ್ರಮವನ್ನು ಪಡೆದುಕೊಂಡು ಅವರನ್ನೆ ಬಂಡವಾಳಶಾಹಿಗಳು ಶೋಷಣೆಯನ್ನು ಮಾಡುತ್ತಿದ್ದಾರೆ ಎಂಬ ಸತ್ಯಾಂಶವನ್ನು ಪ್ರಸ್ತುತ ದಲಿತರ ಸಾಮಾಜಿಕ ಜೀವನವನ್ನು ಶೇಷಯ್ಯನ ಪಾತ್ರದ ಮೂಲಕ ಕಥೆಗಾರರು ವ್ಯಕ್ತಪಡಿಸಿದ್ದಾರೆ. ದುಡಿಯುವವನಿಗೆ ಸರಿಯಾದ ಕನಿಷ್ಠ ವೇತನ ಸಿಗದೆ ತನ್ನ ಕುಟುಂಬವನ್ನು ನಿರ್ವಹಿಸಿಕೊಳ್ಳಲು ಸಾಧ್ಯವಾಗದೆ, ಬಡತನದಲ್ಲಿಯೇ ಬೆಂದು ಬದುಕಬೇಕಾದ ಸ್ಥಿತಿಯನ್ನು ಬಂಡವಾಳಶಾಹಿಗಳು ನಿರ್ಮಿಸಿದ್ದಾರೆ.

ಇದರಿಂದಾಗಿ ದಲಿತರಿಗೆ ಆರ್ಥಿಕ ಶೋಷಣೆಯಾಗಿರುತ್ತದೆ. ಆಳಾಗಿ ದುಡಿಯುವವನು ಅರಸನಾಗಿಲ್ಲ ಅರಸನಾಗಿರುವವರು ಎಂದೂ ಆಳಾಗಿ ದುಡಿಯುವುದಿಲ್ಲ ಇದು ಸಮಾಜದಲ್ಲಿರುವ

ಅಸಮಾನತೆಯ ಸಂಕೇತವಾಗಿರುತ್ತದೆ. ಆಳಾಗಿ ದುಡಿಯುತ್ತಿರುವ ಶ್ರಮಿಕರ ಬೆವರಿನಿಂದಲೇ ಅರಸನಾಗಿ ಮೆರೆಯುತ್ತಿದ್ದಾರೆ. ಅದೇ ಅರಸರು ಆಳಿನ ಶ್ರಮದಿಂದ ಕೋಟೆ, ಬಂಗಲೆಗಳನ್ನು ಕಟ್ಟಿಸಿಕೊಂಡು, ಶ್ರಮಿಕರಿಗೆ ಮನೆ ಇಲ್ಲದಂತೆ ಮಾಡಿ ನಿರಾಶ್ರಿರನ್ನಾಗಿ ಮಾಡಿದ್ದಾರೆ. ಇದು ಶೇಷಯ್ಯನ ಜೀವನವೇ ಆಗಿರುತ್ತದೆ. ತಾನು ಮನೆಯನ್ನು ಕಟ್ಟುವ ಕಾಯಕದಲ್ಲಿ ತನ್ನ ಇಡೀ ಜೀವನವನ್ನೇ ಕಳೆದಿದ್ದಾನೆ. ತಾನು ಮಾತ್ರ ವಾಸಿಸುವುದಕ್ಕೆ ಮನೆಯಿಲ್ಲದೆ ತನ್ನ ಬದುಕನ್ನು ಕಳೆಯುತ್ತಿದ್ದಾನೆ. ಬಂಡವಾಳಶಾಹಿಗಳು ತಮ್ಮ ಅಗತ್ಯತೆ ಮೀರಿ ಮನೆಗಳನ್ನು ಕಟ್ಟುತ್ತಿದ್ದಾರೆ. ಆದರೆ ಶ್ರಮಿಕರು ಗುಡಿಸಲಿಲ್ಲದೆ ನರಳಾಡುತ್ತಿದ್ದಾರೆ. ಇದು ಸಾಮಾಜಿಕ ಅಸಮಾನತೆಯಾಗಿದ್ದು, ಇದನ್ನು ಹೊಗಲಾಡಿಸಲು ಶ್ರಮಿಕರಿಗೆ ಕನಿಷ್ಠ ವೇತನ ಜಾರಿಯಾಗಬೇಕು.

ಅವರಿಗೆ ಜೀವನ ಭದ್ರತೆಯನ್ನು ಬದಗಿಸಬೇಕು. ಇತರರಂತೆ ಅವರು ಮೂಲಭೂತ ಸೌಕರ್ಯಗಳನ್ನು ಪಡೆದುಕೊಳ್ಳಬೇಕು. ಶ್ರಮಿಕರು ಆರ್ಥಿಕವಾಗಿ ಸಬಲರಾಗುವಂತಹ ಕಾಯಿದೆಗಳನ್ನು ಆಳುವ ಸರಕಾರ ಜಾರಿಗೆತಂದು ಅವುಗಳನ್ನು ಅನುಷ್ಠಾನಗೊಳಿಸಬೇಕು. ಬಂಡವಾಳಶಾಹಿಗಳ ಕುಕಂತ್ರದಿಂದ ಬಡತನದ ಬೇಗೆಯಲ್ಲಿ ನರಳುತ್ತಿರುವ ಬಡವರಿಗೆ ವಸತಿ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕಾಗಿರುವುದು ಸರಕಾರದ ಕರ್ತವ್ಯವಾಗಿರುತ್ತದೆ. ಸಂವಿಧಾನಾತ್ಮಕ ಆಡಳಿತವ್ಯವಸ್ಥೆ ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು ಎಂಬ ನಿಯಮದಂತೆ ಆರ್ಥಿಕವ್ಯವಸ್ಥೆ ಹಂಚಲ್ಪಡಬೇಕು. ಕೇಲವೇ ಜನರಲ್ಲಿ ಶೇಖರಣೆಯಾಗಿರುವ ಸಂಪತ್ತು ಹರಿದು ಅದು ಎಲ್ಲರಿಗೂ ಸಿಗುವಂತಾಗಬೇಕು. ಆದರೆ ಅಧಿಕಾರಿಶಾಹಿಗಳು ಬಂಡವಾಳಶಾಹಿಗಳಿಗೆ ಗುಲಾಮರಾಗಿ ಬಡವರುಪಡುತ್ತಿರುವ ಸಮಸ್ಯೆಗಳನ್ನು ಕಡೆಗಣಿಸಿ ಬಡವರನ್ನಾಗಿಯೇ ಮಾಡುತ್ತಿದ್ದಾರೆ. ಬಡವರ ಕಣ್ಣೀರು ತಪ್ಪದೇ ಅವರ ಬದುಕು ಶೋಷಣೆಯಲ್ಲಿ ತೇಲಾಡುತ್ತಿದೆ.

ಇಂತಹ ಸೂಕ್ಷ್ಮ ವಿಚಾರಗಳನ್ನು ಕಥೆಗಾರರು ಗ್ರಹಿಸಿಕೊಂಡು ಈ ಕತೆಯ ಮೂಲಕ ದಲಿತರು ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆದುಕೊಳ್ಳಲು ಹೇಗೆ ವಿಫಲರಾಗಿದ್ದಾರೆ ಎಂಬುವುದನ್ನು ತೋರಿಸುತ್ತ ದಲಿತರ ಅಸಹಾಯಕ ಜೀವನವನ್ನು ಉಪಯೋಗಿಸಿಕೊಂಡು ಬಂಡವಾಳಶಾಹಿಗಳು ಹೇಗೆ ದಲಿತರನ್ನು ವಂಚನೆಮಾಡಿ ಅವರು ಪಡುತ್ತಿರುವ ಶ್ರಮಕ್ಕೆ ಸರಿಯಾದ ಬೆಲೆಯನ್ನು ನೀಡದೆ ಬಡತನದಲ್ಲಿ ಮಡಿಯುವಂತೆ ಮಾಡಿದ್ದಾರೆ ಎಂಬುವುದನ್ನು ಮಾರ್ಕ್ಸವಾದ ಮತ್ತು ಲೋಹಿಯವಾದದ ನೆಲೆಯಿಂದ ಪ್ರತಿಪಾದಿಸಿದ್ದಾರೆ. ಇದು ಎಲ್ಲ ಶ್ರಮಿಕರ ಬೆವರಿನ ಹನಿಯ ವೇದನೆಯ ಕೂಗಾಗಿರುತ್ತದೆ.

ಕೆ.ಎಸ್.ಕರುಣಾಕರನ್‌ರವರು ಅನುವಾದ ಮಾಡಿದ 'ಮಲಿಯಾಳಂ ಕಥೆಗಳು' ಎಂಬ ಕಥಾ ಸಂಕಲನದಲ್ಲಿ ಪೊನ್ ಕುನ್ನಂ ವರ್ಕಿಯವರು ಬರೆದಂತಹ 'ದನಿಗೈಯುವ ನೇಗಿಲು' ಎಂಬ ಮಲಿಯಾಳಂ ಕಥೆಯು ಒಂದು ಹಳ್ಳಿಯ ಬಡರೈತನ ಜೀವನ ವೃತ್ತಾಂತವನ್ನು ವಿವರಿಸುತ್ತದೆ. ಒಬ್ಬ ಹಳ್ಳಿ ರೈತನ ಭಾವನಾತ್ಮಕ ಪ್ರಪಂಚ, ಆತನಿಗಿರುವ ಜೀವಿಗಳ ನಡುವೆ ಇರುವ ಋಣದ ಸಂಬಂಧ, ಭೂಮಿಯನ್ನೇ ತನ್ನ ಉಸಿರನ್ನಾಗಿಸಿಕೊಂಡು ಬದುಕುವ ಆತನ ಬದುಕಿನಕ್ರಮ, ವರುಣನನ್ನೇ

ಆತನು ಧ್ಯಾನಿಸುವ ದೇವರು. ಹೀಗೆ ಒಬ್ಬ ರೈತ ನಂಬಿಕೊಂಡ ಬದುಕಿನಲ್ಲೂ ಶೋಷಣೆಯನ್ನು ಮಾಡುವ ದಲ್ಲಾಳಿಗಳ ದರ್ಬಾರು, ಅವರುಗಳಿಂದ ಒಬ್ಬ ರೈತನ ಕುಟುಂಬ ಹೇಗೆ ಬಡತನಕ್ಕೆ ಸಿಲುಕಿ ನಡುಗುತ್ತದೆ ಎಂಬೆಲ್ಲಾ ಪ್ರಮುಖ ಅಂಶಗಳನ್ನು ಈ ದನಿಗೈಯುವ ನೇಗಿಲು ಕಥೆಯು ಒಳಗೊಂಡಿರುತ್ತದೆ. 'ಬಸವನ ಹುಚ್ಚ' ಎಂದು ಊರಿನ ಇತರ ರೈತರಿಂದ ಕರೆಸಿಕೊಂಡಿರುವ ಔಸೇಪಣ್ಣನಿಗೆ ಬಸವಣ್ಣನೆಂದರೆ ಪಂಚಪ್ರಾಣ ಅದರ ಹೆಸರು 'ಕಣ್ಣ' ಅದೇ ಆತನ ಜೀವಾಳ. ಔಸೇಪಣ್ಣನ ಜೊತೆ ಗದ್ದೆ ಉಳುವಾಗ, ಗುಂಟೆ ಒಡೆಯುವಾಗ, ಒಕ್ಕಲು ಹಾಕುವಾಗ ಎಲ್ಲೆಂದರೂ ಸೈ ಎನಿಸಿಕೊಂಡು, ಔಸೇಪಣ್ಣ ಯೋಚಿಸಿದ್ದನ್ನೆ 'ಕಣ್ಣ' ತಿಳಿದುಕೊಂಡು, ಆತನ ಉದ್ದೇಶದಂತೆ ಎಲ್ಲ ಕೆಲಸವನ್ನು ಮಾಡುವ 'ಕಣ್ಣ' ಬೇರೆ ಎತ್ತುಗಳಿಗೆಲ್ಲ ನೇತಾರನಾಗಿದ್ದನು.

ಸ್ನೇಹಮಹಿಯಾದ 'ಕಣ್ಣ' ಔಸೇಪಣ್ಣನ ಹೃದಯದ ಪ್ರೀತಿಗೆ ತಲೆಬಾಗುತ್ತಿತ್ತು. ಔಸೇಪಣ್ಣ ತನ್ನ ಎತ್ತುಗಳ ಆಹಾರಕ್ಕಾಗಿ ಎಲ್ಲೆಂದರಲ್ಲಿ ಹುಡುಕಿಕೊಂಡು ಹೋಗಿ ತರುತ್ತಿದ್ದನು. ಎತ್ತುಗಳ ಹೊಟ್ಟೆ ತುಂಬಿದರೆ ರೈತನ ಕುಟುಂಬ ನೆಮ್ಮದಿಯಾಗಿರುವುದು ಎಂದು ನಂಬಿಕೊಂಡವನು. ಕೊಟ್ಟಿಗೆಯಲ್ಲಿ ಎತ್ತುಗಳು ಉಪವಾಸವಿದ್ದರೆ ಆ ಮನೆಯ ಸಂಪತ್ತೆ ನಶಿಸಿ ಹೋಗುತ್ತದೆ ಎಂದು ತಿಳಿದವನು. ತನ್ನ ಕಣ್ಣನ ಶರೀರವನ್ನು ಪ್ರತಿದಿನ ತೊಳೆಯುತ್ತಾ, ಕೈಗಳಿಂದ ಸವರುತ್ತ ಅಷ್ಟೊಂದು ಪ್ರೀತಿಯಿಂದ ಕಣ್ಣನನ್ನು ತನ್ನ ಮನೆಯ ಮಗನಂತೆ ನೋಡಿಕೊಳ್ಳುತ್ತಿದ್ದನು. ಕಣ್ಣ ಮತ್ತು ಔಸೇಪಣ್ಣನ ಸಂಬಂಧ ತಂದೆ ಮಕ್ಕಳ ಸಂಬಂಧವಾಗಿತ್ತು. ಹೀಗೆ ಹತ್ತಿಪ್ಪತ್ತು ವರ್ಷಗಳಿಂದ ಬೇಸಾಯದಲ್ಲಿ ಔಸೇಪಣ್ಣ ತನ್ನನ್ನು ತೊಡಗಿಸಿಕೊಂಡಿದ್ದನು. ಭೂಮಿಯನ್ನು ನಂಬಿಕೊಂಡು ಸದಾ ದುಡಿಯುತ್ತಿರುವ ಒಳ್ಳೇಯ ಬೇಸಾಯಗಾರನಾಗಿದ್ದನು. ಆದರೇನು ಆತನಿಗೂ ವಯಸ್ಸಾಯಿತು, ದೃಷ್ಟಿಯು ಮಂಕಾಯಿತು. ಮೈಕೈ ಚರ್ಮ ಮುದುಡಿಕೊಂಡಿತು. ನಿತ್ಯ ವಾತರೋಗವು ಸಂಗಾತಿಯಾಯಿತು. ಸರಿಯಾದ ಸಮಯಕ್ಕೆ ಮಳೆ ಇಲ್ಲದ ಕಾರಣ ಔಸೇಪಣ್ಣನ ಇಡೀ ಕುಟುಂಬವೇ ಬಡತನದ ಹಸಿವಿನಿಂದ ನರಳಾಡುತ್ತಿತ್ತು.

"ಓಬೀರಾಯನ ಕಾಲದಿಂದಲೇ ಬಳುವಳಿಯಾಗಿ ಬಂದಿದ್ದಂತಹ ಕೃಷಿ ಉಪಕರಣಗಳನ್ನೆ ಅವನು ಉಪಯೋಗಿಸಬೇಕಾಗಿದೆ. ಮಣ್ಣಿನ ಸತ್ವ ಕುಗ್ಗಿದೆ, ಗೊಬ್ಬರವಂತೂ ಇಲ್ಲವೇ ಇಲ್ಲ. ಋಗ್ವೇದಗಾನಗಳೊಂದಿಗೆ ಔಸೇಪಣ್ಣನ ಜೀವನ ಸಾಗುತ್ತಿತ್ತು. ತನ್ನ ಲೋಕಾಂತ ಯಜ್ಞವಾದ ಕೃಷಿಗೆ ನೆರವೀಯಲು ವರುಣದೇವನನ್ನು ಮೇಘ ದೇವನನ್ನೂ ಪ್ರಾರ್ಥಿಸುತ್ತಿದ್ದನು. ಪ್ರಾರ್ಥನಾ ಯುಗದ ಆ ನಿಸ್ಸಹಾಯತೆಯಿಂದ ಇಂದಿಗೂ ಆತ ಮೇಲೆದ್ದಿಲ್ಲ. ಆದರೆ ಆತನನ್ನು ಮೋಸಗೋಳಿಸುತ್ತಿರುವ ವ್ಯಾಪಾರಿಗಳೂ ಅವರ ಶೋಷಣೆಯ ಮಾರ್ಗಗಳೂ ಪರಿವರ್ತನೆ ಹೊಂದಿವೆ."[೨] ಹೀಗೆ ಔಸೇಪಣ್ಣನ ಜೀವನ ದುರಂತಕ್ಕೆ ಸಿಲುಕಿಕೊಳ್ಳುತ್ತದೆ. ತನ್ನ ಜೀವದಂತ್ತಿದ್ದ ಕಣ್ಣನ ಮಾರಾಟ ತನ್ನ ಜೀವವನ್ನೆ ಮಾರಾಟ ಮಾಡಿದಂತಾಗಿದೆ. ಔಸೇಪಣ್ಣನ ಹೆಂಡತಿ ಮಕ್ಕಳಿಗೆ ಹಸಿವಿನ ಬಾಧೆ ಕಾಡತೊಡಗಿದೆ. ಆತನ ಮಗಳು ಮರಿಯಕ್ಕನಿಗೆ ತೊಟ್ಟುಕೊಳ್ಳಲು ಸೀರೆಗಳಿಲ್ಲ. ಕಣ್ಣನ ಮಾರಾಟದಿಂದ ಬಂದ ಇಪ್ಪತ್ತು ರೂಪಾಯಿಗಳಿಂದ ಸೀರೆ ತರಲು ಔಸೇಪಣ್ಣ ಪೇಟೆಗೆ ಹೋಗುತ್ತಾನೆ.

ಇಡೀ ಜೀವನವೇ ಸಾಕಾಗಿದೆ. ಬರೀ ಯಾತನೆಯ ಬದುಕಿನಲ್ಲಿ ಕಣ್ಣನನ್ನು ಕಳೆದುಕೊಂಡು ಒಲ್ಲದ ಮನಸ್ಸಿನಿಂದ ಪೇಟೆಯಲ್ಲಿ ನಿಂತುಕೊಂಡಾಗ, ಅಲ್ಲಿ ನಡೆಯುತ್ತಿರುವ ದಲ್ಲಾಳಿಗಳ ಮೋಸಗಾರಿಕೆ ಹೇಗೆ ಬಡರೈತರನ್ನು ಶೋಷಣೆಯಲ್ಲಿ ತೊಡಗಿಸುತ್ತಾರೆ, ತಾವು ನಮ್ಮಿಂದ ತೆಗೆದುಕೊಳ್ಳುವ ಬೆಲೆಗೂ ಅವರು ತೆಗೆದುಕೊಂಡು ಮತ್ತೆ ನಮಗೆ ಕೊಡುವ ಬೆಲೆಗೂ ಅಜಗಜಾಂತರ ವ್ಯತ್ಯಾಸವಿರುತ್ತದೆ. ಯಾಕೆ ಊಳುವವನು ಒಡೆಯನಾಗಿಲ್ಲ ಏನು ಶ್ರಮವನ್ನೇ ಪಡದ ದಲ್ಲಾಳಿಗಳು ನಡುವೆ ಸುಳಿದಾಡುತ್ತ ಪೇಟೆಯಲ್ಲಿ ಎಷ್ಟೊಂದು ಮೋಸವನ್ನು ಮಾಡಿ, ಬಡವನನ್ನು ಬಡವನನ್ನಾಗಿಯೇ ಮಾಡುವ ತಂತ್ರಗಾರಿಕೆಯನ್ನು ರೂಪಿಸಿರುತ್ತಾರೆ. ಇದೊಂದು ಉಳ್ಳವರವರ್ಗ ಉಳ್ಳದವರ ಮೇಲೆ ಮಾಡುವ ಶೋಷಣೆಯಾಗಿದೆ. ಬುದ್ಧಿಶಕ್ತಿಯನ್ನೆ ಒಂದು ಅಸ್ತ್ರವನ್ನಾಗಿಸಿಕೊಂಡು ಅರಿಯದ ರೈತರಿಗೆ ಸರಿಯಾದ ವಸ್ತುಗಳಿಗೆ ಸರಿಯಾದ ಬೆಲೆಯನ್ನು ಕೊಡದೆ ತಾವೇ ಶ್ರೀಮಂತರಾಗುತ್ತಿದ್ದಾರೆ.

ಇತ್ತ ಕಷ್ಟಪಟ್ಟು ದುಡಿದ ಬೆವರಿಳಿಸಿದ ರೈತ ಬಡತನದ ಮನೆಯಲ್ಲಿ ಹಸಿವಿನಿಂದ ನರಳಾಡುವಂತಾಗಿದೆ. ಒಂದು ಒಳ್ಳೆಯ ಭಾವಾನಾತ್ಮಕ ಪ್ರಪಂಚಕ್ಕಿರುವ ಶಿಕ್ಷೆಯೇ ಈ ಶೋಷಣೆಯೂ ಎಂಬ ಮಹತ್ತರವಾದ ಪ್ರಶ್ನೆಯೊಂದನ್ನು ಈ 'ದನಿಗೈಯುವ ನೇಗಿಲು' ಕಥೆಯು ಪಸರಿಸುತ್ತದೆ. ಇಪ್ಪತ್ತು ರೂಪಾಯಿಗಳನ್ನು ಪೇಟೆಯಲ್ಲಿ ತಂದು ನಿಂತಿದ್ದ ಔಸೇಪಣ್ಣನಿಗೆ ನಗರಸಭೆಯವರು ಹತ್ತಾರು ಎತ್ತುಗಳಿಗೆ ಮುದ್ರೆಗಳನ್ನು ಹಾಕಿಕಟ್ಟಿದ್ದರು. ಅವುಗಳನ್ನು ಮಾಂಸದ ಮಾರಾಟಕ್ಕಾಗಿ ಕಳಿಸುವುದಕ್ಕಾಗಿ ಸಿದ್ಧತೆ ಮಾಡಿಕೊಂಡಿರುವ ಸಂದರ್ಭದಲ್ಲಿ, ಆ ಎತ್ತುಗಳ ಸಾಲುಗಳಲ್ಲಿ ಔಸೇಪಣ್ಣನ ಕಣ್ಣಿಗೆ ತನ್ನ ಪ್ರೀತಿಯ 'ಕಣ್ಣ' ಕಾಣಿಸಿಕೊಳ್ಳುತ್ತಾನೆ. ತನ್ನ ಜೀವವೇ ತನಗೆ ಸಿಕ್ಕಂತಾಗುತ್ತದೆ. ತಂದ ಇಪ್ಪತ್ತು ರೂಪಾಯಿಗಳಲ್ಲಿ ಹೆಂಡತಿ ಮಕ್ಕಳಿಗೆ ಸೀರೆಯನ್ನು ತರದೆ, ಅದೇ ಇಪ್ಪತ್ತು ರೂಪಾಯಿ ಕೊಟ್ಟು ಮನೆಗೆ ಕಣ್ಣನನ್ನು ಕರೆತರುತ್ತಾನೆ. ಹೆಂಡತಿ ಮಕ್ಕಳು ಪ್ರಶ್ನಿಸಿದಾಗ ಔಸೇಪಣ್ಣ ಕಣ್ಣನನ್ನ ಮನೆಯ ಮಗನಲ್ಲವೆ ಹೇಗೆ ಅವನನ್ನು ಮಾರಾಟಕ್ಕಾಗಿ ಪೇಟೆಯಲ್ಲಿ ಬಿಟ್ಟು ಬರಲಿ ಎನ್ನುತ್ತಾನೆ. 'ಕಣ್ಣ' ಕೊನೆಗೆ ಈ ಔಸೇಪಣ್ಣನ ಬಡತನವನ್ನು ನೋಡದೆ ಕಣ್ಣು ಮುಚ್ಚಿಕೊಳ್ಳುತ್ತದೆ.

ಆ ಬಡ ರೈತನ ಹೃದಯ ಗೆದ್ದಲು ಹತ್ತಿದ ನೇಗಿಲು, ಹೇಳಲಾಗದ ಎದೆ ನೋವಿನಿಂದ ದೈನಿಗೈಯುತ್ತಿರುವ ರೀತಿ ಶೋಷಣೆಗೈಯುವ ವರ್ಗವನ್ನೇ ಧಿಕ್ಕರಿಸುತ್ತಿದೆ. ನಂಬಿಕೆಯನ್ನು ನಂಬಿಕೊಂಡು ಬದುಕುತ್ತಿರುವುದು ಅದು ರೈತ ಮಾತ್ರ. ನಂಬಿಕೆಯೇ ಆತನಿಗೆ ದೇವರೆಂದು ಹೇಳಬಹುದು. ತಾನು ಬದುಕುವುದೇ ನಂಬಿಕೆಯಿಂದ ಆ ನಂಬಿಕೆಯೇ ಆತನ ಜೀವಾಳವಾಗಿರುತ್ತದೆ. ಇದರಿಂದಾಗಿ ನಂಬಿಕೊಂಡು ಬದುಕುವವನಿಗೆ ಮೋಸ ವಂಚನೆಗಳು ತಿಳಿದಿರುವುದಿಲ್ಲ. ಸದಾ ಕಾಯಕದಲ್ಲಿಯೇ ಔಸೇಪಣ್ಣ ತನ್ನನ್ನು ತಾನು ತೊಡಗಿಸಿಕೊಂಡು ಭೂಮಿಯನ್ನು, ಮಳೆಯನ್ನು, ಬೆಳೆಯನ್ನು ನಂಬಿಕೊಂಡು ತನ್ನ ಜೀವನವನ್ನು ವ್ಯವಸಾಯದಲ್ಲಿಯೇ ಕಳೆಯುತ್ತಾನೆ. ತನ್ನ ಈ ಪ್ರಪಂಚವನ್ನು ಬಿಟ್ಟು ಮತ್ತೊಂದು ಲೋಕದ ತಿಳುವಳಿಕೆ ಆತನಿಗೆ ಬೇಕಾಗಿರುವುದಿಲ್ಲ. ಇದರಿಂದ ಆತ ಸತ್ಯವಂತನೂ ಕಾಯಕ ನಿಷ್ಠನೂ ಆಗಿ ತನ್ನ ಬದುಕನ್ನು ನಡೆಸುತ್ತಿರುತ್ತಾನೆ. ಇಂತಹ ನಂಬಿಕೆಗಾರನಾದ ಈ

ಕಥೆಯ ನಾಯಕ ಔಸೇಪಣ್ಣನು ತಾನು ತನ್ನ ಭೂಮಿಯನ್ನು ನಂಬಿದಷ್ಟೇ ತಾನು ಸಾಕಿದ್ದ 'ಕಣ್ಣ' ಎಂಬ ಎತ್ತನ್ನು ನಂಬಿಕೊಂಡು ಬದುಕುತ್ತಿರುತ್ತಾನೆ.

'ಕಣ್ಣ' ಎಂದರೆ ಆತನಿಗೆ ಪಂಚಪ್ರಾಣ ಆದರೆ ಮನುಷ್ಯನನ್ನು ಮನುಷ್ಯ ನಂಬಲಾರದಂತಹ ಪರಿಸ್ಥಿತಿಯಲ್ಲಿ, ಬಸವಣ್ಣನನ್ನು ನಂಬಿಕೊಂಡು ಔಸೇಪಣ್ಣ ಬದುಕುತ್ತಿರುವುದು ರೈತರಲ್ಲಿ ಇರುವ ಸಹಜ ಮನೋಧರ್ಮವನ್ನು ತೋರಿಸುತ್ತದೆ. ಔಸೇಪಣ್ಣ ತನಗಾಗಿರುವ ತೊಂದರೆಗಳಿಂದ ಮಳೆಬಾರದೆ ಹೊಲ ಬೀಳಾಗಿ ಬಿದ್ದಿರುವುದು, ಹುಲ್ಲು ಸಿಗದೆ ಇರುವುದು, ಮನೆಯಲ್ಲಿ ಹೆಂಡತಿ ಮಕ್ಕಳಿಗೆ ಬಟ್ಟೆ ಇಲ್ಲದಿರುವುದು, ತನ್ನ ಹಸಿದ ಹೊಟ್ಟೆಗೆ ಯಾವ ಧಾನ್ಯಗಳು ಮನೆಯಲ್ಲಿ ಇಲ್ಲದಿರುವುದು, ತನ್ನ ಕಣ್ಣನನ್ನು ಪೇಟೆಯಲ್ಲಿ ಮಾರುವಂತಹ ದುಸ್ಥಿತಿಯು, ಇಂದಿನ ಸರಕಾರದ ಆಡಳಿತ ವ್ಯವಸ್ಥೆಯ ರೈತಾಪಿ ಜನರ ಸ್ಥಿತಿಗತಿಗಳ ಕುರಿತು ಆಲೋಚನೆ ಮಾಡದೆ, ಅವರ ಸಂಕಷ್ಟಗಳಿಗೆ ಸ್ಪಂದನೆಯನ್ನು ನೀಡದೆ ರೈತರು ಆತ್ಮ ಹತ್ಯೆಗೆ ಶರಣಾಗುತ್ತಿರುವ ಸನ್ನಿವೇಶಗಳಿಗೆ ಹೋಲಿಕೆಯಾಗಿ ಈ ಘಟನೆಯನ್ನು ಕಥೆಗಾರರು ತಮ್ಮ ಕಥೆಯಲ್ಲಿ ಚಿತ್ರಿಸಿದ್ದಾರೆ.

ರೈತರು ಆರ್ಥಿಕ ತೊಂದರೆಗಳಿಗೆ ಒಳಗಾದಾಗ ಸರಕಾರದ ಆಡಳಿತವರ್ಗವು ಅವರ ಜೀವನ ಸ್ಥಿತಿಗತಿಗಳ ಬಗ್ಗೆ ಚಿಂತನೆ ನಡೆಸಬೇಕು. ಅವರಿಗೆ ಆರ್ಥಿಕ ಭದ್ರತೆಯನ್ನು ನೀಡಬೇಕು. ಯಾರೊಬ್ಬರೂ ಉಪವಾಸದಿಂದ ನರಳಿ ಸಾಯಬಾರದು. ರೈತನೇ ರಾಷ್ಟ್ರದ ಬೆನ್ನೆಲುಬು ಆಗಿದ್ದಾನೆಂದು ಹೇಳುವಾಗ, ಅವರಿಗೆ ಬಂದಂತಹ ಸಂಕಷ್ಟಗಳನ್ನು ಪರಿಹರಿಸಿಕೊಡಬೇಕು ಎಂಬುವ ಆಶಯವನ್ನು ಈ ಕಥೆಯ ಮೂಲಕ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ರೈತರಿಗೆ ದಲ್ಲಾಳಿಗಳು ಮಾಡುತ್ತಿರುವ ಮೋಸನಿಲ್ಲಬೇಕು. ಶ್ರಮವನ್ನು ಪಟ್ಟ ರೈತನಿಗೆ ಒಳ್ಳೆಯ ಬೆಲೆ ಸಿಗಬೇಕು. ರೈತನ ವಸ್ತುಗಳಿಗೆ ರೈತನೇ ಬೆಲೆಯನ್ನು ನಿರ್ಧರಿಸುವಂತಾಗಬೇಕು. ಬಡರೈತರು ಆರ್ಥಿಕವಾಗಿ ಸಬಲರಾಗಿ ರಾಷ್ಟ್ರದ ಏಳಿಗೆಗಾಗಿ ಜೊತೆಯಾಗಬೇಕಾಗಿದೆ. ಹೀಗಾಗಿ ಸರಕಾರದ ಆಡಳಿತ ಅಧಿಕಾರಿಗಳು ರೈತರ ಸಮಸ್ಯೆಗಳನ್ನು ಅದಕ್ಕೆ ಮಾಡಬೇಕಾಗಿರುವ ಪರಿಹಾರಗಳನ್ನು ಕಾಲಕ್ಕೆ ತಕ್ಕಂತೆ ಪರಿಶೀಲನೆಗೆ ಒಳಪಡಿಸಬೇಕು.

ಬಡತನದ ಹಸಿವಿನಿಂದ ಅನ್ನ ಬೆಳದವನೇ ಅನ್ನದಿಂದ ಸತ್ತರೆ, ಆ ಅನ್ನವನ್ನು ಯಾವ ಶ್ರಮವಿಲ್ಲದೆಯೇ ಊಟ ಮಾಡಿದಂತಹ ಅಧಿಕಾರಿಶಾಹಿಗಳು ಬಂಡವಾಳಶಾಹಿಗಳು ಆತನ ಸಾವಿಗೆ ನೇರ ಕಾರಣವಾಗುತ್ತಾರೆ ಎಂಬ ಅಂಶವನ್ನು ಔಸೇಪ್ಪಣನ ಜೀವನದ ಹಿನ್ನೆಲೆಯಲ್ಲಿ ಕಥೆಗಾರರು ಮಾರ್ಕ್ಸವಾದದ ನೆಲೆಯಿಂದ ಇಲ್ಲಿ ತಿಳಿಸಿಕೊಟ್ಟಿದ್ದಾರೆ.

ಜಿ.ವೆಂಕಟಸುಬ್ಬಯ್ಯ ಮತ್ತು ರಾಮಚಂದ್ರ ಶರ್ಮ ರವರು 'ತಮಿಳು ಕಥಾ ಸಂಕಲನ' ಎಂಬ ಕಥಾ ಸಂಕಲನದಲ್ಲಿರುವ ಅಶೋಕ ಮಿತ್ರನ್‌ರವರು ಬರೆದಿರುವ 'ಕಾಲವೂ ಐದು ಮಕ್ಕಳೂ' ಎಂಬ ಕಥೆಯನ್ನು ಲಿಂಗದೇವರು ಹಳೆಮನೆಯವರು ಕನ್ನಡ ಅನುವಾದ ಮಾಡಿರುತ್ತಾರೆ. ಈ ಕಥೆಯು ಮಾರ್ಕ್ಸಿಸ್ಟ ಸಿದ್ಧಾಂತಗಳ ಹಿನ್ನೆಲೆಯನ್ನು ಹೊತ್ತುಕೊಂಡು ಈ ಕಥೆಯು ರಚನೆಯಾಗಿರುತ್ತದೆ. ಇದು

ಮಧ್ಯಮ ವರ್ಗದ ವಾಸ್ತವ ಬದುಕನ್ನು ಕುರಿತು ಪರೀಶೀಲನೆಯನ್ನು ನಡೆಸುತ್ತದೆ. ಬದುಕಿನ ಅತಿ ಸಾಮಾನ್ಯರನ್ನು ಕುರಿತು ಯಾವುದೇ ನಾಟಕೀಯತೆಯಿಲ್ಲದೆ, ಬಡ ಜನರು ದುರ್ಬಲರಾಗಿ ಬೀದಿಯಲ್ಲಿ ಬಿದ್ದುಕೊಂಡಿರುವವರ ಸಂಕಷ್ಟಗಳನ್ನು, ಅತೀ ಸೂಕ್ಷ್ಮವೆನಿಸುವ ಅಭಿವ್ಯಕ್ತಿಯ ಕ್ರಮದಲ್ಲಿ ದಲಿತ ದಮನಿತರ ಕೊನೆಯಿಲ್ಲದ ನೋವನ್ನು, ದನಿಯೆತ್ತದ ತಮ್ಮೊಳಗೆ ಸಹಿಸಿಕೊಂಡಿರುವ ಮುಗ್ಧ ಜನರ ಚಿತ್ರವಣಗಳನ್ನು ಈ 'ಕಾಲವೂ ಐದು ಮಕ್ಕಳೂ' ಎಂಬ ಕಥೆಯಲ್ಲಿ ಅಶೋಕ ಮಿತ್ರನ್‌ರವರು ಸಮರ್ಪಕವಾಗಿ ಕಟ್ಟಿಕೊಟ್ಟಿದ್ದಾರೆ. ಒಬ್ಬ ನಿರುದ್ಯೋಗಿ ಯುವಕ ತನ್ನ ಕೆಲಸಕ್ಕಾಗಿ ಪಡುವ ಕಷ್ಟಗಳನ್ನು, ಇವತ್ತಿನ ವಾಸ್ತವಿಕ ಸಮಾಜದಲ್ಲಿ ಇಡೀ ಕೆಳಸ್ಥರದಲ್ಲಿ ಅತ್ಯಂತ ದೀನರಾಗಿ ಬದುಕುತ್ತಿರುವವರು ಕೆಲಸಕ್ಕಾಗಿ ಪಡುವ ವೇದನೆಗಳನ್ನು, ಒಬ್ಬ ಯುವಕನನ್ನು ಕೇಂದ್ರಿಕರಿಸಿ ಅವರ ಸ್ಥಿತಿಗಳಲ್ಲಿರುವ ಸಂಕಷ್ಟಗಳನ್ನು ಈ ಕಥೆಯು ತೋರಿಸುತ್ತದೆ. ಯಾವುದೇ ಆಸ್ತಿಪಾಸ್ತಿಗಳಿಲ್ಲದೆ ಕೇವಲ ಕೆಲಸವನ್ನಾಶ್ರಯಿಸಿಕೊಂಡು ಬದುಕಬೇಕಾದವರ ಸ್ಥಿತಿ, ಕೆಲಸಕ್ಕಾಗಿ ಅಲೆಯುತ್ತಿರುವವರಿಗೆ ಅಲ್ಲಿ ಕೊಡುವ ತೊಂದರೆಗಳು, ಕೆಲಸವೇ ಇಲ್ಲದಂತಹ ಬದುಕನ್ನು ಸೃಷ್ಟಿಸಿದ ಆಳುವ ವರ್ಗದವರು, ನಿರುದ್ಯೋಗದ ಸಮಸ್ಯೆಯನ್ನು ಹುಟ್ಟುಹಾಕಿ ಯುವಕರನ್ನು ಮುದುಕರಂತೆ ಮಾಡಿ ಅವರ ಬದುಕನ್ನು ಅತಂತ್ರ ಮಾಡಿದ್ದಾರೆ.

ಭಿಕ್ಷೆಯನ್ನೆ ಒಂದು ಕೆಲಸವೆಂದುಕೊಂಡು ಹಸಿವಿನ ಹೊಟ್ಟೆಗಾಗಿ ಭಿಕ್ಷಾಟನೆಯಲ್ಲಿ ತೊಡಗಿರುವ ನಿರ್ಗತಿಕ ಅನಾಥಮಕ್ಕಳುಪಡುತ್ತಿರುವ ಸಂಕಷ್ಟದ ತೊಳಲಾಟವನ್ನು ಸಹ ಈ ಕಥೆಯು ಅಭಿವ್ಯಕ್ತಪಡಿಸುತ್ತದೆ. ಕುಳಿತುಕೊಂಡು ಉಣ್ಣಲು ಸಬಲರಿರುವವರೆಲ್ಲರೂ ಕೆಲಸ ಮಾಡುವುದಿಲ್ಲ. ಉಣ್ಣಲು ಅನ್ನವಿಲ್ಲದವರು ಹೊಟ್ಟೆಪಾಡಿಗಾಗಿ ಮಾಡಬೇಕೆಂದರೇ ಕೆಲಸವಿಲ್ಲ. ಇಂತಹ ಸ್ಥಿತಿ ನಿರ್ಮಾಣವಾಗಿರುವುದೇ ಈ ದೇಶದ ಪ್ರಗತಿಯ ಹಿನ್ನಡೆಗೆ ಕಾರಣವಾಗಿರುತ್ತದೆ. ಇದು ಹೀಗೆಯೇ ಮುಂದುವರೆದರೆ ಅಭಿವೃದ್ಧಿ ಹೊಂದುತ್ತಿರುವ ದೇಶವಾಗಿ ಮುಂದುವರಿಯುತ್ತಿರುತ್ತದೆಯೇ ಹೊರತು, ಅಭಿವೃದ್ದಿ ಹೊಂದಿದ ರಾಷ್ಟ್ರವಾಗಲಾರದು. ಇಂತಹ ಆಶಯವನ್ನಿಟ್ಟುಕೊಂಡು ಅಶೋಕ ಮಿತ್ರನ್‌ರವರು ಈ ಕಥೆಯಲ್ಲಿ ನಿರುದ್ಯೋಗ ಸಮಸ್ಯೆಯನ್ನಾಧರಿಸಿಕೊಂಡು, ತಮ್ಮ ಅನುಭವದ ಸಂಕಲನದ ಮೂಲಕ ಬಡಪಾಯಿಗಳು ಕೆಲಸಕ್ಕಾಗಿ ಪಡುತ್ತಿರುವ ವೇದನೆಗಳನ್ನು ಈ ಕಥೆಯ ಮೂಲಕ ಸಂವೇದಿಸಿದ್ದಾರೆ.

ಒಬ್ಬ ನಿರುದ್ಯೋಗಿ ಯುವಕ ಕೆಲಸವನ್ನು ಹುಡುಕುವುದಕ್ಕಾಗಿ ಹೋಗುತ್ತಿರುವ ಬಸ್ಸಿನ ಹಿಂದೆ ಹೋಲ್ಡಾನ್...! ಹೋಲ್ಡಾನ್...! ಎಂದು ಓಡುತ್ತಾ ಬರುತ್ತಿದ್ದಾನೆ. ಬರುವಾಗ ತೋಳಿನಲ್ಲಿ ತೂಗು ಹಾಕಿಕೊಂಡಿರುವ ಕ್ಯಾನ್‌ವಾಸ್ ಚೀಲ ಮಾತ್ರ ಅಡ್ಡಾದಿಡ್ಡಿ ಅತ್ತ ಇತ್ತ ತೂಗಾಡುತ್ತ ಅವನಿಗೆ ತಗುಲುತ್ತ ಆತನ ಆಯತಪ್ಪುವಂತೆ ಮಾಡುತ್ತಿದ್ದರೂ ಹಾಗೆಯೇ ಓಡಿಕೊಂಡು ಬರುತ್ತಿದ್ದನು. ಆ ಚೀಲದಲ್ಲಿ ಒಂದು ಅಲ್ಯುಮಿನಿಯಂ ಟಂಬ್ಲರ್‌ನ್ನು ಒಂದು ಪಕ್ಕದಲ್ಲಿ ತುರಕಲಾಗಿತ್ತು. ಅದು ಆತನಿಗೆ ಪಕ್ಕೆಲುಬಿಗೆ ತಾಕುತ್ತಿತ್ತು. ಚೀಲ ಚೀಲದಹಾಗೆ ಇರದೆ ಗುಂಡು ಗುಂಡಾಗಿ ಉಬ್ಬಕೊಂಡಿತ್ತು. ಆದ್ದರಿಂದ ಅದರ ಮೇಲಿದ್ದ ಒಂದು ಕೈಯನ್ನು ಬೀಸುವುದಕ್ಕೆ ಸಾಧ್ಯವಾಗದೆ. ರೆಕ್ಕೆಯ ಹಾಗೆ

ತೂಗಿಕೊಂಡು ಓಡಬೇಕಾಗಿರುತ್ತದೆ. ಈ ಬಸ್ಸನ್ನು ಹಿಡಿದುಕೊಂಡು ರೈಲ್ವೆ ಸ್ಟೇಷನ್‌ಗೆ ಹೋಗಿ ಆ ಯುವಕ ರೈಲು ಗಾಡಿಯನ್ನು ಹತ್ತಿಕೊಂಡು ತನ್ನ ಕೆಲಸದ ಇಂಟರವ್ಯೂಗೆ ಹೋಗಬೇಕಾಗಿದೆ. ಅದಕ್ಕಾಗಿ ಆತ ಅಷ್ಟೊಂದು ಕಷ್ಟಪಟ್ಟು ಓಡೋಡಿ ಬರುತ್ತಿದ್ದಾನೆ.

ಬಸ್ಸಿನಲ್ಲಿ ಹೋಗುವಾಗ ಮುಂದಿನ ಬಾಗಿಲಲ್ಲಿ ಹೆಂಗಸರು, ಹಿಂದಿನ ಬಾಗಿಲಲ್ಲಿ ಗಂಡಸರು ಹತ್ತುವುದಕ್ಕೂ ಇಳಿಯುವುದಕ್ಕೂ ತುಂಬಾ ವೇಳೆಯನ್ನು ಅಪವ್ಯಯ ಮಾಡುತ್ತಿದ್ದಾರೆ. ಆದರೆ ರೈಲ್ವೆ ಸ್ಟೇಷನ್‌ಗೆ ಹೋಗಬೇಕು. ಅಂತು ಇಂತು ಕಷ್ಟಪಟ್ಟು ಬಸ್ಸನ್ನು ಹಿಡಿದುಕೊಂಡು ರೇಲ್ವೆಸ್ಟೇಷನ್ ಹತ್ತಿರ ಬರುತ್ತಾನೆ. ಅಲ್ಲಿ ದಾರಿಯಲ್ಲಿ ಕಾಣುವ ಬಟಾಣಿ ಗಾಡಿಯವನು, ಬಾಳೆಹಣ್ಣು ಮಾರುವವನು, ಚಪ್ಪಲಿ ಹೊಲೆಯುವವವನು, ಒಬ್ಬ ಕುಷ್ಟರೋಗಿ, ಹಾಗೆಯೇ ಐದು ಮಕ್ಕಳನ್ನು ಸಾಲಾಗಿ ಮಲಗಿಸಿಕೊಂಡು ಭಿಕ್ಷೆ ಬೇಡುತ್ತಿರುವ ಒಂದು ಕುಟುಂಬವನ್ನು ಆ ಯುವಕ ನೋಡುತ್ತಾನೆ. ಅನ್ನಕ್ಕಾಗಿ ಇಂಥ ಮಕ್ಕಳಿಗೆ ಮದ್ದನ್ನು ಹಾಕಿ ಇಲ್ಲಿ ಮಲಗಿಸಿ ಭಿಕ್ಷೆಯನ್ನು ಬೇಡಿಸುತ್ತಿದ್ದಾರೆ. ಆ ಮಕ್ಕಳ ಎಚ್ಚರ ತಪ್ಪಿಸಿ ಅದರಿಂದ ಬಂದ ಹಣವನ್ನು ಬೇರೆಯವರು ಬಳಕೆ ಮಾಡುತ್ತಾರೆ. ಇಂತಹ ಸ್ಥಿತಿ ನೊಡಿ ಯುವಕ ತನ್ನ ಮರುಕವನ್ನು ವ್ಯಕ್ತಪಡಿಸುತ್ತಾನೆ.

ಈ ಮಕ್ಕಳಿಗೆ ಅಪ್ಪ ಅಮ್ಮ ಯಾರೋ ಏನೋ, ಏನೂ ತಪ್ಪನ್ನು ಮಾಡದೆ ಎಲ್ಲಾ ಕಾನೂನು ಕಾಯಿದೆಗಳನ್ನೂ ಸರಿಯಾಗಿ ಪಾಲಿಸಿಕೊಂಡುಬದುಕುವಂತಹ ಒಳ್ಳೆಯ ಮಕ್ಕಳೇ ಹಸಿವಿನ ತೊಳಲಾಟದಿಂದ ಸಾಯುತ್ತಿವೆ. ಅವರು ಕೊಟ್ಟ ಮದ್ದಿನಿಂದ ಅವರ ಪ್ರಾಣಕ್ಕೆ ಅಪಾಯವಿದೆ. ತನ್ನ ಅಂತರಂಗದ ದೇವರನ್ನು ತಾನೆ ಯುವಕ ಪ್ರಶ್ನಿಸಿಕೊಳ್ಳುತ್ತಾನೆ. ಇಂತಹ ಸಂಕಷ್ಟಗಳಿಗೆ ಕಾರಣಗಳನ್ನು ಹುಡುಕುತ್ತಾನೆ. ನಾವು ಮಾಡುತ್ತಿರುವ ತಪ್ಪುಗಳೇ ಅಂದ್ರೇ ನಮ್ಮ ಹುಟ್ಟೇ ತಪ್ಪಾ...? ಅಥವಾ ನಮ್ಮನ್ನು ಇಂತಹ ಸ್ಥಿತಿಯಲ್ಲಿಟ್ಟು ತಾವು ಒಬ್ಬರೇ ಸುಖದಿಂದ ಇರಬೇಕೆಂದು ನಮ್ಮನ್ನು ಶೋಷಣೆಗೆ ಒಳಪಡಿಸುವ ಬಂಡವಾಳಶಾಹಿಗಳದ್ದೆ ತಪ್ಪು...! ಇವರೆಡರ ಉಗಮಕ್ಕೆ ಇಂತಹ ಸ್ಥಿತಿಯನ್ನು ತಂದು ಕಾಲಚಕ್ರದಲ್ಲಿ ನಲುಗಿಸುತ್ತಿರುವ ದೇವರು ಎಂಬ ಹೆಸರಿನವನದೇ ಈ ತಪ್ಪೇ...? ಯಾರದು ಮತ್ತೆ ಮತ್ತೆ ಚಿಂತಿಸುತ್ತಾನೆ. ಮತ್ತೇ ಹೋಗಲಿ ತಪ್ಪು ಯಾರದಾದರೇನು...? ತಪ್ಪು...! ತಪ್ಪೇ – ತಪ್ಪು. ನಾನು ಮೊದಲು ಹೋಗಬೇಕು, ರೈಲ್‌ನ್ನು ಹಿಡಿಯಬೇಕು

"ಹೌದೌದು. ಅದನ್ನು ಓಡಿದರೆ ತಾನೇ ನಾನು ನಾಳೆ ಬೆಳಿಗ್ಗೆ ಆ ಊರಿಗೆ ಹೋಗಿ ಸೇರ್ತಿನಿ ನಾಳೆ ಬೆಳಿಗ್ಗೆ ಆ ಊರಿಗೆ ಹೋಗಿ ಸೇರಿದರೆ ತಾನೇ ನಾಳೆ ಹತ್ತು ಗಂಟೆಗೆ ಆ ಇಂಟರ್‌ವ್ಯೂಗೆ ಹೋಗೋಕೆ ಸಾಧ್ಯ ಸರಿದು ನಿಲ್ಲಿ...! ಸರಿದು ನಿಲ್ಲಿ...! ಕೆಲಸ ಸಿಕ್ಕಿ ಬಿಡಬಹುದಾ...? ಕೆಲಸ ಸಿಗಬೇಕು ಕೆಲಸ ಸಿಕ್ಕದರೆ ತಾನೇ ನಾನು ಆ ಕಾಲುದಾರಿಯ ಮಕ್ಕಳ ಹಾಗೆ ಸಾಯದೆ ಇರೋಕೆ ಸಾಧ್ಯ ನನಗೆ ಹುಟ್ಟೋ ಮಕ್ಕಳನ್ನು ನಾನು ಕಾಲು ದಾರಿಯಲ್ಲಿ ಹಾಕದೆ ಸಾಕೋಕೆ ಸಾಧ್ಯ."ಆ ಯುವಕ ತನ್ನಲ್ಲಿ ತನ್ನ ನೋವಿನ ಪ್ರಶ್ನೆಗಳನ್ನು ದೇವರ ರೂಪಕದಲ್ಲಿ ಹಾಕಿಕೊಳ್ಳುತ್ತ ತನ್ನ ಜಾತಿಯ ಬಗ್ಗೆ ತಾನೇ ನಾನು ಯಾವ ಜಾತಿಯವನಾದರೇನು...? ನಾನು ಯಾವ ಕರ್ಮಾಚರಣೆಗಳನ್ನು

ಆಚರಿಸುವುದಿಲ್ಲ. ಹೋಟಲಿಗೆ ಹೋಗಿ ಯಾವ ಪ್ರಾಣಿಯ ಮಾಂಸ ಕೊಟ್ಟರೂ ತಿನ್ನುತ್ತೇನೆ. ಸಾರಾಯಿನೂ ಕುಡಿತೀನಿ ನನಗೆ ಜಾತಿಇಲ್ಲ ದೇವರೆ ನೀನು ಸರಿದು ನಿಲ್ಲುಯೆಂದು ತನ್ನ ಅಂತರಾತ್ಮಕ್ಕೆ ಹೇಳಿಕೊಳ್ಳುತ್ತಿರುವುದರಲ್ಲಿ, ಆತನ ಒಳ ದಲಿತ ಸಂವೇದನೆಗಳೇ ಆತನಲ್ಲಿ ಅಡಕವಾಗಿರುತ್ತವೆ.

ಕೆಲಸವಿಲ್ಲದೆ ಕೆಲಸಕ್ಕಾಗಿ ನಡೆಸುತ್ತಿರುವ ಆತನ ಹೋರಾಟದ ಬದುಕು ಇಡೀ ದಲಿತ ಸಮುದಾಯದಲ್ಲಿರುವ ನಿರುದ್ಯೋಗದ ಸಮಸ್ಯೆಯನ್ನೆ ತೋರಿಸುತ್ತದೆ. ಇಂದಿನ ಶಿಕ್ಷಣ ವ್ಯವಸ್ಥೆಗಳು ಸಹ ಉದ್ಯೋಗಾಧಾರಿತ ಶಿಕ್ಷಣವನ್ನು ನೀಡದೆ ನಿರುದ್ಯೋಗಿಗಳನ್ನು ಸೃಷ್ಟಿಸುತ್ತಿವೆ. ಈ ಶಿಕ್ಷಣ ಸಂಸ್ಥೆಗಳು ಬದಲಾಗಬೇಕಾಗಿದೆ. ವೃತ್ತಿಪರಾಧರಿತ ಶಿಕ್ಷಣಕ್ರಮವನ್ನು ಜಾರಿಗೊಳಿಸಬೇಕು. ಶಿಕ್ಷಣ ಕೇವಲ ಬೌದ್ಧಿಕ ಬಲವರ್ಧನೆ ಮಾಡುವುದಷ್ಟೇ ಅಲ್ಲ, ಅದು ಹಸಿದವರಿಗೆ ಅನ್ನವನ್ನು ಕೊಡುವಂತಾಗಬೇಕು. ಮನುಷ್ಯ ಬದುಕುವ ವಯಸ್ಸಿಗೂ ಆತನ ಶಿಕ್ಷಣ ಕ್ರಮಕ್ಕೂ ಹಾಗೂ ಬದುಕಿನ ಆರಂಭದ ಜೀವನಕ್ಕೂ ಸರಿಯಾಗಿ ಸೂಕ್ತವಾದ ಕ್ರಮದಲ್ಲಿ ಶಿಕ್ಷಣ ವ್ಯವಸ್ಥೆಗಳು ಸ್ಥಾಪಿಸಲ್ಪಟ್ಟು ಪ್ರತಿಯೊಬ್ಬರಿಗೂ ಉದ್ಯೋಗಗಳು ದೊರಕುವಂವಾಗಬೇಕು. ದುಡಿಮೆಯಿಲ್ಲದೆ ಬದುಕನ್ನು ನಡೆಸುವುದರಿಂದ ದೇಶದಲ್ಲಿ ಅಸಮತೋಲನವುಂಟಾಗಿ ಆರ್ಥಿಕ ಪ್ರಗತಿ ಕುಂಟಿತವಾಗುತ್ತದೆ.

ಇಂತಹ ವ್ಯವಸ್ಥೆಗೆ ಅಧಿಕಾರಿಶಾಹಿಗಳು, ಆಳುವ ವರ್ಗದವರು, ಬಂಡವಾಳಶಾಹಿಗಳು, ದಮನಿತರ ಬದುಕನ್ನು ಅತಂತ್ರತೆಯಿಂದ ಹೊರತಂದು, ಅವರಿಗೆ ಅವರದೆಯಾದ ಸ್ವತಂತ್ರತೆಯನ್ನು ಬದುಕಿನಲ್ಲಿ ತಂದುಕೊಡಬೇಕಾದ ಅನಿವಾರ್ಯತೆಯನ್ನು ಈ ಕಥೆಯು ದಲಿತ ದಮನಿತರ ಬದುಕಿನ ಚಿತ್ರಣದ ಮೂಲಕವಾಗಿ, ತನ್ನ ವಾಸ್ತವದ ನೆಲೆಯಲ್ಲಿ ನಿರೂಪಿಸುತ್ತದೆ. ಮನುಷ್ಯ ಹುಟ್ಟಿದ ಮೇಲೆ ಬದುಕಬೇಕು. ಬದುಕಬೇಕಾದರೆ ಆತನಿಗೆ ಒಂದು ಕೆಲಸವಿರಬೇಕು. ಆ ಕೆಲಸದಿಂದ ಆತನ ಕುಟುಂಬದವರು ನೆಮ್ಮದಿಯಿಂದ ಬಾಳಲು ಸಾಧ್ಯವಾಗುತ್ತದೆ. 'ಕೂಲಿ ಇಲ್ಲದೆಯೇ ಕೂಳನ್ನು ಕಾಣಲು ಸಾಧ್ಯವಿಲ್ಲ' ಅಂತಹ ಪರಿಸ್ಥಿತಿಯನ್ನು ಹೊಂದಿರುವ ಈ ಕಥೆಯಲ್ಲಿ ಒಬ್ಬ ದಲಿತ ಬಡ ನಿರುದ್ಯೋಗಿಯ ಮಾನಸಿಕ ವೇದನೆಯನ್ನು ಕುರಿತು ಈ ಕಥೆಯು ಪ್ರತಿಪಾದಿಸುತ್ತಿದೆ. ಬಹು ಮುಖ್ಯವಾಗಿ ನಿರುದ್ಯೋಗದ ಕುರಿತು ತನ್ನ ವಿಶ್ಲೇಷಣೆಯನ್ನು ವಿಸ್ತರಿಸುತ್ತ ಸಾಗುತ್ತದೆ. ಶಿಕ್ಷಣವನ್ನು ಪಡೆದುಕೊಂಡು ಉದ್ಯೋಗಕ್ಕಾಗಿ ಅಲೆದಾಟವನ್ನು ನಡೆಸುತ್ತಿದ್ದಾನೆ. ಎಲ್ಲೂ ಕೆಲಸ ಸಿಗದೆ ತನ್ನ ಅಲೆದಾಟದ ಬದುಕನ್ನು ಮುಂದುವರಿಸುತ್ತಿದ್ದಾನೆ.



ಸ್ವಲ್ಪ ಸಮಯ ವಿಳಂಬವಾದರೆ ತನಗೆ ದೊರೆಯಬಹುದಾದ ಕೆಲಸ ಕೈತಪ್ಪಿ ಹೋಗಬಹುದೆಂಬ ಭಯದಿಂದಲೇ ತನ್ನ ಹೆಜ್ಜೆಗಳನ್ನು ಹಾಕುತ್ತಿದ್ದಾನೆ. ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾಗುವ ವಿಷಯವೇಂದರೆ ಶಿಕ್ಷಣವೆನ್ನುವುದು ಬದುಕನ್ನು ಕಟ್ಟಿಕೊಡಬೇಕು, ಆ ಶಿಕ್ಷಣದಿಂದಲೇ ನಿರುದ್ಯೋಗ ಉಂಟಾಗಬಾರದು. ಆಗ ಶಿಕ್ಷಣ ವ್ಯವಸ್ಥೆಗೆ ಒಂದು ಒಳ್ಳೆಯ ಅರ್ಥ ಬರುತ್ತದೆ. ಆದರೆ ಇಂದು ಶಿಕ್ಷಣವನ್ನು ಪಡೆದುಕೊಂಡಂತಹ ಅದೆಷ್ಟೋ ದಲಿತ ಯುವಕರು ಕೆಲಸಗಳಿಲ್ಲದಂತೆ, ಅವರ ವಿದ್ಯೆಗೆ ತಕ್ಕ ಉದ್ಯೋಗವಿಲ್ಲದಂತೆ ನಿರುದ್ಯೋಗಿಗಳಾಗಿ ತಮ್ಮ ಜೀವನವನ್ನು ಯಾತನೆಯಲ್ಲಿ ಕಳೆಯುತ್ತಿದ್ದಾರೆ.

ಆಳುವ ಸರಕಾರದ ಅಧಿಕಾರಿಶಾಹಿಗಳು ಕಾಲಕಾಲಕ್ಕೆ ಸರಿಯಾಗಿ ನೇಮಕಾತಿಗಳನ್ನು ಮಾಡದೆ, ದಲಿತ ವಿದ್ಯಾರ್ಥಿಗಳನ್ನು ಹಸಿವಿನಿಂದ ನರಳಾಡುವಂತೆ ಮಾಡುತ್ತಿದ್ದಾರೆ. ಒಂದು ಉದ್ಯೋಗ ಸಿಗುವುದು ಎಂದರೇ ದಲಿತರಿಗೆ ಅದೊಂದು ಕನಸಿನ ಮಾತಾಗಿದೆ.

ದಲಿತರಿಗೆ ಯಾವುದೇ ಆಸ್ತಿ ಇಲ್ಲದಿರುವುದರಿಂದ ಶಿಕ್ಷಣವನ್ನು ಪಡೆದರು ಉದ್ಯೋಗವೂ ಸಿಗದಿರುವುದರಿಂದ ಆರ್ಥಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಉಳ್ಳವರ ಮಕ್ಕಳಂತೆ ಬದುಕನ್ನು ನಡೆಸಲು ಸಾಧ್ಯವಿಲ್ಲದೆ, ಕೆಲಸವನ್ನು ಪಡೆದುಕೊಳ್ಳಲಾಗದೆ ಹಸಿದ ಹೊಟ್ಟೆಯಿಂದ ನರಳಾಡುತ್ತಿದ್ದಾರೆ. ಏನಾದರೂ ಮಾಡಿಕೊಂಡು ಬದುಕನ್ನು ನಡೆಸಬೇಕೆಂದರೆ ಸಮಾಜದಲ್ಲಿರುವ 'ಜಾತಿ ವ್ಯವಸ್ಥೆ'ಯು ಅವರ ಆಸೆಯನ್ನು ಮುರಿದು ಹಾಕುತ್ತದೆ. ಯಾಕೆಂದರೆ ದಲಿತರನ್ನು ಮುಟ್ಟಿಸಿಕೊಳ್ಳದವರು ಅವರ ಸ್ವತಂತ್ರದ ಬದುಕನ್ನು ಹೇಗೆ ಬೆಂಬಲಿಸುತ್ತಾರೆ. ಅವರ ಕೆಲಸಕ್ಕೆ ಸಹಕಾರವನ್ನು ನೀಡುವುದಿಲ್ಲ. ಇದರಿಂದಾಗಿ ದಲಿತರು ಶಿಕ್ಷಣವನ್ನು ಪಡೆದುಕೊಂಡರೂ ನಿರುದ್ಯೋಗಿಗಳಾಗಿ ಮತ್ತೆ ಬಂಡವಾಳಶಾಹಿಗಳ ಹತ್ತಿರವೇ ಗುಲಾಮರಂತೆ ಜೀವನ ನಡೆಸಬೇಕಾಗಿರುವ ದುಸ್ಥಿತಿ ಉಂಟಾಗಿರುತ್ತದೆ ಎಂಬುವುದನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ದಲಿತ ವಿದ್ಯಾವಂತರ ನೋವುಗಳನ್ನು ಗ್ರಹಿಸಿಕೊಂಡು, ಅವರ ಮನೋವೇದನೆಯ ಸತ್ಯವನ್ನು ತೋರಿಸಿಕೊಟ್ಟಿದ್ದಾರೆ. ದಲಿತರು ಉದ್ಯೋಗವನ್ನು ಪಡೆದುಕೊಳ್ಳುವಂತ ಹಕ್ಕು ಸಿಗುವಂತಾಗಬೇಕು. ಅವರು ಉದ್ಯೋಗದಿಂದ ಆರ್ಥಿಕವಾಗಿ ಸಬಲರಾಗಿ ಇತರರಂತೆ ನೆಮ್ಮದಿಯ ಜೀವನ ನಡೆಸಬೇಕು. ಸಮಾನತೆಯ ಹಕ್ಕು ದಲಿತರಿಗೆ ದೊರೆತು ಕಣ್ಣೀರಿಲ್ಲದ ಜೀವನ ಅವರದಾಗಬೇಕು ಎಂಬ ಆಶಯದಿಂದ ದಲಿತರು ಉದ್ಯೋಗದಿಂದ ವಂಚಿತರಾದ ನೋವನ್ನು ಮಾರ್ಕ್ಸವಾದದ ನೆಲೆಯಿಂದ ಈ ಕಥೆಯು ಅಭಿವ್ಯಕ್ತಿಸುತ್ತದೆ.

ಡಾ.ಕರೀಗೌಡ ಬೀಚನಹಳ್ಳಿಯವರು ಸಂಪಾದನೆ ಮಾಡಿರುವ 'ಮಲಿಯಾಳಂ ಕಥೆಗಳು' ಎಂಬ ಕಥಾ ಸಂಕಲನದಲ್ಲಿ ಎಂ.ಮುಕುಂದನ್‌ರವರು ಬರೆದಂತಹ 'ರಿಕ್ಷಾವಾಲ ಪಪ್ಪುವಿನ ಸುತ್ತ' ಎಂಬ ಕಥೆಯನ್ನು ಶ್ರೀಕೃಷ್ಣ ಭಟ್ ಅರ್ತಿಕಜೆಯವರು ಕನ್ನಡನುವಾದ ಮಾಡಿರುತ್ತಾರೆ. ಈ ಕಥೆಯು ಕೂಲಿ ಮಾಡಿಕೊಂಡು ತನ್ನ ಬೆವರನ್ನೇ ನಂಬಿ ಬದುಕುವ ಒಬ್ಬ ಬಡಕುಟುಂಬದ ರಿಕ್ಷಾವಾಲಾ ನಗರಗಳ ಬೆಳೆವಣಿಗೆಯಿಂದ, ತಂತ್ರಜ್ಞಾನದ ಹೊಸ ಆವಿಷ್ಕಾರಗಳಿಂದ, ತನ್ನ ಕೂಲಿಯಿಂದ ವಂಚಿತನಾಗಿ, ತನ್ನ ಕುಟುಂಬವನ್ನು ಸಲಹುವುದಕ್ಕೆ ಸಾಧ್ಯವಾಗದಂತಹ ವಾತಾರವಣದಲ್ಲಿ ತನ್ನ ಬದುಕನ್ನು ಕಣ್ಣೀರಿನಲ್ಲಿ ಕಳೆಯುತ್ತದೆ.

ತನ್ನನ್ನೇ ನಂಬಿದ ಹೆಂಡತಿ ಮಕ್ಕಳು ಮೂಲಭೂತ ಅವಶ್ಯಕತೆಗಳಿಂದ ವಂಚಿತರಾಗಿ, ಜೀವನ ಸಾಗಿಸುವುದಕ್ಕೆ ಆಗುವ ಅನಾನುಕೂಲಗಳನ್ನು ಎದುರಿಸಲು ಕೆಲಸವೇ ಇಲ್ಲದಂತಾಗಿ, ಬದುಕುವ ಭರವಸೆಯನ್ನು ಕಳೆದುಕೊಂಡು ಅತಂತ್ರರಾಗಿ, ಅಸಹಾಯಕ ಜೀವನವನ್ನು ನಡೆಸುತ್ತಿರುವ ಒಬ್ಬ ಪಪ್ಪುವೆಂಬ ರಿಕ್ಷಾವಾಲನ ಮೂಲಕ ಇಡೀ ನಗರ ಎಲ್ಲ ರಿಕ್ಷಾ ಕಾರ್ಮಿಕ ವರ್ಗದವರು ಎದುರಿಸುತ್ತಿರುವ ಬದುಕಿನ ಸವಾಲುಗಳನ್ನು, ಅವರ ಭವಿಷ್ಯತ್ತಿನ ಚಿಂತನೆಗಳನ್ನು ಲೇಖಕರು ಈ

ಕಥೆಯ ಮೂಲಕವಾಗಿ ದುಡಿವ ವರ್ಗದವರನ್ನು ಹೇಗೆ ನಿರಾಶ್ರಿತರನ್ನಾಗಿ ಈ ಬಂಡವಾಳಶಾಹಿಗಳು ಸಮಾಜದಲ್ಲಿ ತಮ್ಮ ತಂತ್ರಗಳನ್ನು ನಿರ್ಮಿಸುತ್ತ, ತಮ್ಮ ಬದುಕನ್ನು ಎತ್ತರಕ್ಕೆ ಏರಿಸಿಕೊಂಡು, ಸಮಾಜದ ಆರ್ಥಿಕತೆಯನ್ನು ಅಸಮತೋಲನದಲ್ಲಿರಿಸಿ ಬಡವರ್ಗದವರನ್ನು ನೋವಿನ ಮಡುವಿನಲ್ಲಿ ಹೇಗೆ ಸಿಲುಕಿಸುತ್ತಾರೆ ಎಂಬುವುದನ್ನು ರಿಕ್ಷಾವಾಲಾನ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ವಾಸ್ತವದ ಸಂಗತಿಗಳನ್ನು ಕಟ್ಟಿಕೊಟ್ಟಿರುತ್ತಾರೆ.

ಒಂದು ಕೆಲಸವನ್ನು ಆಶ್ರಯಿಸಿದ ಕುಟುಂಬಕ್ಕೆ ಆ ಕೆಲಸವೇ ಇಲ್ಲದಂತಾದರೆ, ಆಗ ಆಗುವ ಅವರ ಒಳನೋವುಗಳು ನಿದ್ದೆಯಿರದಂತೆ ಹಗಲು ರಾತ್ರಿ ಅವರನ್ನು ಆ ಮನೋವ್ಯಥೆಯು ಹೇಗೆ ಕಾಡುತ್ತಿರುತ್ತದೆ, ಅವರ ವರ್ತಮಾನದ ಬದುಕು ಅತಂತ್ರವಾದಾಗ ಅವರ ಭವಿಷ್ಯದ ಬದುಕು ಕಾಣಸಿಗದಂತಾಗಿ ಮನೋವ್ಯಥೆಯಲ್ಲಿ ಕೇಲವು ಕುಟುಂಬದ ರಿಕ್ಷಾವಾಲಾರು ಹುಚ್ಚರಾಗುತ್ತಾರೆ. ಇನ್ನೂ ಕೆಲವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಬದುಕನ್ನು ಉಳಿಸಿಕೊಳ್ಳಲಾಗದೆ ಬದುಕಿಗಾಗಿಯೇ ತಮ್ಮ ಪ್ರಾಣವನ್ನು ನೀಡಬೇಕಾಗುತ್ತದೆ. ಪ್ರಾಣ ನೀಡಿದರೂ ಬದುಕು ಸಿಗದಂತವರ ಕಥೆಯೂ ಈ ಕಥೆಯ ವ್ಯಥೆಯೂ ಆಗಿದೆ. ಒಬ್ಬ ರಿಕ್ಷಾವಾಲನಾದ ಪಪ್ಪುವಿಗೆ ನಾಲ್ಕು ಜನ ಮಕ್ಕಳು. ಒಂದು ಗಂಡು, ಮೂರು ಹೆಣ್ಣು, ಪಪ್ಪು ಮತ್ತು ಕುಟುಂಬದವರು ಒಂದು ತಗಡಿನ ಗುಡಿಸಲಿನಲ್ಲಿ ವಾಸ ಮಾಡುತ್ತಿರುತ್ತಾರೆ. ಒಂದುದಿನ ಪಪ್ಪು ಕೆಲಸವನ್ನು ಮುಗಿಸಿಕೊಂಡುಬಂದ ಗಂಡನನ್ನು ಹೆಂಡತಿಯಾದ ಲಕ್ಷ್ಮೀಯು ಏನಾಯಿತು ಮೈಗೆ ಹುಷಾರಿಲ್ಲವೇ ಎಂದು ಕೇಳುತ್ತಾಳೆ.

ಏನಿಲ್ಲ ಸ್ವಲ್ಪ ಆಯಾಸ ಆಗಿದೆ ಎಂದು ಹೇಳಿ ಪಪ್ಪು ತನ್ನ ಮನೋವ್ಯಥೆಯನ್ನು ತನ್ನಲಿಯೇ ಬಚ್ಚಿಟ್ಟುಕೊಳ್ಳುತ್ತಾನೆ. ಆದರೆ ಅವಳಿಗೆ ಅದು ಸುಳ್ಳೆಂದು ಅರ್ಥವಾಗುತ್ತದೆ. ಅಡುಗೆಮನೆ, ವಾಸದ ಕೋಣೆ, ಮಲಗುವ ಕೋಣೆ ಎಲ್ಲಾ ಒಂದೇ ಆಗಿರುವ ಮನೆಯಲ್ಲಿ ತಗಡಿನ ಉಷ್ಣವೂ ಮನೆತುಂಬ ಹರಡಿಕೊಂಡಿತ್ತು. ಹಗಲೆಲ್ಲ ತಗಡುಗಳು ಬಿಸಿಲಿಗೆ ಕಾದು ರಾತ್ರಿಯಲ್ಲಿ ಉಷ್ಣವನ್ನು ಬೀರುತ್ತಿದ್ದವು. ಆದ್ದರಿಂದ ಮನೆಯಲ್ಲಿ ಮಲಗುವುದೇಂದರೇ ಪಪ್ಪುವಿಗೆ ತುಂಬ ತೊಂದರೆಯಾಗಿ ಹೊರಗಡೆ ಬಂದನು. ಬೀಡಿಯನ್ನು ಸೇದುತ್ತ ಚಿಂತೆಯಲ್ಲಿ ಮಗ್ನನಾಗಿ ಕುಳಿತುಕೊಂಡು ಆಕಾಶವನ್ನೆ ದಿಟ್ಟಿಸಿ ನೋಡುತ್ತಿದ್ದನು. ನಂತರ ಗುಡಿಸಲಿನ ಒಳಗೆ ಹೋಗಿ ಹೆಂಡತಿಯ ಹೇಗಲಮೇಲೆ ಕೈಯಿಟ್ಟ ಪಪ್ಪು ಅವಳ ರವಿಕೆಯ ಭುಜ ಹರಿದಿರುವುದು ಕಾಣಿಸಿತು. ಲಕ್ಷ್ಮೀಗೆ ತೊಟ್ಟುಕೊಳ್ಳಲು ಒಂದು ಒಳ್ಳೆಯ ಕುಪ್ಪುಸವಿಲ್ಲ. ಮತ್ತೆ ಆತ ಮರುಕದಿಂದ ಹೆಂಡತಿಯನ್ನು ಕೇಳಿದ, ಏನೇ ನಿದ್ದೆ ಬರಲಿಲ್ಲವೇ ಇನ್ನೂ ಎಂದು. ಅವಳು ಹಾಗೆ ಮಲಗಿಕೊಂಡು ಮೊದಲು ನಿಮ್ಮ ನಿದ್ರೆಗೆ ಚಿಂತೆಯಾದದ್ದನ್ನು ಹೇಳಿ ಎನ್ನುತ್ತಾಳೆ.

ಪಪ್ಪುವಿನ ಕೈಗಳಲ್ಲಿ ಕಬ್ಬಿಣದ ವಾಸನೆಯಿತ್ತು. ರಿಕ್ಷಾದ ಹ್ಯಾಂಡಲಿನ ತಂಪು ವಾಸನೆಯಿಂದ ಹೆಂಡತಿ ಆ ಕಡೆ ತಿರುಗಿ ಮಲಗಿದಳು. ಪಪ್ಪು ಮಲಗಿರುವ ಮಕ್ಕಳನ್ನು ನೋಡುತ್ತ ಹೆಂಡತಿಗೆ ಸರಕಾರದವರು ರಿಕ್ಷವನ್ನು ಬ್ಯಾನ್ ಮಾಡುತ್ತಾರಂತೆ ಎಂದು ಹೇಳಿದ. ಕೆಮ್ಮುತ್ತಿದ್ದ ಗಂಡನನ್ನು

ನೋಡಿ ಆತ ಆಕೆಗೆ ಹೇಳಿದ್ದು ಅರ್ಥವಾಗಲಿಲ್ಲ. ಲಕ್ಷ್ಮಿಯೂ ಅನಕ್ಷರಸ್ಥೆ ಮಹಿಳೆಯಾಗಿದ್ದಳು. ಅದನ್ನು ಗಮನಿಸಿದ ಪಪ್ಪು ಮತ್ತೆ ನಗರದಲ್ಲಿ ರಿಕ್ಷವನ್ನು ನೀರೋಧಿಸುತ್ತಾರೆ ಎಂದು ಹೇಳುತ್ತಾನೆ. ಆಗ ಅವಳು 'ನಿರೋಧಿಸುತ್ತಾರೆ' ಅಂದರೆ ಅದು ಕುಟುಂಬ ಯೋಜನೆಗೆ ಸಂಬಂಧಿಸಿದ್ದೆಂದು ನಂಬಿದಳು. ಆಗ ಪಪ್ಪು ಮಕ್ಕಳಿಗೆ ಹೇಳಿಕೊಡುವಂತೆ ಆಗ ವಿವರಿಸಿ ಹೇಳಿದನು. ನಗರವು ಇಂದು ಒಂದು ಕೊಳಕು ರಾಶಿಯಾಗಿ ತುಂಬಿಕೊಂಡಿದೆ. ವಾಹನಗಳ ಇಕ್ಕಟ್ಟಿನಿಂದ ರಸ್ತೆಗಳ ಅಪಘಾತಗಳು ಅಧಿಕವಾಗಿವೆ. ನಗರವನ್ನು ಸ್ವಚ್ಛಗೊಳಿಸುವುದಕ್ಕಾಗಿಯೂ, ಸಾರಿಗೆವ್ಯವಸ್ಥೆಯನ್ನು ಸುಗಮಗೊಳಿಸುವುದಕ್ಕಾಗಿಯೂ ಮಾಡಿರುವ ಪ್ರಯತ್ನಗಳ ಫಲವಾಗಿ ಮಾರ್ಚ ಒಂದರಿಂದ ನಗರದಲ್ಲಿ ರಿಕ್ಷಾಗಳನ್ನು ಚಲಿಸದಂತೆ ನೀಷೇಧ ಮಾಡಿದ್ದಾರೆ.

ಇದನ್ನು ಲಕ್ಷ್ಮೀಗೆ ಅರ್ಥವಾಗುವ ರೀತಿಯಲ್ಲಿ ಪಪ್ಪು ಹೇಳಿದನು. ನಾನು ರಿಕ್ಷಾದಿಂದಲೇ ಬದುಕುತ್ತಿದ್ದೇನೆ. ಅದರ ದುಡಿಮೆಯಿಂದಲೇ ಕುಟುಂಬವನ್ನು ಸಾಗಿಸುತ್ತಿದ್ದೇನೆ. ಅದೇ ರಿಕ್ಷಾವಿಲ್ಲದಿದ್ದರೆ ನಾಳೆ ನನ್ನ ಮಕ್ಕಳ ಭವಿಷ್ಯ ಏನಾದಿತು, ಈ ಚಿಂತೆಯಿಂದಲೇ ನಾನು ನಿದ್ರಿಸದಂತೆ ಚಿಂತೆಯನ್ನು ಮಾಡುತ್ತಿದ್ದೆನೆ ಎಂದು ಲಕ್ಷ್ಮಿಗೆ ಅರ್ಥವಾಗುವ ರೀತಿಯಲ್ಲಿ ಹೇಳಿದನು. ಆಗ ಲಕ್ಷ್ಮಿಯು ಹಾಸಿಗೆಯಿಂದ "ನನ್ನ ಮಕ್ಕಳು ಉಪವಾಸ ಬೀಳಬಹುದಲ್ಲಾ. 'ದೇವರೇ...'? ಲಕ್ಷ್ಮೀ ಛಾಪೆಯಲ್ಲಿ ಎದ್ದು ಕುಳಿತಳು. ಗುಡಿಸಲಿನ ಕತ್ತಲೆಯಲ್ಲಿ ಅವಳ ಮುಖ ಹೆಚ್ಚು ಬಿಳಚಿದಂತೆ ಕಾಣಲಿಲ್ಲ. ಗಲ್ಲಿಯೂ ಪರಿಸರವೂ ನಿಶ್ಯಬ್ದವಾಗಿದ್ದರೂ ಪಪ್ಪುವಿನ ಗುಡಿಸಲಿನಿಂದ ಬಿಕ್ಕಳಿಕೆಯ ಧ್ವನಿ ಕೇಳಿಬಂತು. ಅಳಬೇಡ ಪಪ್ಪು ಸಮಾಧಾನಪಡಿಸಿದ 'ಬಾಯಿಕೊಟ್ಟ ದೇವರು ಅನ್ನವನ್ನು ಕೊಟ್ಟಾನು' ಆದರೆ ಮನಸ್ಸಿನಲ್ಲೆ ಅವನು ಹೇಳಿದ ನನಗಾವ ದಾರಿಯೂ ಕಾಣುತ್ತಿಲ್ಲ. ನನ್ನ ಮಕ್ಕಳು ಉಪವಾಸ ಬೀಳುತ್ತಾರಲ್ಲಾ ದೇವರೇ...! ಪಪ್ಪು ತಲೆಯಲ್ಲಿ ಕೈ ಹೊತ್ತು ಕುಳಿತ."[೬]

ಗಂಡ ಹೆಂಡತಿಯರಿಬ್ಬರೂ ಆ ರಾತ್ರಿ ನಿದ್ದೆಯನ್ನು ಮಾಡಲಿಲ್ಲ. ಬೆಳೆದುನಿಂತ ಮಗಳು, ಶಾಲೆಗೆ ಹೋಗುವ ಮಕ್ಕಳು ನಾವೆಲ್ಲ ಬದುಕುವುದಾದರೂ ಹೇಗೆ ಎಂಬ ಚಿಂತೆಯಲ್ಲಿಯೇ ಬೆಳಗಾಯಿತು. ರಿಕ್ಷಾಗಳು ನಗರದ ನೆನಪುಗಳಾಗಿದ್ದವು. ರಿಕ್ಷಾಗಳಿಲ್ಲದೆ ನಗರಗಳಿರಲಿಲ್ಲ, ಆದರೆ ಇಂದು ವಾಹನಗಳ ಒತ್ತಡದಿಂದ ಮಕ್ಕಳು ಸರಿಯಾದ ವೇಳೆಗೆ ಶಾಲೆಗೆ ಹೋಗಲು ಸಾಧ್ಯವಾಗುತ್ತಿಲ್ಲ. ರೋಗಿಗಳನ್ನು ಆಸ್ಪತ್ರೆಗೆ ಸರಿಯಾದ ವೇಳೆಗೆ ತಲುಪಿಸಲು ಈ ರಿಕ್ಷಾಗಳಿಂದ ಸಾಧ್ಯವಾಗುವುದಿಲ್ಲ. ಪ್ರತಿದಿನ ನಡೆಯುವ ಅಪಘಾತಗಳಿಗೆ ಈ ರಿಕ್ಷಾಗಳು ಕಾರಣವಾಗಿದೆಯೆಂದು ರಿಕ್ಷಾಗಳನ್ನು ರಸ್ತೆ ಸಂಚಾರದಲ್ಲಿ ನಿಷೇದಿಸಿದ್ದಾರೆ. ಇದರಿಂದಾಗಿ ಒಬ್ಬ ರಿಕ್ಷಾವಾಲನೂ ತನ್ನ ಹೆಂಡತಿ ಮಕ್ಕಳನ್ನು ನೋಡಿಕೊಳ್ಳಲು ಸಾಧ್ಯವಾಗಲಾರದು ಎಂಬ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಮತ್ತೊಬ್ಬ ರಿಕ್ಷಾವಾಲ ರಿಕ್ಷಗಳ ನಿಷೇದದ ಸುದ್ದಿಯಿಂದಲೇ ಹುಚ್ಚನಾಗಿ ತಿರುಗುತ್ತಾನೆ. ಇದನ್ನು ಯಾರೂ ಗಮನಕ್ಕೆ ತೆಗೆದುಕೊಳ್ಳದೆ ನಗರವಾಸಿಗಳು ರಿಕ್ಷೆಗಳ ನಿಷೇದದಿಂದ ನಗರಕ್ಕೆ ಒಳ್ಳೆಯದಾಯಿತೆಂದು ಕೈ ತಟ್ಟಿದರು.

ಆತ್ಮಹತ್ಯೆ ಮಾಡಿಕೊಂಡವನನ್ನು, ಹುಚ್ಚನಾದವನನ್ನು. ಮತ್ತು ಬಡಪಾಯಿ ರಿಕ್ಷಾವಾಲರ ದುಃಖಿಗಳನ್ನು ಯಾರೂ ಕೇಳದಂತಾದರು. ಆಗ ಪಪ್ಪು ಕುಟುಂಬವೂ ತಮ್ಮ ಮನೆಯ ಗಂಟುಮೂಟೆಗಳನ್ನು ಕಟ್ಟಿಕೊಂಡು ನಗರದ ಬೀದಿಯಲ್ಲಿ ನಡೆದುಕೊಂಡು ಹೊರಟರು. ಸುಂದರವಾದ ಶುಚಿಯಾದ ಇಂತಹ ನಗರದಲ್ಲಿ ನಮಗೆ ಸ್ಥಾನವಿಲ್ಲ ಅದಕ್ಕಾಗಿ ಕೊಳೆ ತುಂಬಿದ ಮತ್ತೊಂದು ನಗರವನ್ನು ಹುಡುಕೋಣವೆಂದು ಬದುಕಿನ ಅತಂತ್ರತೆಯಿಂದ ದುಃಖಿತರಾಗಿ ಹೊರಟರು. ಇದು ಬಡಪಾಯಿಗಳ ಕೆಲಸವನ್ನು ಕಸಿದುಕೊಂಡು, ಅವರನ್ನು ಅಸಹಾಯಕರನ್ನಾಗಿಸಿ ಬದುಕಲು ಸಾಧ್ಯವಿಲ್ಲದ ಸ್ಥಿತಿಗೆ ತಂದು ನಿಲ್ಲಿಸಲು ಆಳುವ ಆಡಳಿತ ವರ್ಗವು, ಬಂಡವಾಳಶಾಹಿಗಳ ಕಪಿ ಮುಷ್ಠಿಯಲ್ಲಿ ಸಿಕ್ಕಿಕೊಂಡು ಬಡವರ ನೋವುಗಳಿಗೆ ಸ್ಪಂದನೆಯನ್ನು ನೀಡದೆ, ಅವರನ್ನು ಅವರ ಬದುಕಿನ ಜೊತೆ ಆಟವಾಡುತ್ತಾ ತಮ್ಮ ರಾಜಕೀಯ ತಂತ್ರಗಳಿಂದ ಅಂತಹ ಅಸಹಾಯಕರ ಮೇಲೆ ಶೋಷಣೆಯನ್ನು ಮಾಡುತ್ತಲೇ ಇರುತ್ತಾರೆ ಎಂಬುದೇ ಈ ಕಥೆಯ ತಾತ್ಪರ್ಯವಾಗಿರುತ್ತದೆ.

ಬೆಳೆಯುತ್ತಿರುವ ನಗರದಿಂದ ಸಾಮಾನ್ಯ ವ್ಯಕ್ತಿಗಳ ಜೀವನಮಟ್ಟ ಕುಸಿಯುತ್ತಿದೆ. ದೊಡ್ಡ ದೊಡ್ಡ ಕೈಗಾರಿಕೆಗಳ ವರ್ಗೀಕರಣದಿಂದ, ತಂತ್ರಜ್ಞಾನದ ಬಳಕೆಯಿಂದ ಶ್ರಮವಹಿಸಿ ದುಡಿಯುವ ಬಡವರಿಗೆ ಕೆಲಸವಿಲ್ಲದಂತಾಗಿದೆ. ಯಾವ ಯಾಂತ್ರಿಕ ಜೀವನದ ಪರಿಚಯವೂ ಇಲ್ಲದೆ, ತಮ್ಮ ದೇಹದ ಬಲದಿಂದ ದುಡಿದು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುವ ಕುಟುಂಬಗಳು ಕೆಲಸವಿಲ್ಲದೆ ಅಲೆಮಾರಿಗಳಾಗಿ ಜೀವನದ ಅತಂತ್ರತೆಯಲ್ಲಿ ಬದುಕುತ್ತಿದ್ದಾರೆ. ಅಂದೇ ದುಡಿದು ಅಂದೇ ಊಟ ಮಾಡುವ ಜನರಿಗೆ ಅನ್ನ ಸಿಗದಂತಾಗಿದೆ. ತಮ್ಮ ದೈಹಿಕ ಶ್ರಮವನ್ನೇ ನಂಬಿಕೊಂಡ ಕುಟುಂಬಗಳು ಬೀದಿ ಪಾಲಾಗತೊಡಗಿದವು. ನಗರವೂ ನೋಡುವುದಕ್ಕೆ ಸುಂದರವಾಗಿ ಕಂಡರೂ ಅಲ್ಲಿ ಸಾಮಾನ್ಯ ಜನರು ಬದುಕುವುದಕ್ಕೆ ತುಂಬಾ ಕಷ್ಟಕರವಾಗಿರುತ್ತದೆ. ನಗರ ಪ್ರದೇಶದಲ್ಲಿ ಯಾರೊಬ್ಬರಲ್ಲಿ ಪರಸ್ಪರ ನಂಬಿಕೆಗಳಿಲ್ಲದೆ ಮಾನವೀಯತೆಯನ್ನು ಮರೆತು ಸಾಮಾನ್ಯರನ್ನು, ಅಸಹಾಯಕರನ್ನು ವಂಚಿಸುವವರೇ ತುಂಬಿಕೊಂಡಿರುತ್ತಾರೆ.

ಏನೂ ಅರಿಯದ ಮುಗ್ಧಬಡಪಾಯಿಗಳ ಮೇಲೆ ದೌರ್ಜನ್ಯವನ್ನು ಮಾಡಿ ಅವರಿಗೆ ಆಹಾರ, ನೀರು, ವಸ್ತ್ರ, ವಸತಿಗಳಿಲ್ಲದಂತೆ ಬಂಡವಾಳಶಾಹಿಗಳು ಅವರ ಬದುಕನ್ನೇ ಸರ್ವನಾಶ ಮಾಡುತ್ತಿದ್ದಾರೆ. ಸಮಾಜದಲ್ಲಿ ಬದುಕುವುದಕ್ಕೆ ಎಲ್ಲರಿಗೂ ಸಮಾನವಾದ ಕೆಲಸ, ವೇತನ, ಸ್ಥಾನಮಾನಗಳು ಸಿಗಬೇಕು. ಆದರೆ ಬಲವುಳ್ಳವರು ಅಸಹಾಯಕರ ಮೇಲೆ ಅಕ್ರಮಣ ಮಾಡಿ ಅವರ ಹಕ್ಕುಗಳನ್ನು ಕಸಿದುಕೊಂಡು ಬದುಕಲು ಸಾಧ್ಯವಿರದಂತಹ ಸ್ಥಿತಿಯನ್ನು ಬಡವರಿಗೆ ತಂದಿದ್ದಾರೆ. ಭಿಕ್ಷೆ ಬೇಡಿಕೊಂಡು ಬದುಕಲು ಸಹ ಸಾಧ್ಯವಾಗದಂತಹ ಸ್ಥಿತಿ ನಗರ ಪ್ರದೇಶಗಳಲ್ಲಿ ಇವತ್ತಿನ ಬದಲಾವಣೆಯ ಜೀವನಕ್ರಮದಿಂದ ಉಂಟಾಗಿದೆ. ಇದು ಉಳ್ಳವರು ಬುದ್ಧಿಜೀವಿಗಳು ಅಸಹಾಯಕರ ಮೇಲೆ ನಡೆಸುತ್ತಿರುವ ಬಲತ್ಕಾರದ ಶೋಷಣೆಯಾಗಿರುತ್ತದೆ. ಸಾಮಾನ್ಯ ಗುಡಿಕೈಗಾರಿಕೆಗಳು ಈ ನಗರ ಪ್ರದೇಶದ ಬೆಳವಣಿಗೆಯಿಂದ ಅವನತಿಯನ್ನು ಕಂಡವು. ಇದರಿಂದ ಸಾಮಾನ್ಯ ಜನರ ಬದುಕಿಗೆ

ಆಸರೆಯಾಗಿದ್ದ ಕೆಲಸಗಳು ಕೈತಪ್ಪಿ ಹೋದವು. ಅದರಂತೆ ಈ ಕಥೆಯಲ್ಲಿ ನಗರದಲ್ಲಿ ರಿಕ್ಷೆಯನ್ನು ತುಳಿದುಕೊಂಡು ಜೀವನ ನಡೆಸುತ್ತಿದ್ದನು.

ಪಪ್ಪುವಿನ ಭವಿಷ್ಯ ನಗರ ಪ್ರದೇಶದವರು ರಿಕ್ಷೆಗಳ ಬಳಕೆಯನ್ನು ನಿರ್ಬಂಧಿಸಿದ ಹಿನ್ನೆಲೆಯಲ್ಲಿ ಆತನ ಇಡೀ ಕುಟುಂಬಕ್ಕೆ ಹೊಟ್ಟೆಗೆ ಅನ್ನವಿಲ್ಲದಂತಾಗಿದೆ. ಆದರೆ ಇಂತಹ ಸಾಮಾನ್ಯ ಜನರ ನೋವುಗಳಿಗೆ ಅಧಿಕಾರಿಶಾಹಿಗಳು ಸ್ಪಂದಿಸದೆ, ಅವರ ನೋವಿನ ಕೂಗನ್ನು ಕೇಳದೆ, ಅವರು ಬದುಕುವ ಹಕ್ಕುಗಳನ್ನು ಕಸಿದುಕೊಂಡಿದ್ದಾರೆ ಎಂಬುವುದನ್ನು ಕಥೆಗಾರರು ತಮ್ಮ ಈ ಕತೆಯಲ್ಲಿ ತಮ್ಮ ಸಂವೇದನೆಗಳ ಮೂಲಕ ಸಾಮಾನ್ಯ ಜನರ ಸ್ಥಿತಿಗತಿಗಳನ್ನು ಅವರ ಬಡತನದ ನೋವುಗಳನ್ನು ಈ ಕಥೆಯ ಮೂಲಕ ತೋರಿಸಿಕೊಟ್ಟಿದ್ದಾರೆ. ಸರ್ವರಿಗೂ ದುಡಿಯಲು ಕೆಲಸವನ್ನು ನೀಡಬೇಕಾಗಿರುವುದು ಆಳುವ ಸರ್ಕಾರದ ಆದ್ಯ ಕರ್ತವ್ಯವಾಗಿರುತ್ತದೆ. ಯಾರೊಬ್ಬರೂ ಕೆಲಸವಿಲ್ಲದೆ ಹಸಿವಿನಿಂದ ಬಳಲಬಾರದು. ಕೆಲಸವನ್ನು ಪಡೆದುಕೊಳ್ಳುವ ಹಕ್ಕು ಎಲ್ಲರಿಗೂ ಇದೆ. ಈ ಹಿನ್ನೆಲೆಯಲ್ಲಿ ಅಧಿಕಾರಿಶಾಹಿ ವರ್ಗದವರು ಸಾಮಾನ್ಯ ಬಡಜನರ ಜೀವನ ಸ್ಥಿತಿಗಳಿಗೆ ಅನುಗುಣವಾಗಿ ಕ್ರಮಗಳನ್ನು ತೆಗೆದುಕೊಳ್ಳುವಂತ ಅನಿವಾರ್ಯತೆ ಸೃಷ್ಟಿಯಾಗಿದೆ.

ಆದ್ದರಿಂದ ಅಧಿಕಾರಿಶಾಹಿಗಳು ಸಾಮಾನ್ಯ ಬಡವರ ಜೀವನವನ್ನು ಶೋಷಣೆ ಮಾಡದೆ, ಅವರಿಗೆ ಬದುಕುವ ನ್ಯಾಯವನ್ನು ಕೊಡಿಸಿ ಸ್ವತಂತ್ರದಿಂದ ತಮ್ಮ ಕೆಲಸದಲ್ಲಿ ತಾವು ತೊಡಗಿಸಿಕೊಳ್ಳಲು ಮುಕ್ತವಾದ ಅವಕಾಶವನ್ನು ನೀಡಬೇಕು. ಯಾರೊಬ್ಬರ ಕೆಲಸವನ್ನು ಬದಲಾಗುವ ನಗರದ ಬಂಡವಾಳಶಾಹಿಗಳು ಕಸಿದುಕೊಳ್ಳಬಾರದು ಎಂಬುವುದನ್ನು ಮಾರ್ಕ್ಸವಾದ ಮತ್ತು ಲೋಹಿಯವಾದದ ನೆಲೆಯಿಂದ ಈ ಕಥೆಯು ಸಾದರಪಡಿಸುತ್ತದೆ. ಹಾಗೂ ಸಾಮಾನ್ಯ ಬಡಜನರ ಹಕ್ಕುಗಳಿಗೆ ಬೆಂಬಲವನ್ನು ನೀಡುತ್ತದೆ. ಅದರಂತೆ ಸಾಮಾನ್ಯ ಸ್ಥಿತಿಯಲ್ಲಿರುವ ಜನರ ನೋವಿನ ಸಂವೇದನೆಗಳನ್ನು ಅನಾವರಣಗೊಳಿಸುತ್ತದೆ.

**೩.೩. ಕೂಲಿಕಾರರ ಕೂಗು ಮತ್ತು ಶೋಷಣೆಯ ಮೂಲ**

ವೆಂಕಟ ಸುಬ್ಬಯ್ಯನವರು ಸಂಪಾದನೆ ಮಾಡಿರುವ 'ತೆಲುಗು ಕಥಾ ಸಂಕಲನದ ಸಿ.ಆರ್.ರಾವುರವರು ಬರೆದಿರುವ 'ಬಂಗಾರಮ್ಮನ ಜಮಿಂದಾರಿ'ಯು ಮೇಲ್ವರ್ಗದವರು ಕೆಳವರ್ಗದವರಿಗೆ ಮಾಡುವ ಶೋಷಣೆಯ ಕತೆಯಾಗಿದೆ. ಒಬ್ಬ ವ್ಯಕ್ತಿಯಲ್ಲಿನ ಮುಗ್ಧತೆಯನ್ನು, ಸರಳತೆಯನ್ನು ಮೂರ್ಖತ್ವವೆಂದು ಭಾವಿಸಿ ಉಳ್ಳವರು ಹೇಗೆ ಬಡವರನ್ನು ಬಳಕೆ ಮಾಡಿಕೊಳ್ಳುತ್ತಾರೆ ಎಂಬುವುದನ್ನು ಈ ಕಥೆಯು ಸ್ಪಷ್ಟತೆಯನ್ನು ನೀಡುತ್ತದೆ. ಸ್ವಲ್ಪ ಪ್ರೀತಿಗೆ ಮಾರುಹೋಗುವ ತನ್ನ ಜೀವನವೇ ವಂಚಿತ ಧನಿಕರಿಗೆ ಸಮರ್ಪಿಸುವ ಬಡ ಯುವಕನ ಕಥೆಯು ಶೋಷಣೆಯ ಆಳವನ್ನು ಅರ್ಥೈಸುತ್ತಾ, ಸಮಾಜದಲ್ಲಿರುವ ಬಂಡವಾಳ ಶಾಹಿಗಳ ಕುತಂತ್ರಗಾರಿಕೆಯನ್ನು 'ಬಂಗಾರಮ್ಮನ ಜಮಿಂದಾರಿ' ಕಥೆಯು ಸವಿಸ್ತಾರವಾಗಿ ತನ್ನ ಛಾಯೆಗಳನ್ನು ಒಂದೊಂದು ಸಂದರ್ಭದಲ್ಲಿ ತಮಗಾಗಿ ತಮ್ಮ ಉಪಯೋಗಕ್ಕಾಗಿ ಹೇಗೆ ಬಡತನವನ್ನು ಬಳಸಿಕೊಳ್ಳುತ್ತಾರೆ ಎಂಬುದನ್ನು ಶೋಷಣೆಯ ಇರುವನ್ನು

ಹರವುತ್ತಾ ಹೋಗುತ್ತದೆ. ಬಂಗಾರಮ್ಮ ಜಮಿಂದಾರಿಯ ಯಜಮಾನಿ ಅವಳೊಬ್ಬ ವಿಧವೆ. ತನ್ನ ಮನೆ ಹೊಲದ ಕೆಲಸಕ್ಕಾಗಿ ತನ್ನ ಬಿಡಿ ಇಡೀಯ ಸೇವೆಗಾಗಿ ಜೀತದಾಳನ್ನು ಇಟ್ಟುಕೊಂಡಿದ್ದಾಳೆ. ಆತನೆ ಯುವಕ ಭೀಮಯ್ಯ ಹಗಲಿರುಳೆನ್ನದೆ ನಿಷ್ಠೆಯಿಂದ ಕೆಲಸ ಮಾಡುವ ವ್ಯಕ್ತಿ ಈತ. ನಂಬಿಕೆಯಂತೆ ಅನ್ನ ಕೊಡುವ ಬಂಗಾರಮ್ಮನೇ ನನ್ನ ದೇವರು. ಎಂದುಕೊಂಡು ಇತರ ಊರಿನ ಜನರೆಲ್ಲ ಬೆಳೆದ ಫಸಲಿಗಿಂತ ಬಂಗಾರಮ್ಮನ ಹೊಲದ ಫಸಲೇ ಅಧಿಕವಾಗುತ್ತಿತ್ತು.

ವರ್ಷದಿಂದ ವರ್ಷಕ್ಕೆ ಇಳುವರಿಯನ್ನು ಹೆಚ್ಚಾಗುವುದಕ್ಕೆ ಭೀಮಯ್ಯನ ಶ್ರಮವೇ ಅದಕ್ಕೆ ಕಾರಣವಾಗಿತ್ತು. "ಏಳನೇ ವಯಸ್ಸಿನಲ್ಲಿ ದನಕಾಯಲು ಅಲ್ಲಿ ಸೇರಿ. ರಾತ್ರಿಯ ತಂಗಳನ್ನು ಬೆಳಗ್ಗೆ, ಬೆಳಗ್ಗೆಯ ತಂಗಳನ್ನು ರಾತ್ರಿ ತಿಂದು ಕಾಯ ಕಷ್ಟಪಟ್ಟು ದೇಹ ಗಟ್ಟಿಗೊಳಿಸಿಕೊಳ್ಳುತ್ತಾ ಇಪ್ಪತ್ತೈದರ ವಯಸ್ಸಿನವನಾದ ಭೀಮಯ್ಯ ಜಮಿಂದಾರಿ ಎಲ್ಲ ರೀತಿಯಲ್ಲಿ ಎರಡಷ್ಟು ಬೆಳೆಯಿತು. ಆದರೆ ಭೀಮಯ್ಯನ ಗುಡಿಸಲು ತಂದೆಯ ಕಾಲದಲ್ಲಿ ಹೇಗಿತ್ತೋ ಈಗಲೂ ಹಾಗೇ ಇದೆ. ಇದ್ದಷ್ಟೇ ಇದೆ. ಅಷ್ಟೆ ಅಲ್ಲದೆ ಹಾಳು ಬಿದ್ದಿದೆ."[೭] ಆದರೂ ಪ್ರತಿದಿನ ಹಗಳಿರುಳು ಬಂಗಾರಮ್ಮನ ಹೊಲದ ಕೆಲಸವನ್ನು ಮಾಡಿಕೊಂಡು ನಂಬಿಕೆಯಿಂದ ತನ್ನ ಜೀವನ ಸಾಗಿಸುತ್ತಿದ್ದಾನೆ. ಭೀಮಯ್ಯ ಆತನ ಶ್ರಮದಿಂದ ಬಂಗಾರಮ್ಮನ ಬೆಳೆ ಬಂಗಾರದಂತೆ ಬಂದು ಊರಿನ ಜನರಿಗಿಂತ ಅಧಿಕ ಲಾಭವನ್ನು ತಂದುಕೊಟ್ಟಿದ್ದಾನೆ. ಅದಕ್ಕೆಲ್ಲ ಭೀಮಯ್ಯನೇ ಕಾರಣವಾಗಿದ್ದನು. ಬೆವರಿನ ಶ್ರಮ ಒಬ್ಬರದು, ಅದನ್ನು ಶ್ರಮವಿಲ್ಲದೆ ಉಣ್ಣುವವರು ಮತ್ತೊಬ್ಬರು ಇದೇ ಶೋಷಣೆ.

ಶ್ರಮ ಪಡುವವನು ಅನ್ನದಾತ, ಆತನಿಗೆ ಅನ್ನಯಿಲ್ಲ. ಮೋಸ ವಂಚನೆ ಮಾಡುವರಿಗೆ ಮನೆ, ಹೊಲಗದ್ದೆಗಳಿವೆ. ಆದರೆ ನಂಬಿಕೆಯನ್ನು ಉಸಿರನ್ನಾಗಿಸಿಕೊಂಡು ತನ್ನ ತೋಳು ಶಕ್ತಿಯಿಂದ ಬಿಸಿಲೆನ್ನದೆ, ಚಳಿಯೆನ್ನದೆ, ಹಗಲಿರುಳು ಮಳೆಗಾಳಿಗಂಜದೆ, ಸದಾ ತನ್ನ ದೇಹವನ್ನೇ ಸೇವೆಗಾಗಿ ಉಪಯೋಗಿಸುತ್ತಿರುವ ಬಡವನಿಗಿಲ್ಲ ಮನೆಹೊಲಗದ್ದೆ. ದುಡಿಯುವುದಕ್ಕಾಗಿಯೇ ಹುಟ್ಟಿದವನು ಶೋಷಣೆಯಲ್ಲಿಯೇ ಒಳಪಟ್ಟವನು. ಯಾವಾಗ ಈ ಜಮಿಂದಾರಿಕೆಯವರಿಂದ ಮುಕ್ತಿ ಎಂಬುವುದನ್ನು ಭೀಮಯ್ಯನ ಬದುಕಿನ ಮೂಲಕ ಈ ಕತೆಯು ತಿಳಿಸಿಕೊಡುತ್ತದೆ. ಬಂಗಾರಮ್ಮನಲ್ಲಿ ಭೀಮಯ್ಯನ ಮೇಲೆ ಹುಟ್ಟುವ ಕಾಮಾಸಕ್ತಿಗೂ ಆತನ ಆರ್ಥಿಕ ಜೀವನಕ್ಕೂ ಸಂಬಂಧವಿದೆ. ವಿಧವೆಯಾದ ಬಂಗಾರಮ್ಮ ಭೀಮಯ್ಯನನ್ನು ಬಳಕೆ ಮಾಡಿಕೊಂಡರೆ ತನ್ನ ದೇಹ ಸುಖವೂ ಸಿಗುತ್ತದೆ. ಅದಲ್ಲದೆ ಅವಳಿಗೆ ಗಲಾಮನಾಗಿ ಜಮೀನಿನಲ್ಲಿ ದುಡಿದು ಬಂಗಾರವನ್ನು ಹೆಚ್ಚಿಸಲು ಸಹಾಯಕವಾಗುತ್ತದೆ. ಇದು ಬಂಗಾರಮ್ಮಳ ಪೂರ್ವಾಲೋಚನೆಯೇ ಆಗಿದೆ.

ಆದರೆ ಭೀಮಯ್ಯ ಎಷ್ಟೇ ಕಾಡಿಸಿದರೂ ಬಂಗಾರಮ್ಮನ ಕಾಮಾಸಕ್ತಿಗೆ ಸಮ್ಮತಿಸದೆ ಇರುವುದು ಬಡವನಲ್ಲಿರುವ ನಂಬಿಕೆಯ ಪ್ರತಿಷ್ಠೆಯನ್ನು ಎತ್ತಿ ತೋರಿಸುತ್ತದೆ. ನಂತರ ಭೀಮಯ್ಯ ಮದುವೆಯಾದದ್ದು ಬಂಗಾರಮ್ಮನಿಗೆ ಕಿರಿಕಿರಿಯೆಂದೆನಿಸುತ್ತದೆ. ಅವನು ಮದುವೆಯಾಗದಿದ್ದರೆ ಹಗಲಿರುಳು ನನ್ನ ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದ ಎಂದುಕೊಂಡು ಅವನು ಮನೆಗೆ ಹೋಗುವುದು ಅವಳಿಗೆ

ಸಹಿಸಲಾಗುತ್ತಿಲ್ಲ. ಇದು ಬಂಡವಾಳಶಾಹಿಗಳು ಬಡವರ ಮೇಲೆ ಮಾಡುವ ದೌರ್ಜನ್ಯವೇ ಆಗಿದೆ. ಭೀಮಯ್ಯನ ಹೆಂಡತಿ ಸೀತೆ ಮೊದಲ ಹೆರಿಗೆ ನೋವು ಕಾಣಿಸಿಕೊಂಡಿದೆ. ಮನೆಯಲ್ಲಿ ಬೇರೆ ಯಾರೂ ಇಲ್ಲ. ಪಕ್ಕದ ಮನೆಯಲ್ಲಿರೊ ಯಾರೋ ಒಬ್ಬರು ಈ ಸುದ್ದಿಯನ್ನು ಬಂಗಾರಮ್ಮನಿಗೆ ತಿಳಿಸಿದಾಗ ಭೀಮಯ್ಯ ಮನೆಯಲ್ಲಿದ್ದರೂ ಇಲ್ಲವೆಂದು ಹೇಳಿಕಳಿಸುತ್ತಾಳೆ. ಅವಳಿಗೆ ತನ್ನ ಮನೆ ಕೆಲಸವೇ ಮುಖ್ಯವಾಗಿದೆ. ಕನಿಷ್ಠಪಕ್ಷ ಸೀತೆಗೆ ಬೇಕಾಗಿರುವ ಔಷಧಿಯನ್ನು ನೀಡುವುದಿಲ್ಲ.

ಭೀಮಯ್ಯ ಬಂಗಾರಮ್ಮನಿಗೆ ಬಂದು ನನ್ನ ಹೆಂಡತಿ ತುಂಬುಗರ್ಭಿಣಿ ರಾತ್ರಿ ಮನೆಗೆ ಹೋಗುತ್ತೇನೆ ಎಂದು ಬೇಡಿಕೊಂಡಾಗ ಬಂಗಾರಮ್ಮ ನಮ್ಮ ಮನೆಯ ಎಮ್ಮೆ ಇವತ್ತೆ ಹೊಟ್ಟೆ ನೋವು ಕಾಣಿಸಿಕೊಂಡಿದೆ ನಿನಿಲ್ಲದಿದ್ದರೆ ಆ ಎಮ್ಮೆ ಹೆರುವುದಿಲ್ಲ. ಹೆತ್ತ ಹಸುವನ್ನು ಮೊದಲು ನೀನೇ ನೋಡಬೇಕು ಎಂದು ಭೀಮಯ್ಯನನ್ನು ತಡೆಯುತ್ತಾಳೆ. ಇತ್ತ ಭೀಮಯ್ಯನ ಹೆಂಡತಿ ಹೆರಿಗೆ ನೋವಿನಲ್ಲಿ ಯಾರೂ ಆರೈಕೆ ಮಾಡುವವರು ಇಲ್ಲದಿರುವುದಕ್ಕಾಗಿ ಸತ್ತು ಹೋಗುತ್ತಾಳೆ. ಅತ್ತ ಭೀಮಯ್ಯ ಆಗ ರಾತ್ರಿ ಬಂಗಾರಮ್ಮನ ಎಮ್ಮೆಯನ್ನು ಹೆರಸಿಕೊಳ್ಳುತ್ತಾನೆ. ಇದಕ್ಕಿಂತ ಮತ್ತೊಂದು ದುರಂತವಿಲ್ಲ ಎಮ್ಮೆಯನ್ನು ಹೆರಿಸಿಕೊಳ್ಳವುದಕ್ಕಾಗಿ ಮನೆಯ ಹೆಂಡತಿಯನ್ನೇ ಕಳೆದುಕೊಳ್ಳುತ್ತಾನೆ. ಇದು ಬಂಗಾರಮ್ಮ ಮಾಡುವ ಭೀಮಯ್ಯನ ಮೇಲೆ ಅನ್ಯಾಯದ ಶೋಷಣೆಯಾಗಿದೆ. ಕೊನೆಯಲ್ಲಿ ಭೀಮಯ್ಯನಿಗೆ ಬಂಗಾರಮ್ಮ ಮಾಡಿದ ಎಲ್ಲಾ ಶೋಷಣೆಗಳು ಅರ್ಥವಾದಾಗ, ಆತ ವ್ಯಕ್ತಪಡಿಸುವ ಆಕ್ರೋಶ ಬಂಗಾರಮ್ಮನಿಂದ ದೂರ ಹೋಗುವ ಆತನ ನಿಲುವು ದಲಿತರ ಸ್ವತಂತ್ರತೆಯ ಹುಡುಕಾಟವೇ ಆಗಿದೆ.

ದಲಿತರ ಶ್ರಮವೊಂದೇ ಬೇಕು ಧನಿಕರಿಗೆ ಎಂಬ ಅವರ ಉದ್ದೇಶವನ್ನು ಈ ಕಥೆಯು ಕಟುವಾಗಿ ಟೀಕಿಸುತ್ತದೆ. ದಲಿತರಿಂದಲೇ ಧನಿಕ ಎಂಬುದನ್ನು ಭೀಮಯ್ಯನ ಮೂಲಕ ಉತ್ತರಿಸುತ್ತದೆ. ಜಮಿಂದಾರರು ದಲಿತರನ್ನು ತಮ್ಮಬಳಿ ಜೀತಕ್ಕಾಗಿ ಇಟ್ಟುಕೊಂಡು, ಅವರ ಪರಿಶ್ರಮದಿಂದ ತಾವು ಒಡೆಯರಾಗಿ ಅವರನ್ನೆ ಗುಲಾಮರಂತೆ ಕಾಣುತ್ತಿದ್ದಾರೆ. ಅಷ್ಟೇ ಅಲ್ಲದೆ ದಲಿತರ ಭೂಮಿಯನ್ನು ಮೋಸ, ಕಪಟತನದಿಂದ ವಶಪಡಿಸಿಕೊಂಡು ದಲಿತರಿಗೆ ಭೂಮಿ ಇಲ್ಲದಂತೆ ಮಾಡಿ ತಾವು ಆ ಭೂಮಿಯ ಒಡೆಯರಾಗಿ, ಅದೇ ಭೂಮಿಯಲ್ಲಿ ದಲಿತರನ್ನು ದುಡಿಸಿಕೊಂಡು ಬಡತನದ ಸ್ಥಿತಿಯಲ್ಲಿ ಬದುಕುವಂತೆ ಮಾಡಿದ್ದಾರೆ. ಭೂಮಿಯನ್ನು ಕಳೆದುಕೊಂಡ ದಲಿತರು ಆರ್ಥಿಕ ಶೋಷಣೆಯಿಂದ ಅನಿವಾರ್ಯವಾಗಿ ಜಮಿಂದಾರರ ಮನೆಯಲ್ಲಿ ಜೀತದಾಳುಗಳಾಗಿ, ಅವರು ಹಾಕುವ ಅನ್ನವನ್ನು ತಿಂದುಕೊಂಡು ಬದುಕುತ್ತಿದ್ದಾರೆ. ಅವರಿಗೆ ಆದ ಅನ್ಯಾಯದ ಅರಿವಿಲ್ಲದೆಯೇ ಜಮಿಂದಾರರ ಸೇವೆಯನ್ನು ಮಾಡುತ್ತ, ಅವರ ಆರ್ಥಿಕ ಸ್ಥಿತಿಯನ್ನು ಇನ್ನಷ್ಟು ಬಲಿಷ್ಠಗೊಳಿಸಲು ತಮ್ಮ ಬೆವರಿನ ಶ್ರಮದಿಂದ ದುಡಿಯುತ್ತಿದ್ದಾರೆ.

ಆದರೆ ಅವರಿಗೆ ಮಾತ್ರ ಬಡತನ ತಪ್ಪಿಲ್ಲ, ತಪ್ಪವುದೂ ಇಲ್ಲ. ಇಂತಹ ಜಮಿಂದಾರರು ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯದ ಶೋಷಣೆಯನ್ನು ಕಂಡು ಕಥೆಗಾರರು ಈ ಕಥೆಯಲ್ಲಿ

ಬರುವ ದಲಿತ ಯುವಕ ಭೀಮಯ್ಯನ ಪಾತ್ರದ ಚಿತ್ರಣದಲ್ಲಿ ತೋರಿಸಿಕೊಟ್ಟಿದ್ದಾರೆ. ಅದೇಷ್ಟೇ ನಂಬಿಕೆಯಿಂದ ಬಂಗಾರಮ್ಮನ ಜಮೀಂದಾರಿಕೆಯಲ್ಲಿ ಭೀಮಯ್ಯ ದುಡಿದರೂ ಕೊನೆಗೆ ಅವಳು ಆತನಿಗೆ ಮಾಡುವ ವಂಚನೆ, ಮೋಸಗಳು ದಲಿತರ ಮುಗ್ಧ ಮನಸ್ಸುಗಳ ಮೇಲೆ ಬುದ್ಧಿವಂತರಾದ ಜಮಿಂದಾರರು ಮಾಡುತ್ತಿರುವ ಆರ್ಥಿಕವಾದ ಶೋಷಣೆಯಾಗಿರುತ್ತದೆ. ಈ ಶೋಷಣೆಯಿಂದಲೇ ದಲಿತರು ಎಲ್ಲವನ್ನು ಕಳೆದುಕೊಂಡು ಅತಂತ್ರತೆಯಿಂದ ಅಸಹಾಯಕರಾಗಿ ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಗಂಡನಿಲ್ಲದ ಬಂಗಾರಮ್ಮ ತನ್ನ ಕಾಮದ ತೃಪ್ತಿಗಾಗಿ ಭೀಮಯ್ಯನನ್ನು ಒತ್ತಾಯದಿಂದ ತನ್ನ ಮನದಾಸೆಯನ್ನು ತೀರಿಸಿಕೊಳ್ಳಲು ಕರೆಯುವುದು ಜಮಿಂದಾರರ ಹೆಣ್ಣು ಮಕ್ಕಳಲ್ಲಿರುವ ಸಾಮಾನ್ಯ ಲೈಂಗಿಕ ದೌರ್ಬಲ್ಯವನ್ನು ತೋರಿಸಿಕೊಡುತ್ತದೆ.

ಅದರಂತೆ ಭೀಮಯ್ಯ ಅದಕ್ಕೆ ಸಮ್ಮತಿಸದೇ ಇರುವುದು ದಲಿತರಲ್ಲಿರುವ ನಂಬಿಕೆಯನ್ನು ಸೂಚಿಸುತ್ತದೆ. ಆದರೆ ಅದರ ಅತೃಪ್ತಿಯಿಂದಲೇ ಬಂಗಾರಮ್ಮ ಸೇಡು ತೀರಿಸಿಕೊಳ್ಳಲು ಭೀಮಯ್ಯನನ್ನು ಮನೆಗೆ ಕಳುಹಿಸಿ ಕೊಡದೆ, ಆತನ ಹೆಂಡತಿಯ ಸಾವಿಗೆ ಕಾರಣವಾಗವುದು ಜಮಿಂದಾರರಲ್ಲಿರುವ ಅಮಾನವೀಯತೆ ಹಾಗೂ ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯವನ್ನು ಪ್ರತಿಪಾದಿಸುತ್ತದೆ. ಕಥೆಯ ಕೊನೆಯಲ್ಲಿ ವಾಸ್ತವ ಸತ್ಯವನ್ನು ಅರಿತ ಭೀಮಯ್ಯ ತನ್ನ ಸ್ವತಂತ್ರ ಬದುಕಿಗಾಗಿ ಜಮಿಂದಾರಿಕೆಯ ಮನೆಯನ್ನು ಬಿಟ್ಟು ಹೋಗುವುದು ದಲಿತರ ಸ್ವಾಭಿಮಾನದ ಬದುಕಿನ ಹಾದಿಯನ್ನು ತೋರಿಸುತ್ತದೆ. ಇಂತಹ ಅಂಶಗಳನ್ನು ಕೇಂದ್ರಿಕರಿಸಿ ಕಥೆಗಾರರು ಈ ಕಥೆಯಲ್ಲಿ ಜಮಿಂದಾರಿಕೆಯ ಒಡೆತನದಿಂದ ದಲಿತರು ಅನುಭವಿಸುತ್ತಿರುವ ಬಡತನ ಸಂಕಟಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ದಲಿತರಿಗೆ ಆರ್ಥಿಕವಾಗಿ ಸಬಲರಾಗಿ ಸಮಾನತೆಯನ್ನು ಸಾಧಿಸಬೇಕಾದರೆ ಭೂಮಿಯ ಒಡೆತನ ದಲಿತರಿಗೆ ಬರಬೇಕು.ಪ್ರತಿಯೊಬ್ಬ ದಲಿತನು ತನ್ನ ಬದುಕಿನ ನಿರ್ವಹಣೆಗಾಗಿ ಅವನದೆಯಾದ ಭೂಮಿ ಇರುವುದು ಅವನ ಹಕ್ಕಾಗಿ ರೂಪಿತವಾಗಬೇಕು. ಜಮಿಂದಾರರ ನೂರಾರು ಎಕರೆ ಭೂಮಿಗಳು ಹಂಚಲ್ಪಡಬೇಕುಎಂಬ ಆಶಯದ ಜೊತೆಗೆ, ಕಥೆಗಾರರು ಜೀತಪದ್ದತಿಯಿಂದ ದಲಿತರು ಪಡುತ್ತಿರುವ ವೇದನೆಗಳನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಿಂದ ಈ ಕತೆಯ ಮೂಲಕ ದಲಿತ ಸಂವೇದನೆಗಳನ್ನು ಪ್ರತಿಪಾದಿಸಿದ್ದಾರೆ.

'ಕಥಾ ಭಾರತಿ' ಎಂಬ ಕಥಾ ಸಂಕಲನವನ್ನು ಬಿ.ಎಸ್.ಖೂಬಾ ರವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ತಮಿಳನ ಶ್ರೀ ಪವಣ್ಣನ್ ರವರು ಬರೆದ 'ಅಂಗಿ' ಎಂಬ ಕಥೆಯು ಬಡತನದ ಬೆಂಕಿಯಲ್ಲಿ ಬೇಯುತ್ತಿರುವ ಒಬ್ಬ ಶಾಲಾ ಹುಡುಗನ ಅಸಹಾಯಕ ಮುಗ್ಧ ಸ್ಥಿತಿಯ ಜೀವನವನ್ನು ಕುರಿತು ವಿವರಿಸುತ್ತದೆ. 'ಅಂಗಿ' ಬಡತನದ ದಾರುಣ ಸ್ಥಿತಿಯ ಸಂಕೇತವಾಗಿ ಮೂಡಿ ಬಂದಿರುತ್ತದೆ. ಕರುಳು ಮಿಡಿಯುವ ಬಡತನದ ಸ್ಥಿತಿ ಒಂದೆಡೆಯಾದರೆ ಅದನ್ನು ಗೇಲಿ ಮಾಡುವ ಕ್ರೂರ ಜಗತ್ತಿನ ಪ್ರತಿಕ್ರಿಯೆ ಇನ್ನೊಂದಡೆ ಇರುತ್ತದೆ. ಇಂತಹ ಸ್ಥಿತಿಯಲ್ಲಿರುವ ಆ ಬಡ ಹುಡುಗನಿಗೆ ಇರುವ ಸಮಸ್ಯೆ ಏನು ಎಂದರೆ ತೊಟ್ಟುಕೊಳ್ಳಲು ಒಂದು

ಸರಿಯಾದ 'ಅಂಗಿ' ಇಲ್ಲದಿರುವುದು. 'ನಿನ್ನ ತೃಪ್ತಿಗಾಗಿ ತಿನ್ನು. ಇತರರ ತೃಪ್ತಿಗಾಗಿ ಒಳ್ಳೆಯ ಬಟ್ಟೆ ಧರಿಸು' ಎಂಬ ಫ್ರಾಂಕ್ಲಿನ್‌ನ ಮಾತಿನಂತೆ ತನ್ನ ತೃಪ್ತಿಗಾಗಿ ಉಣ್ಣಲು ಸರಿಯಾದ ಊಟವಿಲ್ಲ ಮತ್ತೊಬ್ಬರನ್ನು ತೃಪ್ತಿಪಡಿಸಿ ತಾನೂ ತೃಪ್ತಿಪಡುವುದಕ್ಕೆ ಒಂದು ಒಳ್ಳೆಯ ಅಂಗಿ ಇಲ್ಲ. ಇವೆರಡರಿಂದಲು ತೃಪ್ತನಿರದೆ ನಿರಾಸೆಯಿಂದ ಶಾಲೆಯಲ್ಲಿ ತನ್ನ ಸ್ನೇಹಿತರೊಂದಿಗೆ ದಿನಗಳನ್ನು ಕಳೆಯುವುದು ಆ ಹುಡುಗನಿಗೆ ತುಂಬಾ ಮಾನಸಿಕವಾದ ಹಿಂಸೆಯಾಗುತ್ತಿತ್ತು. ಶುಭ್ರವಾದ ಬಟ್ಟೆಯನ್ನು ಧರಿಸಿದರೆ ಮನಸ್ಸು ಕೂಡ ಶುಭ್ರದಿಂದ ಇರಲು ಸಾಧ್ಯವಾಗುತ್ತದೆ. ಬಟ್ಟೆಯು ಮಾನವನ್ನು ಮುಚ್ಚಿದಂತೆ ಮಾರ್ಯಾದೆಯನ್ನೂ ಸಹ ತಂದುಕೊಡುತ್ತದೆ. ಒಂದು ಒಳ್ಳೆಯ ಬಟ್ಟೆ ಧರಿಸಿದರೆ ಆತ ದಿನವಿಡೀ ಆತ್ಮ ಸ್ಥೈರ್ಯದಲ್ಲಿ ಇರುವಂತೆ ಅದು ನೋಡಿಕೊಳ್ಳುತ್ತದೆ. ಆತನಾಕುವ ಬಟ್ಟೆಗಳಿಂದಲೇ ಆತನ ಇಡೀ ಕುಟುಂಬದ ಸ್ಥಿತಿ-ಗತಿಯನ್ನು ಮತ್ತು ಆತನ ವ್ಯಕ್ತಿತ್ವವನ್ನು ಜನರು ಅರಿತುಕೊಂಡು ಬಿಡುತ್ತಾರೆ.

ಬಟ್ಟೆಯ ಒಳ ಮನಸಿನ ವ್ಯಕ್ತಿತ್ವವನ್ನು ಎಲ್ಲರಿಂದಲೂ ಗುರುತಿಸಲು ಸಾಧ್ಯವಾಗುವುದಿಲ್ಲ. ಹೊರ ಜಗತ್ತಿನ ಬಣ್ಣದ ಬದುಕಿಗೆ ಒಳ್ಳೆಯ ಬಟ್ಟೆ ಧರಿಸುವುದು ತುಂಬಾ ಅವಶ್ಯಕತೆ ಇದೆ. ಆದರೇನು ಮಾಡುವುದು ಈ ಒಳ್ಳೆಯ ಬಟ್ಟೆ ಧರಿಸಲು ಎಲ್ಲರಿಗೂ ಸಾಧ್ಯವಾಗುವುದಾರೂ ಹೇಗೆ...? ಕಿತ್ತು ತಿನ್ನುವ ಬಡತನದಲ್ಲಿ ಹಸಿವನ್ನಿಂಗಿಸುವುದೇ ಬಲುಕಷ್ಟಕರವಾಗಿರುವಾಗ ಇನ್ನು ಒಳ್ಳೆ ಬಟ್ಟೆ ಎಲ್ಲಿಂದ ಬರಬೇಕು...? ಏನೂ ಇಲ್ಲದಿದ್ದರೂ ದಲಿತರು ಬದುಕಬೇಕು. ಸುಂದರವಾದ ಬದುಕಿಗಾಗಿ ಅಲ್ಲ ತಾವು ಬದುಕುಳಿದರೆ ಸಾಕು. ಅರೆ ಹೊಟ್ಟೆ ತುಂಬಿಕೊಂಡು ಅರೆನಿದ್ರೆ ಮಾಡುವುದಕ್ಕಾಗಿ ಮತ್ತೆ ಅದೇ ಬಡತನದ ಜೀವನದಲ್ಲಿ ತೊಟ್ಟುಕೊಳ್ಳಲು 'ಅಂಗಿ' ಇಲ್ಲದ ಸ್ಥಿತಿಯಲ್ಲಿ ಕನಸುಗಳನ್ನು ಚೆಲ್ಲುತ್ತ ಅದೇ ಅವರ ಶೋಷಣೆಯಲ್ಲಿ ಬದುಕುತ್ತ, ನೊಂದುಬೆಂದು ಅಸಹಾಯಕ ಜೀವನ ನಡೆಸುತ್ತಿರುವ ಎಲ್ಲಾ ದಲಿತರ ಧ್ವನಿಯಾಗಿ ಈ ಕಥೆಯಲ್ಲಿ 'ಅಂಗಿ' ಹುಡುಗನ ಮೂಲಕ ಬಡವೇದನೆ ಅಭಿವ್ಯಕ್ತಗೊಂಡಿರುತ್ತದೆ. ಧನಪತರಾಯನು ನಾಲ್ಕನೇಯ ತರಗತಿಯ 'ಎ' ವಿಭಾಗದಲ್ಲಿ ಓದುತ್ತಿದ್ದಾನೆ.

ಆತನಿಗೆ 'ಅಂಗಿ' ಸದಾ ಎದುರು ನಿಂತು ಕಾಡುತ್ತಿರುವ ಸಮಸ್ಯೆಯಾಗಿರುತ್ತದೆ. ಆ ತರಗತಿಯಲ್ಲಿರುವ ಕೇಶವನ್, ಸೆಲ್ವಕುಮಾರ, ರಾಜಶೇಖರ ಮುಂತಾದ ಹುಡುಗರ ಗುಂಪೊಂದು ಸೇರಿ ಧನಪತರಾಯನು ಪ್ರತಿದಿನ ತರಗತಿಗೆ ತೊಟ್ಟುಕೊಂಡು ಬರುವ ಅಂಗಿಯನ್ನು ಕಂಡು ಅಪಹಾಸ್ಯ ಮಾಡುತ್ತಿದ್ದರು. ವರ್ಗದ ಹುಡುಗರೆಲ್ಲ ಸೇರಿ ಆ ಹುಡುಗನಿಗೆ ಕತ್ತೆ ಅನ್ನಲಿ ಅಥವಾ ಕುದುರೆ ಅನ್ನಲಿ ಬದಲಾಗಿ ಎತ್ತು, ಹಂದಿ ಹಾಗೆ ಹೀಗೆಂದು ಅಪಹಾಸ್ಯ ಮಾಡಲಿ ಅದಕ್ಕೆ ಆ ಹುಡುಗ ಚಿಂತಿಸುವುದಿಲ್ಲ. ಅದನ್ನು ತನ್ನ ಮನಸ್ಸಿಗೆ ಹಚ್ಚಿಕೊಳ್ಳದೆ ತನ್ನಷ್ಟಕ್ಕೆ ತಾನೇ ಸುಮ್ಮನೆ ಕುಳಿತುಕೊಂಡು ಬಿಡುತ್ತಿದ್ದನು. ಆದರೆ ಆತನು ಹಾಕಿಕೊಂಡ ಹರಿದ ಅಂಗಿಯನ್ನು ಕಂಡು 'ಪೋಸ್ಟ್‌ಬಾಕ್ಸ್' ಎಂದು ಕೂಗಿ ಅಪಹಾಸ್ಯ ಮಾಡಿದಾಗ ಮಾತ್ರ ಆ ಹುಡುಗನಿಗೆ ಸಹಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ.

ಈ ಪರಿಹಾಸವು ಆತನಿಗೆ ತುಂಬ ಮನೋವೇದನೆಯನ್ನು ನೀಡುತ್ತಿತ್ತು. ಆ ದೈತ್ಯ ಹುಡುಗರು ರದ್ದಿ ಕಾಗದದ ಚೂರುಗಳನ್ನು ತೆಗೆದುಕೊಂಡು ಮಡಿಚಿ ಅದನ್ನು ಲೆಟರ್ ಬಾಕ್ಸಿನಲ್ಲಿ ಚಿಟ್ಟಿಗಳನ್ನು ಹಾಕುವಂತೆ ಅವನ ಹರಿದ ಅಂಗಿಯಲ್ಲಿ ಹಾಕಿ ಬಿಡುತ್ತಿದ್ದರು. ಮುಖ್ಯವಾಗಿ ಅಂಗಿಯಲ್ಲಿ ಹರಿದ ಆ ರಂಧ್ರ ಬೆನ್ನಿನ ಮೇಲೆ ಇರುವುದರಿಂದ ಅದು ಅವರಿಗೆ ಸುಲಭವಾಗಿ ಬಿಡುತ್ತಿತ್ತು. ಆಗ ಆ ಹುಡುಗ ಅತಿಶಯವಾದ ದುಃಖದಿಂದ ಕಣ್ಣೀರನ್ನು ಸುರಿಸುತ್ತಿದ್ದನು. ಆ ಶಾಲೆಯ ಮಾಸ್ತರರಾದ ಮೋಹನ ರಂಗಮ್ ಅವರು ಆ ಉದ್ಧಟ ಹುಡುಗರನ್ನು ಬೆದರಿಸದೆ ಧನಪತರಾಯನನ್ನೇ ನೀನು ಒಳ್ಳೆಯ ಬಟ್ಟೆ ಹಾಕಿಕೊಂಡು ಬಂದಿದ್ದರೇ ಯಾರು ತಾನೇ ಅಪಹಾಸ್ಯ ಮಾಡುತ್ತಾರೆ ಎಂದು ಆ ಹುಡುಗನಿಗೆ ಗದರಿಸುತ್ತಿದ್ದರು. ಆದರೆ ಪಂಕಜಮ್ಮ ಟೀಚರರು ಮಾತ್ರ ಆ ಹುಡಗನ್ನು ಗೌರವಿಸಿ ಉದ್ಧಟತನ ಮಾಡುವ ಹುಡುಗರಿಗೆ ಬೆದರಿಸುತ್ತಿದ್ದರು. ಆದರೂ ಆ ಹುಡುಗರು ಅಪಹಾಸ್ಯವನ್ನು ಮಾಡುವುದನ್ನು ಬಿಡುತ್ತಿರಲಿಲ್ಲ. ಆಗ ಆ ಹುಡುಗ ಅಂಗಿಯ ಸ್ಥಿತಿಯನ್ನು ಕುರಿತು ದುಃಖತನದಿಂದ ನಿರಾಶನಾಗಿ ಕುಳಿತು ಬಿಟ್ಟನು.

ಒಂದು ದಿನ ಪಂಕಜಮ್ಮ ಟೀಚರ್ ಸೀಟಿಬಾರಿಸಿ ಎಲ್ಲರನ್ನೂ ಕರೆದು 'ನಾಳೆ ಹೂವುಗಳ ಪ್ರದರ್ಶನಕ್ಕಾಗಿ ನಿಮ್ಮೆಲ್ಲರನ್ನೂ ಕರೆದುಕೊಂಡು ಹೋಗಬೇಕಾಗಿದೆ. ಯಾರಿಗೆ ಬರಲು ಇಷ್ಟವಿದೆಯೋ ಅಂತವರು ಕೈಯನ್ನು ಮೇಲೆತ್ತಿ ಎಂದು ಹೇಳುತ್ತಾರೆ. ಆ ಹುಡುಗರ ಗುಂಪಿನಲ್ಲಿ ಅರ್ಧಕ್ಕಿಂತ ಹೆಚ್ಚು ಹುಡುಗರು ತಮ್ಮ ಕೈಯನ್ನು ಮೇಲೆತ್ತಿದರು ಆದರೆ ಉಳಿದವರು ಪಂಕಜಮ್ಮನ ಮುಖವನ್ನೇ ನೋಡುತ್ತ ನಿಂತರು ಹಾಗ ಪಂಕಜಮ್ಮ ಟೀಚರ್ ನಾನು ನಿಮಗೆ ದುಡ್ಡು ಕೇಳುತ್ತೇನೆಂದು ನೀವು ತಿಳಿದುಕೊಂಡಿದ್ದಿರಾ...? ದುಡ್ಡು ಗಿಡ್ಡು ಏನೂ ಬೇಕಾಗಿಲ್ಲ. ನಾವು ನಡೆದುಕೊಂಡೇ ಹೋಗಬಹುದು ಎಂದಾಗ ಎಲ್ಲಾ ಹುಡುಗರು ತಮ್ಮ ಕೈಯನ್ನು ಮೇಲೆತ್ತಿದ್ದರು. ಅದರಲ್ಲಿ ಆ ಹುಡುಗ ಧನಪತರಾಯನು ತನಗರಿವಿಲ್ಲದಂತೆ ತನ್ನ ಕೈ ಮೇಲೆತ್ತಿದ್ದನು.' ಆಗ ಹುಡುಗ 'ಅಂಗಿ' ಹರಿದಿದ್ದ ಭಾಗವು ಕೈ ಮೇಲೆತ್ತುವಾಗ ಮತ್ತೆ ಇನ್ನಷ್ಟು ಹರಿದು ಬಿಟ್ಟಿತು.

ಇದನ್ನು ಕಂಡ ಕೇಶವನ್ ಎಂಬ ಹುಡುಗ ಉಲ್ಲಸಿತ ಧ್ವನಿದಲ್ಲಿ ಅದೋ ಅಲ್ಲಿ ನೋಡಿ ಸಣ್ಣದಾಗಿದ್ದ ಲೇಟರ್ ಬಾಕ್ಸ್ ಇನ್ನಷ್ಟು ದೊಡ್ಡದಾಗಿದೆ ಎಂದು ಹೇಳಿದ್ದನ್ನು ಕೇಳಿದ ಎಲ್ಲಾ ಹುಡುಗರ ಕಣ್ಣುಗಳು ಧನಪತರಾಯನ ಅಂಗಿಯ ಕಡೆ ತಿರುಗಿದವು. ಆಗ ಆ ಹುಡುಗ ಆಶಾಭಾವದಿಂದ ಟೀಚರ್ ಕಡೆ ನೋಡಿದಾಗ ಅವರು ತಮ್ಮ ನಗೆಯನ್ನು ಮರೆಮಾಚಿಕೊಳ್ಳುತ್ತಿರುವುದನ್ನು ಕಂಡನು. ಆಗ ಮತ್ತೆ ಅವನ ಚೇತನ ಹುಮಸ್ಸು ಕುಗ್ಗಿ ಮತ್ತೆ ಅಂಗಿಯ ಚಿಂತೆಯಲ್ಲಿ ಮಗ್ನನಾಗಿ ಬಿಟ್ಟನು. ಪಂಕಜಮ್ಮ ಟೀಚರ್ 'ಮುಂಜಾನೆ ಎಂಟು ಗಂಟೆಗೆ ಸ್ಕೂಲಿನ ಗೇಟಿನ ಹತ್ತಿರ ಎಲ್ಲರೂ ಸರಿಯಾಗಿ ನಾಳೆ ಹಾಜರಾಗಬೇಕೆಂದು ತಿಳಿಸಿದರು. ಆಗ ಧನಪತರಾಯನು ಮನೆಗೆ ಹೋಗಿ ತನ್ನ ಅಂಗಿಗಳನ್ನು ಹುಡುಕುತ್ತಾನೆ. ಮನೆಯಲ್ಲಿದ್ದ ಅವನ ಒಟ್ಟು ನಾಲ್ಕು ಅಂಗಿಗಳು ಹರಿದು ಬಿಟ್ಟಿದ್ದವು. ಅವೆಲ್ಲ ಹಳೆಯ ಹರಿದಿರುವ ಅಂಗಿಗಳು ಹೆಗಲಿನ ಮೇಲೆ, ಬೆನ್ನಿನ ಮೇಲೆ ಮತ್ತು ಎದೆಯ ಮೇಲೆ

ಒಂದಿಲ್ಲ ಒಂದು ಸ್ಥಳದಲ್ಲಿ ಹರಿದು ಬಿಟ್ಟಿದ್ದವು. ಅವುಗಳನ್ನು ನೋಡಿ ಅಳುತ್ತ ಒಂದುಮೂಲೆಯಲ್ಲಿ ಕುಳಿತುಕೊಂಡಿರುತ್ತಾನೆ.

ಆಗ ತಾಯಿ ಕೂಲಿ ಕೆಲಸ ಮಾಡಿ ಮನೆಗೆಬಂದು ಮಗನನ್ನು ಕಂಡು ಯಾಕೆ ಇಷ್ಟೊಂದು ಮುಖ ಸಪ್ಪಗೆ ಮಾಡಿಕೊಂಡು ಕುಳಿತಿರುವೆ, ಮೈಯಲ್ಲಿ ಆರಾಮ ಇಲ್ಲವೇನು...? ಎನ್ನುತ್ತ ಅವನ ತಲೆ ಮೈ ಕೈಯನ್ನು ಮುಟ್ಟಿ ನೋಡಿದಳು ಯಾವ ಜ್ವರನೂ ಇರಲಿಲ್ಲ. ಆಗ ಧನಪತರಾಯನು ನಡೆದ ಸಂಗತಿಯನ್ನು ಹೇಳುತ್ತಾನೆ. ಆಗ ತಾಯಿ ನಿನಗೆ ಒಂದು ಹೊಸ ಅಂಗಿ ಹೊಲಿಸುವುದಕ್ಕೆ ನನ್ನಿಂದ ಆಗುವುದಿಲ್ಲ. ನಿನಗೆ ಅಪ್ಪ ಬೇರೆ ಇಲ್ಲ ನಾನೊಬ್ಬಳೇ ದುಡಿಯಬೇಕು. ಅದರಲ್ಲಿ ಗಂಜಿ ಕುಡಿದು ನಾವಿಬ್ಬರೂ ಜೀವಿಸಬೇಕು. ಈ ಅಂಗಿಗಳನ್ನು ನಾನು ಕೆಲಸ ಮಾಡುತ್ತಿರುವವರ ಮನೆಯಲ್ಲಿ ಇಸಿದುಕೊಂಡು ಬಂದ ಅಂಗಿಗಳಾಗಿವೆ. ಆದರೆ ಮುಂದಿನ ಉತ್ಸವಕ್ಕೆ ಹೊಸ ಅಂಗಿಯನ್ನು ಹೊಲಿಸಿ ಕೊಡುತ್ತೇನೆ ಎಂದು ಹೇಳುತ್ತಾ ಈ ಅಂಗಿಯನ್ನು ತೆಗೆದುಕೊಂಡು ಹೋಗಿ ಟೈಲರ್ ಹತ್ತಿರ ಕೊಡು, ನಾನು ಹೇಳಿದ್ದೆನೆಂದು ಹೇಳಿ ಹೊಲಿಸಿಕೊಂಡು ಬಾ ಎನ್ನುತ್ತಾಳೆ. ಆಗ ಮಗ ಟೈಲರ್ ಹತ್ತಿರ ಹೋಗಿ ಕೇಳಿದಾಗ, ಹಳೆಯ ಹರಿದ ಅಂಗಿಗಳನ್ನು ನಾನು ಹೊಲಿಯುವದಿಲ್ಲವೆಂಬ ಸಂಗತಿಯನ್ನು ತಾಯಿಗೆ ತಿಳಿಸಿದಾಗ.......

"ಧನಪತ...! ಅಳಬೇಡ ಮಗು..! ನಾವು ದರಿದ್ರರೆಂದು ತಿಳಿದು ಈ ಜಗತ್ತು ಹೀಗೆ ಮನಬಂದಂತೆ ಮಾತಾಡುತ್ತದೆ. ಹೋಗಲಿ ಬಿಡು ಮಗು..! ಅಳಬೇಡ ತಾಯಿಯು ಧನಪತಿಯ ತಲೆಯ ಮೇಲೆ ಕೈಯಾಡಿಸುತ್ತ 'ನಿನಗೆ ಅಂಗಿ ಹೊಲಿದು ಕೊಡಬೇಕಾಗಿದೆ ಅಷ್ಟೇ ಅಲ್ಲವೇ...? ಮಸೀನಿನ ಮೇಲೆ ಹೊಲಿದರೇ ಹೊಲಿಗೆ ಎನಿಸಿಕೊಳ್ಳುವುದಿಲ್ಲ. ನಾನು ಸೂಜಿದಾರದಿಂದ ಹೊಲಿದು ಕೊಡುತ್ತೇನೆ."[೮] ಆಗ ತಾಯಿ ಅಂಗಿಯನ್ನು ಹೊಲಿದು ಕೊಡುತ್ತಾಳೆ. ಆ ಹುಡುಗ ಆ ರಾತ್ರಿ ನಿದ್ದೆಯನ್ನೆ ಮಾಡದೆ, ಯಾವಾಗ ಬೆಳಗಾಗುತ್ತದೆ ನಾನು ಆ ಅಂಗಿಯನ್ನು ತೊಟ್ಟುಕೊಂಡು ಹೋಗಿ ತೋರಿಸಬೇಕೆಂದು ರಾತ್ರಿಯಲ್ಲಿ ಕನಸು ಕಾಣುತ್ತಿರುವ ಪರಿ ಮೂಲಭೂತವಾದ ವಸತಿ, ವಸ್ತ್ರ, ಅನ್ನಗಳಿಂದ ಶೋಷಣೆಯಾದ ಸಂವೇದನೆಯನ್ನು ಈ ಕಥೆ ವಿವರಿಸುತ್ತದೆ. ಪ್ರತಿಯೊಬ್ಬರಿಗೂ ಜೀವನದ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ, ವಸ್ತ್ರ, ಶುದ್ಧ ಕುಡಿಯುವ ನೀರು, ಶಿಕ್ಷಣ ಸಿಗುವಂತಾಗಬೇಕು.

ಒಂದು ಮಗು ದೇಶದಲ್ಲಿ ಸತ್‌ಪ್ರಜೆಯಾಗಿ ಬಾಳಬೇಕಾದರೆ ಆತನಿಗೆ ಉತ್ತಮವಾದ ಶಿಕ್ಷಣ ಸಿಗಲೇಬೇಕು. ಆ ಶಿಕ್ಷಣದ ಅರಿವಿನಿಂದ ತನ್ನ ಬದುಕನ್ನು ಬೆಳಗಿಸಿಕೊಳ್ಳುವುದರ ಜೊತೆಗೆ ಸಮಾಜವನ್ನು ಬೆಳಗಲು ಸಾಧ್ಯವಾಗುತ್ತದೆ. ಆದ್ದರಿಂದ ಜೀವನದಲ್ಲಿ ಶಿಕ್ಷಣ ಅತ್ಯಂತ ಅವಶ್ಯಕವಾಗಿ ಮಗುವಿನ ಬೆಳವಣಿಗೆಗೆ ಬೇಕಾಗುತ್ತದೆ. ಆ ಶಿಕ್ಷಣದಿಂದ ತಾನೂ ಬದಲಾಗಿ, ತನ್ನ ಕುಟುಂಬವನ್ನು ಬದಲಾಯಿಸಿ ಸಮಾಜವನ್ನು ಶಿಕ್ಷಣದ ಕಡೆ ಮಾಡುವಂತಶಕ್ತಿ ಶಿಕ್ಷಣಕ್ಕಿದೆ. ಆದ್ದರಿಂದ ಸಮಾಜದ ಎಲ್ಲಾ ಬದಲಾವಣೆಗೆ ಶಿಕ್ಷಣವೇ ಕಾರಣವಾಗಿರುತ್ತದೆ. ಈ ಕತೆಯಲ್ಲಿ ದಲಿತ ಬಾಲಕನೊಬ್ಬ ತನ್ನ

ಜೀವನದ ಬದಲಾವಣೆಗೆಂದು ಶಿಕ್ಷಣ ಕಲಿಯಲು ಶಾಲೆಗೆ ಹೋಗುತ್ತಾನೆ. ಆದರೆ ಆ ಬಾಲಕ ತಂದೆ ಇಲ್ಲದೆ ತಾಯಿಯ ಆಶ್ರಯದಲ್ಲಿ ಕಡು ಬಡತನದಲ್ಲಿ ಬೆಳೆಯುತ್ತಿದ್ದಾನೆ. ಆದ್ದರಿಂದ ಶಾಲೆಗೆ ಬರಲು ಸರಿಯಾಗಿ ಒಂದು ತೊಟ್ಟುಕೊಳ್ಳಲು 'ಅಂಗಿ' ಇರುವುದಿಲ್ಲ. ಹರಿದು ಹೋದ ಒಂದೇ ಅಂಗಿಯನ್ನು ಪ್ರತಿದಿನ ಹಾಕಿಕೊಂಡು ಬರುತ್ತಿರುವುದರಲ್ಲಿ, ಬಂಡವಾಳಶಾಹಿಗಳು ದಲಿತರಿಗೆ ಮಾಡಿರುವ ಆರ್ಥಿಕ ಶೋಷಣೆಯಾಗಿರುತ್ತದೆ.

ಈ ಶೋಷಣೆಯಿಂದಲೇ ಅವರು ಶಿಕ್ಷಣವನ್ನು ಪಡೆದುಕೊಳ್ಳಲು ಅಶಕ್ತರಾಗಿದ್ದಾರೆ. ಶಾಲಾ ಬಾಲಕ ಧನಪತಿರಾಯನ ತಾಯಿ ಕೂಲಿ ಮಾಡಿಕೊಂಡು ಬಂದ ಕೂಲಿಯಲ್ಲಿಯೇ ಕೂಳನ್ನು ಕಾಣಬೇಕು. ಅವಳ ಕೂಲಿಯಿಂದ ಅವಳಿಗೂ ಸರಿಯಾಗಿ ಉಟ್ಟುಕೊಳ್ಳಲುಒಂದು ಸೀರೆ ಇರುವುದಿಲ್ಲ. ಆದರೆ ಅವಳ ಆಸೆ ನಮ್ಮಂತೆ ನಮ್ಮ ಮಗ ಆಗಬಾರದು ನಾಲ್ಕು ಅಕ್ಷರಗಳನ್ನು ಕಲಿತು ನಮ್ಮನ್ನು ಈ ಬಡತನದಿಂದ ಮುಕ್ತಿಗೊಳಿಸಬೇಕೆಂಬ ಕನಸಿನಿಂದ ಶಾಲೆಗೆ ಕಳಿಸುತ್ತಿದ್ದಾಳೆ. ಆದರೆ ಅವಳ ಮಗನಿಗೆ ಅಂಗಿ ಇಲ್ಲದಿರುವುದನ್ನು ಕಂಡು ಅಪಹಾಸ್ಯ ಮಾಡುವ ಉಳ್ಳವರ ಮಕ್ಕಳು ದಲಿತರ ಜೀವನವನ್ನು ಕಂಡು ಅಸಹ್ಯಪಡುತ್ತಿರುವ ವಾಸ್ತವ ಜೀವನಕ್ಕೆ ಕನ್ನಡಿ ಹಿಡಿದಂತಿರುತ್ತದೆ. ಆ ಶಾಲಾ ಬಾಲಕನ ಹರಿದ ಅಂಗಿಯನ್ನು ಯಾರೂ ಹೊಲಿದು ಕೊಡದಿರುವುದು ಮೇಲ್ವರ್ಗದವರು ದಲಿತರಿಗೆ ಯಾವುದೇ ಸಹಾಯವನ್ನು ಮಾಡದೆ ಅಸಹಾಯಕರನ್ನಾಗಿ ಮಾಡುತ್ತಿರುವುದನ್ನು ಅದು ಸೂಚಿಸುತ್ತದೆ.

ಆಗ ಧತಿಪತಿರಾಯನ ತಾಯಿ ತಾನೇ ಸೂಜಿದಾರದಿಂದ ಮಗನ ಅಂಗಿಯನ್ನು ಹೊಲಿದು ಕೊಡುತ್ತಿರುವುದು ದಲಿತರು ಪಡುತ್ತಿರುವ ಬಡತನದ ವೇದನೆಯ ಸ್ಥಿತಿಯನ್ನು ಅದು ತೋರಿಸುತ್ತದೆ. ಇವೆಲ್ಲಾ ಪ್ರಮುಖಾಂಶಗಳನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ಗ್ರಹಿಸಿ ದಲಿತರು ಪಡುತ್ತಿರುವ ಬಡತನದ ನೋವುಗಳನ್ನು ಮತ್ತು ಅವರಿಗಿರುವ ಸಾಮಾಜಿಕ ಕುಂದು ಕೊರತೆಗಳನ್ನು ಈ ಕತೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ಅಂಗಿ ಇಲ್ಲದಿದ್ದರೂ ಶಿಕ್ಷಣವನ್ನು ಪಡೆಯಬೇಕೆಂದು ಆ ತಾಯಿಯ ಕನಸು ನನಸಾಗಬೇಕು. ದಲಿತರ ಬದುಕು ಕತ್ತಲೆಯಿಂದ ಶಿಕ್ಷಣದ ಬೆಳಕಿನ ಕಡೆ ಬಂದು ಸಮಾನತೆಯನ್ನು ಸಾಧಿಸಬೇಕು. ಬಂಡವಾಳ ಶಾಹಿಗಳು ಮಾಡುತ್ತಿರುವ ಶೋಷಣೆಯಿಂದ ದಲಿತರು ಮುಕ್ತಿಯನ್ನು ಹೊಂದಬೇಕು. ಸಮಾನತೆಯ ಸ್ವತಂತ್ರವನ್ನು ದಲಿತರ ಬಾಳಿನಲ್ಲಿ ಬರಬೇಕೆಂಬ ದಲಿತ ಸಂವೇದನೆಗಳನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸ್‌ವಾದದ ನೆಲೆಯಿಂದ ಈ ಕಥೆಯು ಅಭಿವ್ಯಕ್ತಿಸುತ್ತದೆ.

'ರಾಸಾನಿ ಕಥೆಗಳು' ಎಂಬ ತೆಲುಗು ಕಥಾ ಸಂಕಲನವನ್ನು ಟಿ.ಡಿ.ರಾಜಣ್ಣ ತಗ್ಗಿಯವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿ ರಾಸಾನಿಯವರು ಬರೆದ 'ಸಾವಿನ ಕೂಳು' ಎಂಬ ಅನುವಾದಿತ ಕಥೆಯಲ್ಲಿ ಬಡತನ ಮತ್ತು ಹಸಿವು ಎಂಥಾ ಘೋರವಾದ ಸಂಗತಿಗಳೆಂದು ತಿಳಿಸಿಕೊಡುತ್ತದೆ. ರಾಸಾನಿಯವರ ಬರಹದ ಸಾಲುಗಳು ದಲಿತ ಸಂವೇದನೆಯ ಅಲೆಗಳಾಗಿ ಹರಿದು ಬಂದಿವೆ. ಈ ಕಥೆಯ ಹಣೆಬರಹದ ಪದಗಳಾದ ಸಾವು ಮತ್ತು ಕೂಳು

ದುಃಖದಿಂದಲೇ ಕೂಡಿವೆ. ಕೂಳಿಲ್ಲದ್ದರೆ ಸಾವು, ಅದು ಪ್ರತಿನಿತ್ಯ ಸಾಯಿಸುತ್ತಿರುವ ಸಾವು. ಅಂತಹ ತಲ್ಲಣವೆನಿಸುವ ಈ 'ಸಾವಿನ ಕೂಳು' ಕತೆಯಲ್ಲಿ ಸತ್ತವರ ಪಿಂಡವನ್ನು ಉಂಡು ಸತ್ತವರಿಗಾಗಿಯೇ ಕಾಯುತ್ತಾ ಸತ್ತವರನ್ನು ಹೂಳುತ್ತಲೇ ಸಾವನ್ನು ಅಪ್ಪುವ ದುರಂತ ಕತೆಯಿದು. ಇದು ಕೇವಲ ಒಬ್ಬ ವ್ಯಕ್ತಿಯ ಕಥೆಯಾಗಿರದೆ. ಇಡೀ ದಲಿತರು ಜೀವನದಲ್ಲಿ ಪಡುತ್ತಿರುವ ಹಸಿವಿನ ನರಳಾಟವನ್ನು ಚಿತ್ರಿಸುತ್ತದೆ.

"ಇಷ್ಟು ದೊಡ್ಡ ಪಟ್ಣದಾಗೆ ಹತ್ತು ದಿನಗಳಿಂದ್ಲೂ ಒಬ್ಬ ನನ್ಮಗ್ನೂ ಸಾಯಲಿಲ್ಲವಲ್ಲ...! ಯೆಂಗಪ್ಪ ಜೀವನ ಸಾಗ್ಸೋದು...! ಒಂದೊತ್ತಿಗಿದ್ರೆ ಒಂದೊತ್ತಿಗಿಲ್ಲದ ಬದುಕು. ಮನೆಯಲ್ಲಿ ಹೆಂಡ್ರಗೆ ಇರೋ ಒಂದೇ ಸೀರೆನೂ ಹರ್ದೋಗೈತಿ. ಕುಪ್ಪಸ ಅಸಲು ಇಲ್ವೇ ಇಲ್ಲ. ತಗೊಂಡ ಬರೊಣ ಅಂದ್ರೆ ಕೈನಾಗೆ ಬಿಡಿಗಾಸಿಲ್ದೇ ವೋಯ್ತು. ಮಕ್ಕಳು ನೋಡಿದ್ರೆ ಹತ್ ಜನ ಅವ್ರೇ ಆರು ಜನ ಹೆಣ್ಣು ಮಕ್ಕಳು, ನಾಲ್ಕು ಜನ ಗಂಡು ಮಕ್ಕಳು ಯೆಂಗಪ್ಪ ಸಂಸಾರ ಮಾಡೋದು."[6] ಇಂತಹ ಗಂಭೀರ ಪರಿಸ್ಥಿತಿಯಲ್ಲಿ ಏಕಾಂಗಿಯಾಗಿ ತನ್ನಲ್ಲಿ ತಾನು ಮಾತನಾಡಿಕೊಳ್ಳುತ್ತ ಕಥಾನಾಯಕ ಮುನಿದಾಸಪ್ಪ ತನ್ನ ಗುಡಿಸಲು ಮುಂದೆ ಕುಳಿತುಕೊಂಡು ಆಲೋಚನೆ ಮಾಡುತ್ತಿರುವ ದುದೃಶ್ಯವೇ ಭಯಾನಕತೆಯಿಂದ ಕೂಡಿದೆ. ಮನುಷ್ಯನಾಗಿ ಹುಟ್ಟಿದ ಮೇಲೆ ಆಹಾರ, ವಸತಿ, ಬಟ್ಟೆ ಇವು ಬದುಕಿಗೆ ಬೇಕಾಗಿರುವ ಮೂಲಾಧಾರಗಳು. ಇವುಗಳೇ ಇಲ್ಲದ ಮುನಿದಾಸಪ್ಪನ ಕುಟುಂಬವೇ ಅನ್ನಕ್ಕಾಗಿ, ಒಂದೇ ಒಂದು ಅಂಗಿಗಾಗಿ ಕಿತ್ತಾಡುತ್ತಿರುವ ಮಕ್ಕಳ ಪರಿಸ್ಥಿತಿಯು ಬಡತನದ ಬಳಲಾಟವನ್ನು ಎತ್ತಿ ತೋರಿಸುತ್ತದೆ.

ಊರಿನಲ್ಲಿ ಯಾರೂ ಸತ್ತಿಲ್ಲ ಮುನಿದಾಸಪ್ಪನ ಹೆಂಡತಿಯ ಕಂಕುಳಲ್ಲಿ ಕೂಸು ಹಾಲಿಗಾಗಿ ಹಸಿವಿನಿಂದ ಅಳುತ್ತಿದೆ. ಮನೆಯಲ್ಲಿ ನುಚ್ಚಿನ ಕಾಳು ಮುಗಿದೋಗಿ ಮೂರು ದಿನಗಳಾಗಿವೆ. ಉಪವಾಸದಿಂದ ಕರುಳು ಮೂರು ದಿನಗಳಿಂದ ಸುಡುತ್ತಿವೆ. ಇವರ ಹಸಿವನ್ನು ನೀಗಿಸಲು ಊರಲ್ಲಿ ಯಾರು ಸತ್ತಿಲ್ಲವೆಂಬ ಚಿಂತೆ ಮುನಿದಾಸಪ್ಪನದು. ಮತ್ತೊಬ್ಬರ ಸಾವನ್ನು ಕಾಯುತ್ತ ಕುಳಿತುಕೊಂಡು ಸಾವಿನ ಸುದ್ದಿಗಾಗಿ ತನ್ನ ಕಿವಿಗಳನ್ನು ತೆರೆದುಕೊಂಡು ಹೊಟ್ಟೆಯ ಹಸಿವಿನಿಂದ ನೋಡುತ್ತಿದ್ದಾನೆ. ಸಾವು ಬಂದರೆ ಒಂದು ಕುಟುಂಬದ ಬಂಧು ಬಳಗಕ್ಕೂ ದುಃಖವಾಗುತ್ತದೆ. ಆದರೆ ಅದೇ ಒಂದು ಸಾವಿನಿಂದ ಮುನಿದಾಸಪ್ಪನ ಕುಟುಂಬವೇ ಹಸಿವನ್ನು ನೀಗಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಂದರೆ ಸಮಾಜದಲ್ಲಿ ದಲಿತರಿಗಿರುವ ಅಸಮಾನತೆಯ ನೋವು, ಅತಂತ್ರದ ಬದುಕು ಎಂತಹ ಅಸಹಾಯಕ ಸ್ಥಿತಿಯನ್ನು ತಂದು ಬೆಂದು ಬಾಡಿಸುತ್ತಿದೆ ಎಂಬುದನ್ನು ಈ ಕಥೆಯು ವಿಸ್ತರಿಸುತ್ತದೆ.

ಶವಸಂಸ್ಕಾರದಿಂದ ಬಂದಂತಹ ತುಸುಕಾಸು ಹಾಗೂ ಪಿಂಡದ ಅನ್ನದಿಂದಲೇ ಜೀವನವನ್ನು ಸಾಗಿಸಬೇಕಾದ ಅನಿವಾರ್ಯತೆಯೇ ಮುನಿದಾಸಪ್ಪನನ್ನು ಸತ್ತವರಿಗಾಗಿ ಕಾಯಿಸುತ್ತಿದೆ. ಸಾವಿನ ಕೂಳನ್ನು ಉಂಡು ಬದುಕಬೇಕಾದ ಸಂದಿಗ್ಧ ಪರಿಸ್ಥಿತಿಯನ್ನು 'ಸಾವಿನ ಕೂಳು' ಕಥೆಯು ಅನಾವರಣಗೊಳಿಸುತ್ತದೆ. ಸುಡುಗಾಡು ಆತನ ಅನ್ನದ ಮನೆ ಆಗಿದೆ. ಸುಡುಗಾಡಿಗೆ ಯಾವುದಾದರೂ ಹೆಣಬಂದರೆ ಆತನ ಮನೆಗೆ ಅನ್ನ ಬಂದಂತೆ. ಹಸಿದ ಹೊಟ್ಟೆ ತುಂಬಿದಂತೆ ಆನಂದ. ಮುನಿದಾಸಪ್ಪನ ಈ ಪರಿಸ್ಥಿತಿಗೆ

ಕಾರಣ ಏನು...? ಅಥವಾ ಯಾರು...? ಆಳುವವರ್ಗ ಪಕ್ಷಕಟ್ಟದೆ ರಾಷ್ಟ್ರವನ್ನು ಕಟ್ಟಿದ್ದರೆ ಇಂತಹ ಅದೇಷ್ಟೋ ದಲಿತರ ಸಂಕಷ್ಟಗಳನ್ನು ದೂರಸರಿಸಲು ಸಾಧ್ಯವಾಗುತ್ತಿತ್ತು. ಅದರಂತೆ ಸಮಾನತೆಯನ್ನು ಸಾಧಿಸಲು ಈ ಕಥೆಯು ಸೂಚಿಸುತ್ತದೆ. ಮುನಿದಾಸಪ್ಪನ ಹಸಿವಿನ ಕೂಗಿಗೆ ಕೊನೆಗೂ ಮೂರು ದಿವಸಗಳ ನಂತರ ಯಾರೋ ಇಬ್ಬರು ವ್ಯಕ್ತಿಗಳು ಕಾರಿನಿಂದ ಕೆಳಗಿಳಿದು ಬಂದು,ನಮ್ಮ ಮನೆಯಲ್ಲಿ ಒಬ್ಬ ಮುದುಕ ತೀರಿಕೊಂಡಿದ್ದಾನೆ ಅಂತ್ಯಸಂಸ್ಕಾರ ಮಾಡಬೇಕೆಂದು ಕೇಳಿದ ತಕ್ಷಣವೇ ಮುನಿದಾಸಪ್ಪನ ಪಾಲಿಗೆ ಹಬ್ಬವೇ ಸಿಕ್ಕಂತಾಯಿತು.

ತಾನು ತನ್ನ ಮಗ ಸೇರಿಕೊಂಡು ಸ್ಮಶಾನಕ್ಕೆ ಹೋಗಿ, ಕುಣಿಯನ್ನು ತೋಡಿ ಆ ಸಾವಿನ ಕೂಳನ್ನು ಹೊಟ್ಟೆ ತುಂಬಾ ಊಟ ಮಾಡಿ, ಉಳಿದ ಅನ್ನ ಸಾಂಬಾರನ್ನು ಗಂಟು ಕಟ್ಟಿಕೊಳ್ಳುವ ಮುನಿದಾಸಪ್ಪನ ಕುಟುಂಬ ಸಾವಿನ ಕೂಳನ್ನುಂಡು ಸಾವನ್ನು ಜಯಿಸುವ ಅನಿವಾರ್ಯತೆ ಒದಗಿರುವುದು ಸಮಾಜದ ಅಸಮಾನತೆಯನ್ನು ಪ್ರತಿಬಿಂಬಿಸುತ್ತದೆ. ಕೊನೆಗೂ ಶವ ಹೂಳುತ್ತಲೇ ಶವವಾಗಿ ಹೋಗುವ ಮುನಿದಾಸಪ್ಪನ ಚಿತ್ರಣ ಕಣ್ಣೀರಲ್ಲಿ ಹುಟ್ಟಿ ಕಣ್ಣೀರಾಗಿ ಹೋಗುವುದು ಬಡತನಕ್ಕಿರುವ ಸಹಜ ಸ್ಥಿತಿಯೆಂಬಂತೆ ಭಾಸವಾಗುತ್ತದೆ. ಬಡತನದ ನೋವಿಗೆ ಕೊನೆಯಿಲ್ಲ. ಬಡತನದ ಕಿಚ್ಚು ಇಡೀ ಕುಟುಂಬವನ್ನೇ ಹಸಿವಿನ ರೂಪದಲ್ಲಿ ಸುಡುತ್ತದೆ. ಈ ಬಡವ, ಬಲ್ಲಿದವನ ಮಧ್ಯೆ ಇರುವ ಮಹಾದೂರ ಹತ್ತಿರವಾಗುವುದು ಯಾವಾಗ...? ಸಮಾಜದಲ್ಲಿನ ಆರ್ಥಿಕ ಸಮಾನತೆ ಸಮಾನವಾಗಿ ಹಂಚಿಕೆಯಾಗಬೇಕೆಂದು ಸಹ ಈ ಕಥೆಯು ಸೂಚ್ಯವಾಗಿ ಧ್ವನಿಸುತ್ತದೆ. ಮನುಷ್ಯನಿಗೆ ಮೂಲಭೂತವಾಗಿ ಆಹಾರ, ವಸತಿ, ಬಟ್ಟೆ, ಶಿಕ್ಷಣ, ನೀರು ಸಿಗಬೇಕು. ಇದು ಆಳುವ ವರ್ಗದ ಆದ್ಯ ಕರ್ತವ್ಯವೂ ಹೌದು. ಕಾನೂನು ಪುಸ್ತಕದಲ್ಲಿರದೆ ಸಮಾಜದಲ್ಲಿ ಪಾಲನೆಯಾಗಬೇಕು.

ಸಮಾಜದ ಅಸ್ಥಿರತೆ ದೂರಮಾಡಿ ಸಮಾನತೆಯ ಆರ್ಥಿಕತೆಯನ್ನು ಸಾಧಿಸಬೇಕು. ನೊಂದವರ ನೋವಿನ ಕೂಗೂ ಕೊನೆಯಾಗಿ ನಗುವ ಮುಖ ಸಮಾಜದಲ್ಲಿ ಅರಳುತ್ತಿರಬೇಕೆಂಬ ಆಶಯವನ್ನು ಈ ಕಥೆಯು ಒಳಗೊಂಡಿರುತ್ತದೆ. ಅದರಂತೆ ಮುಂದುವರಿದು ಮುನಿದಾಸಪ್ಪನ ಜೀವನ ಚಿತ್ರಣವನ್ನು ವಿಶ್ಲೇಷಣೆಗೆ ಒಳಪಡಿಸಿದಾಗ, ದಲಿತರು ಬಡತನದ ಪರಿಸ್ಥಿತಿಯಿಂದ ಹೊಟ್ಟೆ ಹಸಿವಿನಿಂದ ಹೇಗೆ ಸಮಾಜದಲ್ಲಿ ಬಳಲುತ್ತಿದ್ದಾರೆ ಎಂಬುವುದು ಮುನಿದಾಸಪ್ಪನ ಪಾತ್ರದ ಚಿತ್ರಣದಿಂದ ಕಂಡು ಬರುತ್ತದೆ. ಆತನು ಬದುಕುತ್ತಿರುವ ವಾತಾವರಣವನ್ನು ನೋಡಿದರೆ ಸಾಕು ಬಡತನದ ಭೀಕರತೆ ಎಷ್ಟಿದೆ ಎಂಬುವುದು ಅರ್ಥವಾಗುತ್ತದೆ. ತುಂಬಿದ ಕುಟುಂಬದಿಂದ ಹೆಂಡತಿ ಮಕ್ಕಳ ಜೊತೆ ಆ ಚಿಕ್ಕಮುರುಕಲು ಗುಡಿಸಲಿನಲ್ಲಿ ವಾಸ ಮಾಡಿಕೊಂಡಿದ್ದಾರೆ. ಬೆಳಗಾದರೆ ಸಾಕು ಮುಂಜಾನೆ ಏನು ತಿನ್ನುವುದು ಎಂಬ ಚಿಂತೆಯಿಂದಲೇ ಹಾಸಿಗೆಯಿಂದ ಮೇಲೆದ್ದಿರುತ್ತಾರೆ. ಹೆಂಡತಿಗೆ ಒಂದು ಕುಪ್ಪಸವನ್ನು ತಂದುಕೊಡಲು ಸಾಧ್ಯವಾಗಿರದ ಮುನಿದಾಸಪ್ಪ ಯಾವಾಗಲೂ ಹಸಿದ ಹೊಟ್ಟೆಗಾಗಿ ಅನ್ನದ ಬಗ್ಗೆ ಚಿಂತಿಸುತ್ತಿರುವುದು ಆತನ ಬಡತನಕ್ಕಿರುವ ಸಾಕ್ಷಿಯಾಗಿರುತ್ತದೆ.

ಊರಲ್ಲಿ ಯಾರಾದರೂ ಸತ್ತರೆ ಮಾತ್ರ ಆತನ ಕುಟುಂಬಕ್ಕೆ ಅನ್ನ ಸಿಗುವುದು ಮುನಿದಾಸಪ್ಪನಿಗೆ ಬಂಡವಾಳಶಾಹಿಗಳು ಮಾಡಿದ ಆರ್ಥಿಕ ಶೋಷಣೆಯಾಗಿರುತ್ತದೆ. ಇದರ ಪರಿಣಾಮವಾಗಿ ಆತನಿಗೆ ಆರ್ಥಿಕ ಸಂಪತ್ತುಗಳು ದೊರಕದೆ ಬಡತನದಿಂದ ನರಳಾಡುತ್ತಿದ್ದಾನೆ. ಸತ್ತಿರುವ ಪಿಂಡದ ಕೂಳಿನಿಂದ ಕುಟುಂಬ ಬದುಕುತ್ತದೆಂದರೆ ಆ ಕುಟುಂಬಕ್ಕೆ ಒದಗಿರುವ ದುಸ್ಥಿತಿಗೆ ಕಾರಣವಾದ ಅಂಶಗಳನ್ನು ಕೆದಕಿ ನೋಡಿದಾಗ, ಆತನ ಕುಟುಂಬಕ್ಕೆ ಆರ್ಥಿಕ ಶೋಷಣೆಯಾಗಿದೆ ಅದರಿಂದಾಗಿ ಮುನಿದಾಸಪ್ಪನು ಉಳುಮೆ ಮಾಡಿಕೊಂಡು ಜೀವನ ಮಾಡಲು ಒಂದು ಗುಂಟೆ ಭೂಮಿಯಿರುವುದಿಲ್ಲ. ಹಾಗೆಯೇ ತನ್ನ ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಅದಕ್ಕೆ ಆತನಲ್ಲಿರುವ ಬಡತನವೇ ಕಾರಣವಾಗಿರುತ್ತದೆ. ಆ ಬಡತನಕ್ಕೆ ಆತನ ಕುಟುಂಬವನ್ನು ಶೋಷಣೆಗೆ ಒಳಪಡಿಸಿದ ಬಂಡವಾಳಶಾಹಿಗಳು ಕಾರಣವಾಗಿದ್ದಾರೆ. ಆತನಲ್ಲಿರುವ ತಾಳ್ಮೆಯನ್ನು ದುರುಪಯೋಗ ಮಾಡಿಕೊಂಡು, ಆತನ ಆರ್ಥಿಕ ಮೂಲವನ್ನು ವಂಚಿಸಿ ತುಳಿತಕ್ಕೆ ಒಳಪಡಿಸಿದ್ದಾರೆ.

ಇದರಿಂದಾಗಿ ಮುನಿದಾಸಪ್ಪ ತನ್ನ ತುಂಬಿದ ಕುಟುಂಬದ ಭಾರದಿಂದ ಅಸಮಾನತೆಯ ಸಾಮಾಜಿಕ ವ್ಯವಸ್ಥೆಯಲ್ಲಿ ಅತಂತ್ರತೆಯಿಂದ ಬದುಕುತ್ತಿದ್ದಾನೆ. ಆತನಲ್ಲಿ ಯಾವುದೇ ಭವಿಷ್ಯದ ಕನಸುಗಳಿಲ್ಲದೆ ತಾನಿರುವ ಸ್ಥಿತಿಯಲ್ಲಿ ನೋವನ್ನು ನುಂಗಿಕೊಂಡು ಅನ್ನದ ಹಸಿವಿನಿಂದ ಬದುಕುತ್ತಿದ್ದಾನೆ. ಅನ್ನಕ್ಕಾಗಿ ಹೆಣವನ್ನು ಸೂಡುಗಾಡಿನಲ್ಲಿ ಹೂತು ಹಾಕುತ್ತ ಕೊನೆಗೆ ಅಲ್ಲಿಯೇ ಹಸಿದ ಹೊಟ್ಟೆಯಿಂದ ಅನ್ನಕ್ಕಾಗಿ ಮುನಿದಾಸಪ್ಪ ಸತ್ತು ಹೋಗುವುದು, ಬಂಡವಾಳಶಾಹಿಗಳು ದಲಿತರನ್ನು ಬಡತನದಲ್ಲಿ ಹುಟ್ಟಿಸಿ ಕೊನೆಗೆ ಬಡತನದಲ್ಲಿಯೇ ಸತ್ತು ಹೋಗುವಂತೆ ಮಾಡುವುದಕ್ಕೆ ನಿದರ್ಶನವಾಗಿ ಕಥೆಗಾರರು ಈ ಕಥೆಯಲ್ಲಿ ಬಳಸಿಕೊಂಡಿದ್ದಾರೆ. ಮನುಷ್ಯನಿಗೆ ಮೂಲಭೂತವಾಗಿ ಬದುಕಲು ಆಹಾರಬೇಕು. ಆ ಆಹಾರವೇ ಸಿಗುತ್ತಿಲ್ಲವೆಂದರೆ ದಲಿತರಿಗೆ ಬದುಕುವ ಹಕ್ಕನ್ನೇ ಬಂಡವಾಳಶಾಹಿಗಳು ಕಿತ್ತುಕೊಂಡಿದ್ದಾರೆ.

ಇದರಂದ ಬಡಪಾಯಿ ಮುನಿದಾಸಪ್ಪನ ಜೀವನದ ಅಂತ್ಯವಾಗುತ್ತದೆ. ಹೀಗೆ ಸಮಾಜದಲ್ಲಿ ಬಡತನದಿಂದ ದಲಿತರು ತಮ್ಮ ಮೂಲಭೂತ ಹಕ್ಕುಗಳಿಂದ ವಂಚಿತರಾಗಿ ಸ್ವತಂತ್ರದಿಂದ ಬದುಕಲು ಸಾಧ್ಯವಾಗದೆ ಅಸಮಾನತೆಯಲ್ಲಿ ಹೇಗೆ ಬದುಕುತ್ತಿದ್ದಾರೆ ಎಂಬುವುದನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ದಲಿತರ ಒಡಲಾಳದ ನೋವುಗಳನ್ನು ಈ ಕಥೆಯ ಮೂಲಕ ಅಭವ್ಯಕ್ತಿಗೊಳಿಸಿದ್ದಾರೆ. ಬಂಡವಾಳಶಾಹಿಗಳ ಶೋಷಣೆಯಿಂದ ದಲಿತರು ಮೂಲಭೂತ ಹಕ್ಕುಗಳಿಂದ ವಂಚಿತರಾಗಿ ಆರ್ಥಿಕವಾಗಿ ಹಿಂದುಳಿದ್ದಾರೆ. ಅದರಿಂದಾಗಿ ಸಾಮಾಜಿಕ ಅಸಮಾನತೆಯಿಂದ ಅನ್ನವಿಲ್ಲದೆ ಹಸಿವಿನಿಂದ ನರಳಾಡುವ ದುಸ್ಥಿತಿಯನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಿಂದ ಈ ಕಥೆಯು ನಿರೂಪಿಸುತ್ತದೆ.

ಕೆ.ಕೆ.ಗಂಗಾಧರನ್‌ರವರು ಕನ್ನಡನುವಾದ ಮಾಡಿರುವ 'ಗೌರಿ' ಎಂಬ ಮಲಿಯಾಳಂ ಕಥಾ ಸಂಕಲನದಲ್ಲಿ ಎಂ.ಮುಕುಂದನ್‌ರವರು ಬರೆದಿರುವ 'ಒಬ್ಬ ಗುಮಾಸ್ತನ ಕುಟುಂಬ' ಎಂಬ ಕಥೆಯುಒಂದು ಕೆಳದರ್ಜೆಯ ಕುಟುಂಬವು ಹೇಗೆ ಅಭಾವಗಳ ಸಂಕೋಲೆಗಳಿಂದ ಕೂಡಿಕೊಂಡು,

ತಮ್ಮ ದಿನನಿತ್ಯದ ಬದುಕನ್ನು ಸಾಗಿಸುತ್ತ, ಅವರ ಮನದಾಳದ ಆಸೆಗಳನ್ನು ಪೂರೈಸಿಕೊಳ್ಳಲಾಗದ ಶೋಚನೀಯ ಸ್ಥಿತಿಯಲ್ಲಿದ್ದುಕೊಂಡು, ನಾವು ಎಲ್ಲರಂತೆ, ಎಲ್ಲವನ್ನು ಪಡೆದುಕೊಳ್ಳುವ ಕನಸಿನಗೋಪುರವನ್ನು ಕಟ್ಟಿಕೊಂಡು, ತಮ್ಮ ಬದುಕಿನಲ್ಲಿ ನೆಮ್ಮದಿಗಾಗಿ, ಆಸೆಗಳ ತೃಪಿಗಾಗಿ ಹುಡುಕ್ತ ಸಾಗುತ್ತಿರುವ ಒಂದು ಕಳೆದರ್ಜೆಯ ಕೆಲಸಗಾರನ ಕುಟುಂಬದ ಒಡಲಾಳದ ನೋವನ್ನು ಈ 'ಒಬ್ಬ ಗುಮಾಸ್ತ ಕುಟುಂಬ' ಎಂಬ ಕಥೆಯಲ್ಲಿ ಎಂ.ಮುರುಂದನ್‌ರವರು ತಮ್ಮ ಹೊಸ ಅನುಭವನಗಳ ಹಿನ್ನೆಲೆಯಿಂದ ಕಟ್ಟಿಕೊಟ್ಟಿದ್ದಾರೆ. ಒಬ್ಬ ಕೆಳದರ್ಜೆಯ ಕೆಲಸಗಾರನಿಗೆ ಇವತ್ತಿನ ದಿನನಿತ್ಯದ ಬಳಕೆ ವಸ್ತುಗಳ ಮೇಲೆ ಬೆಲೆ ಏರಿಕೆಯಿಂದ ತುಟ್ಟಿ ಜೀವನದಲ್ಲಿ ತನ್ನ ಮಧ್ಯಮವರ್ಗದ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗಲು ಸಾಧ್ಯವಿಲ್ಲಂತಹ ಸ್ಥಿತಿಯು ಉಂಟಾಗಿದೆ.

ಇದರಿಂದ ತನ್ನ ಅಲ್ಪ ಆದಾಯದ ಮೂಲಕವಾಗಿ ಗಗನಕ್ಕೇರುವ ಮಾರುಕಟ್ಟೆಯ ಬೆಲೆಯಲ್ಲಿ ತನ್ನ ಜೀವನಕ್ಕೆ ಅಗತ್ಯವಾದ ವಸ್ತುಗಳನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲದ ಜೀವನದಲ್ಲಿ ಆತ ತುಂಬಾ ಅಸಮಾನದ ಮನಸ್ಥಿತಿಯಲ್ಲಿಬೆಂದು ಹೋಗಿರುತ್ತಾನೆ. ಮನೆ ಬಾಡಿಗೆ, ಮಕ್ಕಳ ಸ್ಕೂಲ್ ಶುಲ್ಕ, ಡೋನೇಷನ್, ಹೆಂಡತಿಯ ಅಗತ್ಯ ವಸ್ತುಗಳು, ಮನೆಗೆ ಬೇಕಾದ ದಿನನಿತ್ಯ ಆಹಾರ ಸಾಮಾಗ್ರಿಗಳನ್ನು ತಂದುಕೊಳ್ಳಲು ಕೆಳದರ್ಜೆಯ ಕೆಲಸಗಾರನಿಗೆ ಏರುತ್ತಿರುವ ಬೆಲೆಗಳ ಪ್ರಮಾಣ ಆತನಿಗೆ ನುಂಗದ ತುತ್ತುಗಳಾಗಿವೆ. ಇಂತಹ ಅಸಮತೋಲನದ ಆರ್ಥಿಕ ವ್ಯವಸ್ಥೆಗೆ ಬಂಡವಾಳಶಾಹಿಗಳ ಸ್ವಾರ್ಥವೇ ಕಾರಣವಾಗಿರುತ್ತದೆ. ಅವರಲ್ಲಿರುವ ಒಡೆದಾಳುವ ನೀತಿಯಿಂದ ಬಡವರನ್ನು ಮತ್ತೆ ಬಡವರನ್ನಾಗಿಸುವ ಹುನ್ನಾರದಲ್ಲಿ ತೊಡಗಿ, ಮತ್ತೆ ಬಡವರಿಗೆ ಅಗತ್ಯ ವಸ್ತುಗಳು ದಕ್ಕದಂತೆ ಮಾಡಿ, ತಾವಷ್ಟೇ ಸುಖದಿಂದ ಸಿರಿವಂತರಾಗಿ ಬದುಕುತ್ತ, ಈ ಕೆಳದರ್ಜೆಯ ಕೆಲಸಗಾರರ ಜೀವನಕ್ಕೆ ಬೇಕಾಗುವಷ್ಟು ಸರಿಯಾದ ಕೂಲಿಯನ್ನು ನೀಡದೆ, ಅವರ ಶ್ರಮದಿಂದಲೇ ತಾವು ಎಲ್ಲವನ್ನು ಕಟ್ಟಿಕೊಳ್ಳುತ್ತ ಕೆಳದರ್ಜೆ ಕೆಲಸಗಾರರನ್ನು ಶೋಷಿಸುತ್ತಿದ್ದಾರೆ. ಕೆ.ವಿ.ಕುರುಪ್ ಅಂದರೆ ಕೆ.ವಿಶ್ವನಾಥ ಕುರುಪ್ ಆಫೀಸಿನಲ್ಲಿ ಗುಮಾಸ್ತನಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾನೆ.

ಆಫೀಸಿನಲ್ಲಿ ಈತನನ್ನು ಕೆ.ವಿ.ಕೆ ಎಂದು ಸಂಬೋಧನೆ ಮಾಡುತ್ತಾರೆ. ಹೆಂಡತಿ, ಸೌದಾಮಿನಿ ಇವರಿಗೆ ಇಬ್ಬರು ಮಕ್ಕಳಿದ್ದಾರೆ. ಸತೀಶ ಮತ್ತು ರಮೇಶನೆಂದು ಹಿರಿಯವನಿಗೆ ಹನ್ನೆರಡುವರ್ಷ ಹಾಗೂ ಕಿರಿಯವನಿಗೆ ಆರುವರ್ಷ ವಯಸ್ಸು ಅಲ್ಪ ಆದಾಯದಿಂದಲೇ ತನ್ನ ಕುಟುಂಬವನ್ನು ಸಲಹುತ್ತಿದ್ದಾನೆ. ಕೆ.ವಿ.ಕೆ ತನ್ನ ಆಫೀಸಿಗೆ ಹೋಗಬೇಕಾದರೆ ತನ್ನ ಮನೆಯಿಂದ ನಾಲ್ಕು ಕಿಲೋ ಮೀಟರ್ ದೂರವಿರುತ್ತದೆ. ತಾನು ಬಸ್ಸಿಗೆ ಹೋದರೆ ಹೋಗಲಿಕ್ಕೆ ನಲವತ್ತು ಪೈಸೆ ಮತ್ತು ಬರುವುದಕ್ಕೆ ನಲವತ್ತು ಪೈಸೆ ಒಟ್ಟು ಎಂಬತ್ತು ಪೈಸೆ ಬೇಕಾಗುತ್ತದೆಂದು ಕೆ.ವಿ.ಕೆ ಗುಮಾಸ್ತ ಪ್ರತಿದಿನ ತನ್ನ ಆಫೀಸಿಗೆ ನಡೆದುಕೊಂಡು ಹೋಗುತ್ತಿರುತ್ತಾನೆ. ಆ ಎಂಬತ್ತು ಪೈಸೆ ಉಳಿದರೆ ಅದು ತಿಂಗಳಿಗೆ ಆಗುವ ಹಣದಿಂದ ಮನೆಗೆ ಏನಾದರೂ ಬೇಕಾಗುವ ಅಗತ್ಯ ವಸ್ತುಗಳನ್ನು ಕೊಂಡುಕೊಳ್ಳಬಹುದೆಂಬ ಭಾವನೆ ಗಂಡ ಹೆಂಡತಿಯರದ್ದು ಆಗಿರುತ್ತದೆ. ಆದ್ದರಿಂದ ಸೌದಾಮಿನಿ ಗಂಡನನ್ನು ನೀನು

ನಡೆದುಕೊಂಡೆ ಹೋಗು ಎಂದು ಹೇಳಿ ಕಳಿಸುತ್ತಿರುತ್ತಾಳೆ. ಕೆ.ವಿ.ಕೆ ದಿನ ಆಫೀಸಿಗೆ ನಡೆದುಕೊಂಡೆ ಹೋಗುತ್ತಿರುತ್ತಾನೆ.

ಇಂತಹ ಬಡಪಾಯಿ ಗುಮಾಸ್ತ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿರುವಾಗ, ಒಂದು ದಿನ ಒಬ್ಬ ಮೋಟಾರ್ ಸೈಕಲ್ ಸವಾರನು ಅತೀ ವೇಗದಿಂದ ಬರುತ್ತಿರುವುದನ್ನು ಕೆ.ವಿ.ಕೆ ಗಮನಿಸಿದನು. ರಸ್ತೆಯ ಮುಂದಕ್ಕೆ ಹೋದಂತೆ ನಿರ್ಜನ ಪ್ರದೇಶದ ರಸ್ತೆಬಳಿ ಆ ಮೋಟರ್ ಸೈಕಲ್ ಸವಾರನು ಅಪಘಾತಕ್ಕಿಡಾಗಿ ಬಿದ್ದಿದ್ದನು. ಆತನು ಕೆಂಪು ಟೀಶರ್ಟ ತೊಟ್ಟ ಯುವಕನಾಗಿದ್ದನು. ಆತನ ಉಡುಪು ಮತ್ತು ಆ ಯುವಕನನ್ನು ನೋಡಿದರೆ ಉಳ್ಳವರ ಮನೆತನದವನಿರಬೇಕೆಂದು ಕೆ.ವಿ.ಕೆ ಮನದಲ್ಲಿ ನಿಶ್ಚಯ ಮಾಡಿಕೊಂಡನು. ಆತನ ಬಳಿಹೋಗಿ ಆತನಿಗೆ ಸ್ಪರ್ಶಿಸಿದಾಗ ಆತ ಪ್ರಜ್ಞೆ ತಪ್ಪಿರುವುದು ಕಂಡು ಬರುತ್ತದೆ. ತಲೆಗೆ ಬಲವಾದ ಒಡೆತ ಬಿದ್ದದ್ದರಿಂದ ರಕ್ತ ತುಂಬಾ ಸುರಿಯುತ್ತಿತ್ತು. ಇದನ್ನು ನೋಡಿದ ಗುಮಾಸ್ತ ಕೆ.ವಿ.ಕೆ ಆ ಯುವಕನ ಜೇಬಿನಲ್ಲಿರುವ ಪರ್ಸನ್ನು ತೆಗೆದುಕೊಳ್ಳುತ್ತಾನೆ. ಬೇರೆ ಯಾರಾದರೂ ನೋಡಿದರೆ ತೊಂದರೆ ತರಬಹುದೆಂದು ತನ್ನ ರಸ್ತೆಯ ಹಾದಿಯನ್ನು ಬದಲಾಯಿಸಿಕೊಂಡು ಮುಂದಿನ ರಸ್ತೆಯಲ್ಲಿ ಹೋಗಿ ತೇಲುತ್ತಾನೆ.

ಆಫೀಸ್‌ನಿಂದ ಬೇಗನೇ ಮನೆಗೆ ಬಂದಂತಹ ಗಂಡನನ್ನು ನೋಡಿ ಸೌದಾಮಿಯು ತುಂಬಾ ಖುಷಿಯಾಗುತ್ತಾಳೆ. ಆಫೀಸಿನವರು ರಜೆಯನ್ನು ಕೊಟ್ಟರೆ ಎಂದು ಕೇಳುತ್ತಾಳೆ. ಕೆ.ವಿ.ಕೆ ಇಲ್ಲ ನಾನೇ ರಜೆ ತೆಗೆದುಕೊಂಡು ಬಂದೆ. ಬೇಗನೆ ಊಟ ಮಾಡಿ ನೀನು ರೆಡಿಯಾಗಿ ಇವತ್ತು ಮಕ್ಕಳೊಂದಿಗೆ ಸಿನಿಮಾಕ್ಕೆ ಹೋಗೋಣ, ಬರುವಾಗ ಹೋಟಲ್‌ನಲ್ಲಿ ಊಟ ಮಾಡಿ ಬರೋಣ ಎಂದ ಗಂಡನ ಮಾತು ಕೇಳಿ ಸೌದಾಮಿನಿಗೆ ನಂಬಲು ಸಾಧ್ಯವಾಗಲಿಲ್ಲ. ಏನ್ರಿ ಇವತ್ತು ಆಫೀನನಲ್ಲಿ ಬೋನಾಸ್ಸು ಏನಾದ್ರೂ ಕೊಟ್ರಾ ಎಂದು ಕೇಳುತ್ತಾಳೆ. ಅದೇನಿಲ್ಲ ಇವತ್ತು ಮನೆಯಲ್ಲಿ ಎಲ್ಲರೂ ಮ್ಯಾಟನಿಗೆ ಹೋಗಿ ಬರೋಣವೆಂದು ಕೆ.ವಿ.ಕೆ ಹೇಳಿದನು. ಶಾಲೆಯಿಂದ ಮಕ್ಕಳು ಬಂದರು ಸೌದಾಮನಿ ಮಕ್ಕಳನ್ನು ತಯಾರಿ ಮಾಡಿದಳು. ತಾನು ಶೃಂಗಾರ ಮಾಡಿಕೊಂಡು ಎಷ್ಟೋ ವರ್ಷಗಳೇ ಆಗಿವೆ. ನಾವು ಹೊರಗೆ ಹೋಗದೆ, ಸಿನಿಮಾ ನೋಡದೆ ಎಂದು ಎಲ್ಲಾರೂ ಕೂಡಿಕೊಂಡು ಸಿನಿಮಾಕ್ಕೆ ಹೋಗುತ್ತಾರೆ. ಬಾಲ್ಕಾನಿ ಟೀಕೇಟ್ ತೆಗೆದುಕೊಳ್ಳುತ್ತಾರೆ. ರಾತ್ರಿ ಹೋಟಲ್‌ನಲ್ಲಿ ಕೋಳಿ ಮಾಂಸವನ್ನು ಚೆನ್ನಾಗಿ ಜಗಿಯುತ್ತಾರೆ.

ಸೌದಾಮಿನಿಗೆ ಗಂಡ ಏನೇ ನಿನಗೆ ಸೀರೆ ಬೇಕಾ ಎಂದು ಕೇಳುತ್ತಾನೆ. ಆಗ ಸೌದಾಮಿನಿಗೆ ಎಂದೂ ಸಿಗದ ಆನಂದ ಅವಳಿಗೆ ಆಗುತ್ತಿರುತ್ತದೆ. ಕೆ.ವಿ.ಕೆ.ಗೆ ಆ ಯುವಕನ ಪರ್ಸಿಸಿನಲ್ಲಿ ಒಟ್ಟು ನೂರಅರವತ್ತು ರೂಪಾಯಿಗಳು ಸಿಕ್ಕಿರುತ್ತವೆ. ಅದರಲ್ಲಿ ಅರವತ್ತು ರೂಪಾಯಿ ಖರ್ಚು ಮಾಡಿ ಉಳಿದ ಹಣದಲ್ಲಿ ಅಬೂಬಕ್ಕರ್ ಅಂಡ್ ಸನ್ಸನಲ್ಲಿ ಹೆಂಡತಿಗೆ ಸೀರೆಯನ್ನು ಕೊಡಿಸುತ್ತಾನೆ. ಸೌದಾಮಿನಿಗೆ ಇಂತಹ ಸೌಭಾಗ್ಯ ಯಾವಾಗಲೂ ಹೀಗೆ ಇರಲೆಂದು ದೇವರಲ್ಲಿ ಬೇಡಿಕೊಳ್ಳುತ್ತಾಳೆ. ಅವಳ ಸಂತೋಷವನ್ನು ಕಂಡ ಕೆ.ವಿ.ಕೆ "ಅವನು ಇನ್ನೂ ಸ್ವಲ್ಪ ಹಣ ಜೇಬಿನಲ್ಲಿಡಬಹುದಿತ್ತು,

ಒಂದೈನೂರೋ ಆರುನೂರೋ ರೂಪಾಯಿಗಳು ಅವನ ಪರ್ಸಿನಲ್ಲಿಟ್ಟಿದ್ದರೆ ಸೌದಾಮಿನಿಗೆ ಒಂದು ಒಳ್ಳೆಯ ಸೀರೆಯನ್ನಾದರೂ ತೆಗೆದುಕೊಡಬಹುದಿತ್ತು. ಸಾಮಾನ್ಯವಾಗಿ ತನಗೆ ಬೋನಸ್ಸ್ ಬಂದಾಗ ಹೆಂಡತಿಗೊಂದು ಸೀರೆ ಕೊಂಡುಕೊಳ್ಳುತ್ತಿದ್ದ. ಆದರೆ ಈ ಸಾರಿ ಅದು ಸಾಧ್ಯವಾಗಿರಲಿಲ್ಲ. ಅದಕ್ಕಾಗಿ ತುಂಬಾ ಬೇಸರವಾಗಿತ್ತು. ಆ ನೋವಿನ ಛಾಯೆ ಇನ್ನೂ ಹಾಗೆಯೇ ಅವನ ಮನಸ್ಸಿನಲ್ಲಿತ್ತು."[೧೦]

ಕೆ.ವಿ.ಕೆ ಸೌದಾಮಿಗೆ ಸೀರೆ ಕೊಡಿಸಿದ್ದನ್ನು ಕಂಡು ಇಷ್ಟೊಂದು ಹಣ ನಿಮಗೆಲ್ಲಿಂದ ಬಂತು ಎಂದು ಕೇಳಿದಾಗ ಕೆ.ವಿ.ಕೆ ನಡೆದ ಸಂಗತಿಯನ್ನು ತಿಳಿಸುತ್ತಾನೆ. ಆಗ ಸೌದಾಮಿನಿ ಇನ್ನೂ ಅವರ ಕೈಯಲ್ಲಿದ್ದ ವಾಚೂ ಕಿತ್ಕೊಬಾರ್ದಿತ್ತೇನ್ರಿ ಎಂದು ಹೇಳುತ್ತಾಳೆ. ಮಕ್ಕಳು ಅಪ್ಪ ಆ ಮೋಟಾರ ಸೈಕಲ್ ತರಬಾರದಿತ್ತೆ ಎಂದು ಕೇಳುತ್ತಾರೆ. ಇವರ ಮಾತಿನಲ್ಲಿ ಅಭಾವದ ಛಾಯೆಗಳು ಕಾಣುತ್ತವೆ. ಇವರು ಮಾಡಿರುವುದು ಅಪರಾಧದಂತಿದ್ದರೂ ಅದು ಅಪರಾಧವೆಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಒಂದು ಕೆಳದರ್ಜೆಯ ಗುಮಾಸ್ತನ ಕುಟುಂಬ ಹೇಗೆ ಬೇಕಾಗಿರುವ ಅಗತ್ಯತೆಗಳು ಸಿಗದೆ ಇಲ್ಲದಿರುವುದಾಗ ಅವುಗಳ ಕುರಿತು ಇರುವ ಅಭಾವದ ನೋವುಗಳನ್ನು ಈ ಕಥೆಯ ಮೂಲಕ ಲೇಖಕರು ತೋರಿಸಿಕೊಟ್ಟಿದ್ದಾರೆ. ಈ ಅಸಮಾನದ ವ್ಯವಸ್ಥೆಗೆ ಬಂಡವಾಳಶಾಹಿಗಳ ನೇರವಾಗಿ ಕಾರಣರಾಗಿರುತ್ತಾರೆ. ಕೆ.ವಿಶ್ವನಾಥ ಕುರುಪ್ ಒಂದು ಆಫೀಸ್‌ನಲ್ಲಿ ಸಾಮಾನ್ಯ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದಾನೆ.

ಅದರ ಆದಾಯದಿಂದ ತನ್ನ ಕುಟುಂಬವನ್ನು ಇತರರಂತೆ ಸಮರ್ಪಕವಾಗಿ ನಡೆಸಲು ಸಾಧ್ಯವಾಗುತ್ತಿರುವುದಿಲ್ಲ. ಇಂತಹ ಕೆಲಸದಿಂದ ತನ್ನ ಹೆಂಡತಿಗೆ ಸರಿಯಾದ ಒಂದು ಸೀರೆಯನ್ನು ತಂದುಕೊಡಲು ಸಾಧ್ಯವಿಲ್ಲದ ಸ್ಥಿತಿಯೂ ಆತನದಾಗಿರುವುದರಿಂದಲೂ ಹಾಗೂ ಆತನ ಮಕ್ಕಳ ವಿದ್ಯಾಭ್ಯಾಸದ ಸಮಸ್ಯೆಗಳಿಂದಾದ ಅಡಚಣೆಯಿಂದಲೂ ಜೀವನ ಪರಿಸ್ಥಿತಿ ಗಂಭೀರವಾಗಿರುತ್ತದೆ. ಇಂತಹ ಸಂದರ್ಭ ಸ್ಥಿತಿಯಲ್ಲಿ ಆತನಿಗೆ ಆಕಸ್ಮಿಕವಾಗಿ ಸಿಗುವ ಯುವಕನ ದುಡ್ಡು ಅದು ಆತನ ಒಂದು ಕುಟುಂಬದ ಸಂತೋಷಕ್ಕಾಗಿ ಆಗಬಹುದೇ ಹೊರತು, ಆತ ಇಡೀ ಜೀವನದ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿಲ್ಲ. ಹೀಗಾಗಿ ಆತನು ಮತ್ತೆ ಆಫೀಸಿಗೆ ಬರಿಗಾಲಿನಿಂದ ನಡೆದುಕೊಂಡೇ ಹೋಗಬೇಕಾಗುತ್ತದೆ. ಇಲ್ಲಿ ಆತನ ಜೀವನ ಪರಿಸ್ಥಿತಿಗಳು ಬದಲಾಗಲು ಆತನ ಶ್ರಮವನ್ನು ತೆಗೆದುಕೊಳ್ಳುತ್ತಿರುವ ಬಂಡವಾಳಶಾಹಿಗಳು ಆತನ ಶ್ರಮಕ್ಕೆ ತಕ್ಕಂತೆ ಆತನ ಜೀವನದ ನಿರ್ವಹಣೆಗೆ ಸಮವಾದ ವೇತನವನ್ನು ನೀಡಬೇಕು. ಒಂದು ಆಫೀಸಿನಲ್ಲಿ ಕೆಲಸ ಮಾಡುವವರ ಎಲ್ಲ ಕುಟುಂಬದವರ ಸಮಸ್ಯೆಗಳು ಒಂದೇ ಆಗಿರುತ್ತವೆ.

ಆದರೆ ಅವರು ಪಡೆದುಕೊಳ್ಳುತ್ತಿರುವ ವೇತನ ಮಾತ್ರ ಬೇರೆ ಬೇರೆ ಇರುತ್ತದೆ. ಇದರಿಂದ ಮನುಷ್ಯನ ಜೀವನ ಸಮಾಜದಲ್ಲಿ ಅಸಮಾನತೆಯನ್ನು ಹುಟ್ಟುಹಾಕಲು ಸಾಧ್ಯವಾಗುತ್ತದೆ. ಇದನ್ನು ತಿಳಿದುಕೊಂಡು ಅಧಿಕಾರಿಶಾಹಿಗಳು ಸಮಾನವಾದ ವೇತನವನ್ನು ನೀಡಬೇಕು. ಅದರಂತೆ ಕೆಳದರ್ಜೆಯ ಕೆಲಸಗಾರರಿಗೆ ಪ್ರತಿತಿಂಗಳು ತಪ್ಪದೆ ಅವರ ಜೀವನಕ್ಕಾಗಿ ಕನಿಷ್ಠ ವೇತನವನ್ನು ಜಾರಿ ಮಾಡಬೇಕು. ಆಗ ಮಾತ್ರ ಕೆಳದರ್ಜೆಯ ಕುಟುಂಬದವರ ಜೀವನ ಪರಿಸ್ಥಿತಿ ಸುಧಾರಣೆಯಾಗಲು ಸಾಧ್ಯವಾಗುತ್ತದೆ.

ಕೆಳದರ್ಜೆಯ ಕೆಲಸಗಾರರನ್ನು ತಾವೂ ಮಾಡಲು ಸಾಧ್ಯವಿಲ್ಲದ ಕೆಲಸಗಳಿಗಾಗಿ ಉಪಯೋಗಿಸಿಕೊಂಡು ಮತ್ತೆ ಅವರನ್ನು ಕೆಳನೋಟದಿಂದ ನೋಡಿ, ಕಡಿಮೆ ವೇತನವನ್ನು ನೀಡುವುದು ಅಧಿಕಾರಿಶಾಹಿ ವರ್ಗದವರು ಬಡವರಿಗೆ ಮಾಡುತ್ತಿರುವ ಆರ್ಥಿಕ ಶೋಷಣೆಯಾಗಿರುತ್ತದೆ. ಮನೆಯ ಬಾಡಿಗೆಯನ್ನು ಕಟ್ಟಲು ಸಾಧ್ಯವಿಲ್ಲದೆ, ಅತಂತ್ರ ಸ್ಥಿತಿಯಲ್ಲಿ ಕೆಳದ ದರ್ಜೆಯ ಕೆಲಸಗಾರರು ಬದುಕುತ್ತಿದ್ದಾರೆ.

ಅವರಿಗೆ ಆಳುವ ಸರಕಾರ ಕನಿಷ್ಠ ವೇತನವನ್ನು ಸಮರ್ಪಕವಾಗಿ ಜಾರಿಗೊಳಿಸಿ, ಅದನ್ನು ಆಡಳಿತವ್ಯವಸ್ಥೆಯಲ್ಲಿ ಜಾರಿಗೆ ತರಬೇಕು. ಇಂತಹ ಮಹದಾಸೆಯನ್ನು ಇಟ್ಟುಕೊಂಡು ಕಥೆಗಾರರು ತಮ್ಮ ಈ ಕತೆಯಲ್ಲಿ ಕೆಳದರ್ಜೆಯ ಕೆಲಸಗಾರರ ಜೀವನ ಪರಿಸ್ಥಿತಿಗಳನ್ನು ಮನಗಂಡು ಅವರ ಸ್ಥಿತಿಗತಿಗಳನ್ನು ಸುಧಾರಿಸಲೆಂದು ತಮ್ಮ ಸಂವೇದನೆಗಳ ಮೂಲಕ ದಲಿತರ ಪರ ಚಿಂತನೆಗಳ ಅಭಿವ್ಯಕ್ತಿಯನ್ನು ಮಾಡಿದ್ದಾರೆ. ಇಂದು ಕೆಳದರ್ಜೆಯ ಕೆಲಸಗಾರರು ಆರ್ಥಿಕ ಶೋಷಣೆಯಿಂದ ನರಳಾಡುತ್ತಿದ್ದಾರೆ. ಅವರಿಗೆ ಬದುಕುಲು ಸಮರ್ಪಕವಾದ ಮೂಲಭೂತ ಸೌಕರ್ಯ ಸಿಗಬೇಕು. ಅವರ ಮಕ್ಕಳಿಗೆ ಉನ್ನತವಾದ ಶಿಕ್ಷಣ ದೊರೆಯುವಂತಾಗಬೇಕು. ಇದು ಕೇವಲ ಕೆ.ವಿಶ್ವನಾಥ ಕುರುಪ್‌ರೊಬ್ಬರ ಕಥೆಯಲ್ಲ, ಕೆಳದರ್ಜೆಯಲ್ಲಿ ದುಡಿಯುತ್ತಿರುವ ಎಲ್ಲ ಕೆಲಸಗಾರರ ಸಮಸ್ಯೆಯಾಗಿರುತ್ತದೆ. ಅವರ ಬದುಕು ಉನ್ನತ ಹುದ್ದೆಯಲ್ಲಿರುವವರಂತೆ ಸಹಜ ಸ್ಥಿತಿಯ ಸರಳ ಶಾಂತಿಯ ಜೀವನ ಸಿಗಬೇಕು.

ಅಧಿಕಾರಿಶಾಹಿಗಳು ಕೇವಲ ತಮ್ಮ ಹಿತವನ್ನೇ ನೋಡಿಕೊಳ್ಳದೆ, ತಮ್ಮ ಕೈಕೆಳಗೆ ಕೆಲಸ ಮಾಡುತ್ತಿರುವ ಇಂತಹ ಕೆಳದರ್ಜೆಯ ಕೆಲಸಗಾರರನ್ನು ಗೌರವದಿಂದ ಕಂಡು, ಕನಿಷ್ಠವೇತನ ಜಾರಿಯಾಗಬೇಕು. ಅದರಂತೆ ಅವರಿಗೆ ಸ್ವತಂತ್ರದ ಸ್ವಾಭಿಮಾನದ ಬದುಕನ್ನು ನೀಡಬೇಕೆಂದು ಈ ಕಥೆಯು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಿಂದ ಸಮಾಜದ ವಾಸ್ತವ ಸ್ಥಿತಿಯ ದಲಿತ ಸಂವೇದನೆಗಳನ್ನು ಅಭಿವ್ಯಕ್ತಿಸುತ್ತದೆ.

### ೩.೪. ವರ್ಣ ವ್ಯವಸ್ಥೆಯಲ್ಲಿ ಸ್ಪೃಶ್ಯ ಮತ್ತು ಅಸ್ಪೃಶ್ಯರು

ಡಾ.ಪ್ರಮೀಳಾ ಮಾಧವ್‌ರವರು ಅನುವಾದ ಮಾಡಿದ 'ದಲಿತ ಬ್ರಾಹ್ಮಣ' ಎಂಬ ಮರಾಠಿ ಕಥಾ ಸಂಕಲನದಲ್ಲಿ ಡಾ.ಶರಣಕುಮಾರ ಲಿಂಬಾಳೆಯವರು ಬರೆದ 'ಬಿಳಿನೊಣ' ಕಥೆಯು ಒಬ್ಬ ಬ್ರಾಹ್ಮಣ ಅಧ್ಯಾಪಕನಾದ ಖಾನೊಲ್ಕರ್ ದಲಿತ ವಿದ್ಯಾರ್ಥಿ ಬರೆದಂತಹ ದಲಿತ ಸಂವೇದನೆವುಳ್ಳ ಕತೆಯನ್ನು ಕದ್ದು ತನ್ನ ಹಿರಿಮೆಯನ್ನು ಹೆಚ್ಚಿಸಿಕೊಳ್ಳಲು ಮಾಡಿದ ಮೋಸದ ಕಥಾವಸ್ತುವಾಗಿದೆ. ಕಥೆಯಲ್ಲಿರುವ ದಲಿತ ವಿದ್ಯಾರ್ಥಿ ಬರೆದ ಕತೆಯು ದಲಿತರಿಗೆ ಮಾಡಿದ ಶೋಷಣೆಯನ್ನು ಎತ್ತಿ ತೋರಿಸುತ್ತದೆ.

ಒಬ್ಬ ವೇಶ್ಯೆಯು ತನ್ನ ಶರೀರದಿಂದ ತನ್ನ ಜೀವನವನ್ನು ಸಾಗಿಸುತ್ತಾ ಗ್ರಾಹಕರು ಕೊಟ್ಟ ಹಣದಿಂದ ಆಹಾರ ಸಿಗುವ ಬಗೆ, ದಲಿತರಿಗೆ ಮಾತ್ರ ಏಕಿಂತಹ ಕನಿಷ್ಟ ಜೀವನ, ನಾವು

ಮನುಷ್ಯರಲ್ಲಿ ಮನುಷ್ಯರಿಗಿಂತ ಇನ್ನೂ ಏನೋ ಭಿನ್ನವಾಗಿದ್ದೇವೆ. ಒಬ್ಬ ದಲಿತ ವಿದ್ಯಾರ್ಥಿ ಪಡುತ್ತಿರುವ ಆತನ ಒಳಗಿನ ನೋವುಗಳಿಗೆ ತಾನು ಬರೆದ ಕಥೆಯೇ ಅದಕ್ಕೆ ಸಾಕ್ಷಿಯಾಗಿದೆ. ನಾನು ವೇಶ್ಯೆಯ ಮಗ "ನಮ್ಮದು ಅನೇಕ ರೀತಿಯಲ್ಲಿ ತುಳಿಯಲ್ಪಟ್ಟ ಬಾಲ್ಯ ಜೀವನ. ಊರಿನ ಹೊರಗಡೆ ವಾಸ ಎರಡು ತುಂಡು ಹಳಸಿದ ರೊಟ್ಟಿಗಾಗಿ ಯೋಚನೆ. ಶಾಲೆಯಲ್ಲಿ ಒಂದು ಪ್ರತ್ಯೇಕ ಮೂಲೆ. ಊರಿನಲ್ಲಿ ಊರಿನವರಿಂದಲೇ ಭಯ ತಲೆಯೆತ್ತಿ ನಡೆಯುವುದೇ ಕಷ್ಟ ಜಾತಿವ್ಯವಸ್ಥೆಯ ಕ್ರೂರ ದಿಗ್ಬಂಧನ ಪ್ರಾಣಿಗಳಾದರೂ ಗಡಿದಾಟಿ ಓಡಬಹುದು ಆದರೆ ನಾವು...? ರಸ್ತೆಯ ಬದಿಯಲ್ಲಿ ತಮ್ಮ ತಮ್ಮ ನೆರಳನ್ನು ಕೂಡ ಅಡಗಿಸಿಕೊಂಡು ಸಂಚರಿಸಬೇಕು. ಹಳ್ಳಿಯ ಭಯಭೀತ ವಾತಾವರಣದಲ್ಲಿ ನಮ್ಮ ಬಾಲ್ಯ ಜೀವನ."[೧೧] ದಲಿತರ ಕೇರಿಯೆಂದರೆ ಸಾಮಾನ್ಯವಾಗಿ ಆ ಊರಿನ ಕೊಳಚೆ ಪ್ರದೇಶದಲ್ಲಿ ಕೊನೆಗೆ ಪ್ರತ್ಯೇಕವಾಗಿ ಇಟ್ಟಿರುವುದು ಎಲ್ಲವೂ ದಲಿತರ ಮೇಲೆ ಮೇಲ್ವರ್ಗದವರು ಮಾಡುವ ಶೋಷಣೆಯಾಗಿದೆ.

ಜಾತಿ ಮತ್ತು ಬಡತನದ ಕಾರಣಕ್ಕಾಗಿ ದಲಿತರನ್ನು ಯಾರು ಮನುಷ್ಯರಂತೆ ಕಾಣುವುದಿಲ್ಲ. ತಮ್ಮ ಮನೆಯ ಮುಂದೆ ಕಟ್ಟಿಕೊಂಡು ಸಾಕುವ ನಾಯಿಯನ್ನು ಪ್ರೀತಿಸಿದಷ್ಟು ನಮ್ಮನ್ನು ಪ್ರೀತಿಸುವುದಿಲ್ಲ. ಒಬ್ಬ ದಲಿತ ವಿದ್ಯಾರ್ಥಿಯ ಈ ನೋವು ಸಮಾಜದ ಅಸಮಾನತೆಯನ್ನು ತೋರಿಸುತ್ತದೆ. ಪ್ರೊ.ದೇಶಪಾಂಡೆಯವರು ಖಾನೋಲ್ಕರವರು ಬರೆದ ಹೊಸ ಕಾದಂಬರಿಯ ಕುರಿತು ದಲಿತರಾದವರಷ್ಟೇ ದಲಿತ ಸಾಹಿತ್ಯವನ್ನು ಬರೆಯಬಲ್ಲರು ಎಂಬ ಮಾತನ್ನು ಸುಳ್ಳು ಮಾಡಿದ್ದಾರೆ. ಈ ಕಾದಂಬರಿಯು ದಲಿತ ಸಾಹಿತ್ಯದಲ್ಲೊಂದು ಉತ್ಕೃಷ್ಟ ರಚನೆವುಳ್ಳ ಸಾಹಿತ್ಯವಾಗಿದೆ. ಶ್ರೀಯುತರು ಬ್ರಾಹ್ಮಣರಾದರೂ ದಲಿತರ ಪರ ಕಾಳಜೀಯಿಂದ ಇಂತ ದಲಿತ ಕಥೆಯನ್ನು ದಲಿತರ ಜೀವನ ಕ್ರಮವನ್ನು ಆಳವಾಗಿ ಅಧ್ಯಯನ ಮಾಡಿ, ಸಾಹಿತ್ಯ ರಚನೆ ಮಾಡಿರುವುದು ಇದೊಂದು ಸಾಹಿತ್ಯ ಲೋಕದ ನೂತನ ಪ್ರಯತ್ನವಾಗಿದೆ ಎಂದು ವೇದಿಕೆಯ ಮೆಲೆ ಖಾನೋಲ್ಕರರನ್ನು ಕುರಿತು ಮಾತನಾಡುತ್ತಿರುವುದನ್ನು ಕೇಳಿ, ದಲಿತ ವಿದ್ಯಾರ್ಥಿ ನಾನೇ ಖಾನೊಲ್ಕರ ಅಧ್ಯಾಪಕರಿಗೆ ಈ ಕಥೆಯನ್ನು ಹೇಳಿದ್ದು ನನ್ನಿಂದ ಈ ಕಥೆಯನ್ನು ಪಡೆದುಕೊಂಡು ನಾನೇ ಕಥೆಯನ್ನು ಬರೆದಿದ್ದೇನೆ ಎಂದು ತನ್ನ ಹೆಸರನ್ನು ಹೇಳುತ್ತಿರುವದು ಇದು ದಲಿತರಿಗೆ ಮಾಡುವ ಬ್ರಾಹ್ಮಣರ ವಂಚನೆಯಾಗಿದೆ.

ನೊಂದುಬೆಂದು ಅನುಭವಗಳನ್ನು ದಕ್ಕಿಸಿಕೊಂಡವರು ಮಾತ್ರ ಇಂಥ ಕತೆಗಳನ್ನು ಬರೆಯಲು ಸಾಧ್ಯ. ಅನುಭವಿಸದಲ್ಲದೆ ಅನುಭವ ಬರಲು ಸಾಧ್ಯವಿಲ್ಲ. ಹೀಗಿರುವಾಗ ದಲಿತರನ್ನು ಕುರಿತು ಬ್ರಾಹ್ಮಣರು ಸಾಹಿತ್ಯ ರಚನೆ ಮಾಡುವುದು ಅಸಾಧ್ಯ. ಅನ್ನದಲ್ಲಿ ಶೋಷಣೆ, ಅಧಿಕಾರದಲ್ಲಿ ಶೋಷಣೆ, ಧರ್ಮದಲ್ಲಿ ಶೋಷಣೆ, ಜಾತಿಯಲ್ಲಿ ಶೋಷಣೆ, ಆರ್ಥಿಕತೆಯಲ್ಲಿ ಶೋಷಣೆ, ರಾಜಕೀಯದಲ್ಲಿ ಶೋಷಣೆ, ಸಮಾಜಿಕತೆಯಲ್ಲಿ ಶೋಷಣೆ ಮಾಡಿದರೆ ಈ ಬ್ರಾಹ್ಮಣ ಅಧ್ಯಾಪಕನಾದ ಖಾನೊಲ್ಕರನು ದಲಿತ ವಿದ್ಯಾರ್ಥಿ ಬರೆದ ಕತೆಯನ್ನು ಕದ್ದು ತನ್ನದೆನ್ನುವುದರಲ್ಲಿ ಜ್ಞಾನದ ಶೋಷಣೆಯಾಗಿದೆ.

ಇದು ದಲಿತ ವಿದ್ಯಾರ್ಥಿ ಬರೆದ ಕೇವಲ ಕಾದಂಬರಿ ಕಥೆ ಅಲ್ಲ ಅದೇ ಅವನ ಜೀವನವಾಗಿದೆ. ಬದುಕಿನ ಹೊರಗು ಒಳಗಣ ಶೋಷಣೆ ನಡೆಯುತ್ತಿರುವಾಗ ದಲಿತರು ಏನೇ ಸಾಧಿಸುವ ಶಕ್ತಿ ಹೊಂದಿದ್ದರೂ, ಅವರನ್ನು ಬಲಹೀನರನ್ನಾಗಿಸುವ ತಂತ್ರಗಾರಿಕೆಯನ್ನು ಬ್ರಾಹ್ಮಣಶಾಹಿಗಳು ಯಾವಾಗಲೂ ನಿರೂಪಿಸುತ್ತಲೇ ಇರುತ್ತಾರೆ. ಖಾನೋಲ್ಕರರವರ ಮನೆಗೆ ಕಥೆ ಬರೆದ ನಾಯಕ ತನ್ನ ಗೆಳೆಯರನ್ನು ಕರೆದುಕೊಂಡು ಹೋಗುತ್ತಾನೆ. ಸರ್ ನೀವು ಬರೆದಿದ್ದೇನೆಂದು ಬಿಡುಗಡೆ ಮಾಡಿದ ಕಾದಂಬರಿಯು ನನ್ನ ಕಥೆಯೇ ಆಗಿದೆ. ಅದರ ಪ್ರತಿಯೊಂದು ಸಾಲುಗಳು ನನ್ನವೇ. ನಾನು ನಿಮ್ಮ ಜೊತೆ ಹೇಳುವಾಗ ರೆಕಾರ್ಡ್ ಮಾಡಿಕೊಂಡು, ಕಥೆಯನ್ನು ಕಾದಂಬರಿಯಾಗಿ ರಚಿಸಿದ್ದೇನೆಂದು ಹೇಳುತ್ತಿರುವುದು, ಪುಸ್ತಕದಲ್ಲಿ ನಿಮ್ಮ ಹೆಸರನ್ನು ಬಳಸಿಕೊಂಡಿರುವುದು ನೀವು ನನಗೆ ಮಾಡಿದ ಮೋಸವಾಗಿದೆ. ಎಂದು ಹೇಳಿದಾಗ ಖಾನೋಲ್ಕರ ರವರ ಮಗಳು ಅಪರ್ಣಾ ಮತ್ತು ಹೆಂಡತಿ ನಿಮ್ಮನ್ನು ಮನೆಯೊಳಗೆ ಬಿಟ್ಟುಕೊಂಡಿದ್ದೇ ತಪ್ಪು. ಯಾರನ್ನು ಎಲ್ಲಿ ಇಡಬೇಕೋ ಅಲ್ಲಿ ಇಡಬೇಕು. ಅವರು ತಮ್ಮ ಸೃಜನಶೀಲತೆಯ ಕಲ್ಪನೆಯಿಂದ ಕಾದಂಬರಿಯನ್ನು ಬರೆದಿದ್ದಾರೆ.

ನೀವು ಇಲ್ಲಿಂದ ಹೋಗಿ ಎನ್ನುವ ಮಾತುಗಳು ಮತ್ತು ಖಾನೋಲ್ಕರ ರವರು ಸಂಪಾದಕ ಸಾಹೇಬರಿಗೆ ಪೋನ್ ಮಾಡಿ ನಾನು ಬರೆದಿರುವ ಕಾದಂಬರಿಯನ್ನು ಓದಿ ಯಾರೋ ದಲಿತ ಹುಡುಗರು ನಮ್ಮ ಮನೆಗೆ ಬಂದಿದ್ದಾರೆ ಅದರಲ್ಲಿ ಒಬ್ಬನು ನನ್ನದೇ ಕಥೆಯೆಂದು ಹೇಳುತ್ತಿದ್ದಾನೆ. ನನ್ನ ಲೇಖನದ ಶಕ್ತಿಗೆ ಇಷ್ಟು ಸಾಕು. ನೀವು ಬನ್ನಿ ತಾವು ತಮ್ಮ ಕ್ಯಾಮರಾದವನನ್ನೂ ವರದಿಗಾರನನ್ನು ಕಳುಹಿಸಿ ನಿಮಗೆ ಒಳ್ಳೆಯ ಸಮಾಚಾರ ಸಿಗುತ್ತದೆಂದು ಹೇಳುವುದು ಸವರ್ಣೀಯರ ಬುದ್ಧಿಶಕ್ತಿಯಲ್ಲಿ ಬರಿ ಮೋಸ, ವಂಚನೆ, ಅನ್ಯಾಯ, ಹೃದಯ ಶೂನ್ಯದ ಗುಣಗಳೇ ತುಂಬಿಕೊಂಡಿವೆ. ಸಮಾಜದಲ್ಲಿ, ಚರಿತ್ರೆಯಲ್ಲಿ ತಮ್ಮ ಹೆಸರು, ಕೀರ್ತಿ ಇರಬೇಕು ತಾವೊಬ್ಬರು ಮಾತ್ರ ಗೌರವದಿಂದ ಬದುಕಬೇಕು ಅದಕ್ಕೆ ಸಾವಿರಾರು ದಲಿತರ ಹೃದಯಗಳು ಮೇಲ್ವರ್ಗದವರ ಕಾಲಕೆಳಗೆ ನರಳಿದರೂ ಅದೇ ಅವರಿಗೆ ಆನಂದ. ನೊಂದುಬೆಂದು ಜೀವನವನ್ನೇ ಕುಲುಮೆಯನ್ನಾಗಿ ಮಾಡಿಕೊಂಡ ಶೋಷಿತರಲ್ಲಿ ಜ್ಞಾನದ ಪ್ರಭೆ ಪ್ರಜ್ವಲಿಸುತ್ತಿದೆ.

ಆದರೆ ಅದನ್ನು ಆರಿಸಿ ಅದೇ ಜ್ಯೋತಿಯ ಕಾಂತಿ ನಮ್ಮಿಂದಲೇ ಬೀರುತ್ತಿದೆಂದು ಬೀಗುತ್ತಿರುವ ಸವರ್ಣಿಯರಿಗೆ ಈ ಬಿಳಿನೊಣದ ಕಥೆಯಲ್ಲಿ ದಲಿತರಾದ ನಮಗೆ ದೈಹಿಕ, ಬೌದ್ಧಿಕ ಶಕ್ತಿಗಳು ಇವೆ. ಅವುಗಳನ್ನು ಬ್ರಾಹ್ಮಣಶಾಹಿಗಳು ತಮ್ಮ ಕುತಂತ್ರಗಾರಿಕೆಯಿಂದ ದಲಿತರನ್ನು ದಾರಿತಪ್ಪಿಸುತ್ತಿವೆ ಎಂದು ದಲಿತ ವಿದ್ಯಾರ್ಥಿಯ ಪಾತ್ರ ಚಿತ್ರಣದಿಂದ ಕಥೆಗಾರರು ಪ್ರತಿಪಾದಿಸಿದ್ದಾರೆ. ದಲಿತ ಮಕ್ಕಳೆಂದರೇ ಆರ್ಥಿಕವಾಗಿ ಹಿಂದುಳಿದಂತೆ ಬೌದ್ಧಿಕವಾಗಿಯೂ ಹಿಂದುಳಿದಿರುತ್ತಾರೆಂದು ಇಡೀ ಸಮಾಜವೇ ನಂಬುವ ಹಾಗೆ ಪುರೋಹಿತಶಾಹಿಗಳು ಸೃಷ್ಟಿ ಮಾಡಿದ್ದಾರೆ. ಅದರಂತೆ ಅವರನ್ನು ಶೈಕ್ಷಣಿಕವಾಗಿ ವಂಚಿತರನ್ನಾಗಿಸಿದ್ದಾರೆ. ಆದರೆ ಬಡತನವು ಕಲಿಸುವ ಶಿಕ್ಷಣದಿಂದಲೇ ದಲಿತರು ಯಾವ ಪುರಾಣ ಪುಣ್ಯಕತೆಗಳನ್ನು ಓದದೆಯೇ ಜೀವನಾನುಭವವನ್ನು ಪಡೆದುಕೊಂಡಿರುತ್ತಾರೆ.

ಪುರೋಹಿತಶಾಹಿಗಳು ಜಾತಿವ್ಯವಸ್ಥೆಯನ್ನು ಸಮಾಜದಲ್ಲಿ ತಂದು ಅದರಿಂದಾದ ಅವಮಾನಗಳು, ನೋವುಗಳು ಆಲೋಚನೆಯಲ್ಲಿ ದಲಿತರನ್ನು ಬಲಿಷ್ಠರನ್ನಾಗಿ ಮಾಡಿರುತ್ತವೆ. ಅದರಿಂದಲೇ ಬಂದಂತ ಸಂಕಟಗಳ ಘಟನೆಗಳು ಜೀವನ ಪಾಠವಾಗಿರುತ್ತವೆ. 'ಕಲಿಕೆಯ ಪಾಠಕ್ಕಿಂತ ಜೀವನದ ಪಾಠ ದೊಡ್ಡದು' ಅದರಿಂದ ಸಮರ್ಥವಾದ ಸಾಹಿತ್ಯವನ್ನು ವಾಸ್ತವದ ನೆಲೆಯಲ್ಲಿ ಬಿತ್ತರಿಸಲು ಸಾಧ್ಯವಾಗುತ್ತದೆ. ಈ ಸತ್ಯವನ್ನು ತಿಳಿಯಲಾರದ ಪುರೋಹಿತಶಾಹಿಗಳು ತಾವೇ ಶ್ರೇಷ್ಠರು, ತಾವೇ ಪಂಡಿತರು, ತಾವೇ ಯೋಗ್ಯರೆಂದು ತಮ್ಮಲ್ಲಿರುವ ಮನುಷ್ಯತ್ವವನ್ನು ಕಳೆದುಕೊಂಡು ದಲಿತರನ್ನು ಮನುಷ್ಯರಂತೆ ಕಾಣದೆ ಶೈಕ್ಷಣಿಕವಾಗಿ ಶೋಷಣೆಯನ್ನು ಮಾಡುತ್ತಿದ್ದಾರೆ. ಈ ಕತೆಯಲ್ಲಿ ಪ್ರೊ.ದೇಶಪಾಂಡೆಯವರು ಖಾನೋಲ್ಕರವರು ಬರೆದಿರುವ ಹೊಸ ಕಾದಂಬರಿಗಳು ಶ್ರೇಷ್ಠ ಕಾದಂಬರಿಗಳು ಅವುಗಳನ್ನು ದಲಿತರಿಂದಲೂ ಬರೆಯಲು ಸಾಧ್ಯವಿಲ್ಲ. ಅಷ್ಟೊಂದು ದಲಿತ ಸಂವೇದನೆವುಳ್ಳ ಕಾದಂಬರಿಗಳಾಗಿವೆ ಎಂದು ತಮ್ಮನ್ನು ತಾವೇ ಹೊಗಳಿಕೊಂಡು ತಮ್ಮನ್ನು ಮಾತ್ರವೇ ಸಮಾಜವು ಗೌರವ ಸ್ಥಾನದಿಂದ ಕಾಣಬೇಕು.

ನಾವೇ ಪಂಡಿತೋತ್ತಮರೆಂದು ಭಾಷಣ ಮಾಡುವ ಪುರೋಹಿತಶಾಹಿಗಳ ಅರಿವಿನಲ್ಲಿ ದಲಿತರು ಪಟ್ಟಿರುವ, ಪಡುತ್ತಿರುವ ನೋವುಗಳನ್ನು ತಮ್ಮ ಸಂವೇದನೆಗಳ ಮೂಲಕ ಅರಿಯಲು ಸಾಧ್ಯವೇ...? ಅದು ಸಾಧ್ಯವಾಗಿದ್ದರೇ ಇವತ್ತು ದಲಿತರು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಶೋಷಣೆಯನ್ನು ಅನುಭವಿಸುತ್ತಿರಲಿಲ್ಲ. ಇದು ಪುರೋಹಿತಶಾಹಿಗಳು ದಲಿತರ ಮೇಲೆ ಮಾಡುತ್ತಿರುವ ಬೌದ್ಧಿಕ ಶೋಷಣೆಯಾಗಿರುತ್ತದೆ. ತಮ್ಮ ಉಪಯೋಗವಿದ್ದಾಗ ಮಾತ್ರ ಯಾವ ಜಾತಿಯನ್ನು ಪರಿಗಣಿಸಿದೆ ದಲಿತ ವಿದ್ಯಾರ್ಥಿಯನ್ನು ಮನೆಯೊಳಕ್ಕೆ ಕರೆದುಕೊಂಡು, ಅವನಲ್ಲಿರುವ ವಿಚಾರವನ್ನೇ ತಮ್ಮ ಪಾಂಡಿತ್ಯದ ಪ್ರದರ್ಶನವಾಗಿಸುವ ಹಿನ್ನೆಲೆಯಲ್ಲಿ, ದಲಿತರ ಮೇಲೆ ಸವರ್ಣಿಯರು ನಡೆಸುತ್ತಿರುವ ಕುತಂತ್ರಗಾರಿಕೆಯು ಮನುಷ್ಯರು ಮತ್ತೊಬ್ಬ ಮನುಷ್ಯನಿಗೆ ಮಾಡುತ್ತಿರುವ ಅಧರ್ಮದ ವಂಚನೆಯಾಗಿರುತ್ತದೆ. ದಲಿತರು ಮಾತ್ರ ಅವರಿಗಾದ ಮೋಸದ ಕುರಿತು ಎಲ್ಲೂ ಧ್ವನಿಯೆತ್ತದ ಹಾಗೆ ಮಾಡಿದ್ದಾರೆ.

ಅವರ ಅಸಹಾಯಕ ಸ್ಥಿತಿಯಿಂದ ಪುರೋಹಿತಶಾಹಿಗಳು ಮಾಡುತ್ತಿರುವ ಶೋಷಣೆಯನ್ನು ಅನುಭವಿಸಿ, ಅವಮಾನಗಳನ್ನುಂಡುಕೊಂಡು ಜೀವನದ ಅತಂತ್ರತೆಯಲ್ಲಿ ದಲಿತರು ಎದೆ ನೋವಿನಲ್ಲಿ ದಿನಗಳನ್ನು ಕಳೆಯುತ್ತಿದ್ದಾರೆ. ಡಾ. ಶರಣ ಕುಮಾರ್‌ಲಿಂಬಾಳೆಯವರು ತಮ್ಮ 'ದಲಿತ ಬ್ರಾಹ್ಮಣ' ಕಥಾ ಸಂಕಲನದಲ್ಲಿ ದಲಿತರು ಪಡುತ್ತಿರುವ ಅನಿರ್ವಚನಿಯ ನೋವುಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಈ ಕತೆಯಲ್ಲಿ ತೋರಿಸಿಕೊಟ್ಟಿದ್ದಾರೆ. ದಲಿತರು ಸಮಾಜದಲ್ಲಿ ತಮ್ಮ ಸಂವಿಧಾನಿಕ ಮೂಲಭೂತ ಹಕ್ಕುಗಳಿಂದ ವಂಚಿತರಾಗಿ ಆರ್ಥಿಕವಾಗಿ ದುರ್ಬಲರಾಗಿ ಬಡತನದಲ್ಲಿಯೇ ಹುಟ್ಟಿ ಬಡತನದಲ್ಲಿಯೇ ಜೀವನವನ್ನು ನಡೆಸಬೇಕಾಗಿರುವ ಸಂಕಟದ ಪರಿಸ್ಥಿತಿಯನ್ನು ಕಂಡು ಕಥೆಗಾರರು ಈ ಕಥೆಯ ಮೂಲಕವಾಗಿ ಅಂಬೇಡ್ಕರವಾದ ನೆಲೆಯಿಂದ ದಲಿತ ಸಂವೇದನೆಗಳನ್ನು ಹಂಚಿಕೊಂಡಿದ್ದಾರೆ.

'ಇಪ್ಪತ್ತು ಭಾರತೀಯ ಕಥೆಗಳು' ಎಂಬ ಕಥಾ ಸಂಕಲನವನ್ನು ಡಿ.ಎನ್.ಶ್ರೀನಾಥರವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ತಮಿಳಿನ ಮಾರಿ ಅರವಷಿ ಯವರು ಬರೆದಿರುವ 'ವಿಭಜನೆ' ಎಂಬ ಕಥೆಯು ಅಸ್ಪೃಶ್ಯರು ಅನುಭವಿಸುತ್ತಿರುವ ಸಾಮಾಜಿಕ ಶೋಷಣೆಯ ವರ್ಗೀಕೃತ ವ್ಯವಸ್ಥೆಯಲ್ಲಿ 'ಜಾತಿ' ಎಂಬ ಪದವು ಉಚ್ಚ-ನೀಚರೆಂಬ ಸ್ಥಾನವನ್ನು ಕಲ್ಪಿಸಿಕೊಟ್ಟು, ಮನಸಿನಾಳದಲ್ಲಿ ಅಂತರವನ್ನು ಬೇರೂರಿ ಅಸಮಾನತೆಯ ವ್ಯವಸ್ಥೆಯನ್ನು ಸೃಷ್ಟಿಸಿ, ಮನುಷ್ಯ ಮನುಷ್ಯನನ್ನೇ ಕೀಳಾಗಿ ಕಾಣುತ್ತಾರೆ. ಒಬ್ಬರು ಮತ್ತೊಬ್ಬರನ್ನು ವಂಚನೆ ಮಾಡಿ, ತನ್ನದೆ ಎಂಬ ಅಹಂಕಾರದ ಅಧಿಕಾರದಲ್ಲಿ ಮುಳುಗಿ, ಮತ್ತೆ ಅದೇ ಮನುಷ್ಯನನ್ನು ಮಾನವೀಯತೆಯಿಲ್ಲದೆ ತುಚ್ಛವಾಗಿ ಕಾಣುತ್ತ, ಶ್ರೇಷ್ಠ-ಕನಿಷ್ಠರೆಂಬ ಸ್ಥಾನಮಾನವನ್ನು ಅಳೆದು, ಒಬ್ಬರು ಮತ್ತೊಬ್ಬರ ಮೇಲೆ ದೌರ್ಜನ್ಯವನ್ನು ಎಸಗುತ್ತ, ಮನುಷ್ಯನಲ್ಲಿರುವ ಅಂತಃಕರಣವನ್ನೇ ಮರೆತುಬಿಡುವಂತೆ ಮಾಡಿರುತ್ತದೆ.

ಈ 'ಜಾತಿ' ಎಂಬ ವರ್ಗೀಕೃತ ವ್ಯವಸ್ಥೆ ದಲಿತ ಸಮುದಾಯದವರನ್ನು ಸಾರ್ವಜನಿಕ ವಲಯದಲ್ಲಿ ಸಮಾನವಾಗಿ ಕಾಣದೆ, ಅವರನ್ನು ತಮಗಿಂತ ಬೇರೊಂದು ಜಾತಿನೋ, ಮೃಗನೋ, ಮತ್ತೆ ಇನ್ನೆನ್ನೋ... ಎಂಬಂತೆ ನೋಡುವುದಕ್ಕೆ ಈ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ. ಸವರ್ಣಿಯರು ಸೃಷ್ಟಿಸಿದ ಈ ವ್ಯವಸ್ಥೆಯಲ್ಲಿ ಬ್ರಾಹ್ಮಣ, ವೈಶ್ಯ, ಕ್ಷತ್ರೀಯ, ಶೂದ್ರರೆಂಬ ಭೇದದಿಂದ ಸಮಾಜವನ್ನು ಒಡೆದಾಳುವ ತಂತ್ರವನ್ನಾಗಿ ರೂಪಿಸಿಕೊಂಡಿದ್ದಾರೆ. ಮನುಷ್ಯ ಜಾತಿಯನ್ನು ಮರೆತು ಸೃಷ್ಟಿಸಿದ ಜಾತಿಯನ್ನೇ ನಂಬಿ ಅದರ ಮೌಢ್ಯತೆಯಲ್ಲಿ ಮತ್ತೊಬ್ಬರನ್ನು ದುರ್ಬಲರನ್ನಾಗಿಸಿ, ಅಸಹಾಯಕರನ್ನಾಗಿಸಿ ಶೋಷಣೆ ಮಾಡುವುದಕ್ಕೆ ಪೂರಕವಾಗಿಯೇ ಈ ವರ್ಗೀಕೃತ ವರ್ಣವ್ಯವಸ್ಥೆ ಅನಾದಿ ಕಾಲದಿಂದಲೂ ಹೀಗೆ ಹರಿದುಕೊಂಡು ಬರುತ್ತಿದೆ. ಇದರ ಹಿನ್ನೆಲೆಯಲ್ಲಿ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ಮಾಡುತ್ತಿರುವ ಅಕೃತ್ಯದ ಅಪರಾಧದ ಶೋಷಣೆಯಾಗಿದೆ ವಿನಃ ಇದು ಯಾವುದೂ ವೈಜ್ಞಾನಿಕತೆಯ ನೆಲೆಯಿಂದ ರೂಪಿತವಾಗಿರುವುದಿಲ್ಲ.

ಇದರ ನೆರಳನ್ನೆ ಚಾಚುತ್ತ ಸವರ್ಣೀಯರು ತಮ್ಮ ತಮ್ಮ ಸ್ವಾರ್ಥಕ್ಕಾಗಿ ಸಮಾಜದಲ್ಲಿ ಸಮಾನತೆಯಿಂದ ಬದುಕಿ ಬಾಳುವುದನ್ನು ತಡೆಗಟ್ಟಿ, ತಾವೊಂದೆ ಶ್ರೇಷ್ಠರು ಎಂಬ ಮನೋಭಾವನೆಯಿಂದ ಇಡೀ ಜನ ಸಮುದಾಯಕ್ಕೆ ಆತಂಕದ 'ಜಾತಿ' ಎಂಬ ವಿಷ ಬೀಜವನ್ನು ಬಿತ್ತಿರುತ್ತಾರೆ. ಇಂತಹ 'ಜಾತಿ' ಪದ್ಧತಿಯಿಂದ ಒಬ್ಬ ವ್ಯಕ್ತಿಗೆ ಆಗುವ ಶೋಷಣೆಯನ್ನು ಈ 'ವಿಭಜನೆ' ಕಥೆಯಲ್ಲಿ ಮಾರಿ ಅರವಷಿಯವರು ತೋರಿಸಿಕೊಟ್ಟಿದ್ದಾರೆ. ರಂಗಮ್ ಪಲ್ಯಮ್ ಎಂಬುವುದೊಂದು ಅಂಚೆ ಕಛೇರಿಯಾಗಿರುತ್ತದೆ. ಅದು ಅಷ್ಟೊಂದು ದೊಡ್ಡದೂ ಇಲ್ಲದ, ಚಿಕ್ಕದೂ ಅಲ್ಲದ ಒಂದು ನಿರ್ದಿಷ್ಟ ಆಕಾರದಲ್ಲಿ ಗಿಡ, ಹೂ ಬಳ್ಳಿಗಳಿಂದ ತುಂಬಿಕೊಟ್ಟಿತ್ತು.ಅದಕ್ಕೊಬ್ಬ ಪೋಸ್ಟ್ ಮಾಸ್ಟರ್, ಒಬ್ಬ ಪೋಸ್ಟಮೆನ್, ಒಬ್ಬ ಮುದ್ರೆ ಒತ್ತುವವ ಹಾಗೂ ಕೊನೆಯದಾಗಿ ಮತ್ತೊಬ್ಬ ಚೀಲಗಳನ್ನು ದಾರದಿಂದ ಕಟ್ಟಿ ಹಾಕುವವರಿಂದ ಆ ಅಂಚೆ ಕಛೇರಿ ತನ್ನ ದಿನನಿತ್ಯದ ಸಾರ್ವಜನಿಕರ ಸೇವೆಗಳನ್ನು ಮಾಡುವುದರಲ್ಲಿ ತನ್ನ ಕಾರ್ಯವನ್ನು ನಿರ್ವಹಿಸುತ್ತಿತ್ತು.

ಈ ಅಂಚೆ ಕಛೇರಿಗೆ ಹೊಸದಾಗಿ ಒಬ್ಬನು ಅನೇಕ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿಕೊಂಡು, ಬೇರೆಲ್ಲೋ ಒಬ್ಬ ಸಹಾಯಕನಾಗಿದ್ದುಕೊಂಡು ಒಂದೆರಡು ವರ್ಷಗಳು ಮಾತ್ರವಲ್ಲದೆ ಒಟ್ಟು ಹನ್ನೆರಡು ವರ್ಷಗಳ ಕಾಲ ಅವಿರತವಾಗಿ ಶ್ರಮಪಟ್ಟು,ಅರೆ ಹೊಟ್ಟೆಯಲ್ಲಿ ಪರೀಕ್ಷೆಯನ್ನು ಬರೆದು, ಉತ್ತೀರ್ಣನಾಗಿ ನಂತರ ಉನ್ನತ ಹುದ್ದೆಗೇರಿ ಇಲ್ಲಿಗೆ ನೇಮಕವಾಗಿ ಬಂದಿದ್ದಾನೆ. ಆತನೇ 'ಕರುಮ್‌ಪ್ಪ ಈರಾಮನೂ' ಎಂದು ಆತನ ಹೆಸರು. ಯಾವ ಚಿಂತೆಯೂ ಇಲ್ಲದೆ ಕೈತುಂಬ ಸಂಬಳವನ್ನು ಪಡೆದುಕೊಳ್ಳುತ್ತಿದ್ದಾನೆ. ಈ ಕಛೇರಿಗೆ ಬಂದ ಮೇಲೆ ಊಟ ಮಾಡುವುದು ಎಲ್ಲಿ ಎಂದು ತುಂಬಾ ಯೋಚನೆಯನ್ನು ಮಾಡತೊಡಗಿದ. ಕೊನೆಗೆ ಅಪ್ಪೂ ನಾಯಕರ ಊಟದ ಹೋಟಲ್‌ನಲ್ಲಿ ಊಟಮಾಡಲು ನಿರ್ಧರಿಸಿಕೊಂಡನು. ಆತನಿಗೆ ಬೇರೆ ಇನ್ನಾವುದೇ ಮಾರ್ಗಗಳಿರಲಿಲ್ಲ. ರಂಗಮ್ ಪಲ್ಯಮ್ ಸರ್ಕಲ್‌ನಲ್ಲಿ ನಾಲ್ಕೈದು ಊಟದ ಹೋಟಲುಗಳಿದ್ದವು. ಅವುಗಳಲ್ಲಿ ನಾಯಕರ ಊಟದ ಹೋಟಲ್ ಆತನಿಗೆ ಊಟ ಮಾಡಲು ಹಿತವೆಂದು ಅನಿಸುತ್ತದೆ.

ಯಾಕಂದರೆ ಅಲ್ಲಿ ಊಟಕ್ಕಾಗಿ ಪ್ರತ್ಯೇಕವಾದ ಸ್ಥಳವಿತ್ತು. ಬೇರೆ ಹೋಟಲಿನಲ್ಲಿ ಅಂತಹ ಅನುಕೂಲದ ವ್ಯವಸ್ಥೆ ಇರಲಿಲ್ಲ. ನಾಯಕರ ಈತನೊಬ್ಬ ಅಂಗಡಿಯ ಮಾಲೀಕ ಊಟವನ್ನು ಬಂದವರಿಗೆ ಬಡಿಸುತ್ತಿದ್ದನು. ಅದರ ಜೊತೆ ಬಿಡುವಿನ ವೇಳೆ ಒಂದು ಪುಸ್ತಕವನ್ನು ಓದುವ ಹವ್ಯಾಸವುಳ್ಳವನಾಗಿದ್ದನು. ಈಗ ಕರುಮ್‌ಪ್ಪ ಈರಾಮನೂ ದಿನನಿತ್ಯ ಹೋಟಲ್‌ಗೆ ಹೋಗಿ ಊಟವನ್ನು ಮಾಡಿಕೊಂಡು ಬರುತ್ತಿದ್ದಾನೆ. ಊಟಕ್ಕೆ ಹೋದಾಗ ಅಲ್ಲಿ ನಾಯಕರರು ಕುರುಮ್‌ಪ್ಪ ಈರಾಮನನ್ನು ವಿಶೇಷ ಕಾಳಜಿವಹಿಸಿ ಊಟವನ್ನು ಬಡಿಸುತ್ತಿದ್ದ. ಏಕೆಂದರೇ ಆತನು ಆ ಹಳ್ಳಿಯ ಪೋಸ್ಟ್‌ಮ್ಯಾನ್ ಆಗಿದ್ದನು. ಎರಡನೇಯದಾಗಿ ಉಳಿದೆಲ್ಲಾ ಗಿರಾಕಿಗಳಿಗಿಂತ ಅತಿ ಹೆಚ್ಚು ಹಣವನ್ನು ಹೊಟಲ್‌ಗೆ ನೀಡುತ್ತಿದ್ದನು. ಆತನು ಬರುಬರುತ್ತಲೇ ನಾಯಕರರು ಬನ್ನಿ ಪೋಸ್ಟ್‌ಮ್ಯಾನ್ ಸಾಹೇಬ್ರೇ ಬನ್ನಿ ಎಂದು ಸ್ವಾಗತಿಸುತ್ತ ಕರುಮ್‌ಪ್ ಈರಾಮನೂನಿಗೆ ಊಟವನ್ನು ಹಾಕುತ್ತಿದ್ದನು. ಆಗ ಹಸಿದ ಹೊಟ್ಟೆಯಿಂದ ಹೊಟ್ಟೆತುಂಬ ಊಟವನ್ನು ಮಾಡಿಕೊಂಡು ತನ್ನ ಕಛೇರಿಗೆ ಬರುತ್ತಿದ್ದರು.

ಆದರೆ ಒಂದು ದಿನ ಕರುಮ್‌ಪ್ಪ ಈರಾಮನೂನು ಊಟಕ್ಕೆ ಬಂದಾಗ ನಾಯಕರರು ಆತನನ್ನು ಗಮನಿಸಲೇ ಇಲ್ಲ. ನೋಡಿ ನೋಡದಂತೆ ನಟಿಸುತ್ತಾ ಆ ಕಡೆ ನೋಡುತ್ತಿದ್ದರು. ಆಗ ಕುರುಮ್‌ಪ್ಪ ಈರಾಮನನಿಗೆ ಆಶ್ಚರ್ಯವಾಯಿತು. ಆದರೆ ಹಸಿದ ಹೊಟ್ಟೆಯಿಂದ ಒಳಗೆ ಹೋಗಿ ಕೂತು ಎಲೆಯನ್ನು ಹಾಕಲು ಹೇಳಿದಾಗ ನಾಯಕರರು ಇನ್ನೂ ಅನ್ನ ಬೇಯ್ತಿದೆ ತಾಳಿ ಎಂದರು. ಯಾವತ್ತು ಇಂತಹ ಮಾತನ್ನು ಆತ ಕೇಳಿರಲಿಲ್ಲ. ಆದರೆ ಏನು ಮಾಡುವುದು ಹಸಿದ ಹೊಟ್ಟೆಯೆಂದು ಸುಮ್ಮನೆ ಕುಳಿತನು. ನಂತರ ಅಕ್ಕ ಪಕ್ಕದವರು ಊಟ ಮುಗಿಸಿಕೊಂಡು ಹೋದ ಮೇಲೆ ಮಾಣಿಯನ್ನು ಕರೆದು ಊಟ ಬಡಿಸಲು ಹೇಳಿದ ನಾಯಕರರು.ಆದರೆ ಇದನ್ನೆಲ್ಲ ಸಹಿಸಿಕೊಂಡು ಕರುಮ್‌ಪ್ಪ ಈರಾಮನು ಸುಮ್ಮನೆ ಊಟ ಮಾಡತೋಡಗಿದನು. ಆದರೆ ದೂರದ ಮೂಲೆಯಲ್ಲಿ

ಕೂತು ಓರೆಗಣ್ಣಿನಿಂದ ಬಡಿಸುತ್ತಿರುವ ಮಾಣಿಯನ್ನು, ಊಟ ಮಾಡುತ್ತಿರುವ ಕರುಮ್‌ಪ್ಪ ಈರಾಮನನ್ನು ನಾಯಕರರು ನೊಡುತ್ತಿದ್ದರು.

ಕೊನೆಗೆ ಅವನು ಊಟ ಮುಗಿಸಿಕೊಂಡು ನೀರು ಕುಡಿಯಲು ಹೋದಾಗ ನಾಯಕರರು ನಾಳೆಯಿಂದ ನಮ್ಮ ಹೋಟಲ್‌ಗೆ ನೀನು ಊಟಕ್ಕೆ ಬರಬೇಡವೆಂದು ಹೇಳುತ್ತಾರೆ. ಆಗ ಕರುಮ್‌ಪ್ಪ ಈರಾಮನು ಆಶ್ಚರ್ಯಗೊಂಡು ತಲೆಗೆ ಯಾರಿಂದಲೋ ಉಳಿಯಿಂದ ಹೊಡೆಸಿಕೊಂಡಂತಾಗಿ ನಾಯಕರ ಮಾತಿಗೆ ನಾನು ಏನು ತಪ್ಪು ಮಾಡಿದ್ದೇನೆ. ನನ್ನಿಂದ ನಿಮಗೆ ಏನು ತೊಂದರೆಯಾಗಿದೆ ಎಂದು ಕೇಳುತ್ತಾನೆ. ತುಂಬಾ ಆಘಾತದಿಂದ ನನ್ನಿಂದ ಏನಾದ್ರೂ ಅಪರಾಧವಾಯಿತೇ...? ನಾನು ನಿಮಗೆ ದುಡ್ಡು ಕೊಡುತ್ತಿರಲಿಲ್ಲವೆ...? ಎಂದು ಕೇಳಿದಾಗ ನಾಯಕರರು "ನೀವು ಇಷ್ಟು ದಿನಗಳಿಂದ ನನಗೆ ಮೋಸ ಮಾಡ್ತಿದ್ದೀರ... ನಿಮ್ಮ ಮೈ ಬಣ್ಣ ನೋಡಿ ನಾನು ಏನೋ ಅಂತ ತಿಳಿದುಕೊಂಡಿದ್ದೆ. ಅದಕ್ಕೆ ಸುಮ್ಮನಿದ್ದೆ... ಇವತ್ತು ನಿಮ್ಮ ಕಛೇರಿಯ ಗುಮಾಸ್ತ ನಿಜವಾದ ವಿಚಾರವನ್ನು ಹೇಳದೇ ಇದ್ದಿದ್ರೆ ನನಗೇನು ಗೊತ್ತಾಗುತ್ತಿತ್ತು...! 'ನಾನು ಇವನಿಗೆ ಮೋಸ ಮಾಡಿದೆನೆ...? ಎಂದು ಮನಸ್ಸಿನಲ್ಲೇ ಹೇಳಿಕೊಂಡು ಕರುಮ್‌ಪ್ಪ ಈರಾಮ್ ಆಶ್ಚರ್ಯಗೊಂಡ.

"ನಾಯಕರರೇ, ಏನಾಯ್ತು ಹೇಳಿ ನನಗೊಂದು ಅರ್ಥವಾಗುತ್ತಿಲ್ಲ. ಸ್ವಲ್ಪ ಬಿಡಿಸಿ ಹೇಳಬಾರದೆ...?" "ಈಗ ಹೇಳೋದಕ್ಕೇನಿದೆ...ನೀವು ಇದುವರೆಗೆ ನಿಮ್ಮ ಜಾತಿ ಕುಲ ಯಾವುದು ಅಂತ ಹೇಳಲೇ ಇಲ್ಲ."[೨] ಸಾರ್ವಜನಿಕ ಸ್ಥಳಗಳಲ್ಲಿ, ಸಾರ್ವಜನಿಕ ಹೋಟಲ್‌ಗಳಲ್ಲಿ, ಸಾರ್ವಜನಿಕ ದೇವಸ್ಥಾನಗಳಲ್ಲಿ, ಸಾರ್ವಜನಿಕವಾಗಿ ಕೂತುಕೊಳ್ಳಲು ಅವಕಾಶವಿಲ್ಲವೆಂದರೆ ದಲಿತರಿಗೆ ಬಂಡವಾಳಶಾಹಿಗಳು ಪುರೋಹಿತಶಾಹಿಗಳು ಅಧಿಕಾರಶಾಹಿಗಳು ಮಾಡುತ್ತಿರುವ ಸಂವಿಧಾನಾತ್ಮಕವಾದ ಅನ್ಯಾಯದ ಶೋಷಣೆಯಾಗಿರುತ್ತದೆ. ಈ ಜಾತಿ ಪದ್ಧತಿಯಿಂದ ಮನುಷ್ಯರನ್ನು ಮನುಷ್ಯರಂತೆ ಕಾಣದೆ ಇರುವುದು ದಲಿತ ದಮನಿತರಿಗೆ ಉಳ್ಳವರು ನೀಡುತ್ತಿರುವ ಬಲತ್ಕಾರದ, ಅಂಗಿಕೃತವಲ್ಲದ ಅಧರ್ಮದ ಶಿಕ್ಷೆಯಾಗಿದೆ. ಇಂತಹ ಜಾತಿಪದ್ಧತಿಯಿಂದ ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ತಳಸಮುದಾಯಗಳು ಇಂತಹ ಶೋಷಣೆಯನ್ನು ನಿರಂತರವಾಗಿ ಅನುಭವಿಸುತ್ತಿದ್ದಾರೆ.

ಇದು ಸಾಂವಿಧಾನಿಕ ಅಸಿಂಧುವಾಗಿರುತ್ತದೆ. ದಲಿತರನ್ನು ನೆಮ್ಮದಿಯಿಂದ ಬಾಳುವುದಕ್ಕೆ ಈ ಸಮಾಜದಲ್ಲಿ ಜಾತಿವ್ಯವಸ್ಥೆಯು ಬಿಡುತ್ತಿಲ್ಲ. ಸಾರ್ವಜನಿಕ ಸ್ಥಳಗಳನ್ನು ಉಪಯೋಗಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದಂತಾಗಿರುತ್ತದೆ. ಯಾವುದೇ ಒಂದು ದೇವಾಲಯದಲ್ಲಿ, ಹೋಟಲ್‌ಗಳಲ್ಲಿ, ಕ್ಷೌರಿಕನ ಅಂಗಡಿಗಳಲ್ಲಿ ದಲಿತರಿಗೆ ಪ್ರವೇಶವಿಲ್ಲದಂತಾಗಿದೆ. ಒಬ್ಬ ದಲಿತನು ಸ್ವತಂತ್ರವಾಗಿ ನಿರ್ಭಯದಿಂದ ಊರ ಒಳಗೆ ನಡೆದಾಡಲು ಸಾಧ್ಯವಿಲ್ಲದಂತ ವಾತಾವರಣವನ್ನು ಈ ಜಾತಿವ್ಯವಸ್ಥೆಯಿಂದ ಸಮಾಜದಲ್ಲಿ ಸಮಾನತೆ ಇಲ್ಲದಂತಾಗಿರುತ್ತದೆ. ದಲಿತರು ಬಾಯಾರಿಕೆಯಾದರೆ ಊರಲ್ಲಿ ಯಾವುದೇ ಬಾವಿ, ನೀರಿನ ನಲ್ಲಿಗಳನ್ನು ಅಥವಾ ಕೊಳವೆಗಳನ್ನು ಮುಟ್ಟುವ ಹಾಗಿಲ್ಲ. ಇದರಿಂದ ದಲಿತರು ನೀರಿನ ಬಾಯಾರಿಕೆಯಿಂದ ನರಳಾಡುವಂತಾಗಿದ್ದಾರೆ.

ಈ ಕಥೆಯಲ್ಲಿ 'ಕರುಮ್‌ಪ್ಪ ಈರಾಮನೂ' ಎಂಬ ದಲಿತ ವ್ಯಕ್ತಿಯು ಸಾರ್ವಜನಿಕ ಹೋಟಲಿನಲ್ಲಿ ಹಸಿದುಕೊಂಡು ಊಟ ಮಾಡುತ್ತಿರುವಾಗ, ಹೋಟಲಿನ ಮಾಲೀಕನಾದ ನಾಯಕರರು ನಿಮ್ಮ ಜಾತಿಯಾವುದು..? ಇನ್ನೂ ಮುಂದೆ ನಮ್ಮ ಹೋಟಲಿಗೆ ಊಟಕ್ಕೆ ಬರಬೇಡ ಎಂದು ಹೇಳಿದಾಗ ದಲಿತ ವ್ಯಕ್ತಿಯಲ್ಲಿ ಆಗುತ್ತಿರುವ ಮನೋವ್ಯಥೆಗೆ, ಪುರೋಹಿತಶಾಹಿಗಳು ಸಮಾಜದಲ್ಲಿ ಸೃಷ್ಟಿಸಿದ ಈ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ. ಕರುಮ್‌ಪ್ಪ ಈರಾಮನೂ ಇತರರಂತೆ ಆತನೂ ಒಬ್ಬ ಮನುಷ್ಯ, ಇತರಂತೆ ಆತ ಊಟ ಮಾಡಿದ ನಂತರ ಹಣವನ್ನು ಕೊಡುತ್ತಾನೆ. ಆದರೆ ಈ ಜಾತಿವ್ಯವಸ್ಥೆಯಿಂದಾಗಿ ಆತನು ಹೋಟಲ್‌ಗಳಲ್ಲಿ ಪ್ರವೇಶ ನೀಡದಿರುವುದು ಮೇಲ್ವರ್ಗದವರು ದಲಿತರಿಗೆ ಮಾಡುತ್ತಿರುವ ಸಾಮಾಜಿಕ ಸಮಾನತೆಯ ಶೋಷಣೆಯಾಗಿರುತ್ತದೆ. ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯು ಬದುಕುವ ಹಕ್ಕುಗಳನ್ನು ಪಡೆದುಕೊಂಡಿದ್ದಾನೆ. ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿ ಸಮಾನತೆಯ ಹಕ್ಕು ಪ್ರತಿಯೊಬ್ಬರು ಪಡೆದುಕೊಂಡಿರುವ ಈ ಜಾತಿಪದ್ಧತಿಯ ಅನಿಷ್ಠದಿಂದ ಸಮಾಜದಲ್ಲಿ ಅಸಮಾನತೆವುಂಟಾಗಲು ಕಾರಣವಾಗಿರುತ್ತದೆ.

ಮೇಲ್ವರ್ಗದವರು ದಲಿತರನ್ನು ಊರಿನಿಂದಾಚೆ ಇಟ್ಟು, ಪ್ರತ್ಯೇಕವಾದ ಜೀವನ ನಡೆಸುವಂತೆ ಅವರನ್ನು ಸಾರ್ವತ್ರಿಕವಾಗಿ ಸಮಾಜದಲ್ಲಿ ಬೆರೆಯದಿರುವಂತೆ ಮಾಡಿರುವುದು ದಲಿತರ ಮನೋವೇದನೆಗೆ ಕಾರಣವಾಗಿರುತ್ತದೆ. ದಲಿತರು ಸಮಾಜದಲ್ಲಿ ಸ್ವತಂತ್ರ ಇಲ್ಲದೆ ಆರ್ಥಿಕವಾಗಿ ಹಿಂದುಳಿದು ಅವಮಾನಗಳಿಂದಲೇ ಬದುಕುತ್ತಿದ್ಧಾರೆ ಎಂಬುವ ಅಂಶವನ್ನು ಕೇಂದ್ರಿಕರಿಸಿ ಕಥೆಗಾರರು ಈ ಕಥೆಯಲ್ಲಿ, ದಲಿತರು ಎದುರಿಸುತ್ತಿರುವ ಸಾಮಾಜಿಕ ಸವಾಲುಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತರ ನೋವುಗಳನ್ನು, ಅವರ ಮಾನಸಿಕ ಕುಂದು ಕೊರತೆಗಳ ಸಾಮಾಜಿಕ ಅಂತರದ ಬೇರುಗಳನ್ನು ಸಂಶೋಧನೆ ಮಾಡಿ, ಜಾತಿವ್ಯವಸ್ಥೆಯಿಂದ ಆಗುವ ದಲಿತರ ಜೀವನದ ಶೋಷಣೆಗಳನ್ನು ಈ ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ದಲಿತರು ಸಂವಿಧಾನದ ಅಡಿಯಲ್ಲಿ ನೀಡಿರುವ ಮೂಲಭೂತ ಹಕ್ಕುಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವಂತಾಗಬೇಕು. ಇತರರಂತೆ ಅವರು ಸ್ವತಂತ್ರತೆಯ ಸಮಾನತೆಯಲ್ಲಿ ತಮ್ಮ ಬದುಕನ್ನು ಕಾಣಬೇಕು. ಈ ಜಾತಿವ್ಯವಸ್ಥೆಯಿಂದಾದ ಸಾಮಾಜಿಕ ಅಸಮಾನತೆಯು ತೊಲಗಬೇಕು. ಇತರರಂತೆ ಅವರು ಸ್ವತಂತ್ರತೆಯ ಸಮಾನತೆಯಲ್ಲಿ ತಮ್ಮ ಬದುಕನ್ನು ಕಾಣಬೇಕು. ಈ ಜಾತಿವ್ಯವಸ್ಥೆಯಿಂದಾದ ಸಾಮಾಜಿಕ ಅಸಮಾನತೆಯು ತೊಲಗಬೇಕು. ದಲಿತರು ನೆಮ್ಮದಿಯಿಂದ ಬದುಕಬೇಕು. ಬಂಡವಾಳಶಾಹಿಗಳು ದಲಿತರಿಗೆ ಮಾಡುತ್ತಿರುವ ಶೋಷಣೆಗಳು ನಿಲ್ಲಿಸಬೇಕೆಂಬ ಆಶಯದಿಂದ ಕಥೆಗಾರರು ಅಂಬೇಡ್ಕರವಾದದ ನೆಲೆಯಿಂದ ಈ ಕಥೆಯ ಮೂಲಕ ದಲಿತ ಸಂವೇದನೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಗಿರೀಶ ಜಕಾಪುರೆಯವರು "ಸದಾ ಪ್ರವಹಿಸುವ ಕಥೆಗಳು" ಎಂಬ ಮರಾಠಿಯ ಪ್ರಸಿದ್ಧ ಕಥೆಗಾರರ ಕತೆಗಳನ್ನು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ರಥ ಯಾತ್ರೆ' ಎಂಬ ಕಥೆಯನ್ನು ಮಹಬೂಬ ಇಮಾಮಸಾಬ ಜಿಡ್ಡೆಯವರು ಕನ್ನಡಿಕರಿಸಿದ್ದಾರೆ. ಮೂಲದಲ್ಲಿ

ಶರಣಕುಮಾರ ಲಿಂಬೋಳಿಯವರು ಮರಾಠಿಯಲ್ಲಿ 'ರಥ ಯಾತ್ರೆ' ಎಂಬ ಹೆಸರಿನಿಂದಲೇ ಈ ಕಥೆಯನ್ನು ಬರೆದಿರುತ್ತಾರೆ. ಈ ಕಥೆಯು ಆಳವಾದ, ಗಟ್ಟಿಯಾದ ದಲಿತ ಸಂವೇದನೆಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಲೇಖಕರೇ ಮುಖ್ಯ ಪಾತ್ರವಾಗಿ ಕಾಣಿಸಿಕೊಂಡಿದ್ದಾರೆ. ಲಿಂಬೋಳಿಯವರು ಸಾಮಾನ್ಯವಾಗಿ ಅವರು ಬರೆದ ಕಥೆಗಳು ಪ್ರಥಮ ಪುರುಷ ಏಕವಚನದಲ್ಲಿಯೇ ಇರುತ್ತವೆ. ಈ ಕಥೆಯು ರಾಮಮಂದಿರ ಹಾಗೂ ಬಾಬರಿ ಮಸೀದಿಯ ಸುತ್ತ ಹರಡಿಕೊಳ್ಳುತ್ತ ಸಾಗುತ್ತದೆ. ಭಾರತದಲ್ಲಿರುವ ಸಮಾಕಾಲಿನ ರಾಜಕೀಯ, ಧಾರ್ಮಿಕ, ಜಾತೀಯತೆಯ ಹಾಗೂ ಆರ್ಥಿಕತೆಯ ವಾಸ್ತವವನ್ನು ಎಳೆ ಎಳೆಯಾಗಿ ಬಿಚ್ಚಿಡುತ್ತ,ಮುಸಲ್ಮಾನರಲ್ಲಿರುವ ಭಯ ಭೀತಿಯ ಮುಖಗಳನ್ನು ತೋರಿಸುತ್ತ, ಇನ್ನೊಂದೆಡೆಗೆ ಕರಸೇವಕರು ಮಾಡುವ ಅಕ್ರಮಕಾರಿ ಚಟುವಟಿಕೆಗಳನ್ನು ಬಿಂಬಿಸುತ್ತ, ಮತ್ತೊಂದೆಡೆಗೆ ದಲಿತರ ಹಸಿದ ಹೊಟ್ಟೆಯ ಕಣ್ಣುಗಳನ್ನು ತೋರಿಸುತ್ತ, ಆಳುವ ಪಕ್ಷಗಳು ಹೇಗೆ ಜನಸಾಮಾನ್ಯರ ಬದುಕನ್ನು ತಮ್ಮ ಬಿಗಿ ಮುಷ್ಟಿಯಲ್ಲಿ ಹಿಡಿದುಕೊಂಡು, ಮಸೀದಿ ಮಂದಿರಗಳ ಹೆಸರಿನಲ್ಲಿ ಜನಸಾಮಾನ್ಯರಲ್ಲಿ ಬಿರುಕನ್ನುಂಟು ಮಾಡಿ, ಸುಲಭವಾಗಿ ಆಳುವ ಕುತಂತ್ರವನ್ನು ಈ 'ರಥೆಯಾತ್ರೆ' ಕಥೆಯ ಮೂಲಕ ಕನ್ನಡಿಯಂತೆ ತೋರಿಸಿಕೊಟ್ಟಿದ್ದಾರೆ.

ಇಂದಿನ ಸಮಾಜದಲ್ಲಿ ದಲಿತರಿಗೆ ಏಕೆ ಸುಲಭವಾಗಿ ಕುಡಿಯಲು ನೀರು ಸಿಗುವುದಿಲ್ಲ...? ಇಂದಿಗೂ ಸಹ ಹೊಲೆಯ ಮಾದಿಗರ ಕೇರಿಗಳು ಊರಿನ ಒರಗೆ ಯಾಕೆ ಇವೆ...? ಕಾಲಕಾಲಂತರಗಳಿಂದ ಮೇಲ್ವರ್ಗದವರ ತುಳಿತಕ್ಕೆ ದಲಿತರೇಕೆ ಬಲಿಯಾಗುತ್ತಿದ್ದಾರೆ...? ಇಂತಹ ಹಲವಾರು ಮೂಲಭೂತ ಪ್ರಶ್ನೆಗಳನ್ನು ಹಾಕಿಕೊಂಡು ಲಿಂಬೋಳಿಯವರು ಈ ಕಥೆಯನ್ನು ರಚಿಸಿದ್ದಾರೆ. ಡಾ.ಬಾಬಾಸಾಹೇಬರ ಅಂಬೇಡ್ಕರರು ಅಂದು ಸಮಾನತೆಗಾಗಿ ಎಷ್ಟೊಂದು ಶ್ರಮಿಸಿದ್ದಾರೆ. ಅವರ ಹೋರಾಟದ ಫಲದಿಂದ ಸಿಕ್ಕ ಸಂವಿಧಾನಿಕ ಹಕ್ಕುಗಳು ದಲಿತರಿಗೇಕೆ ಇನ್ನೂ ದಕ್ಕುತ್ತಿಲ್ಲ. ಜಾತಿ-ಜಾತಿಗಳ ನಡುವೆ, ಧರ್ಮ-ಧರ್ಮಗಳ ನಡುವೆ, ಮನುಷ್ಯ-ಮನುಷ್ಯರ ನಡುವೆ ಇರುವ ಅಂತರವನ್ನು ದಲಿತರ ಮೇಲೆ ಮಾಡುತ್ತಿರುವ ಶೋಷಣೆಯನ್ನು ಬಿಡಿ ಬಿಡಿಯಾಗಿ ಬಿಚ್ಚುತ್ತದೆ.

ಸಮಸಮಾಜದ ಪರಿಕಲ್ಪನೆಯಲ್ಲಿ ಈ ಕಥೆಯು ನಿರೂಪಿತವಾಗಿರುತ್ತದೆ.ಅಯೋಧ್ಯೆಯಲ್ಲಿರುವ ಮುಸ್ಲಿಂರ ಬಾಬರಿ ಮಸೀದಿ ಹಿಂದುಗಳ ರಾಮಮಂದಿರ ಅಲ್ಲಿ ರಾಮನೇ ಜನಿಸಿದ್ದಾನೆ. ರಾಮ ಜನ್ಮ ಭೂಮಿಯಲ್ಲಿರುವ ಮಸೀದಿಯನ್ನು ಕೆಡವಿ ರಾಮಮಂದಿರವನ್ನು ನಿರ್ಮಾಣ ಮಾಡಲು 'ಭಾಜಪ'ದ ರಥಯಾತ್ರೆ ಹೊರಟಿರುತ್ತದೆ. ದೇಶದಲ್ಲಿರುವ ಹಿಂದೂ ಭಕ್ತರು ಮೂಲೆ ಮೂಲೆಗಳಿಂದ ರಾಮಮಂದಿರವನ್ನು ನಿಮಾರ್ಣ ಮಾಡಲು ಇಟ್ಟಿಗೆ ಕಲ್ಲುಗಳನ್ನು ಕಳಿಸಬೇಕೆನ್ನುತ್ತಿದ್ದಾರೆ. ಆದರೆ ದೇಶದಲ್ಲಿರುವ ಅದೇ ಮೂಲೆ ಮೂಲೆಗಳಲ್ಲಿ ವಾಸಿಸುವ ದಲಿತರ ಗುಡಿಸಲುಗಳಿಗಾಗಿ ಮತ್ತು ನಿರ್ಗತಿಕ ಅನಾಥ ಮಕ್ಕಳ ಶಾಲೆಗಳ ಕಟ್ಟಡಕ್ಕೆ ಯಾರು ಇಟ್ಟಿಗೆ ಕಲ್ಲುಗಳನ್ನು ಕಳಿಸಬೇಕೆಂದು ರಥೆಯಾತ್ರೆಯನ್ನು ಕೈಗೊಂಡಿಲ್ಲ.

ಆದರೂ ಇದೂ ಹಿಂದೂ ರಾಷ್ಟ್ರ. ರಾಮಮಂದಿರದ ಮೇಲೆ ಧ್ವನಿಯೆತ್ತಿ ರಥಯಾತ್ರೆಯನ್ನು ಮಾಡುತ್ತಿರುವವರು ಸಾವಿರಾರರು ವರ್ಷಗಳಿಂದ ಊರ ಹೊರಗಿನ ಹೊಲಗೇರಿಯಲ್ಲಿ ವಾಸಿಸುತ್ತಿರುವವರ ಮೇಲೆ ಅನ್ಯಾಯವಾದರೆ ಯಾರು ರಥ ಯಾತ್ರೆಯನ್ನು ಮಾಡುವುದಿಲ್ಲ.ಇಂತಹ ಹತ್ತಾರು ವಿಷಯಗಳನ್ನು ಒಳಗೊಂಡಿರುವ ಕಥೆ 'ರಥೆ ಯಾತ್ರೆ' ಸಾಗುತ್ತದೆ. "ಹಿಂದೂಧರ್ಮ ಬ್ರಾಹ್ಮಣರದ್ದಾಗಿರುವಂತೆಯೇ ಶೂದ್ರರದ್ದೂ ಆಗಿದೆ. ಹಿಂದೂಗಳ ದೇವಾಲಯಗಳಲ್ಲಿ ನಾಯಿ-ಬೆಕ್ಕುಗಳು ಹೋಗಬಹುದು. ಆದರೆ ಅಸ್ಪೃಶ್ಯರು ಯಾಕೆ ಹೋಗುವಂತಿಲ್ಲ...? ಅಸ್ಪೃಶ್ಯರ ನೆರಳಿನಿಂದ ಒಂದು ವೇಳೆ ಪರಮೇಶ್ವರನಿಗೆ ಮೈಲಿಗೆ ಆಗುತ್ತದೆ ಎಂದರೆ ಅವನೆಂಥ ದೇವರು...? ಬಾಬಾ ಸಾಹೇಬ ಅಂಬೇಡ್ಕರರು ಮನುಷ್ಯರಿಗೆ ಮನುಷ್ಯತ್ವ ಕಲಿಸಲು ಸತ್ಯಾಗ್ರಹ ಮಾಡಿದರು."[೧] ಇಂತಹ ಅವ್ಯವಸ್ಥೆಯಲ್ಲಿ ಕೇವಲ ರಾಮಂದಿರ ಕಟ್ಟುವುದರ ಮೂಲಕ ರಾಮರಾಜ್ಯ ಮಾಡಲು ಸಾಧ್ಯವಾಗುವುದೇ..? ಈ ರಥಯಾತ್ರೆಯಿಂದ ಮುಸ್ಲಿಂ ಮುಲ್ಲಾ ಮೌಲಾವಿಗಳ ಸಭೆಸೇರಿ ಏನಾದರೂ ಭಾಜಪದವರಿಂದ ಗದ್ದಲುಗಳಾದರೆ ಏನು ಮಾಡುವುದು ಎಂಬ ಭಯ ಭೀತಿಯಿಂದ ಚರ್ಚೆಯನ್ನು ಮಾಡುತ್ತಿದ್ದರು.

ದೇಶದ ಮೂಲೆ ಮೂಲೆಗಳಿಂದ ಬಂದ ಹಿಂದೂಗಳ ಪರಕಾಳಜಿ ಸಂಘಟನೆಗಳ ರಾಮನ ಭಕ್ತರು ಯಾರಿಗೆ ಏನಾದರೂ ತೊಂದರೆ ಮಾಡಿಯಾರು ಎಂದು ಗಲ್ಲಿಗಲ್ಲಿಯಲ್ಲಿ ಪೊಲೀಸರು ಬಿಗಿ ಭದ್ರತೆಯಿಂದ ಸಂರಕ್ಷಣೆಗಾಗಿ ನಿಂತಿದ್ದರು. ನೇಪಾಳದಂತಹ ಪರಕೀಯ ರಾಷ್ಟ್ರವೊಂದು ತನ್ನನ್ನು ಹಿಂದೂ ರಾಷ್ಟ್ರವೆಂದು ಹೇಳಿಕೊಂಡಿರುವಾಗ ನಮ್ಮ ರಾಷ್ಟ್ರವೂ ಹಿಂದೂ ರಾಷ್ಟ್ರವೆಂದು ಹೇಳಿಕೊಂಡು ಎಲ್ಲರೂ ಹಿಂದುಗಳಾಗಿ ಬಾಳೋಣ. ರಾಷ್ಟ್ರೀಯ ಐಕ್ಯತೆಗಾಗಿ ಒಂದೇ ಧರ್ಮವಿರಬೇಕು. ಅದು ಹಿಂದೂ-ಹಿಂದೂವಾಗಿ ನಾವೆಲ್ಲ ಬಂಧುಗಳಾಗೋಣ. ನಾವೆಲ್ಲರೂ ಹಿಂದೂಗಳಾಗಿದ್ದೇವೆ. ನಾವೆಲ್ಲರೂ ಬಂಧುಗಳಾಗಿದ್ದೇವೆ.ಆದರೆ ಊರ ಹೊರಗೆ ಇಟ್ಟಿರುವ ಹೊಲೆಯ ಮಾದಿಗರನ್ನು ಅಸ್ಪೃಶ್ಯರಂತೆ ಕಾಣುವುದನ್ನು ನಿಲ್ಲಿಸಿ ಅವರಿಗೂ ಮಂದಿರಗಳಲ್ಲಿ ಪ್ರವೇಶ ಕೊಡಬೇಕು. ನಮಗಾಗಿ ಬೇರೆ ಇಟ್ಟಿರುವ ನೀರಕುಂಡದಲ್ಲಿ ನೀವು ಕುಡಿಯಬೇಕು. ನಮಗಾಗಿ ಬೇರೆ ಸ್ಮಶಾನವನ್ನು ನೀಡಿರುವುದರಲ್ಲಿ ನೀವೂ ಬಳಕೆ ಮಾಡಬೇಕು.

ನಮ್ಮ ವಸತಿಗಳು ಊರಿನಿಂದಾಚೆ ಮೂಲೆಯಲ್ಲಿವೆ. ಅವು ಊರಲ್ಲಿ ಬೆರೆತಿರಬೇಕು. ದಲಿತರ ಮೇಲೆ ಸದಾ ನಡೆಯುತ್ತಿರುವ ಅನ್ಯಾಯ ಅತ್ಯಾಚಾರಗಳನ್ನು ನಿಲ್ಲಿಸಬೇಕು. ಆಗ ರಥಯಾತ್ರೆ ನಡೆಸುತ್ತಿರುವ ನಿಮ್ಮ ರಾಮರಾಜ್ಯದ ಕನಸು ನನಸಾಗಲು ಸಾಧ್ಯ. ಇಂತಹ ಹಲವಾರು ಯೋಚನೆಗಳನ್ನು ಇಟ್ಟುಕೊಂಡು ಕಥೆಗಾರರು ರಥಯಾತ್ರೆಯಲ್ಲಿ ರೊಟ್ಟಿಗಾಗಿ ಕೆಲಸವನ್ನು ಮಾಡುತ್ತಿರುತ್ತಾನೆ. ರಥಯಾತ್ರೆಯಲ್ಲಿ ಸಾಧು ಸನ್ಯಾಸಿಗಳು ಗುಂಪು ಗುಂಪುಗಳಾಗಿ ಬಾಬರಿ ಮಸೀದಿಯ ಕಡೆ ಹೋಗುತ್ತಿದ್ದರು. ವಿಶ್ವ ಹಿಂದೂ ಪರಿಷತ್ ಕಾರ್ಯಕರ್ತರು ಜೋರಾಗಿ ಜಯಘೋಷ ಮಾಡುತ್ತಿದ್ದರು. ಕಥೆಗಾರ ದಲಿತನಾದರೂ ರೊಟ್ಟಿಗಾಗಿ ಮುಷ್ಟಿ ಬಿಗಿಹಿಡಿದು ಘೋಷಣೆ ಕೂಗುತ್ತಿದ್ದರು. ಪೊಲೀಸರು ಲಾಟಿಚಾರ್ಜ ಮಾಡಿದರು. ಗುಂಡಿನ ಸುರಿಮಳೆ ಸುರಿದರು. ಅದರಲ್ಲಿ ಒಂದು ಗುಂಡು ಬಂದು ಕಥೆಗಾರರಿಗೆ

ತಗುಲಿದಾಗ ಕಾಲು ಕಳೆದುಕೊಳ್ಳುತ್ತಾರೆ. ನಂತರ ರಾಮ ಮಂದಿರದ ದೇವಸ್ಥಾನದಲ್ಲಿ ತನ್ನ ಜೀವನವನ್ನು ಕಳೆಯಲು ಪ್ರಾರಂಭಿಸುತ್ತಾರೆ.

ಒಂದು ದಿನ ದೇವಸ್ಥಾನದ ಒಳಗೆ ಹೋಗಿ ರಾಮನಿಗೆ ಸಮಸ್ಕರಿಸುತ್ತಿರುವಾಗ ಪೂಜಾರಿ ಭಿಕ್ಷುಕನಾಗಿ ಒಳಗೆ ಬಂದಿದ್ದೀಯಾ ಎಂದು ಕೋಲಿನಿಂದ ಹೊಡೆಯುತ್ತಾನೆ. ಅದಕ್ಕೆ ನಾನು ಈ ರಾಮಮಂದಿರ ಕಟ್ಟುವುದಕ್ಕಾಗಿ ಎಷ್ಟು ಕಷ್ಟಪಟ್ಟಿದ್ದೇನೆ. ರಥಯಾತ್ರೆಯಲ್ಲಿ ನಾನೇ ಪಾಲ್ಗೊಂಡಿದ್ದೇನೆ. ಅದಕ್ಕಾಗಿಯೇ ನನ್ನ ಕಾಲುಗಳನ್ನು ಕಳೆದುಕೊಂಡಿರುತ್ತೇನೆ ಎಂದು ಹೇಳಿದರೂ, ನೀನು ದರಿದ್ರ ಭೀಕ್ಷುಕ ಯಾವ ಕುಲದವನೋ ಏನೋ, ನೀನು ಈ ರಾಮಮಂದಿರ ಕಟ್ಟಲು ನಾನು ಪಾಲ್ಗೊಂಡಿದ್ದೇನೆ ಎಂದು ಹೇಳುತ್ತಿದ್ದಿಯಾ ಎಂದು ಎಲ್ಲಾ ಪುರೋಹಿತರು ಸೇರಿ ದೇವಸ್ಥಾನದಿಂದ ಹೋರಗೆ ಹಾಕುತ್ತಾರೆ. ಪೂಜಾರಿ ಒಂದು ವಾರದವರೆಗೂ ಊಟದ ಸಮಯದಲ್ಲಿ ಭೀಕ್ಷುಕರ ಜೊತೆ ಕಥೆಗಾರ ಕುಳಿತುಕೊಂಡಿರುವಾಗ ಊಟ ಹಾಕುವುದಿಲ್ಲ. ಕೊನೆಗೆ ಹಸಿವಿನಿಂದ ತಾಳಲಾರದೆ ಆ ಪೂಜಾರಿಗೆ ಕೋಲು ತೆಗೆದುಕೊಂಡು ಹೊಡೆಯುತ್ತಾನೆ. ಪೂಜಾರಿ ರಕ್ತಸ್ರಾವದಿಂದ ಮರಣ ಹೊಂದುತ್ತಾನೆ. ಆಗ ರಾಮಭಕ್ತನೊಬ್ಬನನ್ನು ಕೊಲೆ ಮಾಡಿದ್ದಾರೆಂದು ಪುರೋಹಿತಶಾಹಿಗಳು ಕಾಲು ಕಳೆದುಕೊಂಡ ಕಥೆಗಾರರ ರಥಯಾತ್ರೆಯನ್ನು ಅಲ್ಲಿಯೇ ಮುಗಿಸುತ್ತಾರೆ.

ಆತನ ಸಾವು ಇಡೀ ದಲಿತರ ಒಳಗಿರುವ ನೋವುಗಳ ಸಂವೇದನೆಯಾಗಿದೆ. ಇಡೀ ದೇಶವನ್ನೇ ಪ್ರಶ್ನಿಸುವಂತ ಕತೆ ಇದಾಗಿರುತ್ತದೆ. ಸಮಾಜದಲ್ಲಿ ಸೃಷ್ಟಿಯಾದ ಜಾತಿ, ಧರ್ಮ, ಮತ, ಪಂಗಡಗಳಿಂದ ಯಾರು ನೆಮ್ಮದಿಯಿಂದ ಬದುಕುತ್ತಿದ್ದಾರೆ. ಇರುವುದೊಂದೇ ದೇಶ ಅದರಲ್ಲಿ ಐಕ್ಯತೆಯಿಂದ ಬಾಳಬೇಕಾಗುರುವುದು ಪ್ರತಿಯೊಬ್ಬ ನಾಗರಿಕನ ಆದ್ಯ ಕರ್ತವ್ಯವಾಗಿದೆ. ಆದರೆ ಆತನ ನೆಮ್ಮದಿಯನ್ನು ಕೆಡಿಸುವುದಷ್ಟೇ ಅಲ್ಲ, ಇಡೀ ದೇಶದಲ್ಲಿ ಅಶಾಂತಿಯ ಸಾಗರವನ್ನು ಹುಟ್ಟುಹಾಕಿವೆ. ಈ ಜಾತಿ, ಧರ್ಮ, ಮತ, ಪಂಗಡಗಳು ಇವುಗಳಿಂದಲೇ ಮನುಷ್ಯ ಮನಷ್ಯರ ನಡುವೆ ನಾವು ಇವರು ಮತ್ತೊಬ್ಬರು ಅವರು ಎಂಬುವಂತಾಗಿರುತ್ತದೆ. ಆದರೆ ಒಂದು ರಾಷ್ಟ್ರ ಶಾಂತಿಯಿಂದ ಕೂಡಿರಬೇಕಾದರೆ ನಾವೆಲ್ಲರೂ ಒಂದೇ ಎಂಬ ಮನೋಭಾವನೆಯಿಂದ ಮಾತ್ರ ಅದು ಸಾಧ್ಯವಾಗುತ್ತದೆ. ಇದನ್ನು ಅರಿಯದೆ ನಾವು ಶ್ರೇಷ್ಠರು ಮತ್ತೊಬ್ಬರು ಕನಿಷ್ಟರು ಎಂಬ ಭೇದ ಭಾವದಲ್ಲಿ ರಾಷ್ಟ್ರದ ಅಬ್ಯುದಯಕ್ಕೆ ಮಾರಕವಾಗಿದ್ದಾರೆ.

ಮನುಷ್ಯರೆಲ್ಲರೂ ಒಂದೇ. ಮನುಷ್ಯ ಜಾತಿಯೆನ್ನುವುದು ಒಂದೇ. ನಡುವೆ ಈ ಪುರೋಹಿತಶಾಹಿಗಳು ತಮ್ಮ ಸ್ವಾರ್ಥ ಹಿತಚಿಂತನೆಯಿಂದ ಸೃಷ್ಟಿಯಾದ, ಈ ಕಲಬೆರಿಕೆಯ ವರ್ಣವ್ಯವಸ್ಥೆಯಲ್ಲಿನ ತಾರತಮ್ಯದ ಕನಿಷ್ಠ ಶ್ರೇಷ್ಠತೆಗಳೆಲ್ಲವೂ ಅಸತ್ಯದ ಸಂಗತಿಗಳಾಗಿರುತ್ತವೆ. ಧರ್ಮದ ಹೆಸರಿನಲ್ಲಿ ಶೋಷಣೆಯ ಅನ್ಯಾಯವನ್ನು ಮಾಡುತ್ತಿದ್ದಾರೆ. ಧರ್ಮವೆಂದರೆ ಅದೊಂದು ಬಂಡವಾಳದ ಶಾಖೆಯಾಗಿ ಪುರೋಹಿತಶಾಹಿಗಳು ನಿರ್ಮಿಸಿಕೊಂಡಿದ್ದಾರೆ. ತನ್ನಂತೆ ಪರರನ್ನು ಕಾಣುವುದೇ ನಿಜವಾದ ಧರ್ಮ. ಅದು ಇಲ್ಲದೆ ಜಾತಿ ಮತಗಳ ಹೆಸರಿನಲ್ಲಿ ಮನುಷ್ಯ ಮನುಷ್ಯನನ್ನೇ

ಶೋಷಣೆ ಮಾಡುತ್ತಿದ್ದಾನೆ. ಹಿಂದೂ, ಕ್ರೈಸ್ತ, ಮುಸಲ್ಮಾನ ಇತ್ಯಾದಿ ಧರ್ಮಗಳ ಹೆಸರಿನಲ್ಲಿ ತನ್ನನ್ನು ತಾನೇ ಮರೆತುಬಿಟ್ಟಿದ್ದಾನೆ. ಸಮಾಜದಲ್ಲಿ ಧರ್ಮದ ಬಾಧೆ ಒಂದು ಕಡೆಯಾದರೆ, ಮತ್ತೆ ಜಾತಿ ಜಾತಿಗಳ ನಡುವೆ ಇರುವ ಅಂತರಗಳು ಮತ್ತೊಂದೆಡೆಯಾಗಿವೆ. ಬಲಿಷ್ಠರು ಅಬಲರನ್ನು ಶೋಷಣೆ ಮಾಡುತ್ತಿದ್ದಾರೆ.

ಒಂದು ದೇಶ, ಒಂದು ಧರ್ಮ, ಒಂದೇ ಜಾತಿ ಇದ್ದಿದ್ದರೇ ಈ ಅಸಮಾನತೆ ಇರುತ್ತಿರಲಿಲ್ಲವೇನೋ...? ಆದರೂ ಮನುಷ್ಯ ತನ್ನ ಸ್ವಾರ್ಥತೆಯಿಂದ ಮತ್ತೊಬ್ಬರನ್ನು ಶೋಷಣೆ ಮಾಡಿ ತುಳಿತಕ್ಕೆ ಒಳಪಡಿಸುತ್ತಿದ್ದಾನೆ. ಇದರಿಂದಾಗಿಯೇ ಈ ಸಮಾಜದಲ್ಲಿ ದಲಿತರು ತಮ್ಮ ಹಕ್ಕುಗಳಿಂದ ವಂಚಿತರಾಗಿ ಬಡತನದ ಬೇಗೆಯಿಂದ ಇನ್ನೂ ಊರಾಚೆಯೇ ಬದುಕುತ್ತಿದ್ದಾರೆ. ಆದರೂ ನಮ್ಮದು ಹಿಂದೂದೇಶ ಹೀಗಿರುವಾಗ ಮತ್ತೇಕೆ ಈ ಭೇದ ಭಾವಗಳು ಸಮಾಜದಲ್ಲಿ ತಾಂಡವಾಡುತ್ತವೆ. ಸ್ವತಂತ್ರವನ್ನು ಪಡೆದುಕೊಂಡು ನಾವೆಲ್ಲರೂ ಸಾಂವಿಧಾನಿಕ ಪರಿಕಲ್ಪನೆಯ ನಿಯಮದಲ್ಲಿ ಬದುಕುತ್ತಿದ್ದರೂ, ಮೂಲಭೂತ ಹಕ್ಕುಗಳು ನೊಂದವರಿಗೆ ಸಮರ್ಪಕವಾಗಿ ದೊರೆತಿಲ್ಲವೆಂಬುವುದು ವಿಷಾದಕರ ಸಂಗತಿಯಾಗಿದೆ. ಇಂತಹ ಮಹತ್ತರ ಅಂಶಗಳನ್ನು ಇಟ್ಟುಕೊಂಡು ಕಥೆಗಾರರು ಈ ಕಥೆಯಲ್ಲಿ ರಾಷ್ಟ್ರ, ಧರ್ಮ, ಜಾತಿ, ಮತ, ಪಂಗಡಗಳ ಕುರಿತು ವಿಭಿನ್ನನೆಲೆಯಿಂದ ತಮ್ಮ ಚಿಂತನೆಯನ್ನು ಅಭಿವ್ಯಕ್ತಪಡಿಸಿದ್ಧಾರೆ. ಮಂದಿರ, ಮಸೀದಿ, ಚರ್ಚುಗಳನ್ನು ಬಿಟ್ಟು ನಾವು ವಾಸಿಸುವ ಭಾರತಮಾತೆ ನಮ್ಮ ದೇವರೆಂದುಕೊಂಡಾಗ, ಎಲ್ಲವೂ ಸಮಾನತೆಯಲ್ಲಿ ಒಂದು ಐಕ್ಯತೆ ಸಾಧಿಸಲು ಸಾಧ್ಯವಾಗುತ್ತದೆ. ಪುರೋಹಿತಶಾಹಿಗಳು ಮತ್ತು ಬಂಡವಾಳಶಾಹಿಗಳು ತಮ್ಮ ಕುಟೀಲ ತಂತ್ರಗಳನ್ನು ದಲಿತರ ಮೇಲೆ ಪ್ರಯೋಗಿಸದೆ ರಾಷ್ಟ್ರದ ಶಾಂತಿಯಾಗಿ ರಥಯಾತ್ರೆ ಮಾಡಬೇಕಾಗಿರುವ ಅನಿವಾರ್ಯತೆ ಇದೆ ಎಂಬುವುದನ್ನು ಈ ಕತೆಯು ಅಂಬೇಡ್ಕರವಾದದ ನೆಲೆಯಿಂದ ತನ್ನ ವೀವೇಚನೆಯನ್ನು ಮಂಡಿಸುತ್ತದೆ.

'ಹತ್ತು ತಮಿಳು ಕತೆಗಳು' ಎಂಬ ತಮಿಳು ಕಥಾಸಂಕಲನವನ್ನು ಕೆ.ನಲ್ಲತಂಬಿಯವರು ಕನ್ನಡಕ್ಕೆ ಅನುವಾದ ಮಾಡಿರುತ್ತಾರೆ. ಈ ಕಥಾ ಸಂಕಲನದಲ್ಲಿರುವ 'ಬೋಧಿ ವೃಕ್ಷ' ಕತೆಯನ್ನು ತಮಿಳವನ್ ಅವರ 'ಇರಟ್ಟೈ ಸೊರ್ಕ್ಕಳ್' ಎಂಬ ಕಥಾ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಈ ಕತೆಯು ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿವ್ಯವಸ್ಥೆಯು ಸಮಾಜದಲ್ಲಿ ಎಂತಹ ಅಂತರವನ್ನು ಸೃಷ್ಟಿಸಿದೆ, ಅದರಿಂದಾಗುವ ಮಾನಸಿಕ ತೊಂದರೆಗಳು ದುರ್ಬಲ ವ್ಯಕ್ತಿಗಳನ್ನು ಹೇಗೆ ಮನೋವ್ಯಾಧಿಗೆ ಗುರಿಪಡಿಸುತ್ತದೆ ಎಂಬುವುದನ್ನು 'ಬೋಧಿವೃಕ್ಷ' ಕತೆಯು ಸ್ಪಷ್ಟೀಕರಿಸುತ್ತದೆ. ಮನುಷ್ಯನಾಗಿ ಹುಟ್ಟಿ ಮನುಷ್ಯನಾಗಿ ಬದುಕಬೇಕು ಆದರೆ ಮನುಷ್ಯ ಜಾತಿಭೇದದಿಂದ ಯಾಕೆ ಬದುಕಬೇಕು...? ಈ ಜಾತಿವ್ಯವಸ್ಥೆವಯು ಮಾನವೀಯತೆಯನ್ನು ಮರೆಸಿ, ಒಬ್ಬರು ಕೆಳವರ್ಗದವರು ಮತ್ತೊಬ್ಬರೂ ಮೇಲ್ವರ್ಗದವರೆಂದು ಸೃಷ್ಟಿಸಿ, ನಾವು ಶ್ರೇಷ್ಠ ಮತ್ತೊಬ್ಬರು ಕನಿಷ್ಠ ಎಂಬ ಭಾವನೆಯನ್ನು ಬಿತ್ತಿ ಸಮಾಜವನ್ನು ಅಶಾಂತಿಯಿಂದ ಕೂಡಿರುವಂತೆ ಮಾಡಿದೆ.

ಈ ಜಾತಿ ವ್ಯವಸ್ಥೆಯಿಂದ ಮತ್ತೊಬ್ಬರ ಶೋಷಣೆಯಾಗುತ್ತದೆಯೇ ವಿನಃ ಇದರಿಂದ ಮತ್ತೊಬ್ಬರಿಗೆ ಉಪಯೋಗವಾಗುವುದಿಲ್ಲ. ಮನುಷ್ಯ ಬೋಧಿವೃಕ್ಷವಾಗಬೇಕು. ಅದರಡಿಯಲ್ಲಿ ಬದುಕಬೇಕು ಅದನ್ನು ಬಿಟ್ಟು ವಿಷವೃಕ್ಷಗಳಾಗಿ ಜಾತಿಯ ಬೇರನ್ನು ಉದ್ದಚಾಚುತ್ತ ಹೋದರೆ ಸಮಾಜ ಅಶಾಂತಿಯಿಂದ ಕೂಡುತ್ತದೆ. ಮನುಷ್ಯನೆ, ಸೃಷ್ಟಿಸಿದ ಈ ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣ, ವೈಶ್ಯ, ಕ್ಷತ್ರೀಯ ಮತ್ತು ಶೂದ್ರರೆಂಬ ಭಿನ್ನ ಭಾವಗಳನ್ನು ತೊಡೆದು ಹಾಕಬೇಕಾಗಿದೆ. ಇಂತಹ ಹಿನ್ನೆಲೆಯನ್ನು ಇಟ್ಟುಕೊಂಡು ಈ ಬೋಧಿವೃಕ್ಷ ಕತೆಯು ರಚನೆಯಾಗಿರುತ್ತದೆ. ಈ ಕಥೆಯಲ್ಲಿರುವ ನೋವಿಗೆ ಶೋಷಣೆಯೇ ಮೂಲಾಧಾರವಾಗಿರುತ್ತದೆ.

ಒಬ್ಬ ವ್ಯಕ್ತಿಯನ್ನು ಮನುಷ್ಯನಂತೆ ಕಾಣದಿದ್ದರೆ ಅವನು ಹೇಗೆ ಮನೋವ್ಯಥೆಗೆ ಕಾರಣನಾಗುತ್ತಾನೆ, ಅದರಿಂದಾಗುವ ಅವನ ಆಕ್ರೋಶದ ಫಲಿತಾಂಶ ಎಂತಹ ಪರಿಣಾಮವನ್ನು ಬೀರುತ್ತದೆಂಬುವುದನ್ನು ಈ ಕತೆಯು ಸವಿಸ್ತಾರವಾಗಿ ಹೇಳಲ್ಪಟ್ಟಿದೆ. ಜಾತಿ ಕೇಂದ್ರಿತ ಕಥಾ ವಸ್ತುವನ್ನಿಟ್ಟುಕೊಂಡು ಪುರೋಹಿತಶಾಹಿಗಳಿಂದ ದಲಿತ ಸಮುದಾಯದವರು ಎಂತಹ ಖಿನ್ನತೆಗೊಳಗಾಗಿರುತ್ತಾರೆ ಎಂಬುವುದರ ಮೂಲಕ ಸಾದರಪಡಿಸಿದ್ದಾರೆ. 'ಜಾತಿ' ಎನ್ನುವುದು ಸಮಾಜದಲ್ಲಿ ಒಬ್ಬ ವ್ಯಕ್ತಿಯ ಮೇಲೆ ಅದು ಹೇಗೆ ತನ್ನ ಪ್ರಭಾವನ್ನು ಬೀರಿ ಅದರ ಪ್ರಭಾರವನ್ನು ಮಾಡುತ್ತಿದೆ ಅದಕ್ಕೆ ಬಲಿಯಾಗಿ ನರಳಾಡುತ್ತಿರುವ ದಲಿತ ಕುಟುಂಬದವರ ಸಂವೇದನೆಗಳನ್ನು ಒಳಗೊಂಡ ಕಥೆಯಾಗಿದೆ. ತಹಶೀಲ್ದಾರರ ಕಛೇರಿಗೆ ಒಂದು ಚೀಲವನ್ನು ಹಿಡಿದುಕೊಂಡು ತುಂಬ ಗಲಿಬಿಲಿಯಿಂದ ಹಾಗೆ ತುಂಬ ಆತಂಕ ಭಾವನೆಗಳನ್ನು ಹೊತ್ತುಕೊಂಡು ಗೌತಮ ಬರುತ್ತಾನೆ. ಯಾವುದೋ ಒಂದು ಜೀವನದಲ್ಲಿ ನಡೆಯಲಾರದ ಘಟನೆ ನಡೆದು ಆತನನ್ನು ಮನೋವಿಕಾರಗೊಳಿಸಿದಂತಿದೆ.

ಆ ಕಛೇರಿಗೆ ಬಂದ ತಕ್ಷಣವೇ ಅವನಿಗೆ ಒಬ್ಬ ಯುವತಿ ಯೌವನವನ್ನು ಕಳೆದುಕೊಂಡಿರುವಂತೆ ಮುಖದಲ್ಲಿಯ ಮೂಳೆಗಳು ಎದ್ದುಕಂಡರೂ, ಕಣ್ಣಿನಲ್ಲಿ ಮಾತ್ರ ಆಕರ್ಷಣೆಯಿಂದ ತುಂಬಿದ ಹೆಂಗಸು ಕಾಣಿಸುತ್ತಾಳೆ. ಅವಳು ಆ ಕಛೇರಿಯ ಗುಮಾಸ್ತೆಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಳು. ಗೌತಮ ಸ್ವಲ್ಪ ಹೊತ್ತು ಬೆಂಚಿನ ಮೇಲೆ ಕುಳಿತುಕೊಂಡು ಓರೆ ನೋಟದಿಂದ ಅವಳನ್ನು ನೋಡುತ್ತ ಕೂರುತ್ತಾನೆ. ಸುಂದರವಾದ ಕುರ್ಚಿಯಲ್ಲಿ ಫೈಲುಗಳೊಂದಿಗೆ ಕುಳಿತಿದ್ದ ಅವಳೂ ಗೌತಮನ ಕಣ್ಣುಗಳಿಗೆ ಕಣ್ಣುಗಳನ್ನು ಬೆರೆಸುತ್ತಿದ್ದಳು. ಸ್ವಲ್ಪ ಹೊತ್ತಿನ ನಂತರ ಗೌತಮ ಅವಳ ಹತ್ತಿರ ಹೋಗಿ ಈ ಕಛೇರಿಯಲ್ಲಿ ಜಾತಿಯ ಬಗ್ಗೆ ವಿವರಗಳನ್ನು ತಿಳಿಸುವ ವಿಭಾಗ ಎಲ್ಲಿದೆಂದು ಕೇಳುತ್ತಾನೆ. ಆಗ ಅವಳು ತನ್ನ ಬೆರಳಿನ ಮೂಲಕ ಮೇಲಿನ ಕೊಠಡಿಯನ್ನು ತೋರಿಸುತ್ತಾಳೆ. ಆಗ ಗೌತಮ ಪುನಃ ಆತ ಕುಳಿತಿದ್ದ ಸ್ಥಳಕ್ಕೆ ಹೋಗಿ ಕುಳಿತುಕೊಂಡು ಅವಳನ್ನೇ ನೋಡುತ್ತಿರುತ್ತಾನೆ. ಅವಳು ಆತನನ್ನು ಗಮನಿಸುತ್ತಿರುತ್ತಾಳೆ.

ಗೌತಮ ಕುಳಿತಿದ್ದ ಸ್ಥಳದಿಂದ ಎದ್ದು ಹೋಗಿ ಅವಳನ್ನು ಈ ಚೀಲವನ್ನು ಇಲ್ಲಿ ಇಡಲೇ ಎಂದು ಕೇಳುತ್ತಾನೆ. ಆಗ ಅವಳು ಇಡು ಎನ್ನುತ್ತಾಳೆ. ಆಗ ಗೌತಮನಿಗೆ ನಾನು ಇರುವ ನನ್ನ

ಬಡತನದ ಸ್ಥಿತಿ ಈ ಚೀಲದಿಂದಲೇ ಅವಳಿಗೆ ಗೊತ್ತಾಯಿತು ಎಂದು ಮನದಲ್ಲಿ ನೊಂದುಕೊಳ್ಳುತ್ತಾನೆ. ಮತ್ತೆ ಮೆಟ್ಟಿಲುಗಳನ್ನು ಹತ್ತುತ್ತ ಉಗುಳು ನುಂಗಿಕೊಳ್ಳುತ್ತ ತಲೆ ತಗ್ಗಿಸಿಕೊಂಡು ಜಾತಿ ವಿವರವನ್ನು ನೀಡುವ ಕೊಠಡಿಯ ಕಡೆಗೆ ಮೇಲಕ್ಕೆ ಹೋಗುತ್ತಿದ್ದಂತೆ ತನ್ನ ಮನಸ್ಸಿನಲ್ಲಿ ಇನ್ನೂ ನಾನು ಭಯಪಟ್ಟರೆ ಒಂದು ಬಾಟಲಿ ತಿಗಣಿ ಔಷಧಿಯನ್ನು ತೆಗೆದುಕೊಂಡು ಸಾಯಬೇಕು ಅಂದುಕೊಂಡು ಧೈರ್ಯವನ್ನು ತನ್ನಷ್ಟಕ್ಕೆ ತಾನೇ ತಂದುಕೊಳ್ಳತ್ತಿದ್ದನು. ತನ್ನ ಜೀವನದಲ್ಲಿ ನಡೆದ ಈ ಜಾತಿ ಸಂಗತಿಗಳನ್ನು ಅದರಿಂದಾದ ಅವಮಾನಗಳನ್ನು ನೆನೆಯುತ್ತ ಒಂದೊಂದೇ ಮೆಟ್ಟಿಲುಗಳನ್ನು ಹತ್ತುತ್ತಿದ್ದನು. ಆಗ ಜಾತಿ ವಿವರಣೆಯನ್ನು ನೀಡುವವನ ಅಧಿಕಾರಿಯಲ್ಲಿಗೆ ಹೋಗಿ ವಿನಯದಿಂದಲೇ ತಲೆ ಬಾಗಿ ನಮಸ್ಕರಿಸಿದನು. ಆಗ ಆ ಅಧಿಕಾರಿ ಗೌತಮನ ಸ್ಥಿತಿಯನ್ನು ಕಂಡು ಆತನಲ್ಲಿ ಕನಿಕರದ ಭಾವನೆ ಉಂಟಾಗುತ್ತದೆ.

ಈತ ಯಾವುದೋ ಒಂದು ಬಲವಾದ ಸಮಸ್ಯೆಯಲ್ಲಿ ಸಿಲುಕಿಕೊಂಡಿದ್ದಾನೆ. ಹಾಗೆಯೇ ಇವನು ತುಂಬ ಮುಗ್ಧ ವ್ಯಕ್ತಿಯಾಗಿದ್ದಾನೆ. ಈತನಿಗೆ ನನ್ನಿಂದ ಆಗುವ ಸಹಾಯ ಮಾಡಬೇಕೆಂದು ಗೌತಮನನ್ನು ಒಳಗಡೆ ಕರೆದು ಕೂರಲು ಹೇಳಿದನು. ನಂತರ ಗೌತಮನ ಸಮಸ್ಯೆ ಕೇಳಿದಾಗ ಆ ಅಧಿಕಾರಿ "ಯಾಕಪ್ಪ, ಸರ್ಟಿಫಿಕೆಟಿನಿಂದ ಜಾತಿಯ ಹೆಸರನ್ನು ತೆಗೆಯಲು ಹೇಳುತ್ತಿದ್ದೀಯಾ...? ಅಧಿಕಾರಿಗೆ ಸುಮಾರು ಐವತ್ತು ವರ್ಷ ವಯಸ್ಸಿರಬಹುದು. ತುಂಬ ಜನ ಆ ಕೊಠಡಿಯಲ್ಲಿ ಫೈಲುಗಳೊಂದಿಗೆ ಕುಳಿತಿದ್ದರು. ಎಲ್ಲರ ಕಣ್ಣುಗಳೂ ಇವನನ್ನೇ ನೋಡುತ್ತಿದ್ದವು. ವಾತಾವರಣ ಬಹಳ ಶಾಂತವಾಗಿತ್ತು. ಹಳೆಯ ಫ್ಯಾನ್ ತಿರುಗುವ ಶಬ್ದ ಒಂದೇ ಸಮನೆ ಕಾಡುತ್ತಿತ್ತು. ಮನಸ್ಸಿನಲ್ಲಿದ್ದನ್ನು ಹೇಳಲು ಮತ್ತೆ ಓರೆಗಣ್ಣಿನಿಂದ ಅಧಿಕಾರಿಯನ್ನು ನೋಡಿದನು. ಆಗ ಹಲವಾರು ನೆನಪುಗಳು ತಲೆಯೊಳಗೆ ಸುಳಿದು ಹೋದವು"[೧೪] ಗೌತಮನಿಗೆ ಆ ಅಧಿಕಾರಿಯು ನಮ್ಮ ಜಾತಿಯವನೇ ಆಗಿರಬೇಕು ಏಕೆಂದರೆ ನನ್ನಂತೆಯೇ ಎಲ್ಲವನ್ನು ಅನುಭವಿಸಿ ನೊಂದವರಾಗಿರುವುದರಿಂದ ನನ್ನ ಬಗ್ಗೆ ಇಷ್ಟೊಂದು ಕಾಳಜಿ ವಹಿಸುತ್ತಿದ್ದಾರೆಂದು ಆತನಿಗೆ ಅನಿಸಿತು.

ನೀನು ನಿನ್ನ ಹುಟ್ಟಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೀಯೇ...? ಮತ್ತೊಬ್ಬ ಅಧಿಕಾರಿಯು ಕೇಳಿದನು. ನಂತರ ಆಗ ಅಧಿಕಾರಿಯು ಗುಮಾಸ್ತೆಯನ್ನು ಕರೆದು ಈತನ ಅರ್ಜಿಯನ್ನು ತೆಗೆದುಕೊಳ್ಳೆಂದು ಹೇಳಿದರು. ಆಗ ಗೌತಮನ ಅರ್ಜಿ ನೋಡಿ ಅವಳು ಸಾರ್ ಈತನು ತನ್ನ ಹುಟ್ಟಿನಿಂದ ತಪ್ಪಿಸಿಕೊಳ್ಳಲು ಬಯಸಿದ್ದಾನೆಂದು ಹೇಳುತ್ತಾಳೆ. ಸರಿ ಆತನಿಗೆ ಒಂದು ನಾಲ್ಕು ದಿನ ಬಿಟ್ಟು ಬಾ ಎಂದು ಹೇಳು ನಾವು ಮೇಲಿನ ಅಧಿಕಾರಿಗಳ ಜೊತೆ ಚರ್ಚಿಸುತ್ತೇವೆ ಎನ್ನುತ್ತಾರೆ. ಆಗ ಗೌತಮ ಹೊರಗೆ ಬಂದು ಅವರ ಮಾತಿನ ಮೇಲೆ ನಂಬಿಕೆ ಬಾರದೆ ಪುನಃ ಒಳಗಡೆ ಹೋಗಿ ಆ ಅಧಿಕಾರಿಗಳ ಮೇಲೆ ಹಲ್ಲೆ ಮಾಡುತ್ತಾನೆ. ಅಲ್ಲಿರುವ ಕಛೇರಿ ವರ್ಗದವರು ಆತನಿಗೆ ಥಳಿಸುತ್ತಾರೆ. ಪುನಃ ಆ ಅಧಿಕಾರಿ ಯಾವ ಪೊಲೀಸ್‌ರನ್ನು ಕರೆಸದೆ ಆತನನ್ನು ಬಿಟ್ಟು ಕಳಿಸುತ್ತಾನೆ. ಅವನು

ನೋವಿನಿಂದ ಹೊರಗಡ ರಸ್ತೆಯಲ್ಲಿ ಹೋಗುತ್ತಿರುವಾಗ ಹಿಂದಿನಿಂದ ಆ ಆಫೀಸಿನ ಗುಮಾಸ್ತೆ ಬಂದು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅಲ್ಲಿ ಗೌತಮ ಮತ್ತು ಅವಳ ಸಂಗಮವಾಗುತ್ತದೆ.

ಅಲ್ಲಿರುವ ಪುಸ್ತಕವನ್ನು ನೋಡಿ ಇದು ಯಾರದೆಂದು ಕೇಳುತ್ತಾನೆ. ಅದರ ಮೇಲೆ 'ಯಶೋಧೆ' ಎಂದು ಬರೆದಿರುತ್ತದೆ. ಕೊನೆಗೆ ಆ ಪುಸ್ತಕವನ್ನು ಬರೆದ ಯಶೋಧೆ ಇವಳೇ ಆಫೀಸಿನಿ ಗುಮಾಸ್ತೆ ಎಂದು ತಿಳಿಯುತ್ತದೆ. ಗೌತಮ ತನ್ನ ಕಥೆಯಂತೆಯೇ ಯಶೋಧಳ ಕತೆಯೂ ಇರುತ್ತದೆಂದು ಆ ಪುಸ್ತಕದ ಮೂಲಕ ಗೊತ್ತಾಗುತ್ತದೆ. ಜಾತಿಯಿಂದ ನಾನು ನೊಂದಿರುವಂತೆ ಯಶೋಧಳೂ ಕೂಡ ಈ ಜಾತಿಯಿಂದಲೇ ಇಷ್ಟೊಂದು ಸೊರಗಿ ಮಾನಸಿಕವಾಗಿ ನೊಂದಿದ್ದಾಳೆ ಎಂದು ಗೌತಮನಿಗೆ ಅರಿವಾಗುತ್ತದೆ. ಗೌತಮನ ಈ ಜಾತಿಯಿಂದಲೇ ತನ್ನ ಹುಟ್ಟನ್ನು ಬದಲಾಯಿಸಿಕೊಳ್ಳಬೇಕೆನ್ನುವುದು ಈ ಬಂಡವಾಳಶಾಹಿಗಳು ಹಾಗೂ ಪುರೋಹಿತಶಾಹಿಗಳು ದಲಿತರಿಗೆ ಮಾಡಿರುವ ಜಾತಿ ವ್ಯವಸ್ಥೆಯಿಂದಾದ ಶೋಷಣೆಯ ಸಂವೇದನೆಯೇ ಈ ಕತೆಯಾಗಿರುತ್ತದೆ. ಜಾತಿ ವ್ಯವಸ್ಥೆಯು ಮನುಷ್ಯನನ್ನು ಎಷ್ಟೊಂದು ಮಾನಸಿಕ ವ್ಯಥೆಗೆ ಸಿಲುಕಿಸಿದೆ ಎಂಬುವುದನ್ನು ಈ ಕಥೆಯು ಗೌತಮನ ಪಾತ್ರದ ಮೂಲಕ ತಿಳಿಯಬಹುದಾಗಿದೆ.

ಪುರೋಹಿತಶಾಹಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ವಿಷಬೀಜವನ್ನು ಬಿತ್ತಿ ಜಾತಿಯ ಹೆಸರಿನಿಂದ ಮನುಷ್ಯರು ಮನುಷ್ಯರಂತೆ ಕಾಣದ ವಾತಾವರಣ ಸೃಷ್ಟಿಯಾಗಿರುತ್ತದೆ. ಆದ್ದರಿಂದ ಈ ಕತೆಯಲ್ಲಿ ಗೌತಮ ತನ್ನ ಹುಟ್ಟು ಜಾತಿಯನ್ನು ಬದಲಾಯಿಸುವಂತೆ ತಹಶೀಲ್ದಾರ ಕಛೇರಿಗೆ ಹೋಗಿ ಗಲಾಟೆ ಮಾಡುತ್ತಾನೆ. ಇಲ್ಲಿ ಕಾಲಕಾಲಾಂತರಗಳಿಂದ ದಲಿತರ ಮೇಲೆ ಜಾತಿಯ ಹೆಸರಿನಲ್ಲಿ ಮಾಡುತ್ತಿರುವ ಅವಮಾನ, ಅತ್ಯಾಚಾರ, ಶೋಷಣೆಗಳೇ ಇಂತಹ ಮನಸ್ಥಿತಿಗೆ ಕಾರಣವಾಗಿರುತ್ತವೆ. ಯಾವುದೇ ಕೆಲಸಕ್ಕೆಂದು ಹೋದರೂ ಅಲ್ಲಿ ಜಾತಿಯನ್ನು ಕೇಳಿ ಕೆಲಸವನ್ನು ಕೊಡುತ್ತಾರೆ. ಜಾತಿಯ ಹೆಸರಿನಲ್ಲಿ ಮರ್ಯಾದೆಯನ್ನು ನೀಡುತ್ತಾರೆ. ಜಾತಿಯ ಹೆಸರಿನಲ್ಲಿ ಪ್ರವೇಶವನ್ನು ಕೊಡುತ್ತಾರೆ. ಎಲ್ಲಿ ಹೋದರೂ ಏನೇ ಮಾಡಿದರೂ ಜಾತಿಯನ್ನೇ ಕೇಂದ್ರಿಕರಿಸಿ ತಮ್ಮ ಮುಂದಿನ ನಿರ್ಧಾರವನ್ನು ಕೈಗೊಳ್ಳುತ್ತಾರೆ. ಹೀಗಿರುವಾಗ ದಲಿತರ ಮನೆತನದಲ್ಲಿ ಹುಟ್ಟಿದ ಗೌತಮ ಪ್ರಸ್ತುತ ಸಮಾಜದಲ್ಲಿರುವ ಜಾತಿಯ ವಾತಾವರಣವನ್ನು ಕಂಡು ಈ ಜಾತಿ ವ್ಯವಸ್ಥೆಯಿಂದಲೇ ನಮಗೆ ಇಂತಹ ಅವಮಾನಗಳು, ತೊಂದರೆಗಳು, ಶೋಷಣೆಗಳು ಆದ್ದರಿಂದ ಈ ಜಾತಿ ವ್ಯವಸ್ಥೆಯಲ್ಲಿ ನಾನು ಬದುಕದಿದ್ದರೇ ನಾನು ನೆಮ್ಮದಿಯಿಂದ ಬದುಕಬಹುದು. ಮತ್ತೊಬ್ಬರಿಂದ ಅವಮಾನವನ್ನು ಅನುಭವಿಸುವುದು ತಪ್ಪುವುದು. ಜಾತಿ ಇರುವ ತನಕ ದಲಿತರಿಗೆ ನೆಮ್ಮದಿ ಎಂಬುವುದು ಸಿಗಲು ಸಾಧ್ಯವಿಲ್ಲ.

ಅಸಮಾನತೆ ಅಳಿಯುವುದಿಲ್ಲ ನಾನು ಈ ಜಾತಿ ನಿಂದನೆಯಿಂದ ದೂರಾಗಬೇಕೆಂದು ಗೌತಮ ನಿರ್ಧರಿಸುವುದರಲ್ಲಿ ಪುರೋಹಿತಶಾಹಿಗಳು ಸೃಷ್ಟಿಸಿದ ಈ ಜಾತಿ ವ್ಯವಸ್ಥೆಯು ದಲಿತರ ಮೇಲೆ ಎಂತಹ ಭೀಕರ ಪರಿಣಾಮವನ್ನು ಬೀರಿರುತ್ತದೆ ಎಂಬುವುದನ್ನು ತಿಳಿಸಿಕೊಡುತ್ತದೆ. ಅಲ್ಲದೇ ಅದೇ ಆಫೀಸಿನಲ್ಲಿ ಕೆಲಸ ಮಾಡುತ್ತಿರುವ ಗುಮಾಸ್ತೆಯು ದಲಿತರು ಪಡುತ್ತಿರುವ ವೇದನೆಗಳನ್ನು

ಕುರಿತು ಬರೆದಿರುವ ಪುಸ್ತಕವು ಅವಳ ಜೀವನದ ನೈಜ ಚಿತ್ರಣವನ್ನೇ ತೋರಿಸಿಕೊಡುತ್ತದೆ. ಜಾತಿಯು ಸರಕಾರಿ ಕೆಲಸದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೂ ಅಲ್ಲಿಯೂ ಕೂಡಿ ಜಾತಿಯು ಭೇದಗಳನ್ನು ಹಾಗೂ ಒಂದು ಆಫೀಸಿನಲ್ಲಿ ದಲಿತರನ್ನು ಇತರರು ಕಾಣುವ ತಾರತಮ್ಯದ ಮನೋಭಾವಗಳನ್ನು ಅವಳು ಕಂಡುಂಡ ಇಡೀ ದಲಿತರ ಚಿತ್ರಣವನ್ನೇ ತನ್ನ ಕಥೆಯ ಮೂಲಕ ಅಭಿವ್ಯಕ್ತಿಸಿರುವುದು ದಲಿತರು ಪಡುತ್ತಿರುವ ಪ್ರಸ್ತುತ ಸಾಮಾಜಿಕ ಸ್ಥಿತಿಗತಿಗಳನ್ನು ತೋರಿಸಿಕೊಡುತ್ತದೆ.ಇದಕ್ಕೆಲ್ಲ ಕಾರಣ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿ ವ್ಯವಸ್ಥೆಯೇ ಕಾರಣವಾಗಿರುತ್ತದೆ. ಎಂಬುವುದನ್ನು ಕಥೆಗಾರರು ಈ ಕಥೆಯ ಗೌತಮನ ಪಾತ್ರದ ಮೂಲಕ ಜಾತಿ ವ್ಯವಸ್ಥೆಯಿಂದ ದಲಿತರು ಮಾನಸಿಕ ವೇದನೆಯಲ್ಲಿ ಬಾಳುತ್ತಿದ್ದಾರೆ ಎಂಬುವುದನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಈ ಜಾತಿ ಆಧಾರಿತ ಶ್ರೇಣಿಕೃತವ್ಯವಸ್ಥೆಯಿಂದ ಸಮಾಜದಲ್ಲಿ ಅಸಮಾನತೆ ಉಂಟಾಗಿರುತ್ತದೆ. ಇದರಿಂದ ದಲಿತರು ಮೇಲ್ವರ್ಗದವರಿಂದ ಶೋಷಣೆಗೆ ಒಳಪಡುತ್ತಿದ್ದಾರೆ. ಇವರು ತಮ್ಮ ಸಾಂವಿಧಾನಿಕ ಮೂಲಭೂತ ಹಕ್ಕುಗಳನ್ನು ಪಡೆದುಕೊಂಡು ಇತರರಂತೆ ನಿರ್ಭೀತಿಯಿಂದ ಬದುಕನ್ನು ನಡೆಸಬೇಕು. ಗೌತಮನಂತೆ ಜಾತಿಯ ಹೆಸರಿನಲ್ಲಿ ನೊಂದವರು ತಮ್ಮಲ್ಲಿ ಶಿಕ್ಷಣ ಸಂಘಟನೆ, ಹೋರಾಟಗಳಿಂದ ಮೇಲ್ವರ್ಗದವರು ಮಾಡುವ ಶೋಷಣೆಗಳಿಂದ ಮುಕ್ತರಾಗಿ ಸ್ವತಂತ್ರವಾಗಿ, ಸ್ವಾಭಿಮಾನದ ಬದುಕನ್ನು ತಂದುಕೊಳ್ಳಬೇಕೆಂಬ ಆಶಯದೊಂದಿಗೆ ದಲಿತರು ಪಡುತ್ತಿರುವ ಜಾತಿನಿಂದನೆಯ ಅವಮಾನಗಳನ್ನು ಈ ಕಥೆಯಲ್ಲಿ ಅಂಬೇಡ್ಕರವಾದದ ನೆಲೆಯಿಂದ ಪ್ರತಿಪಾದಿಸಿದ್ದಾರೆ.

ಡಾ.ವಿಜಯ ಆರ್. ಕಾಂಬಳೆಯವರು ಕನ್ನಡನುವಾದ ಮಾಡಿದ "ಮನುಷ್ಯರನ್ನು ಹುಡುಕುತ್ತ" ಎಂಬ ಮರಾಠಿ ದಲಿತ ಕಥೆಗಳನ್ನು ಡಾ.ಬಾಬುರಾವ್ ಗಾಯಕವಾಡರವರು ಬರೆದಿದ್ದಾರೆ. ಇವರು ಬರೆದ ಮರಾಠಿ ಕಥೆಯಾದ 'ಮಣ್ಣು ಗೂಡಿದ ಅನ್ನದಗಳು' ಎಂಬ ಕಥೆಯು ಜಾತಿವ್ಯವಸ್ಥೆಯು ಮನುಷ್ಯನಲ್ಲಿರುವ ಮನುಷ್ಯತ್ವವನ್ನೇ ಮರೆಸಿ ಹೇಗೆ ದಲಿತರನ್ನು ಶೋಷಿಸಿ ದಬ್ಬಾಳಿಕೆಯನ್ನು ಪುರೋಹಿತಶಾಹಿಗಳು ಕಾಲದಿಂದ ಕಾಲಕ್ಕೂ ಮಾಡುತ್ತಾ ಬಂದಿದ್ದಾರೆ, ಅದು ದಮನಿತ ಸಮುದಾಯಗಳ ದೈಹಿಕ, ಮಾನಸಿಕವಾಗಿ ಹೇಗೆ ಹಿಂಸಿಸುತ್ತಿದೆ, ನಾವು ಮನುಷ್ಯರೇ...? ಅಥವಾ ... ಇನ್ನೇನೋ ಎಂಬ ಮನೋಚಿಂತೆಯನ್ನು ಕೆಳ ವರ್ಗದವರನ್ನು ಕಾಡುತ್ತಿದೆ. ಎಂಬುವದನ್ನು ಈ ಮಣ್ಣುಗೂಡಿದ ಅನ್ನದಗಳು ಕಥೆಯ ತಳ ಸಮುದಾಯದ ಭೀಕರ ಮನೋವ್ಯಥೆಗೆ ಹಿಡಿದ ಕನ್ನಡಿಯಾಗಿದೆ. ಕಥಾ ಲೇಖಕರೇ ತಾವುಂಡ ನೋವಿನ ಸಂಕೋಲೆಗಳನ್ನು ಎಳೆ ಎಳೆಯಾಗಿ ಅಕ್ಷರ ರೂಪದಲ್ಲಿ ಜೋಡಿಸಿ ತಾವೆ ನಿರೂಪಕರಾಗಿ ತಮ್ಮ ಕಳೆದ ನೆನೆಮುಗಳನ್ನು ಕಥಾ ಹಂದರದ ತುಂಬಾ ಚೆಲ್ಲುತ್ತಾ ಹೋಗುತ್ತಾರೆ.

ತಮ್ಮ ಶಾಲಾ ದಿನಗಳನ್ನು ಮೆಲುಕು ಹಾಕಿಕೊಳ್ಳತ್ತ ನಾನು ಎರಡನೇ ತರಗತಿ ಓದುತ್ತಿದ್ದಾಗ ಎಂದು ಕಥೆಯನ್ನು ಪ್ರಾರಂಭಿಸಿ ಅದು ಅವರೊಬ್ಬರ ಕಥೆಯಲ್ಲಿ ಇಡೀ ದಮನಿತರಂತರಂಗದಲ್ಲಿರುವ ಕಿಚ್ಚನ್ನು ಕಥೆಯ ಮೂಲಕ ವಿವರಿಸಿದ್ದಾರೆ. ಭರಡೆ ಮಾಸ್ತರ ಶಾಲೆಯ ಎಲ್ಲಾ ಮಕ್ಕಳನ್ನು

ಪ್ರೀತಿಯಿಂದ ಕಾಣುತ್ತಿದ್ದರು. ಮಕ್ಕಳು ತಪ್ಪು ಮಾಡಿದಾಗ ಮಾತ್ರ ಅವರು ಶಿಕ್ಷಿಸುತ್ತಿದ್ದರು. ಅದು ಕಪಾಳಮೋಕ್ಷ ಮಾಡಿಸುವುದು. ಊಟಾ ಬಸಿ ತೆಗೆಸುವದರಲ್ಲಿ ಹೆಣ್ಣು ಗಂಡು ಎಂಬ ಬೇಧ ಭಾವ ಮಾಡುತ್ತಿರಲಿಲ್ಲ ಎಲ್ಲರಿಗೂ ಅವರು ಸಮಾನವಾಗಿಯೇ ಶಿಕ್ಷಿಸುತ್ತಿದ್ದರು. ಎಲ್ಲರನ್ನೂ ಸಮಾನರನ್ನಾಗಿಯೇ ಕಾಣುತ್ತಿದ್ದರು. ಈ ಶಾಲಾ ಮಕ್ಕಳಲ್ಲಿರುವ 'ಆವಡ್ಯಾ' (ಲೇಖಕರು)ನನ್ನು ಭರಡೆ ಮಾಸ್ತರರು ಪ್ರೀತಿಯಿಂದ ಕಾಣುತಿದ್ದರು. ಏಕೆಂದರೆ ಅವನೊಬ್ಬ ಹೊಲೆಯ ಹುಡುಗನಾಗಿದ್ದ ಹಾಗೆ ಉಳಿದೆಲ್ಲ ಮಕ್ಕಳಿಗಿಂತ ಬುದ್ಧಿವಂತನಾಗಿದ್ದನು. ಊರಿನ ಸರಕಾರಿ ಚಾವಡಿಯಲ್ಲಿ ಶಾಲೆಯು ನಡೆಯುತ್ತಿತ್ತು. ಅದು ಅಷ್ಟೊಂದು ಸ್ವಚ್ಛತೆಯಿಂದ ಕೂಡಿರಲಿಲ್ಲ.

ಕೊಳೆ ಕಸದಿಂದ ತುಂಬಿತ್ತು. ಹೊಲೆ – ಮಾದಿಗ ಹುಡುಗರನ್ನು ಶಾಲೆಯ ಮೂಲೆಯಲ್ಲಿ ಪ್ರತ್ಯೇಕವಾಗಿ ಕೂರಿಸಲಾಗುತ್ತಿತ್ತು. ಅಲ್ಲಿಯೇ ಶಾಲೆಯ ಕಸತಂದು ಹಾಕುತ್ತಿದ್ದರು. ಶಾಲೆಯ ಪಕ್ಕದಲ್ಲಿ ಮಾರುತಿ ದೇವಸ್ಥಾನದ ಗರ್ಭಗುಡಿ ಇತ್ತು. ಊರಿನಲ್ಲಿರುವ ಸವರ್ಣೀಯ ಜಾತಿಯ ಹುಡುಗರು ಗರ್ಭಗುಡಿಯಲ್ಲಿ ಕೂರುತ್ತಿದ್ದರು. ಮಳೆ ಬಂದರೆ ಆವಡ್ಯಾ ಹಾಗೇ ಮಳೆಯಲ್ಲಿ ನೆನೆಯುತ್ತ ಆಲದಮರದ ಕೆಳಗೆ ನಿಲ್ಲುತ್ತಿದ್ದನು. ಅವನು ಹೊಲೆಯರವ ಎನ್ನುವುದಕ್ಕಾಗಿ ಯಾರು ಗುಡಿಯೊಳಕ್ಕೆ ಕರೆಯುತ್ತಿರಲಿಲ್ಲ. ಮನೆಗೆ ಹೋಗೋಣವೆಂದರೆ ಜೋಪಡಿ ತುಂಬೆಲ್ಲಾ ನೀರು ಹಾಗೆ ಮಳೆ ನಿಲ್ಲುವ ತನಕ ಆವಡ್ಯಾ ಅಲ್ಲಿಯೇ ಒದ್ದೆ ಉಡುಪಿನಲ್ಲಿ ನಿಲ್ಲುತ್ತಿದ್ದನು. ಅವನಿಗಿರುವುದು ಒಂದೇ ಚೊಣ್ಣ ಬದಲಾಯಿಸಲು ಬಟ್ಟೆಗಳಿಲ್ಲ. ಆದರೂ ಓದುವುದರಲ್ಲಿ ತುಂಬಾ ಜಾಣ.

ಗುರುಗಳು ಅಂದರೆ ಭರಡಾ ಮಾಸ್ತರರು ವಿದ್ಯಾರ್ಥಿಗಳಿಗೆ ಒಂದು ಶಬ್ದದ ಅರ್ಥ ಕೇಳಿದಾಗ ಯಾರು ಹೇಳುವುದಿಲ್ಲ ಅವಡ್ಯಾ ಮಾತ್ರ ಉತ್ತರಿಸುತ್ತಾನೆ. ಅದಕ್ಕಾಗಿ ಅವಡ್ಯಾನಿಗೆ ಇತರ ವಿದ್ಯಾರ್ಥಿಗಳಿಗೆ ಕಪಾಳಮೋಕ್ಷ ಮಾಡಲು ಹೇಳುತ್ತಾರೆ. ಅವನು ಒಲ್ಲೆನೆಂದರೂ ಬಲವಂತವಾಗಿ ಮಾಡಿಸುತ್ತಾರೆ. ಅದರಂತೆ ಅದರಲ್ಲಿರುವ ಸವರ್ಣೀಯರ ಒಬ್ಬ ಮಗಳು ಸ್ವಾತಿಗೆ ಕಪಾಳಮೋಕ್ಷ ಮಾಡಿದಾಗ, ಆ ವಿಷಯ ಅವಳ ತಾಯಿಯಾದ ಮಂಜುಳಬಾಯಿಗೆ ತಿಳಿದುಆಕೆ ಕೈಯಲ್ಲಿ ಒಂದು ಗಟ್ಟಿಯಾದ ಹಸಿಬರ್ಲು ತಂದು ಇಂವ ಏನ ಆವಡ್ಯಾ ಅಂತ ಡುಬ್ಬದ ಮೇಲೆ, ಹೊಟ್ಟೆಯ ಮೇಲೆ ಎಲ್ಲಿಬೇಕೆಂದರೆ ಅಲ್ಲಿ ಮೈ ತುಂಬಾ ಬಾರಿಸುತ್ತಾಳೆ. ಆವಡ್ಯಾ ಯವ್ವಾ ಯವ್ವಾಯೆಂದು ಚಿರುತ್ತಿದ್ದನು. ನಂತರ ಭರಡಾ ಮಾಸ್ತರಿನಿಗೆ ಒಬ್ಬ ಹೊಲೇರ ಹುಡುಗನ ಕೈಯಲ್ಲಿ ನನ್ನ ಮಗಳಿಗೆ ಕಪಾಳಕ್ಕೆ ಹೊಡೆಸಿದ್ದಿಯಾ... ಇನ್ನೊಂದು ಸಲ ಈ ರೀತಿ ಮಾಡಿದರೇ ನೀನು ಈ ಊರಲ್ಲಿ ಇರುವುದಿಲ್ಲ ಎಂದು ಎಚ್ಚರಿಕೆ ಕೊಟ್ಟು ಹೋಗುತ್ತಾಳೆ.

ಆಗ ಭರಡಾ ಮಾಸ್ತರರು ಅಸಹಾಯಕರಾಗಿ ನಿಂತಿರುತ್ತಾರೆ. ಇದು ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿಯೇ ಈ ಜಾತಿಪದ್ಧತಿಯನ್ನು, ಲಿಂಗಭೇದವನ್ನು ಮಕ್ಕಳಿಗೆ ಕಲಿಸಿಕೊಡುವಂತ ಮಕ್ಕಳ ಮನಸ್ಸುಗಳಲ್ಲಿ ಬಿರುಕು ತಂದು ಬೆಳೆಯುವ ವಯಸ್ಸಿನಲ್ಲಿಯೇ ಇಲ್ಲದ ಜಾತಿ ಸೃಷ್ಟಿಸಿದ್ದಾರೆ. ಏಕತೆಯ ತತ್ವವನ್ನು ಮರೆತು ಸವರ್ಣೀಯರು ದಲಿತರನ್ನು ಮತ್ತು ಅವರ ಮಕ್ಕಳನ್ನು ದಂಡಿಸುವುದು

ಶಿಕ್ಷಾರ್ಹ ಅಪರಾಧವಾದರೂ, ಇದು ನಿಲ್ಲದೆ ಕಾಲದಿಂದ ಕಾಲಕ್ಕೆ ಸಂಚರಿಸುತ್ತಿರುವುದು ವಿಪರ್ಯಾಸವಾಗಿದೆ. ಒಮ್ಮೆ ಭರಡಾ ಮಾಸ್ತರರು ವನಭೋಜನಕ್ಕಾಗಿ ಎಲ್ಲಾ ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗುತ್ತಾರೆ. ಅದರಲ್ಲಿ ಆವಡ್ಯಾನು ಸೇರಿಕೊಂಡಿರುತ್ತಾನೆ. ಎಲ್ಲರೂ ಸಿಹಿಸಿಹಿಯಾದ ತಿಂಡಿಗಳನ್ನು ತಂದಿರುತ್ತಾರೆ. ಆವಡ್ಯಾನ ತಾಯಿ ಮನೆಯಲ್ಲಿ ಏನೂ ಇಲ್ಲದ ಕಾರಣ ನುಚ್ಚಿನಿಂದ ಅನ್ನವನ್ನು ಮಾಡಿ ಬುತ್ತಿ ಕಟ್ಟಿವನಭೋಜನಕ್ಕೆ ಕಳಿಸಿರುತ್ತಾಳೆ. ಎಲ್ಲಾ ಶಾಲಾ ಮಕ್ಕಳು ಸುತ್ತುತ್ತ ಸುತ್ತತ್ತ ದಣಿದು ಹಸಿವಿನಿಂದ ಅಲ್ಲಿರುವ ಒಂದು ಮನ್ಮಥ ದೇವರ ಹೆಸರಿನ ಮಠದೊಳಗೆ ಹೋದರು.

ಭರಡಾ ಮಾಸ್ತರ ಆವಡ್ಯಾಗೂ ನೀನು ಮಠದೊಳಗೆ ಹೋಗಿ ಕೂರು ಎಂದು ಹೇಳಿದರು. ಮನದಲ್ಲಿ ಭಯ ತುಂಬಿಕೊಂಡು ಮಠದ ಮೂಲೆಯಲ್ಲಿ ಆವಡ್ಯಾ ಕೂರುತ್ತಾನೆ. ಭರಡಾ ಮಾಸ್ತರರು ದೇವರಿಗೆ ನಮಸ್ಕರಿಸಲು ಒಳಗೆ ಹೋಗುತ್ತಾರೆ. ಮಕ್ಕಳು ತಮ್ಮ ತಮ್ಮ ಬುತ್ತಿಗಳನ್ನು ಬಿಚ್ಚಿಕೊಂಡು ಉಟಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿರುತ್ತಾರೆ. ಆವಡ್ಯಾ ತನ್ನ ಬುತ್ತಿಯನ್ನು ಬಿಚ್ಚುತ್ತಾನೆ. ಗುರುಗಳು ಬೇಗ ಬಂದರೆ ಎಲ್ಲರ ಸಿಹಿ ತಿಂಡಿಯಲ್ಲಿ ನನಗೂ ಸ್ವಲ್ಪ ಸಿಗುತ್ತದೆಂದು ನಿರೀಕ್ಷಿಸುತ್ತಿರುತ್ತಾನೆ. ಏಕೆಂದರೆ ಭರಡಾ ಮಾಸ್ತರರು ಎಲ್ಲಾ ವಿದ್ಯಾರ್ಥಿಗಳ ಬುತ್ತಿಯನ್ನು ಕಲಸಿ ಎಲ್ಲಾ ವಿದ್ಯಾರ್ಥಿಗಳಿಗೆ ಹಂಚಿಕೊಡುತ್ತಿದ್ದರು. ಆದರೆ ಗುರುಗಳ ಬದಲಿಗೆ "ಆ ಮಠದಲ್ಲಿನ ಮುದುಕ ಪೂಜಾರಿಯು ಕಟ್ಟಿಗೆಯನ್ನು ಊರುತ್ತ ಬರುತ್ತಿದ್ದನು ಅವನು ನನ್ನನ್ನು ನೋಡುತ್ತಿದ್ದಂತಯೇ ಇಂವಾ ಯಾರು...? ಮೂಲ್ಯಾಗ ಯಾಕೆ ಕುಂತಾನು...? ಹೊಲೆ ಮಾದಿಗರ ಹುಡುಗ ಅದನ ಏನ್...? ಎಂದು ಕೇಳಿದನು... ಆವಾಗ ಹುಡುಗರು 'ಹೌದು' ಹೌದು ಎಂದು ಕೂಗಿದರು.

'ಭೋಸಡಿ ಮಗನೇ... ಮಠಾ ಎಲ್ಲಾ ಹಾಳಿಗಿ ಹಚ್ಚಿದಲ್ಲೋ...? ಎಂದು ಹಲ್ಲು ಕಡಿಯುತ್ತ ಕಣ್ಣುಗಳನ್ನು ಅಗಲಿಸಿ ಸಿಟ್ಟಿನಿಂದ ನನ್ನ ಹತ್ತಿರವೇ ಬಂದನು"೧೫ಪೂಜಾರಿ ಮುದುಕ ಆವಡ್ಯಾ ತಿನ್ನುತ್ತಿರುವ ಅನ್ನವನ್ನು ಕೆಳಗೆ ಚೆಲ್ಲುತ್ತಾನೆ. ಹೊಟ್ಟೆಯಲ್ಲಿ ಹಸಿವಿನ ಬದಲಿಗೆ ಸಿಟ್ಟಿನ ಬೆಂಕಿ ತುಂಬಿರುವ ಆವಡ್ಯಾ ನಾನು ಮನುಷ್ಯನಲ್ಲವೇ...? ಎಂದು ನೊಂದುಕೊಂಡು ತನ್ನನ್ನು ಮನುಷ್ಯನೆಂದು ಕಾಣುವ ಮನುಷ್ಯರನ್ನು ಹುಡುಕುತ್ತಿದ್ದಾನೆ. ಮನುಷ್ಯ ಮನುಷ್ಯನಾಗುವ ಬಗೆಯನ್ನು ಈ ಮನುಷ್ಯರನ್ನು ಹುಡುಕುತ್ತ ಕಥೆಗಳಲ್ಲಿ ಡಾ.ಬಾಬುರಾವ್ ಗಾಯಕವಾಡರವರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತರ ನೋವುಗಳನ್ನು ತೋರಿಸಿಕೊಟ್ಟಿದ್ದಾರೆ. ದಲಿತರ ಶಾಲಾ ಬಾಲಕ ಆವಡ್ಯಾ ತನ್ನ ಬಡತನದ ಬೇಗೆಯಲ್ಲಿಯೇ ಶಿಕ್ಷಣವನ್ನು ಪಡೆಯಬೇಕೆಂಬ ಹಂಬಲವುಳ್ಳವನಾಗಿದ್ದಾನೆ. ಸರಕಾರದ ಸಾರ್ವಜನಿಕ ಶಿಕ್ಷಣ ಪದ್ಧತಿಯಲ್ಲಿ ಯಾವುದೇ ವರ್ಣಭೇದ, ಲಿಂಗಭೇದಗಳಿಲ್ಲದೆ ಮುಕ್ತವಾದ, ಸ್ವತಂತ್ರವಾದ, ನಿರ್ಭಯದ, ವಾತಾವರಣದಲ್ಲಿ ಶಾಲಾ ಬಾಲಕರು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ಶಿಕ್ಷಣವನ್ನು ಪಡೆದುಕೊಳ್ಳುವುದು ಸಂವಿಧಾನದ ಮೂಲಭೂತ ಹಕ್ಕಾಗಿರುತ್ತದೆ.

ಆದರೆ ದಲಿತ ಎಂಬ ಕಾರಣಕ್ಕಾಗಿ ಹೊಲೆಯ ಜಾತಿಯಲ್ಲಿ ಹುಟ್ಟಿದವನೆಂದು ಅವಹೇಳನ ಮಾಡುತ್ತಾರೆ. ಚುಚ್ಚು ಮಾತಿನಿಂದ, ಅವಮಾನದಿಂದ ಶಾಲಾ ಬಾಲಕನಿಗೆ ದೈಹಿಕವಾಗಿ, ಮಾನಸಿಕವಾಗಿ ಪುರೋಹಿತಶಾಹಿಗಳು, ಬಂಡವಾಳಶಾಹಿಗಳು ದಂಡಿಸುತ್ತಿರುವುದು ಇಡೀ ದಲಿತರ ಮೇಲೆ ಮಾಡುತ್ತಿರುವ ಶೈಕ್ಷಣಿಕ ಶೋಷಣೆಯಾಗಿರುತ್ತದೆ. ಎಲ್ಲ ಮಕ್ಕಳ ಜೊತೆ ಬೆರೆತು ಕೂಡಿಕೊಂಡು, ಆಡಿಕೊಂಡು ಕಲಿಯಲು ಮುಕ್ತ ಅವಕಾಶವನ್ನು ದಲಿತ ಮಕ್ಕಳಿಗೆ ನೀಡದಿರುವುದು ಅದರಿಂದಾಗುವ ಆವಡ್ಯಾನ ಮಾನಸಿಕ ವೇದನೆಯೂ ದಲಿತ ಶಾಲಾ ಮಕ್ಕಳ ಮೇಲೆ ತೀವ್ರವಾದ ಮನೋವೇದನೆಯನ್ನು ಮಾಡಿ ಶಿಕ್ಷಣವನ್ನು ಕಲಿಯುವುದರಲ್ಲಿ ನಿರಾಶಕ್ತಿವುಂಟಾಗಲು ಕಾರಣವಾಗುತ್ತದೆ. ಈ ಉದ್ದೇಶವನ್ನು ಇಟ್ಟುಕೊಂಡು ದಲಿತ ಮಕ್ಕಳ ಮೇಲೆ ಶಾಲಾ ವಾತಾವರಣದಲ್ಲಿ ಮಾನಸಿಕ ಹಿಂಸೆಯನ್ನು ನೀಡುತ್ತ ಬಲವಾದ ಉದ್ದೇಶವನ್ನು ಇಟ್ಟುಕೊಂಡೇ ಪುರೋಹಿತಶಾಹಿಗಳು ಈ ಜಾತಿಪದ್ಧತಿಯನ್ನು ಸೃಷ್ಟಿಸಿದ್ದಾರೆ. ದಲಿತರು ವಿದ್ಯಾವಂತರಾದರೆ ಅವರು ಆರ್ಥಿಕವಾಗಿ ಸಬಲರಾಗುತ್ತಾರೆ. ಹಾಗೂ ಅವರು ವಿಚಾರವಾದಿಗಳಾಗುತ್ತಾರೆ.

ಇದರಿಂದ ನಮ್ಮ ಸಂಪ್ರದಾಯಗಳು, ಆಚಾರ ವಿಚಾರಗಳಿಗೆ ಧಕ್ಕೆವುಂಟಾಗಬಹುದೆಂಬ ಭೀತಿಯಿಂದ ದಲಿತ ಮಕ್ಕಳನ್ನು ಶಿಕ್ಷಣ ವ್ಯವಸ್ಥೆಯಿಂದ ವಂಚಿತರನ್ನಾಗಿ ಮಾಡುತ್ತಿದ್ದಾರೆ. ದಲಿತ ಶಾಲಾ ಮಕ್ಕಳಿಗೆ ಶಾಲೆಯಲ್ಲಿ ಬಲವಾಗಿ ದಂಡಿಸುವುದು, ಹೊರಗೆ ನಿಲ್ಲಿಸುವುದು, ಮುಳ್ಳಿನ ಮೇಲೆ ನಿಲ್ಲುವಂತೆ ಹೇಳುವುದು, ಶಾಲೆಯಲ್ಲಿ ನೇತು ಹಾಕುವುದು ಇವೆಲ್ಲ ದುಷ್ಟ ಚಟುವಟಿಕೆಗಳು ದಲಿತ ಮಕ್ಕಳು ಇದರಿಂದ ಹೆದರಿಕೊಂಡು ಶಾಲಾ ಆವರಣದಿಂದ ಹೊರಗುಳಿಸುವುದಕ್ಕಾಗಿ ಪುರೋಹಿತಶಾಹಿಗಳು ಮಾಡುತ್ತಿದ್ದರು. ಇದೇ ಕಾರಣದಿಂದಲೇ ಅಂದಿನ ದಿನಗಳಲ್ಲಿ ಅದೇಷ್ಟೊ ದಲಿತ ಕುಟುಂಬದ ಬಡ ಮಕ್ಕಳು ಶಾಲೆಯನ್ನು ಬಿಟ್ಟಿರುತ್ತಾರೆ. ಇದರಿಂದಾಗಿಯೇ ದಲಿತ ಕುಟುಂಬದ ಸಮುದಾಯಗಳಲ್ಲಿ ಅವಿದ್ಯಾವಂತರಾಗಿ ಹೆಚ್ಚು ಉಳಿದಿದ್ದಾರೆ.

ಎಂಬುವುದನ್ನು ಕಥೆಗಾರರು ತಮ್ಮ 'ಮನುಷ್ಯರನ್ನು ಹುಡುಕುತ್ತ' ಎಂಬ ಕಥಾ ಸಂಕಲನದಲ್ಲಿರುವ ಈ ಕಥೆಯ ಮೂಲಕ ದಲಿತರ ಸಂವೇದನೆಗಳನ್ನು ಅವರ ಭವಿಷ್ಯದ ನೋವಿನ ಸಂಗತಿಗಳನ್ನು ನಿರೂಪಿಸಿದ್ದಾರೆ. ದಲಿತ ಮಕ್ಕಳು ಶಾಲೆಯ ಶಿಕ್ಷಣವನ್ನು ಮುಕ್ತವಾಗಿ ಪಡೆದುಕೊಂಡರೆ ಮಾತ್ರ ಸಮಾಜದಲ್ಲಿ ನಿರ್ಭಯಾರಾಗಿ, ಸಬಲರಾಗಿ ಆರ್ಥಿಕ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆಂಬ ಆಶಾಭಾವವನ್ನು ಅಭಿವ್ಯಕ್ತಪಡಿಸಿದ್ದಾರೆ. ದಲಿತ ಮಕ್ಕಳು ಶಿಕ್ಷಣವನ್ನು ಪಡೆದುಕೊಂಡರೇ ಅವರ ಬೌದ್ಧಿಕ ಸಂಪತ್ತನ್ನು ದೇಶ ಸಮರ್ಪಕವಾಗಿ ಬಳಸಿಕೊಂಡರೆ ರಾಷ್ಟ್ರ ಅಭಿವೃದ್ಧಿಯನ್ನು ಕಾಣುತ್ತದೆ. ಬಂಡವಾಳಶಾಹಿಗಳು, ಹಾಗೂ ಪುರೋಹಿತಶಾಹಿಗಳು ಈ ಜಾತಿ ವ್ಯವಸ್ಥೆಯಿಂದ ದಲಿತ ಮಕ್ಕಳನ್ನು ಶೈಕ್ಷಣಿಕವಾಗಿ ವಂಚಿಸದೇ ಅವರಿಗೂ ಸಮಾನತೆಯ ಹಕ್ಕಿನಡಿಯಲ್ಲಿ ಸ್ವತಂತ್ರದ ಬದುಕು ಸಿಗಬೇಕೆಂದು ದಲಿತರು ಅನುಭವಿಸುತ್ತಿರುವ ಶೈಕ್ಷಣಿಕ ತೊಂದರೆಗಳನ್ನು ಅದರಿಂದಾಗುವ ದುಷ್ಪರಿಣಾಮಗಳನ್ನು ದಲಿತರ ಒಳನೋವುಗಳನ್ನು ಈ ಕತೆಯು ಅಂಬೇಡ್ಕರವಾದದ ನೆಲೆಯಿಂದ ಚಿತ್ರಿಸುತ್ತದೆ.

ಡಾ.ಶರಣಕುಮಾರ ಲಿಂಬಾಳೆಯವರು ಬರೆದ 'ಚುವಾಚೂತ್' ಎಂಬ ಮರಾಠಿ ಕಥಾ ಸಂಕಲನವು ಬಹು ಜನಪ್ರಿಯವಾದದ್ದು. ಇದರಲ್ಲಿ ಮೂರು ಭಾಗಗಳಿವೆ. ದಲಿತರ ಶೋಷಣೆ ಅವರ ಮೇಲಾಗುತ್ತಿರುವ ದೌರ್ಜನ್ಯ ದಬ್ಬಾಳಿಕೆ ಅವರಿಗೆ ನೀಡುತ್ತಿರುವ ದೈಹಿಕ ಮತ್ತು ಮಾನಸಿಕ ಹಿಂಸೆಗಳ ಸಂಗತಿಗಳನ್ನು ತಮ್ಮದೆಯಾದ ರೀತಿಯಲ್ಲಿ ಲೇಖಕರು ಹಿಡಿದಿಟ್ಟಿದ್ದಾರೆ. ಈ ಕಥಾ ಸಂಕಲನವನ್ನು ಕನ್ನಡದ ಜಾಯಮಾನಕ್ಕೆ ಒಗ್ಗುವ ಹಾಗೆ ಅನುವಾದಿಸಿ ಡಾ.ಪ್ರಮೀಳಾ ಮಾಧವ್‌ರವರು 'ಅಸ್ಪೃಶ್ಯ' ಎಂಬ ಹೆಸರಿನಲ್ಲಿ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಬರುವ 'ಹರಿಜನ' ಎಂಬ ಕಥೆಯು ಬ್ರಾಹ್ಮಣಶಾಹಿಗಳು ಮಾಡುವ ಜಾತಿಯತೆಯನ್ನು ಕುರಿತು ವಿವರಿಸುತ್ತದೆ. ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ಬೆಳೆಯುತ್ತಿರುವ ಮಕ್ಕಳಲ್ಲಿ ಯಾವುದೇ ಭೇದಭಾವ ಹುಟ್ಟಿಸಬಾರದು. ಊರಶಾಲಾ ಮಕ್ಕಳಿಗೆ ಕುಲಕರ್ಣಿ ಮಾಸ್ತರರು ಕಲಿಸುತ್ತಿದ್ದರು. ಪಟೇಲರ ಮಕ್ಕಳಿಗೆ ಮಾತ್ರ ವಿಶೇಷ ಗಮನಕೊಟ್ಟು ಬೋಧನೆಯನ್ನು ಮಾಡುತ್ತಿದ್ದರು.

ಅವರ ಮನೆಗೆ ಹೋಗಿ ಪಟೇಲರ ಮಕ್ಕಳಿಗೆ ಶಿಕ್ಷಣವನ್ನು ನೀಡುತ್ತಿದ್ದರು. ಆ ಕುಲಕರ್ಣಿ ಮಾಸ್ತರರಿಗೆ ಪಟೇಲರ ಮನೆಯಲ್ಲಿ ತುಂಬಾ ಗೌರವ ಸಿಗುತ್ತಿತ್ತು. ಯಜಮಾನತಿ ಬಿಡುವಿನ ವೇಳೆ ಕುಡಿಯಲು ಹಾಲು ಕೊಡುತ್ತಿದ್ದಳು. ಮನೆಗೆ ಹೋಗುವಾಗ ತರಕಾರಿಗಳನ್ನು ಕೊಟ್ಟು ಕಳಿಸುತ್ತಿದ್ದರು. ಹಾಗೆ ಪಟೇಲರ ಮಕ್ಕಳು ಕುಲಕರ್ಣಿ ಮಾಸ್ತರ ಮನೆಗೆ ಹೋಗಿ ಮನೆಯ ಕೆಲಸದಲ್ಲಿ ಭಾಗಿಯಾಗುತ್ತಿದ್ದರು. ಆ ಊರಿನ ಶಾಲೆ ಮಸೀದಿಯಲ್ಲಿ ನಡೆಯುತ್ತಿತ್ತು. ಹೀಗಾಗಿ ಮೊಹರಮ್ ಸಮಯದಲ್ಲಿ ಶಾಲೆಗೆ ರಜೆಯನ್ನು ನೀಡದೆ ಇದು ಶಾಲೆ ಮಸೀದಿಯಲ್ಲಿ ಮೊಹರಮ್ ನಡೆಸಬಾರೆಂದು ಊರಿನ ತುಂಬಾ ಜಗಳವನ್ನು ಸೃಷ್ಟಿ ಮಾಡಿದ ಕುಲಕರ್ಣಿ ಮಾಸ್ತರ. ಊರಿನ ಜನರು ಕೋರ್ಟು ಕಛೇರಿಗೆ ಅಲೆಯಲು ಪ್ರಾರಂಭ ಮಾಡಿದರು. ಕುಲಕರ್ಣಿ ಮಾಸ್ತರ ನಾಪತ್ತೆಯಾಗಿ ತನ್ನ ವರ್ಗಾವಣೆಯನ್ನು ಬೇರೆ ಊರಿಗೆ ಮಾಡಿಸಿಕೊಳ್ಳುತ್ತಾನೆ. ಇಲ್ಲಿಂದಲೇ ನಿಜವಾದ ಕಥೆ ಆರಂಭವಾಗುತ್ತದೆ. ಕೋಂಡ್ಯಾ ಮಹಾರ ಪಟೇಲರ ಮನೆಯಲ್ಲಿ ಕೆಲಸದ ಆಳು.

ಆತನೆ ಆ ಮನೆಯ ಎಲ್ಲಾ ಕೊಳಕು ಕೆಲಸವನ್ನು ಮಾಡುವಾತ. ಆತನಿಗೆ ಮನೆಯ ಮೆಟ್ಟಿಲುಗಳವರೆಗೆ ಮಾತ್ರ ಪ್ರವೇಶವಿತ್ತು. ತುಂಬಾ ಪ್ರಾಮಾಣಿಕ ವ್ಯಕ್ತಿಯಾಗಿದ್ದನು. ಊರಿನ ಹೊರಗೆ ಮಾಹಾರಕೇರಿ ಇರುತ್ತದೆ. ಅಲ್ಲಿಯೇ ಆತನ ವಾಸ, ಅಲ್ಲಿನ ಜನ ಪ್ರತಿದಿನ ಬೆಳಿಗ್ಗೆ ಎದ್ದು 'ಜೋಗತಿ' ಬೇಡಲು, ಭಿಕ್ಷೆ ಬೇಡಲು ಹೊರಗೆ ಹೋಗುತ್ತಾರೆ. ಮುಖಕ್ಕೆ ಕುಂಕುಮ ಬಳಿದುಕೊಂಡು 'ಪೋತರಾಜ'ನಾಗಿ ಹೋಗುತ್ತಾರೆ. ಸತ್ತ ಜಾನವಾರುಗಳನ್ನು ಕುಯ್ದು ತಿನ್ನುತ್ತಾರೆ. ಇಂತಹ ಮಹಾರಕೇರಿಯಲ್ಲೊಬ್ಬನಾದ ಕೋಂಡ್ಯಾ ಮಹಾರ ಪಟೇಲರ ಮುಂದೆ ತಲೆಯೆತ್ತಿನಿಲ್ಲದೆ ಹೇಳಿದ್ದನ್ನು ತಪ್ಪದೆ ಎಲ್ಲಾ ಕೆಲಸವನ್ನು ಮಾಡುತ್ತಾನೆ. ಬಡತನದ ಹಸಿವು ಶಾಸ್ತ್ರ ಸಂಪ್ರದಾಯಿಗಳವರಿಂದ ದಲಿತರು ಗುಲಾಮರಾಗಿ ಬದುಕಬೇಕಾಗಿದೆ. ಇಲ್ಲಿ ಪಟೇಲರ ಮಗನೇ ಈ ಕಥೆಯ ನಿರೂಪಕನಾಗಿದ್ದಾನೆ. ಆವನ ಮಾತಿನಲ್ಲಿ "ನಮ್ಮ ಮನೆಯಲ್ಲಿ ಎರಡು ಪ್ರಾಮಾಣಿಕ ಪ್ರಾಣಿಗಳಿದ್ದವು. ಒಂದು ಕೋಂಡ್ಯಾ

ಮಹಾರ. ಇನ್ನೊಂದು ನಮ್ಮ ಮನೆಯ ನಾಯಿ. ತಿನ್ನುವ ಅನ್ನಕ್ಕೆ ಪ್ರತಿಯಾಗಿ ತುಂಬಾ ನಿಷ್ಠೆಯನ್ನು ತೋರಿಸುತ್ತಿದ್ದವು. ಕೋಂಡ್ಯಾನಿಗಿಂತ ಹೆಚ್ಚಾಗಿ ನಾವು ನಾಯಿಯನ್ನು ಪ್ರೀತಿಸುತ್ತಿದ್ದೆವು. ನಾಯಿ ಯಾದರೋ ಮನೆಯಿಡೀ ಓಡಾಡುತ್ತಿತ್ತು.

ಆದರೆ ಕೋಂಡ್ಯಾನಿಗೆ ಮನೆಯ ಮೆಟ್ಟಿಲುಗಳ ವರೆಗೆ ಮಾತ್ರ ಪ್ರವೇಶವಿತ್ತು. ನಾವು ನಾಯಿಯನ್ನು ಹೆಗಲ ಮೇಲಿಟ್ಟು ಅದರ ಜತೆ ಆಟವಾಡುತ್ತಿದ್ದವು. ಆದರೆ ಕೋಂಡ್ಯಾನನ್ನು ನಾವು ಯಾವಾಗಲೂ ದೂರವೇ ಇಡುತ್ತಿದ್ದೆವು"[೧೬] ಒಂದು ನಾಯಿಯನ್ನು ಪ್ರೀತಿಸುವ ಪುರೋಹಿತಶಾಹಿಗಳು ಒಬ್ಬ ಮಹಾರ ಜಾತಿಯ ವ್ಯಕ್ತಿಯನ್ನು ಪ್ರೀತಿಸುವುದಿಲ್ಲವೆಂದರೆ ಅವರು ಮನುಷ್ಯರಾದರು ಹೇಗೆ...? ಮನುಷ್ಯನನ್ನು ಮನುಷ್ಯನಂತೆ ಕಾಣದೆ ಆರ್ಥಿಕವಾಗಿ ಶೋಷಣೆ ಮಾಡಿ, ಅವರನ್ನು ಬಡವರನ್ನಾಗಿ ಮಾಡಿ ಗುಲಾಮರಂತೆ ನಡೆಸಿಕೊಳ್ಳುತ್ತಿರುವುದು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ಮಾಡುವ ವಂಚನೆಯಾಗಿದೆ. ಅವರ ಮನೆಯ ಕೆಲಸಕ್ಕಾಗಿ ದಲಿತರು ಬೇಕು. ಆದರೆ ಒಬ್ಬ ಮನುಷ್ಯರಾಗಿ ಮೇಲ್ವರ್ಗದವರಿಗೆ ದೀನ ದಲಿತರು ಬೇಕಾಗುವುದಿಲ್ಲ. ಇದು ಮನುಕುಲದ ಶೋಷಣೆಯ ಕನ್ನಡಿಯಾಗಿದೆ. ಕೋಂಡ್ಯಾ ಮಹಾರನಿಗೆ ಪಟೇಲರು ಮಾಡುತ್ತಿರುವ ಮಾನಸಿಕ ಮತ್ತು ದೈಹಿಕ ಹಿಂಸೆಯಾಗಿದೆ.

ಕುಲಕರ್ಣಿ ಮಾಸ್ತರನು ವರ್ಗಾವಣೆಯಾದ ನಂತರ ಆ ಊರಿಗೆ 'ಹರಿಜನ' ಅಧ್ಯಾಪಕರು ಬರುತ್ತಾರೆ. ಅವರನ್ನು ಕೋಂಡ್ಯಾ ಮಹಾರ ತಮ್ಮ ಕುಲದ ಅಧ್ಯಾಪಕರೆಂದು ಪಟೇಲರ ಮನೆಗೆ ಕರೆತರುತ್ತಾನೆ. ಅಧ್ಯಾಪಕರು ಕೋಂಡ್ಯಾ ನಿಲ್ಲುವ ಜಾಗದಲ್ಲಿ ತಲೆತಗ್ಗಿಸಿಕೊಂಡು ಪಟೇಲರ ಮುಂದೆ ನಾಯಿ ಬಾಲವನ್ನು ಆಡಿಸಿದಂತೆ ತಲೆಯನ್ನು ಅಲ್ಲಾಡಿಸುತ್ತಾ ನಿಂತುಕೊಳ್ಳುತ್ತಾನೆ. ಈ ಮೊದಲು ಕುಲಕರ್ಣಿ ಮಾಸ್ತರರಿಗೆ ಕೊಡುತ್ತಿದ್ದ ಗೌರ ಸತ್ಕಾರವನ್ನು ಹರಿಜನ ಅಧ್ಯಾಪಕರಿಗೆ ಪಟೇಲರ ಮನೆಯವರು ನೀಡುವುದಿಲ್ಲ. ಕುಡಿಯಲು ನೀರನ್ನು ಸಹ ಕೋಡುವುದಿಲ್ಲ. ಅಧ್ಯಾಪಕನಾದರೇನು ಅವನು ಹರಿಜನ ಕುಲದವನು ಎಂದು ತಿರಸ್ಕಾರ ಭಾವದಿಂದ ಕಾಣುತ್ತಾರೆ. ಶಾಲೆಯ ಮಕ್ಕಳಿಗೆ ಗದರಿಸಿದೆ ಪಾಠ ಮಾಡಬೇಕಾಗಿತ್ತು.

ಹರಿಜನ ಅಧ್ಯಾಪಕನೆನ್ನುವ ಕಾರಣಕ್ಕಾಗಿ ಶಾಲೆಗೆ ಬರುವ ಮಕ್ಕಳ ಸಂಖ್ಯೆ ಕಡಿಮೆಯಾದನ್ನು ಗಮನಿಸಿಕೊಂಡು ಅಧ್ಯಾಪಕರು ಆ ಊರ ಬಿಟ್ಟು ವರ್ಗಾವಣೆ ಮಾಡಿಸಿಕೊಳ್ಳುತ್ತಿರುವುದನ್ನು ತಿಳಿದು, ಪಟೇಲರ ಮನೆಯವರು ಕೋಂಡ್ಯಾ ಮಹಾರನಿಗೆ ಹಳಸಿದ ಅನ್ನವನ್ನು ನೀಡುತ್ತ 'ಪಾಪ ಹರಿಜನ ಮಾಸ್ತರ' ಅನ್ನುವುದು ಜಾತಿ ನಿಂದನೆಯನ್ನು ಎತ್ತಿ ತೋರಿಸುತ್ತದೆ. ಒಂದು ಕಡೆ ಏನೂ ಅಕ್ಷರ ಕಲಿಕೆಯಿಲ್ಲದ ಕೋಂಡ್ಯಾ ಮಹಾರನನ್ನು ಗುಲಾಮನಂತೆ ಕಾಣುವ ಪಟೇಲರು ಅಕ್ಷರ ಕಲಿತ ಅಧ್ಯಾಪಕರನ್ನು ಹರಿಜನ ಅನ್ನುವ ಕಾರಣಕ್ಕಾಗಿ ಗೌರವ ನೀಡಿದಿರುವುದು ಮೇಲ್ವರ್ಗದವರು ದಲಿತರಿಗೆ ಮಾಡುವ ಅಸ್ಪೃಶ್ಯತೆಯನ್ನು ಒತ್ತಿ ಹೇಳುತ್ತದೆ. ಪುರೋಹಿತಶಾಹಿಗಳು ಮಾಡಿದ ವರ್ಣವ್ಯವಸ್ಥೆಯು ಇಡೀ ಮಾನವ ಸಮಾಜವನ್ನೇ ತುಂಡರಿಸಿ ಅಸಮಾನತೆಯಿಂದ ತೊಳಲಾಡುವಂತೆ ಮಾಡಿದೆ. ಮನುಷ್ಯತ್ವವನ್ನೇ ಮರೆತು ಮನುಷ್ಯರನ್ನೇ ಪ್ರೀತಿಸಲಾಗದ ಮನುಷ್ಯರು ಸಮಾಜವನ್ನು ಅಶಾಂತಿಯಿಂದ ತಾಂಡವವಾಡುವಂತೆ ಮಾಡಿರುವುದು ಮನುಷ್ಯ ಕೇಂದ್ರಿತ ದಲಿತರ ಶೋಷಣೆಯಾಗಿದೆ.

ಈ ಕಥೆಯ ಹೆಸರಿನಲ್ಲಿಯೇ ಜಾತಿ ವ್ಯವಸ್ಥೆಯನ್ನು ಕುರಿತು ಹರಿಜನ ಕಥೆಯು ತನ್ನ ವಿಸ್ತಾರವನ್ನು ವಿಶದೀಕರಿಸುತ್ತ ಪುರೋಹಿತಶಾಹಿಗಳು ಜಾರಿಗೆ ತಂದಿರುವ ವರ್ಣವ್ಯವಸ್ಥೆಯಿಂದ ಮಾನವಕುಲ ಅನೇಕ ಕುಲಗಳೆಂಬಂತೆ ಸಮಾಜದಲ್ಲಿ ಭೇದವನ್ನು ಸೃಷ್ಟಿಸಿ, ಜನರು ಮಾನಸಿಕವಾಗಿ ಒಬ್ಬರು ಶ್ರೇಷ್ಠ ಕುಲದವರು ಮತ್ತೊಬ್ಬರು ಕನಿಷ್ಠ ಕುಲದವರು ಎಂದು ಸಾಮಾಜಿಕ ಅಸಮಾನತೆಯಲ್ಲಿ ಬದುಕನ್ನು ನಡೆಸುತ್ತಿದ್ದಾರೆ. ಎಲ್ಲರು ಹಸಿದಾಗ ಉಣ್ಣುವುದು ಒಂದೇ ಅನ್ನ. ವಿಶ್ರಾಂತಿಗಾಗಿ ಮಾಡುವುದು ಒಂದೇ ನಿದ್ದೆ. ಯಾರು ಮತ್ತೊಬ್ಬರಿಂದ ಭಿನ್ನವಾಗಿಲ್ಲ, ಎಲ್ಲರೂ ಎಲ್ಲರಂತೆ ಬಂದವರು ಆದರೆ ಬದುಕುತ್ತಿರುವಾಗ ಮಾತ್ರ ನಾವುಬೇರೆಂದು ಬದುಕುತ್ತಿರುವುದು ಪುರೋಹಿತಶಾಹಿಗಳು ಮಾಡಿ ಹೋದ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ. ಈ ಕಥೆಯಲ್ಲಿರುವ ಮಹಾರ ಜಾತಿ 'ಕೋಂಡ್ಯಾ' ಪಟೇಲ್‌ರ ಮನೆಯಲ್ಲಿ ತಲೆ ತಗ್ಗಿಸಿಕೊಂಡು ನಾಯಿಯಂತೆ ಬದುಕುತ್ತಿದ್ದಾನೆ. ಅವರು ಹೇಳುವ ಎಲ್ಲ ಮನೆ ಕೆಲಸಗಳನ್ನು ಮಾಡುತ್ತಿದ್ದಾನೆ. ತನ್ನ ಬಡತನದ ಹಸಿವನ್ನು ನೀಗಿಸುವುದಕ್ಕಾಗಿ ಹಗಳಿರುಳು ಶ್ರಮವಹಿಸಿ ನಂಬಿಕೆಯಿಂದ ಮನೆಯ ಆಳಾಗಿ ದುಡಿಯುತ್ತಿದ್ದಾನೆ.

ಆದರೆ ಅವನನ್ನು ಪಟೇಲ್‌ರು ಯಾವತ್ತು ಮನೆಯ ಒಳಗೆ ಪ್ರವೇಶ ನೀಡದಿರುವುದಕ್ಕೆ ಮತ್ತೆ ಯಾವಾಗಲೂ ತಿನ್ನುವುದಕ್ಕಾಗಿ ತಂಗಳ ಅಥವಾ ಹಳಸಿದ ಅನ್ನದಿಂದ ಊಟಕ್ಕೆ ಹಾಕುತ್ತಿರುವುದು ಕೋಂಡ್ಯಾನನ್ನು ತಮ್ಮಂತೆ ಒಬ್ಬ ಮನುಷ್ಯನೆಂದು ಭಾವಿಸದೆ ಇರುವುದು ಪುರೋಹಿತಶಾಹಿಗಳು ಮಾಡಿದ ಜಾತಿ ಪದ್ಧತಿಯು ಕಾರಣವಾಗಿದೆ. ಇದರಿಂದ ದಲಿತ ಕೋಂಡ್ಯಾ ಮಹಾರ ಜಾತಿಯವನು ಎನ್ನುವ ಕಾರಣಕ್ಕಾಗಿ ತಮ್ಮ ಮನೆಯಲ್ಲಿ ನಾಯಿಗೆ ತೋರಿಸುವ ಪ್ರೇಮವನ್ನು ಆತನ ಮೇಲೆ ತೋರಿಸುತ್ತಿಲ್ಲವೆಂದರೆ ಈ ಜಾತಿ ವ್ಯವಸ್ಥೆಯಿಂದ ದಲಿತರು ಯಾವ ರೀತಿಯ ಅವಮಾನದಿಂದ ಹೀನಾಯವಾಗಿ, ಅಸಹಾಯಕರಾಗಿ ಬದುಕುತ್ತಿದ್ದಾರೆ ಎಂಬುವುದಕ್ಕೆ ಈ ದೃಶ್ಯವೇ ಸಾಕ್ಷಿಯಾಗಿರುತ್ತದೆ. ಅದರಂತೆ ಪಟೇಲರ ಮನೆಗೆ ಬಂದ ಮಹಾರ್ ಜಾತಿಯ ಅಧ್ಯಾಪಕರಿಗೆ ಯಾವ ಗೌರವವನ್ನು ಕೊಡದೆ ನಿಲ್ಲಿಸಿಕೊಂಡು ಪಟೇಲ್‌ರು ಮಾಡುವ ಅವಮಾನವು ಬಂಡವಾಳಶಾಹಿಗಳು ದಲಿತರ ಮೇಲೆ ಮಾಡುತ್ತಿರುವ ದೌರ್ಜನ್ಯವನ್ನು ವ್ಯಕ್ತಪಡಿಸುತ್ತದೆ.

ಶಿಕ್ಷಣವನ್ನು ಕಲಿತು ನಾಳೆ ದೇಶದ ಭವಿಷ್ಯವನ್ನು ಕಟ್ಟಬೇಕಾದ ಮಕ್ಕಳು ಸಹ ಮಹಾರ್ ಜಾತಿಯವರು ಅಧ್ಯಾಪಕರೆಂದು ಶಾಲೆಗೆ ಬರದೆ ಇರುವುದು ಅವರಲ್ಲಿರುವ ಮನೆತನದ ಬಂಡವಾಳದ ದರ್ಪ ಮತ್ತು ಜಾತಿ ಹೆಸರಿನಲ್ಲಿ ನಡೆಯುತ್ತಿರುವ ಮನುಷ್ಯರ ಸಾಮಾಜಿಕ ಶೋಷಣೆಯು ಅಭಿವ್ಯಕ್ತವಾಗುತ್ತದೆ. ಶಿಕ್ಷಣವನ್ನು ಪಡೆಯಲಾರದವನಾದ ಕೋಂಡ್ಯಾ ಮತ್ತು ಶಿಕ್ಷಣವನ್ನು ಪಡೆದುಕೊಂಡ ಅಧ್ಯಾಪಕರು ಇಬ್ಬರೂ ಜಾತಿ ವ್ಯವಸ್ಥೆಯಿಂದಾಗಿ ಪಟೇಲ ಮನೆತನದಿಂದ ಅವಮಾನಕ್ಕೆ ಬಳಗಾಗುತ್ತಿದ್ದಾರೆ. ಇದು ದಲಿತರ ಮೇಲೆ ಬಂಡವಾಳಶಾಹಿಗಳು ಮಾಡುತ್ತಿರುವ ನಿರಂತರದ ಸಾಮಾಜಿಕ ಶೋಷಣೆಯಾಗಿದೆ.

ದಲಿತರ ಆರ್ಥಿಕ ಅಸಹಾಯಕತೆಯನ್ನು ಅವರೆ ಸೃಷ್ಟಿಸಿ ದಲಿತರ ಬದುಕನ್ನು ಅತಂತ್ರ ಮಾಡಿ ಸದಾ ತಮ್ಮ ಗುಲಾಮಗಿರಿಯಲ್ಲಿ ಬಿದ್ದುಕೊಂಡಿರುವಂತೆ ಮಾಡಿದ್ದಾರೆ ಎಂಬುವುದನ್ನು

ಕಥೆಗಾರರು ಈ ಕಥೆಯ ಮೂಲಕ, ದಲಿತರಿಗೆ ಆಗಿರುವ ಸಾಮಾಜಿಕ ಶೋಷಣೆಯನ್ನು ಮತ್ತು ಸಂವಿಧಾನಿಕವಾಗಿ ನೀಡಿರುವ ಮೂಲಭೂತ ಹಕ್ಕುಗಳಿಂದ ವಂಚಿತರಾಗಿ ಅವಮಾನಗಳನ್ನು ಉಂಡುಕೊಂಡು, ಅಸಹಾಯಕ ಸ್ಥಿತಿಯಲ್ಲಿ ಬದುಕುತ್ತಿರುವ ಪರಿಸ್ಥಿತಿಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ಗ್ರಹಿಸಿಕೊಂಡು ದಲಿತರ ನೋವುಗಳನ್ನು ಅಭಿವ್ಯಕ್ತಪಡಿಸಿದ್ದಾರೆ.ಕೋಂಡ್ಯಾವ ಗುಲಾಮಗಿರಿಯ ಬದುಕು ಕೊನೆಯಾಗಿ ಪಟೇಲ್‌ರಂತಹ ಬಂಡವಾಳಶಾಹಿಗಳ ದರ್ಪ ನಿಂತು ಸಾಮಾಜಿಕ ಸಮಾನತೆವುಂಟಾಗಲು ಈ ಜಾತಿ ವ್ಯವಸ್ಥೆ ನಿರ್ಮೂಲನೆಯಾಗಬೇಕೆಂದು ಕಥೆಗಾರರು ಪುರೋಹಿತಶಾಹಿಗಳು ಮಾಡಿರುವ ಈ ಜಾತಿ ವ್ಯವಸ್ಥೆಯನ್ನು ಖಂಡಿಸುತ್ತ ದಲಿತರ ವೇದನೆಗಳನ್ನು ಅಂಬೇಡ್ಕರವಾದದ ನೆಲೆಯಲ್ಲಿ ಈ ಕಥೆಯ ಮೂಲಕ ಅನಾವರಣಗೊಳಿಸಿದ್ದಾರೆ.

**೩.೫. ದೇಶ ಮತ್ತು ಬಡತನವನ್ನು ಬಾಧಿಸುವ ಅಸಮಾನತೆ**

ಶ್ರೀಮತಿ ಜಯಲಿತರವರು ಸಂಪಾದನೆ ಮತ್ತು ಅನುವಾದ ಮಾಡಿದಂತಹ 'ಬಾಗಿಲು' (ಈ ಹೊತ್ತಿನ ತಮಿಳು ಕಥೆಗಳು) ಎಂಬ ಕಥಾ ಸಂಕಲನದಲ್ಲಿ ದೇವಿ ಭಾರತಿಯವರು ಬರೆದಂತ 'ಬಲಿ'ಯೆಂಬ ಕಥೆಯಲ್ಲಿ ಬ್ರಾಹ್ಮಣ ಹುಡುಗಿಯೊಬ್ಬಳು ಅವಳ ದುರ್ದೈವದ ಫಲದಿಂದಲೋ ವೇಶ್ಯೆಯಾದ ಕಥೆಯನ್ನು ಒಳಗೊಂಡಿದ್ದರೂ, ಅದರಲ್ಲಿ ತಲತಲಾಂತರಗಳಿಂದ ದಲಿತರ ಕೇರಿಯಲ್ಲಿನ ದಲಿತ ಸಮುದಾಯದ ಸಂವೇದನೆಗಳೇ ಹೆಚ್ಚು. ಲೇಖಕಿ ದೇವಿ ಭಾರತೀಯವರು ಈ ಕಥೆಯ ಮೂಲಕ ಅವುಗಳನ್ನು ಹೊರ ತಂದಿದ್ದಾರೆ. ದಲಿತ ಯುವಕನೊಬ್ಬ ತನ್ನ ಒಳನೋವಿನ ಸೇಡುಗಳನ್ನು ಆಕಸ್ಮಿಕವಾಗಿ ಒಬ್ಬ ಬ್ರಾಹ್ಮಣ ಹುಡುಗಿ ವೇಶ್ಯೆಯಾಗಿ ನಾಲ್ಕು ಗೋಡೆಗಳ ಕೋಣೆಯಲ್ಲಿ ಸಿಕ್ಕಾಗ, ಅವಳ ಪೂರ್ವಿಕರು ತನ್ನನ್ನು ತನ್ನ ಪೂರ್ವಜರನ್ನು ಹೇಗೆ ನೋಡುತ್ತಿದ್ದರು, ಅವರು ನಮಗಾಗಿ ಮಾಡಿದ ನೀತಿ ನಿಯಮಗಳ ಶಾಸ್ತ್ರಗಳು ನಮ್ಮ ಬದುಕನ್ನು ನಮ್ಮ ಮನದ ಮಾನಾಭಿಮಾನವನ್ನು ಹೇಗೆ ದಂಡಿಸಿವೆ, ಅದರಿಂದ ನನ್ನವರ ಸ್ಥಿತಿ ಏನಾಗಿದೆ, ಅವುಗಳನ್ನೆಲ್ಲ ನಿನ್ನ ಮೇಲೆ ಪ್ರತಿಕಾರದಿಂದ ತೀರಿಸಿಕೊಳ್ಳಲೇ ಎಂಬ ಉದ್ವೇಗದಲ್ಲಿರುವ ದಲಿತ ಯುವಕ, ತನ್ನವರು ಪಟ್ಟ ಮನೋಯಾತನೆಗಳನ್ನು ಈ 'ಬಲಿ' ಕತೆಯ ಮೂಲಕ ಹೇಳಿದ್ದಾರೆ. ಇಲ್ಲಿ ನಿಜವಾಗಿ ಬಲಿಯಾಗಿರುವುದು ಯಾರು...? ಅಲ್ಲಿ ಸಿಕ್ಕ ಬ್ರಾಹ್ಮಣ ಹುಡುಗಿಯೆ...?.

ಇಲ್ಲವೇ ಅವಳ ಸಮುದಾಯದಿಂದ ಬಲಿಯಾದಂತ ದಲಿತರೇ...? ಎಂಬುದನ್ನು ಪ್ರಶ್ನಿಸುತ್ತಾ ದಲಿತ ಸಂವೇದನೆಗಳ ನೆಲೆಯಲ್ಲಿ ಈ ಕತೆಯ ತುಂಬೆಲ್ಲಾ ದೇವಿ ಭಾರತಿಯವರು ದಲಿತರ ಬಲಿಯ ನೋವುಗಳನ್ನೇ ಅತೀ ಹೆಚ್ಚು ಕಥಾ ಹಂದರದ ಮೂಲಕ ಪ್ರತಿಬಿಂಬಿಸಿದ್ದಾರೆ. ಇದು ಒಬ್ಬ ದಲಿತ ಯುವಕನೊಬ್ಬನ ಸಂವೇದನೆಯಾಗಿರದೆ ದೇವಿ ಭಾರತಿಯವರು ಇಡೀ ದಲಿತ ದಮನಿತರ ವಾಸ್ತವ ಸ್ಥಿತಿಗಳನ್ನು ತಿಳಿಸಿಕೊಟ್ಟಿದ್ದಾರೆ. ಅಸಹಾಯಕರ ಮೇಲೆ ನಡೆಸಿದ ದೌರ್ಜನ್ಯ ಅದೇ ಅಸಹಾಯಕ ಸ್ಥಿತಿಯಲ್ಲಿ ಸಿಕ್ಕ ಬ್ರಾಹ್ಮಣ ಹುಡುಗಿಯ ಮೇಲೆ ಮಾಡಿದರೆ ಹೇಗೆ ಇದೊಂದು ಕೇವಲ ಸೇಡು ಆಗಿರದೆ ಕಾಲವು ಎಲ್ಲರನ್ನೂ ಅಸಹಾಯಕರನ್ನಾಗಿ ಯಾವತ್ತೋ ಒಂದು ದಿನ ಮಾಡುತ್ತದೆ.

ಆಗ ಆ ಸಂದರ್ಭದಲ್ಲಿ ಸಿಕ್ಕ ಅವಕಾಶವನ್ನು ಸೇಡನ್ನಾಗಿ ಬಳಸಿಕೊಳ್ಳದೆ ದಲಿತ ಯುವಕ ತನ್ನವರ ಸಂವೇದನೆಗಳನ್ನು ಒಬ್ಬ ಅಸಹಾಯಕ ಬ್ರಾಹ್ಮಣ ಹುಡುಗಿಯೊಬ್ಬಳಿಗೆ ಹೇಳದೆ ಇಡೀ ಬ್ರಾಹ್ಮಣತ್ವದ ಸಮುದಾಯಕ್ಕೆ ಅರ್ಥೈಸುತ್ತಿದ್ದಾನೆ.

ಆತನ ಮಾತಿನಲ್ಲಿ "ನಮ್ಮ ಉಸಿರು ಸಹ ಸೋಕಬಾರದೆಂದು ನೀವು ಭಾವಿಸಿದ್ದೀರಿ. ಸತ್ತ ಎತ್ತಿನ ಮಾಂಸವನ್ನು ತಿನ್ನುವ ನಮ್ಮ ಎಂಜಲು ಭೂಮಿಗೆ ತಾಕಿದರೆ ಮೈಲಿಗೆಯಾಗುತ್ತದೆಂದು ನಿಮ್ಮ ಶಾಸ್ತ್ರಗಳಲ್ಲಿ ಹೇಳಿರುವುದರಿಂದ ನಾವು ಕುತ್ತಿಗೆಗೆ ಮಣ್ಣಿನ ಮಡಿಕೆಗಳನ್ನು ತೂಗುಹಾಕಿಕೊಂಡು ನಡೆದದ್ದು, ಆ ಗುಲಾಮತನದ ಸಂಕೇತವನ್ನು ಭೀಕ್ಷಾ ಪಾತ್ರೆಯ ಹಾಗೆ ಹೊತ್ತು ತಿರುಗಿದ್ದು, ವನ್ಯ ಪಶುಗಳಂತೆ ಬದುಕಿದ ಆ ದಿನಗಳ ಬಗ್ಗೆ ನನ್ನ ತಾತ ಸಾಕಷ್ಟು ಹೇಳಿದ್ದಾರೆ.ಆ ಶಾಸ್ತ್ರಗಳೆಲ್ಲಾ ನಿಮ್ಮ ಪೂರ್ವಜರಿಂದ ಬರೆಯಲ್ಪಟ್ಟಿದ್ದು."[೧೭] ಎಂದು ದಲಿತೊಡಲಿನ ನೋವುಗಳನ್ನು ಅವಳಲ್ಲಿ ತೋಡಿಕೊಂಡಿದ್ದು ಒಂದು ಶೋಷಿತ ಸಮುದಾಯ ಶೋಷಣೆಗೆ ಒಳಪಡಿಸಿದ ಸಮುದಾಯಕ್ಕೆ ನಿಮ್ಮ ಶಾಸ್ತ್ರಗಳನ್ನು ಧಿಕ್ಕರಿಸಿ ನಿಮ್ಮಲ್ಲಿರುವ ಕೊಳಕು ಆಚಾರ ವಿಚಾರದ ಸಂಪ್ರದಾಯಗಳನ್ನು ಕೊನೆಯಾಗಿಸಿ, ದಲಿತರನ್ನು ನಿಮ್ಮಂತೆ ಅವರು ಮಾನವರೆ ಎಂದು ತಿಳಿದುಕೊಳ್ಳಬೇಕು.

ಒಬ್ಬ ಮಾನವ ಮತ್ತೊಬ್ಬ ಮಾನವನ್ನು ಮಾನವನಂತೆ ಕಾಣದಿದ್ದರೆ 'ಮಾನವ' ಹೇಗೆ ಆಗುತ್ತಾನೆ ಎಂಬ ದಲಿತ ಸಂವೇದನೆಗಳನ್ನು ಈ ಕತೆಯ ಮೂಲಕ ದೇವಿ ಭಾರತಿಯವರು ತುಂಬಾ ಅರ್ಥವತ್ತಾಗಿ ಅರ್ಥೈಸಿಕೊಟ್ಟಿದ್ದಾರೆ. ದಲಿತರ ಉಸಿರು ತಾಕಿ ಅವರ ಎಂಜಲಿನಿಂದ ಮೈಲಿಗೆಯಾಗುತ್ತದೆ ಎಂಬ ಕೆಟ್ಟ ಶಾಸ್ತ್ರ ಸಂಪ್ರದಾಯಗಳಿಂದ ಮಣ್ಣಿನ ಕುಡಿಕೆಯನ್ನು ಕುತ್ತಿಗೆಗೆ ಕಟ್ಟಿಕೊಂಡು ನಡೆದಾಡಬೇಕೆಂಬುದು ಅಜ್ಞಾನದ ಪರಮಾವಧಿಯಲ್ಲಿರುವ ಬ್ರಾಹ್ಮಣರ ಶಾಸ್ತ್ರಗಳು ದಲಿತರ ಮೇಲೆ ನಡೆಸುವ ದಂಗೆಗಳೇ ಆಗಿವೆ. ಇದಕ್ಕೆ ನೊಂದು ಬೆಂದು ತಮ್ಮ ಬದುಕನ್ನೇ ದಂಡಿಸಿಕೊಂಡ ದಲಿತರು ಸೇಡಿನ ಮೂಲಕ ದಂಗೆ ಎದ್ದರೆ ಮುಂದೆ ನಡೆಯಬಹುದಾದ ಅನಾಹುತಗಳನ್ನು ಈ ಕಥೆಯ ಮೂಲಕ ದೇವಿ ಭಾರತಿಯವರು ಎಚ್ಚರಿಸಿದ್ದಾರೆ. ಎಲ್ಲರಿಗೂ ಅವರದೆಯಾದ ಸ್ಥಾನ ಮಾನ ಗೌರವ ಸ್ವಾಭಿಮಾನಗಳಿವೆ. ಅವುಗಳನ್ನು ನಿಂದಿಸಬಾರದು ಅವುಗಳನ್ನೇ ದಂಡಿಸಿದರೆ ಮುಂದೊಂದು ದಿನ ಸಂದರ್ಭ ದುರಂತವನ್ನು ತಂದೇ ತರುತ್ತದೆ. ಎಂಬುದನ್ನು ಬ್ರಾಹ್ಮಣ ಹುಡುಗಿ ವೇಶ್ಯೆಯಾದ ಸಂದರ್ಭದ ಹಿನ್ನೆಲೆಯಲ್ಲಿ 'ಬಲಿ' ಕಥೆಯು ತಿಳಿಸಿಕೊಡುತ್ತದೆ.

ಗುಲಾಮತನವನ್ನು ಧಿಕ್ಕರಿಸುವ ಧ್ವನಿಯು ದಲಿತ ಯುವಕನ ಒಡಲ ಕಿಚ್ಚಿನಲ್ಲಿ ತುಂಬಿಕೊಂಡಿದೆ. ಶೋಷಣೆಗೆ ಒಳಪಡಿಸುವ ಶಾಸ್ತ್ರಗಳನ್ನು ಸಂಪೂರ್ಣವಾಗಿ ನಿಷೇದಿಸಲ್ಪಟ್ಟಿದೆ. ಈ ಕಾರಣಕ್ಕಾಗಿಯೇ ಡಾ.ಬಿ.ಆರ್.ಅಂಬೇಡ್ಕರವರು ಮನುಸ್ಮೃತಿಯನ್ನು ಬಹಿರಂಗವಾಗಿ ಸುಟ್ಟು ಹಾಕಿದ್ದಾರೆ. ಒಬ್ಬ ಮನುಷ್ಯನಿಗೆ ಶಾಸ್ತ್ರಗಳು ಸಂಪ್ರದಾಯಗಳು ಮನಕುಲದ ಸಮಾನತೆಗೆ ಮಾದರಿಯಾಗಬೇಕು.ಮನುಷ್ಯರ ನಡುವೆ, ಸಮುದಾಯ ಸಮುದಾಯಗಳೊಡನೆ, ಮನುಸ್ಸು ಮನಸ್ಸುಗಳ ನಡುವೆ ಬಿರುಕುಗಳನ್ನು ತರಬಾರದು ಸಮಾಜದ ಐಕ್ಯತೆಯನ್ನು ಸಾಧಿಸಬೇಕು. ಶೋಷಿತ ಶೋಷಿತೇತರ ನಡುವೆ ಅಸಮಾನತೆಯನ್ನು

ತರಬಾರದು. ಎಂಬ ವಿವೇಕವನ್ನು ನೊಂದ ದಲಿತ ಯುವಕನ, ದಲಿತ ಸಮುದಾಯದ ಒಟ್ಟು ಸಂವೇದನೆಯೇ ಈ 'ಬಲಿ' ಕಥೆಯು ಒಳಗೊಂಡಿರುತ್ತದೆ. ಬ್ರಾಹ್ಮಣರು ಮತ್ತು ದಲಿತರು ಮತ್ತು ಶಾಸ್ತ್ರಗಳು ಇಲ್ಲದಂತಾಗಿ ಸಹಜ ಸ್ಥಿತಿಯ ಮಾನವರಾಗಬೇಕೆಂಬ ಸಂವೇದನೆಗಳು ಈ ಕಥೆಯ ತುಂಬೆಲ್ಲಾ ಹರಡಿಕೊಂಡಿವೆ.

ಈ ಕತೆಯಲ್ಲಿ ದಲಿತ ಯುವಕನ ಪಾತ್ರವನ್ನು ಕುರಿತು ಸಂಶೋಧನಾತ್ಮಕವಾಗಿ ವಿಶ್ಲೇಷಣೆಗೆ ಒಳಪಡಿಸಿದಾಗ ಆತನಲ್ಲಿರುವ ದ್ವೇಷಕ್ಕೆ ಆತ ಮತ್ತು ಆತನ ಪೂರ್ವಿಕರು ಅನುಭವಿಸಿಕೊಂಡು ಬಂದಿರುವ ಅವಮಾನಗಳೇ ಕಾರಣವಾಗಿರುತ್ತವೆ. ಪುರೋಹಿತಶಾಹಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಪದ್ಧತಿಯನ್ನು ನಿರ್ಮಾಣ ಮಾಡಿ ಅದರಲ್ಲಿ ಸ್ಪೃಶ್ಯರು ಮತ್ತು ಅಸ್ಪೃಶ್ಯರೆಂಬ ಭೇದದಿಂದ ಇಡೀ ಮಾನವ ಸಮಾಜದಲ್ಲಿ ಅಶಾಂತಿಯನ್ನು ಉಂಟು ಮಾಡಬೇಕಿದೆ. ಮನುಷ್ಯ ಮನುಷ್ಯನನ್ನು ಮಾನವೀಯತೆಯ ದೃಷ್ಟಿಯಿಂದ ನೋಡದಂತಾಗಿ ಸದಾ ಪರಸ್ಪರ ಒಬ್ಬರಿಗೊಬ್ಬರು ದ್ವೇಷವನ್ನು ತುಂಬಿಕೊಂಡು ಬದುಕುವಂತೆ ಮಾಡಿದ್ದಾರೆ. ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಶೋಷಿಸುವುದರ ಮೂಲಕ ಸಮಾಜವನ್ನು ಅಸಮಾನತೆಯಿಂದ ಕೂಡಿರುವಂತೆ ಮಾಡುತ್ತಿದ್ದಾರೆ. ಯಾವುದೋ ಕಾಲದ ಹಳೇ ಸಂಪ್ರದಾಯಗಳನ್ನೇ ನಂಬಿಕೊಂಡು ಒಂದು ಮೇಲ್ವರ್ಗ ಮತ್ತೊಂದು ಕೆಳವರ್ಗವೆಂದು ಭಾವಿಸಿಕೊಂಡು ಅಸಹಾಯಕರ ಮೇಲೆ ಉಳ್ಳವರು ತಮ್ಮ ಬಲತ್ಕಾರದ ಮೂಲಕ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ದಮನಿತರನ್ನು ಶೋಷಣೆಗೆ ಒಳಪಡುಸುತ್ತಿದ್ದಾರೆ.

ಈ ಅಸಮಾನತೆಯು ರಾಷ್ಟ್ರದ ಅಬ್ಯುದಯಕ್ಕೆ ಮಾರಕವಾಗಿ ಸಮಾಜದ ಮೇಲೆ ದುಷ್ಪರಿಣಾಮಬೀರುತ್ತಿದೆ. ಕೆಳವರ್ಗದವರನ್ನು ತಮ್ಮಂತೆಂದು ತಿಳಿಯದೆ ಮೇಲ್ವರ್ಗದವರು ದಲಿತರ ಉಸಿರು ಸಹ ಸೋಕದಂತೆ ಅವರನ್ನು ಊರಿನಿಂದಾಚೆ ಇಟ್ಟಿರುತ್ತಾರೆ. ಅವರ ಉಗುಳು ಭೂಮಿಗೆ ಬಿದ್ದರೆ ಭೂಮಿಯೇ ಮೈಲಿಗೆಯಾಗುತ್ತದೆ ಅಂದರೆ ಮನುಷ್ಯರಾದ ದಲಿತರು ಈ ಭೂಮಿಯ ಮೇಲೆ ಬದುಕಲಾರದೆ ಮತ್ತೆಲ್ಲಿ ಬದುಕಬೇಕು. ಇದರ ಪರಿಣಾಮವಾಗಿ ಉಳ್ಳವರು ಸಂವಿಧಾನಾತ್ಮಕವಾಗಿ ನೀಡಿರುವ ಹಕ್ಕುಗಳನ್ನು ಕಿತ್ತುಕೊಂಡಿದ್ದಾರೆ. ಇಡೀ ದಲಿತ ವರ್ಗವನ್ನು ಮಾನಸಿಕವಾಗಿ ಕೊಲೆ ಮಾಡಿದ್ದಾರೆ. ಕಾಣುತ್ತಿರುವುದು ಈಗ ಅವರ ದೇಹಗಳು ಮಾತ್ರ. ಒಂದು ಶಾಸ್ತ್ರದ ನಿಯಮಗಳು ಒಬ್ಬ ಮನುಷ್ಯನನ್ನು ಅವಮಾನಿಸಿ ಶೋಷಣೆಗೆ ಬಲಿಪಡಿಸುತ್ತವೆ ಅಂದರೆ ಆ ಶಾಸ್ತ್ರಗಳು ಧರ್ಮ ಸಮ್ಮತವಾಗಿರುವುದಿಲ್ಲವೆಂದು ಅರ್ಥ.

ಅಂತವುಗಳನ್ನು ಅಧರ್ಮದ ನೆಲೆಯಲ್ಲಿ ನಿಂತುಕೊಂಡು ದಲಿತರಿಗೆ ಸಾಮಾಜಿಕ ಶೋಷಣೆ ಮಾಡಿ ಅವಮಾನದಿಂದ ಬದುಕುತ್ತ ವಾಸಿಸಲು ಸರಿಯಾದ ಮನೆಯಿಲ್ಲದೆ, ತಿನ್ನಲು ಸಮಯಕ್ಕೆ ಸರಿಯಾಗಿ ಅನ್ನ ಸಿಗದೆ, ಕೊಳಚೆ ನೀರನ್ನು ಕುಡಿದುಕೊಂಡು, ಹರಿದ ಬಟ್ಟೆಗಳನ್ನು ತೊಟ್ಟುಕೊಂಡು, ಸ್ವತಂತ್ರವಾಗಿ ನೆಮ್ಮದಿಯಿಂದ ಬದುಕುಲು ಬಿಡದೆ ಜಾತಿಯ ನಿಂದೆನೆಯಿಂದ ಸದಾ ಅವಮಾನವನ್ನು ಮಾಡುತ್ತಿದ್ದಾರೆ. ಬಂಡವಾಳಶಾಹಿಗಳು ಮತ್ತು ಪುರೋಹಿತಶಾಹಿಗಳು ಸೇರಿಕೊಂಡು ದಲಿತರ

ಬದುಕನ್ನೇ ಸರ್ವನಾಶ ಮಾಡಿದ್ದಾರೆ. ಇಂತಹ ನೋವುಗಳನ್ನು ಅನುಭವಿಸಿದ ಈ ಕತೆಯ ಯುವಕನ ಮನದಲ್ಲಿ ಜ್ವಾಲಾಮುಖಿ ಹುಟ್ಟಿ ಬ್ರಾಹ್ಮಣ ಹುಡುಗಿಯ ಆಕೆಯ ಪೂರ್ವಿಕರು ಮಾಡುತ್ತಿದ್ದ ಹಾಗೂ ಇಂದಿಗೂ ಬ್ರಾಹ್ಮಣವಾದಿಗಳು ದಲಿತರ ಮೇಲೆ ಮಾಡುವ ಅಸ್ಪೃಶ್ಯತೆಯ ಪದ್ಧತಿಯ ನೋವಿನಿಂದ ಅವಳ ಮೇಲೆ ಸೇಡು ತೀರಿಸಿಕೊಳ್ಳಲೆಂದು ತನ್ನ ಮನದಾಳದ ನೋವುಗಳ ಮೂಲಕ ಸೇಡನ್ನು ಬೆರೆಸಿಕೊಂಡು ದಲಿತರು ಪಡುತ್ತಿರುವ ಯಾತನೆಯ ಸ್ಥಿತಿಗಳನ್ನು ಅಭಿವ್ಯಕ್ತಗೊಳಿಸುತ್ತಿದ್ದಾನೆ. ಇದನ್ನೇ ಕಥೆಗಾರರು ತಮ್ಮ ಈ ಕಥೆಯಲ್ಲಿ ದಲಿತರ ಸಾಮಾಜಿಕ ವ್ಯವಸ್ಥೆಯ ಜೀವನವನ್ನು ಅರಿತುಕೊಂಡು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಸಂವೇದನೆಗಳನ್ನು ಗ್ರಹಿಸಿಕೊಂಡಿದ್ದಾರೆ. ಅದರಂತೆ ಬಂಡವಾಳಶಾಹಿಗಳು ಮತ್ತು ಪುರೋಹಿತಶಾಹಿಗಳು ಮಾಡುತ್ತಿರುವ ಶೋಷಣೆಯನ್ನು ಖಂಡಿಸುತ್ತ ದಲಿತರು ಪಡುತ್ತಿರುವ ಸಾಮಾಜಿಕ ತೊಂದರೆಗಳನ್ನು ಮತ್ತು ಅವರ ಮೂಲಭೂತ ಹಕ್ಕು ಬಾಧ್ಯತೆಗಳನ್ನು ಅಂಬೇಡ್ಕರವಾದದ ನೆಲೆಯಿಂದ ಈ ಕಥೆಯ ಮೂಲಕ ವ್ಯಕ್ತಪಡಿಸಿದ್ದಾರೆ.

ಚಂದ್ರಕಾಂತ ಪೊಕಳೆಯವರು ಅನುವಾದ ಮಾಡಿದ 'ಗಾಡಗೀಳರ ಆಯ್ದ ಕಥೆಗಳು' ಎಂಬ ಮರಾಠಿ ಕಥಾ ಸಂಕಲನದಲ್ಲಿ ಗಂಗಾಧರ ಗಾಡಗೀಳ್‌ರು ಬರೆದಿರುವ 'ಹೋರಾಟ' ಎನ್ನುವ ಕತೆಯು ಬಡತನದ ಮೇಲೆ ಅಧಿಕಾರಿಶಾಹಿಗಳು ಮಾಡುವ ದೌರ್ಜನ್ಯ, ಕ್ರೌರ್ಯ, ಅತ್ಯಾಚಾರವನ್ನು ಕುರಿತು ವಿವರಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನೀತಿ, ಆಕ್ರಮಣ, ಕಳ್ಳ ಸಾಗಾಣಿಕೆ, ಕಳ್ಳಭಟ್ಟಿ, ಭ್ರಷ್ಟಾಚಾರ, ಅಸ್ಪೃಶ್ಯತೆ, ಧರ್ಮಾಂಧತೆ, ಹೆಣ್ಣು ಮಾರಾಟ, ನೀರಿನ ಬರ, ವಿದ್ಯುತ್ ಅಭಾವ, ಲಂಚ, ಆಹಾರ ಸಮಸ್ಯೆ, ಇವುಗಳೆಲ್ಲವುಗಳ ವಿರುದ್ಧ ಮಾಡುವ ಜೀವನವೇ ಹೋರಾಟವಾಗಿದೆ. ಈ ಹೋರಾಟದ ಕಥೆಯಲ್ಲಿ ಊರಿನಿಂದ ಪ್ರತ್ಯೇಕವಾಗಿ ರಸ್ತೆಯ ಬದಿಯಲ್ಲಿ ಒಂದು ಜೋಪಡಿ ಅದರಲ್ಲಿ ಜಗತ್ತಿನ ಅರಿವೇ ಇಲ್ಲದ 'ಭೀಕು'. ಸಾರಿಸಿದ ಗಡಸು ನೆಲದ ಅಂಗಳದಲ್ಲಿ ಬಡತನಕ್ಕೆ ಶೋಭಿಸುವಂತ ಜೋಪಡಿಯಲ್ಲಿ ತನ್ನ ಅವ್ವನ ಜೊತೆಯಲ್ಲಿ ಯಾವುದೇ ಈ ಹೊರ ಜಗತ್ತಿನ ದಂಗೆ, ಗದ್ದಲ, ಆರ್ಥಿಕ ಶೋಷಣೆ, ರಾಜಕೀಯ ಹಿಂಸೆ, ಸಂಕಟ ಇತ್ಯಾದಿಗಳು ಇರುವ ಸುಧಾರಿತ ರಾಜ್ಯ ವ್ಯವಸ್ಥೆಯಲ್ಲಿನ ಗಂಭೀರ ಪ್ರಶ್ನೆಗಳು ಆ ಜೋಪಡಿಯಲ್ಲಿರುವ ಭೀಕುವಿಗೆ ಗೊತ್ತಿರಲಿಲ್ಲ, ಆಗಾಗಿ ಅವನ ಜೀವನ ಹಿತಕರವಾಗಿಯೇ ಇತ್ತು. ಆದರೆ ಭೀಕು ಬೆಳೆದಂತೆ ಅವನ ಅವ್ವ ಅವನಿಗೆ ಪೇರಲ ಹಣ್ಣು ಮಾರುವುದಕ್ಕೆ ಹೋಗು ನಾನು ಒಬ್ಬಳೆ ಜೀವನ ನಡೆಸಲು ಕಷ್ಟವಾಗುತ್ತಿದೆ. ನಾಲ್ಕು ಕಾಸು ಮನೆಗೆ ತಂದರೆ ಅನುಕೂಲವಾಗುತ್ತದೆಂದು ಹೇಳಿದಳು. ಅದರಂತೆ 'ಭೀಕು' ಹಣ್ಣನ್ನು ಮಾರಲು ಹೋದಾಗ ಯಾರೂ ಹಣ್ಣನ್ನು ತೆಗೆದುಕೊಳ್ಳುವುದಿಲ್ಲ.

ಎಲ್ಲಾ ಹುಡುಗರು ಅವನನ್ನು ತಿರಸ್ಕಾರಭಾವದಿಂದ ನೋಡುವ ರೀತಿ, ಇವನು ಹೊಲಸು ಹುಡುಗನೆಂದು ನಿಂದಿಸುವಿಕೆ ಭೀಕುವಿನ ಜೀವನದಲ್ಲಿ ತುಂಬಿ ತುಳುಕುತ್ತಿದ್ದ ಆನಂದ ಸಮಾಜದ ಮೇಲಿನ ನಂಬಿಕೆಯೂ ಇಲ್ಲದಂತಾಯಿತು. ಮನುಷ್ಯನಲ್ಲಿ ಮನೆ ಮಾಡಿಕೊಂಡಿರುವ ಜಾತಿ

ಕಲ್ಪನೆಯನ್ನು 'ಭೀಕು' ಅಚ್ಚರಿಯಿಂದ ಕಾಣಲಾರಂಭಿಸಿದನು. ಆದರೆ ಭೀಕುವಿನಲ್ಲಿ ಹುಟ್ಟಿದ ಹೊಸ ಆಲೋಚನೆಯಲ್ಲಿ ಎಲ್ಲವೂ ಅಸ್ಪಷ್ಟವಾಗಿ ಕಾಣುತ್ತಿದ್ದರೂ, ಜಗತ್ತಿನಲ್ಲಿರುವ ಜಾತಿ ನಿಂದನೆ ಅವನ ಮನಸ್ಸಿನ ವೇದನೆಯಲ್ಲಿ ಬೀಜದ ರೂಪದಲ್ಲಿ ಅರಿವಿಗೆ ಬರುತ್ತಿದ್ದರಿಂದ ಅವನ ಮನಸ್ಸು ಕೆರಳಿತು. ಅಸಹಾಯಕನಾದ ಅವನಿಗೆ ಪೇರಲ ಹಣ್ಣನ್ನು ಖರೀದಿಸುವವರೇ ಆತನ ಧಣಿಗಳಾಗಿದ್ದರು. ಅವನು ಸೇವಕನಂತೆ ಬಸ್ ನಿಲ್ದಾಣದಲ್ಲಿ ಬುಟ್ಟಿ ಹೊತ್ತು ತಿರುಗುತ್ತಿದ್ದನು. ಯಾರೊಬ್ಬರೂ ಖರೀದಿಸದೆ ಇರುವುದು ಅವನಿಗೆ ನೋವು ತರುತ್ತಿತ್ತು. ಕೊನೆಗೆ ಒಂದು ಮೋಟಾರು ವಾಹನ ಧೂಳನ್ನು ಎಬ್ಬಿಸಿಕೊಂಡು ಬರುತ್ತದೆ.

ಅದರಲ್ಲಿರುವ ಸೈನಿಕರು ಭೀಕುವಿನ ಹಣ್ಣುಗಳನ್ನೆಲ್ಲ ಕಿತ್ತುಕೊಂಡು ತಿಂದು ಆತನ ಬುಟ್ಟಿಯನ್ನು ಎಸೆಯುತ್ತಾರೆ. ಆಗ ಭೀಕು ಅಳಲಾರಂಭಿಸಿದಾಗ ಅದರಲ್ಲಿ ಒಬ್ಬ ಸೈನಿಕ ಅವನ ಮೇಲೆ ನಾಲ್ಕಣೆ ಎಸೆಯುತ್ತಾನೆ. ಅದನ್ನು ನೋಡಿದ ಇತರ ಸೈನಿಕರು ನಾಲ್ಕಣೆಯನ್ನು ಭೀಕುವಿನ ಮೇಲೆ ಎಸೆಯುತ್ತಾರೆ. ಅವನು ಭಿಕ್ಷುಕನಂತೆ ಎಲ್ಲಾ ನಾಣ್ಯಗಳನ್ನು ಆಯ್ದುಕೊಳ್ಳುವುದನ್ನು ಕಂಡು ಅಪಹಾಸ್ಯ ಮಾಡುತ್ತಾರೆ. ಅಧಿಕಾರವನ್ನು ವಹಿಸಿಕೊಂಡು ದೇಶವನ್ನು ಕಾಪಾಡಬೇಕಾದವರೆ ಈ ರೀತಿ ದರ್ಪದಿಂದ ಅಧಿಕಾರವನ್ನು ಬಡವರ ಮೇಲೆ ಬಳಸಿದರೆ ಬಡವನಾದವನು ಬದುಕುವುದಾದರು ಹೇಗೆ..? ಅವರ ವಿರುದ್ಧ ಧ್ವನಿಯೆತ್ತಲೂ ಶಕ್ತಿಯಿಲ್ಲದ ಭೀಕು ಬಡತನದ ವಿರುದ್ಧ ಹೋರಾಟ ಮಾಡುವುದಾದರೂ ಹೇಗೆ..? ಅಧಿಕಾರಿಶಾಹಿಗಳ ದೌರ್ಜನ್ಯಕ್ಕೆ ಒಳಗಾದವರನ್ನು ರಕ್ಷಿಸುವವರಾದರು ಯಾರು..? ಕಾನೂನನ್ನು ಕಾಪಾಡಬೇಕಾದವರೆ ಕೊಲೆ ಮಾಡುತ್ತಿರುವಾಗ ದಲಿತರ ನೋವುಗಳನ್ನು ಕೇಳುವವರು ಯಾರು...? ದಲಿತರ ಬದುಕೆಂದರೆ ಹೋರಾಟವೆ...? ಎಂಬುವ ಅಂಶಗಳನ್ನು ಭೀಕುವಿನ ಸಂವೇದನೆಗಳ ಮೂಲಕ ಲೇಖಕರು ತಿಳಿಸಿಕೊಟ್ಟಿದ್ದಾರೆ.

ಭೀಕುವಿನ ಅವ್ವ ಪೇರಲ ಹಣ್ಣು ಮಾರುವುದಕ್ಕೆ ಹೋದಾಗ ಮತ್ತೆ ಅದೆ ಸೈನಿಕರು ಅವಳನ್ನು ಕಂಡುಹಿಡಿದುಕೊಂಡಿದ್ದು ತನಗೆ ನೀಡಿದಂತೆ ಅವ್ವನಿಗೂ ಹಣ ನೀಡುತ್ತಾರೆಂದು ಭಾವಿಸಿಕೊಳ್ಳುತ್ತಾನೆ. ಆದರೆ ಭೀಕುವಿನ ತಾಯಿ ಕಿರುಚುವುದನ್ನು ಕಂಡು ಇಲ್ಲಿ ಎನು ನಡೆಯುತ್ತಿದೆ ಎಂದು ಅವನಿಗೆ ತಿಳಿಯಲಿಲ್ಲ. "ದುರ್ಬಲತನದಿಂದ ಅವನು ಮುನ್ನುಗ್ಗಿದ ಮತ್ತು ಅವರನ್ನು ಎಳೆಯಲಾರಂಭಿಸಿದ. ಆದರೆ ಒಬ್ಬ ಸೈನಿಕ ಬೂಟುಗಾಲಿನಿಂದ ಜೋರಾಗಿ ಅವನ ಸೊಂಟಕ್ಕೆ ಒದ್ದ ತಕ್ಷಣ ಅವನು ಕುಸಿದು ಅಸಹನೀಯ ವೇದನೆಯಿಂದ ಅವನು ವ್ಯಾಕುಲಗೊಂಡ ಅಷ್ಟರಲ್ಲಿ ಅವ್ವನನ್ನು ವ್ಯಾನಿನಲ್ಲಿ ಹತ್ತಿಸಿಕೊಂಡು ಹೊರಟು ಹೋದರು. ಕೇವಲ ಅವ್ವನ ಕಿರುಚಾಟವಷ್ಟೇ ಅವನಿಗೆ ಕೇಳಿಸಿತು."[೧೭] ದೇಶದ ಸೈನಿಕರು ಅವ್ವನನ್ನು ಅಪರಣ ಮಾಡಿದ್ದು, ಭೀಕುವಿನ ಬದುಕಿಗೆ ಆಸರೆಯಾಗಿದ್ದ ಕೇಂದ್ರ ಬಿಂದು ಅವ್ವನಿಲ್ಲದೆ ಜೀವನ ಮಾಡುವುದು ಅವನ ಕಲ್ಪನೆಗೂ ಸಾಧ್ಯವಾಗುವುದಿಲ್ಲ. ಅಧಿಕಾರಿಶಾಹಿಗಳು ಜನ ಸಾಮಾನ್ಯರ ಹಿತಕ್ಕಾಗಿ ಅಧಿಕಾರವನ್ನು ಉಪಯೋಗಿಸಿಕೊಳ್ಳಬೇಕು.

ಆದರೆ ಅವರ ಅಧಿಕಾರವೇ ದುರ್ಬಲರ ಮೇಲಿದೆ. ಅಧಿಕಾರಿಶಾಹಿಗಳು ಉಳ್ಳವರ ಕಾಲುಗಳನ್ನು ಸೇವೆ ಮಾಡುತ್ತಾರೆ. ಭೀಕುವಿಗೆ ಮಾಡಿದ ದೇಶದ್ರೋಹಿ ಸೈನಿಕರು ಪ್ರಜಾಪ್ರಭುತ್ವದ ಪ್ರತಿಯೊಂದು ಅಧಿಕಾರಿಗಳ ವರ್ಗದವರಲ್ಲೂ ಅಧಿಕಾರದ ದುರೂಪಯೋಗ ಕಂಡುಬರುತ್ತದೆ ಎಂಬ ಹತಾಶೆಯನ್ನು ಭೀಕುವಿನ ಮೂಲಕ ಹೋರಾಟದ ಕಥೆಯಲ್ಲಿ ಲೇಖಕರು ಪ್ರತಿಬಿಂಬಿಸಿದ್ದಾರೆ. ದಲಿತರಾದವರು ಹೋರಾಟವನ್ನು ತಮ್ಮ ಬದುಕಿನ ಮೇಲೆ ಮಾಡಿಕೊಳ್ಳಬೇಕೆ...? ಅಥವಾ ಅವರ ಮೇಲೆ ನಡೆಸುವ ಹಿಂಸಾಚಾರಿಗಳಾದ ಅಧಿಕಾರಿಶಾಹಿಗಳ ಮೇಲೆ ಮಾಡಬೇಕೆ ಒಟ್ಟಾರೆಯಾಗಿ ದಲಿತರ ಇಡೀ ಜೀವನವೇ ಹೋರಾಟದಿಂದ ಕೂಡಿದೆ. ಅವರ ಬದುಕಿನ ಹೊರಟಕ್ಕೆ ಕೊನೆ ಯಾವಾಗ...? ಅವರು ಎಲ್ಲರಂತೆ ನಿರ್ಭೀತಿಯಿಂದ ಬದುಕು ನಡೆಸುವ ಕಾಲ ಬರುವುದಾದರು ಹೇಗೆ...? ಮನುಷ್ಯ ಮನುಷ್ಯರ ನಡುವೆ ಇರುವ ಈ ಕದನದ ಕೊನೆಗೆ ಪರಿಹಾರಗಳು ಸೃಷ್ಟಿಯಾಗಲಿ.

ದಲಿತರ ನೋವಿನ ಧ್ವನಿಯೂ ನಿಲ್ಲಲಿ ಎಂಬ ಸೂಕ್ಷ್ಮ ಸಂವೇಧನೆಯು ಈ ಕಥೆಯ ತುಂಬೆಲ್ಲ ತುಂಬಿಕೊಂಡಿದೆ. ಬಡತನದ ಗುಡಿಸಲಿನಲ್ಲಿ ಬೆಳೆಯುತ್ತಿರುವಾಗ ಭೀಕುವಿಗೆ ಯಾವ ಲೋಕದ ಜ್ಞಾನವೂ ಇರಲಿಲ್ಲ. ಆದರೂ ಅವನು ಅದರೊಳಗೆ ತನ್ನ ಮನಸ್ಸಿಗೆ ಆನಂದವಾಗುವ ರೀತಿಯಲ್ಲಿ ಇದ್ದಷ್ಟೂ ಊಟ ಮಾಡಿಕೊಂಡು ಆಟವಾಡುತ್ತ ನಲಿದುಕೊಂಡು ಇದ್ದನು. ಬಾಲ್ಯದಲ್ಲಿ ಸಿಗಬೇಕಾದ ಎಲ್ಲಾ ಸುಖಗಳು ಗುಡಿಸಲಿನಲ್ಲಿಯೇ ಸಿಗುತ್ತಿದ್ದವು. ಅಲ್ಲಿಗೆ ಯಾರೊಬ್ಬರ ಕಾಟವಿಲ್ಲ, ನಿಂದನೆಯಿಲ್ಲ ಯಾವ ತೊಂದರೆಗಳು ಇಲ್ಲದೆ ಗುಡಿಸನಲ್ಲಿ ಬೆಳೆದುಕೊಂಡಿದ್ದನು. ಆದರೆ ಬಡತನದ ಹಸಿವನ್ನು ತುಂಬಿಸಿಕೊಳ್ಳವುದಕ್ಕಾಗಿ ತಮ್ಮ ಅವ್ವನ ಮಾತಿನಂತೆ ಆ ಮುಗ್ಧ ಹುಡುಗ ಕೆಲಸಕ್ಕೆಂದು ಊರಿನ ಕಡೆ ಧಾವಿಸಿದಾಗ ಆಗ ಅರಿವಾಗುತ್ತದೆ. ನಾನು ಯಾರು...? ನನ್ನ ಜಾತಿ ಯಾವುದು...? ನಾನು ಯಾರ ಮಗ...? ಸಮಾಜ ಒಬ್ಬ ವ್ಯಕ್ತಿಯನ್ನು ಗುರುತಿಸುವುದೇ ಇವುಗಳಿಂದ ಆದರೆ ಇದರಿಂದಾಗುವ ಆ ಪುಟ್ಟ ಬಾಲಕನ ಮನಸ್ಥಿತಿ ವೇದನೆಯಿಂದ ತುಂಬಿಕೊಳ್ಳುತ್ತದೆ.

ಇವನೊಬ್ಬ ಕೆಳಗಿನ ಜಾತಿಯವನು ಈತನ ಹಣ್ಣುಗಳನ್ನು ಯಾರು ತೆಗೆದುಕೊಳ್ಳಬೇಡಿ ಎಂದಾಗ ಭೀಕುಗೆ ಒಂದು ಹೊಸ ಲೋಕವೇ ತೆರೆದುಕೊಳ್ಳುತ್ತದೆ. ಪುರೋಹಿತಶಾಹಿಗಳು ನಿರ್ಮಿಸಿ ಹೋದ ಈ ಅನಿಷ್ಟ ಜಾತಿಪದ್ಧತಿಯು ಸಮಾಜದಲ್ಲಿ ಏಕತೆಯನ್ನು ಮುರಿದುಬಿಟ್ಟಿದೆ. ಇದರಿಂದಾಗಿ ಅದೆಷ್ಟೋ ದಲಿತ ಕುಟುಂಬಗಳು ಅವಮಾನದಿಂದ ಅಸಹಾಯಕರಾಗಿ, ಸಾಮಾಜಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಭೀಕುವಿನ ಅವ್ವನನ್ನು ರಸ್ತೆಯ ಮೇಲೆಯೇ ಅವನ ಕಣ್ಣ ಮುಂದೆ ಎಳೆದುಕೊಂಡು ಸೈನಿಕರು ಹೋಗುತ್ತಿರುವಾಗ ಅದು ಏನೆಂದು ಅರ್ಥವಾಗುವುದಿಲ್ಲ, ಆದರೆ ಅವ್ವನ ಚಿರಾಟದ ಧ್ವನಿಯಿಂದ ಭೀಕು ಏನೊಂದು ಮಾಡಲಾಗದ ಅಸಹಾಯಕನಾಗಿ ಅಳುತ್ತ ಕುಳಿತುಕೊಳ್ಳವಿಕೆಯಲ್ಲಿ, ಅಧಿಕಾರಿಶಾಹಿಗಳು ಅಸಹಾಯಕರಾದ ದಲಿತರ ಮೇಲೆ ಹೇಗೆ ಅತ್ಯಾಚಾರಗಳನ್ನು ತಮ್ಮ ಅಧಿಕಾರದ ದುರುಪಯೋಗದಿಂದ ಮಾಡುತ್ತಿದ್ದಾರೆ ಎಂಬುವುದನ್ನು ಕಥೆಗಾರರು ಈ ಸನ್ನಿವೇಶದ ಮೂಲಕ ಕಟ್ಟಿಕೊಟ್ಟಿದ್ದಾರೆ.

ಉಳ್ಳವರ ಹೆಣ್ಣುಮಕ್ಕಳ ಮೇಲೆ ಯಾರೂ ಅತ್ಯಾಚಾರವನ್ನು ಮಾಡುವುದಿಲ್ಲ. ಆದರೆ ಅದಕ್ಕಾಗಿ ದಲಿತ ಹೆಣ್ಣುಮಕ್ಕಳನ್ನೇ ಬಲಿ ತೆಗೆದುಕೊಳ್ಳುವುದಕ್ಕೆ ಕಾರಣ ದಲಿತರು ಬಡತನದಿಂದ ಅಸಹಾಯಕ ಸ್ಥಿತಿಯಲ್ಲಿ ಬದುಕುತ್ತಿರುವ ದೌರ್ಬಲ್ಯವನ್ನು, ಬಂಡವಾಳಶಾಹಿಗಳು ಅದನ್ನು ಅವಕಾಶವನ್ನಾಗಿ ಮಾಡಿಕೊಂಡು ಅತ್ಯಾಚಾರಗಳನ್ನು ಮಾಡುತ್ತಿದ್ದಾರೆ. ಇದರ ಪರಿಣಾಮವಾಗಿ 'ಭೀಕು' ಅವ್ವನಿಲ್ಲದೆ ಯಾರ ಆಶ್ರಯವಿಲ್ಲದೆ ರಸ್ತೆಯಲ್ಲಿ ನಿಲ್ಲುವುದು, ಬಂಡವಾಳಶಾಹಿಗಳು ದಲಿತರಿಗೆ ಇರುವ ಆರ್ಥಿಕ ಸಂಪತ್ತಿನ ಅವ್ವನನ್ನು ಅಪಹರಿಸಿಕೊಂಡು, ಭೀಕುವಿನಂತೆ ಇಡೀ ದಲಿತ ಸಮುದಾಯವನ್ನು ರಸ್ತೆಯ ಮಧ್ಯದಲ್ಲಿ ಬಡತನವನ್ನು ನೀಡಿ ವಂಚನೆಯನ್ನು ಮಾಡಿರುವ ವಾಸ್ತವ ಅಂಶವನ್ನೇ ಇಲ್ಲಿ ಈ ಘಟನೆಯ ರೂಪಕವಾಗಿ ಕಥೆಗಾರರು ಬಳಸಿಕೊಂಡಿದ್ದಾರೆ. ಅದರಂತೆ ಇಂದು ದಲಿತರು ಬಂಡವಾಳಶಾಹಿಗಳ ಮತ್ತು ಅಧಿಕಾರಿಶಾಹಿಗಳ ಕುತಂತ್ರತನದಿಂದ ಹೇಗೆ ಸಮಾನತೆಯ ಹಕ್ಕಿನಿಂದ ವಂಚಿತರಾಗಿದ್ದಾರೆಂದು ತಿಳಿಸಿಕೊಡುತ್ತ, ತಮ್ಮ ಸೂಕ್ಷ್ಮ ಸಂವೇದನೆಯ ಮೂಲಕ ದಲಿತರ ಬದುಕಿನ ಚಿತ್ರಣವನ್ನು ಅಂಬೇಡ್ಕರವಾದ, ಮಾರ್ಕ್ಸವಾದ, ಲೋಹಿಯವಾದದ ನೆಲೆಯಿಂದ ಈ ಕಥೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಎಸ್.ಗುಪ್ತನ್ ನಾಯರ್‌ರವರು ಸಂಪಾದನೆ ಮತ್ತು ಕೆ.ಕೆ.ನಾಯರ್‌ರವರು ಅನುವಾದ ಮಾಡಿದ 'ಆಯ್ದ ಮಲಿಯಾಳಂ ಸಣ್ಣ ಕಥೆಗಳು' ಎಂಬ ಕಥಾ ಸಂಕಲನದಲ್ಲಿ ಪುಳಿಯಾನ ಪರಮೇಶ್ವರ ಪಿಳ್ಳೆಯವರು ಬರೆದಿರುವ 'ಮೋಚಿಯ ಮಗಳು' ಎಂಬ ಕಥೆಯು ಬಡತನದ ಭೀಕರತೆಯ ನೋವನ್ನು ಚಿತ್ರಿಸುತ್ತದೆ. ಸೂರ್ಯ ಹುಟ್ಟಿ ಸೂರ್ಯ ಮುಳುಗುವ ತನಕ ಗುಡಿಸಲಿನಲ್ಲಿ 'ಮೆಟ್ಟು' ಮಾಡಿಕೊಂಡು ತನ್ನ ಜೀವನವನ್ನು ಸಾಗಿಸುವ ಒಬ್ಬ ಮುದುಕನಿಗೆ ಏಕಮಾತ್ರ ಮಗಳಿರುತ್ತಾಳೆ. ಆ ಮುದ್ದು ಮಗಳೇ ಆತನಿಗೆ ಸರ್ವಸ್ವ, ಅವಳ ಸಂತಸದ ಮುಖದಲ್ಲಿ ತನ್ನ ಸಾಮ್ರಾಜ್ಯವನ್ನು ಕಾಣುತ್ತಿದ್ದನು. ಮುದುಕನ ಕಣ್ಣುಗಳಲ್ಲಿ ಸದಾ ಆ ಮಗಳೇ ತುಂಬಿರುತ್ತಿದ್ದಳು. ಹಸಿರು, ನೀಲಿ, ಕೆಂಪು ಬಣ್ಣಗಳಿಂದ ಕೂಡಿರುವ ಸೀರೆಯನ್ನು ತೊಟ್ಟುಕೊಂಡು, ಮುಂಗೈ ತುಂಬ ಗಾಜಿನ ಬಳೆಗಳನ್ನು ಹಾಕಿಕೊಂಡು, ಹದಿನೇಳರ ಹರೆಯದ ಕಪ್ಪನೆಯ ಮಗಳನ್ನು ನೋಡಿ ಆನಂದವನ್ನು ಪಡುತ್ತಿರುವ ಮುದುಕ, ಒಬ್ಬ ಕಲಾವಿದ ತಾನು ಬರೆದ ಚಿತ್ರವನ್ನೇ ತಾನೇ ದಿಟ್ಟಿಸಿ ನೋಡುತ್ತಿರುವಂತೆ ಮಗಳ ಅಂದಚೆಂದವನ್ನು ಅತ್ಯಂತ ಬೆರಗು ಮನಸ್ಸಿನಿಂದ ನೋಡುತ್ತಿದ್ದನು.

ಮಗಳ ಮುಖವನ್ನು ನೋಡಿ ಮುದುಕ ಆನಂದಪಡುತ್ತಿದ್ದರೆ, ತನ್ನ ಅಂದವನ್ನು ತಾನೆ ನೋಡಿಕೊಂಡು ಆ ಮುದುಕನ ಮಗಳು ಆನಂದ ಪಡುತ್ತಿದ್ದಳು. ಗುಳಿಬಿದ್ದ ಕಣ್ಣುಗಳು, ನೆಗ್ಗು ಬಿದ್ದ ಕೆನ್ನೆಗಳು, ಒಣಗಿ ಜೋತಾಡುತ್ತಿರುವ ತುಟಿಗಳು, ಉದ್ದನೆಯ ಹಲ್ಲುಗಳಲ್ಲಿ ಸದಾ ಮುಗಳ್ನಗೆಯಲ್ಲಿ ಮಿಂದಿರುವ ಮುದುಕನಿಗೆ ಮಗಳ ಅಂದ ನೋಡುವ ಆನಂದದಲ್ಲಿ, ತನ್ನ ವಯಸ್ಸು ಎಪ್ಪತ್ತು ದಾಟಿ ದೇಹ ಹಣ್ಣಾಗಿ ಬಾಗಿಕೊಂಡಿದೆ ಎಂಬ ಅರಿವು ಆತನಿಗಿಲ್ಲ, ಮೆಟ್ಟು ಮಾಡುವ ಕಾಯಕದಲ್ಲಿ ಪ್ರವೀಣನಾಗಿರುವ ಮುದುಕ ತಾನು ಬದುಕಿ ಬಾಳುತ್ತಿರುವುದು ಕೂಡ ಮಗಳಿಗಾಗಿಯೇ. ಹೀಗಿರುವಾಗ

ಮಗಳ ಸಂತಸದಲ್ಲಿಯೆ ಮುದುಕ ತನ್ನನ್ನು ತಾನು ಕಾಣುತ್ತಿರುತ್ತಾನೆ. ಬಡತನದ ಗುಡಿಸಲಿನಲ್ಲಿರುವ ಮಗಳಿಗೆ ನಾನು ಬಡತನದಲ್ಲಿರುವೆ, ನನಗೆ ನನ್ನದೆಯಾದ ಸರಿಯಾದ ಅನ್ನವಿಲ್ಲ ಬಟ್ಟೆಯಿಲ್ಲ ಎಂಬ ಅರಿವು ಅವಳಿಗಿರುವುದಿಲ್ಲ.

ಎಲ್ಲರಂತೆ ನಾನೂ ಇರುತ್ತೇನೆ ಎಂಬ ಮನಸ್ಥಿತಿ ಅವಳದು. ಮುದುಕನ ಮನದ ಕಣ್ಣಿನಲ್ಲಿ ಮಗಳು ಅಂದದಿಂದ ಕೂಡಿಕೊಂಡಿದ್ದರೂ, ವಾಸ್ತವದಲ್ಲಿ ಮೋಚಿಯ ಮಗಳು ಅಂದದಿಂದ ಇರುವುದಿಲ್ಲ. ಮುದುಕ ತನ್ನ ಮಗಳು ತುಂಬಾ ಚೆಂದಾಗಿದ್ದಾಳೆ ಎಂದು ಹೇಳಿದಾಗ "ಓ ಇವಳಾ ಫಣಿಕ್ಕರ್ ಧಣಿಗಳುಗೊಳ್ಳನೆ ನಕ್ಕುಬಿಟ್ಟರು. ತಕ್ಷಣ ಅವಳಿಗೆ ಹೊಳೆಯಿತು ತನ್ನ ಬದುಕು ನಿರರ್ಥಕವೆಂದು, ಗೋಡೆಯಲ್ಲಿ ನೇತಾಡುತ್ತಿದ್ದ ಮುರುಕು ಕನ್ನಡಿ, ಅಗಲ ಕಿರಿದಾದ ಹಣೆ, ಚಪ್ಪಟೆ ಮೂಗು, ಜೋತಾಡುತ್ತಿರುವ ದಪ್ಪತುಟಿ, ಹಲಗೆ ಹಲ್ಲು, ಉರುಟು ಕಣ್ಣುಗಳು ಮೊದಲಾದವುಗಳಿರುವ ಕರ್‍ರಗಿನ ಒಂದು ಬೊಜ್ಜು ಮೈಯವಳನ್ನು ಬುಡ್ಡಿ ದೀಪದ ಬೆಳಕಿನಲ್ಲಿ ಅವಳಿಗೆ ತೋರಿಸಿ ಕೊಟ್ಟಿತು."[೧೯] ಪಣಿಕ್ಕರ್ ಧಣಿಗಳ ನಗುವಿನ ಹಿಂದೆ ಇರುವ ಅರ್ಥ ಮೋಚಿಯ ಮಗಳಿಗೆ ಆಗ ಅರ್ಥವಾಗುತ್ತದೆ. ನಾನು ನಿಜವಾಗಲೂ ಚೆನ್ನಾಗಿ ಇರುವುದಿಲ್ಲ. ಆದರೆ ಹೆತ್ತವರಿಗೆ ಹೆಗ್ಗಣ ಕೂಡ ಮುದ್ದು ಇದ್ದ ಹಾಗೆ, ಅದರಂತೆ ಅವಳ ತಂದೆ ಮುದಕ ತನ್ನ ಮಗಳನ್ನು ರಾಣಿಯ ಹಾಗೆ ಭಾವಿಸಿಕೊಂಡು, ತನ್ನ ಮೆಟ್ಟು ಮಾಡುವ ಕೆಲಸದಲ್ಲಿ ತನ್ನ ದಣಿವನ್ನು ಮರೆಯುತ್ತಿದ್ದಾನೆ.

ಅಷ್ಟೆ ಬಡತನದ ಗುಡಿಸಲಲ್ಲಿರುವ ಒಳನೋವುಗಳನ್ನು ತನ್ನ ಮಗಳ ಸಂತಸದ ಮುಖದಲ್ಲಿ ಕಾಲಕಳೆಯುವುದಕ್ಕೆ ಕಾರಣ, ತನಗಾಗಿರುವ ನೋವುಗಳು ಮಗಳಿಗೆ ಗೊತ್ತಾಗಬಾರದೆಂಬ ಭಾವವು ಮುದುಕನಲ್ಲಿದೆ. ಧಣಿಗಳಾದವರು ಬಡತನವನ್ನು ಕಂಡು ಮನಕರಗದವರಾಗಿ, ಅವರನ್ನು ಹೀನವಾಗಿ ಕಾಣುತ್ತಿರುವುದು ಪಣಿಕ್ಕರ್ ಧಣಿಗಳು ಮೋಚಿಯ ಮಗಳನ್ನು ನೊಡಿ ನಗುವುದರಲ್ಲಿದೆ. ಆ ಪರಿಹಾಸ್ಯದಿಂದಲೇ ಮುದುಕನ ಮಗಳಿಗೆ ವಾಸ್ತವದ ತನ್ನ ಜೀವನ ಅವಳಿಗೆ ಗೋಚರವಾಗಿ, ಇನ್ನೇನು ತನ್ನ ಇಡೀ ಜೀವನವೇ ನಿರರ್ಥಕವೆಂದು ಭಾವಿಸಿಕೊಂಡಳು. ಗುಡಸಲಿನ ಒಳಗೆ ಸರಿಯಾದ ಊಟವಿಲ್ಲ ತೊಟ್ಟುಕೊಳ್ಳಲು ಮೈಮುಚ್ಚಿಕೊಳ್ಳುವಂತ ಬಟ್ಟೆಗಳಿಲ್ಲ, ಹೆಣ್ಣಾಗಿ ಹುಟ್ಟಿ ಅಲಂಕಾರ ಮಾಡಿಕೊಳ್ಳಲು ಸರಿಯಾದ ಒಂದು ಕನ್ನಡಿ ಇಲ್ಲ, ಇಂಥ ಹೀನಾಯ ಸ್ಥಿತಿಯ ಜೀವನವನ್ನು ಪಣಿಕ್ಕರವರ ನಗು ಅವಳಿಗೆ ತಿಳಿಸಿಕೊಟ್ಟಾಗ, ನಾನೇಕೆ ಈ ಅಸಮಾನತೆಯ ಸಮಾಜದಲ್ಲಿ ಬದುಕಬೇಕು..? ಈ ಜಗತ್ತಿನ ಅನಿಷ್ಠ ಸೊಬಗನ್ನು ನಾನೇಕೆ ನೋಡಬೇಕೆಂದು ಅವಳು ಥಟ್ಟನೆ ನೆಲಕ್ಕೆ ಕುಸಿದು ಕಣ್ಣು ಮುಚ್ಚಿಕೊಂಡಿದ್ದು, ಆ ಮುದಿತಂದೆಗಾದ ಅಗಾಧ ನೋವು ಇಡೀ ತಳಸಮುದಾಯಗಳ ನಿಜ ಸ್ಥಿತಿಯ ಪರಿಕಲ್ಪನೆಯನ್ನು ಈ 'ಮೋಚಿಯ ಮಗಳು' ಕಥೆಯ ಮೂಲಕ ಪುಳಿಯಾನ್ ಪರಮೇಶ್ವರ ಪಿಳ್ಳೆಯವರು ಕಟ್ಟಿಕೊಟ್ಟಿದ್ದಾರೆ.

ತನ್ನ ಬಾಳ ಚೈತನ್ಯವೇ ಕಳೆದುಕೊಂಡ ಆ ಮುದಿತಂದೆ, ತನ್ನ ಮಗಳ ತಣ್ಣಗಾದ ದೇಹದ ಮುಂದೆ ಕುಳಿತುಕೊಂಡು, ಅವಳ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಮಗಳ

ಹಣೆಯ ಮೇಲೆ ಕೈ ನೇವರಿಸುತ್ತ, ಮಗಳೇ ಈ ಜನ್ಮದಾಗ ಬಯಸಿದರೆ ಮುಂದಿನ ಜನ್ಮದಾಗೆ ಫಲಿಸಿತು ಎಂದು ಹೇಳುವ ಮುದಕನ ನಡುಗುವ ಸ್ವರದಲ್ಲಿ ಆತನ ಸಂಕಟದಲ್ಲಿ ಬಡತನವೇ ತನ್ನ ಮುದ್ದಿನ ಮಗಳನ್ನು ಕಣ್ಣು ಮುಚ್ಚಲು ಕಾರಣವಾಗಿರುವುದು. ಕೆಳವರ್ಗದವರ ದುರ್ಬಲ ಬದುಕು ಎಷ್ಟೊಂದು ಘೋರವಾಗಿರುತ್ತದೆ ಎಂದು ದಲಿತ ಮೋಚಿಯ ಹೃದಯದ ಸಂವೇದನೆಗಳಲ್ಲಿ ಅಡಕವಾಗಿರುವುದು ಕಂಡುಬರುತ್ತದೆ.

ತನ್ನ ಹಿಂದಿನವರು ಕಾಲಕಾಲಾಂತರಗಳಿಂದ ಮಾಡಿಕೊಂಡು ಬಂದಿರುವ ಕುಲಕಸುಬನ್ನು ಮೆಟ್ಟು ಮಾಡುವುದರಲ್ಲಿ ತನ್ನನ್ನು ತೊಡಗಿಸಿಕೊಂಡು, ಆ ಚಿಕ್ಕ ಗುಡಿಸಲಿನಲ್ಲಿ ಜೀವನ ಕಳೆಯುತ್ತಿರುವ ಮುದುಕನಿಗೆ ಮತ್ತೊಂದು ಪ್ರಪಂಚದ ಅರಿವಿಲ್ಲದೆ, ಊರಿನ ಎಲ್ಲ ಮೇಲ್ವರ್ಗದವರು ಮೆಟ್ಟುವ ಪಾದಗಳಿಗೆ ಮೆಟ್ಟುಗಳನ್ನು ಮಾಡಿಕೊಡುತ್ತಿದ್ದನು. ಅದರಿಂದ ಬರುವ ಅಲ್ಪಸ್ವಲ್ಪ ಆದಾಯದಲ್ಲಿ ತನ್ನ ಜೀವನವನ್ನು ಬಡತನದ ಬೇಗೆಯಲ್ಲಿ ನಡೆಸುತ್ತಿದ್ದಾನೆ. ತನ್ನ ಇಂತಹ ಸ್ಥಿತಿಗೆ ಕಾರಣವಾಗಿರುವ ಮೂಲಭೂತ ಅಂಶಗಳ ಬಗ್ಗೆ ಆತ ಯಾವತ್ತೂ ಯೋಚನೆಯನ್ನು ಮಾಡಿರುವುದಿಲ್ಲ. ತಲೆತಗ್ಗಿಸಿಕೊಂಡು ಮೆಟ್ಟು ಮಾಡುವುದೇ ತನ್ನ ಜೀವನವೆಂದು ಅದರಿಂದಲೇ ತನ್ನ ಮೋಕ್ಷವೆಂದು ನಂಬಿಕೊಂಡು ಬದುಕುತ್ತಿದ್ದಾನೆ. ಮೆಟ್ಟುಮಾಡಿಕೊಟ್ಟವನಿಗೆ ಕೊನೆಗೆ ಆ ಮೆಟ್ಟುಗಳನ್ನು ಮೆಟ್ಟಿಕೊಂಡು ಮೇಲ್ವರ್ಗದವರು ಆತನನ್ನೇ ಮುಟ್ಟಿಸಿಕೊಳ್ಳುವುದಿಲ್ಲ. ಅವರ ಸುಖದ ಉಪಯೋಗಕ್ಕಾಗಿ ದಲಿತರುಬೇಕು. ಆದರೆ ದಲಿತರು ಕೆಳವರ್ಗದವರೆಂಬ ಭಾವದಿಂದ ಅವರು ಬೇಕಿಲ್ಲ ಅವರ ಶ್ರಮಬೇಕು. ಇದು ಮೇಲ್ವರ್ಗದವರು ದಲಿತರನ್ನು ಬಳಸಿಕೊಂಡು ದಲಿತರಿಗೆ ಮಾಡುತ್ತಿರುವ ಶೋಷಣೆಯಾಗಿದೆ.

ದಲಿತರು ಮೇಲ್ವರ್ಗದವರ ಉಪಯೋಗಕ್ಕಾಗಿಯೇ ಜೀವಿಸಬೇಕು. ಊರಿನ ಕೊಳಕನ್ನು ತೆಗೆದುಹಾಕಲು, ತಮ್ಮ ಸುತ್ತಲಿನ ವಾತಾವರಣವನ್ನು ಸ್ವಚ್ಛಗೊಳಿಸಲು ಮತ್ತು ತಮ್ಮ ಆದಾಯದ ಸಂಪತ್ತಿಗಾಗಿ ಹೊಲ ಮನೆಯಲ್ಲಿ ಶ್ರಮವಹಿಸಿ ದುಡಿಯಲು, ತಾವು ಸತ್ತರೆ ಸುಡುಗಾಡಿನಲ್ಲಿ ಮಣ್ಣು ಮಾಡಲು ಇತ್ಯಾದಿ ಎಲ್ಲ ಕೆಲಸಗಳಿಗೂ ದಲಿತರಿರಬೇಕು. ಆದರೆ ಮೇಲ್ವರ್ಗದವರು ದಲಿತರನ್ನು ಮಾತ್ರ ಊರಿನಿಂದಾಚೆ ಇಟ್ಟು, ಅವರು ಮುಟ್ಟಲು ಅಯೋಗ್ಯರೆಂದು ಜರಿದು ಅವರ ಜೀವನಕ್ಕೆ ಬೇಕಾಗುವ ಮೂಲ ಸೌಲಭ್ಯಗಳಿಂದ ವಂಚಿಸಿ ಆರ್ಥಿಕ ಶೋಷಣೆಯನ್ನು ಮಾಡಿದ್ದಾರೆ. ಮೋಚಿ ಮುದಕನ ಜೀವನಕ್ಕೆ ವಾಸಿಸಲು ಒಂದು ಯೋಗ್ಯ ಮನೆಯಿಲ್ಲದೆ, ಊರಿಗೆಲ್ಲ ಉಪಕಾರಿಯಾಗಿ ಜೀವನವನ್ನು ಮಾಡುತ್ತಿದ್ದಾನೆ. ತಾನು ಮಾತ್ರ ಬಡತನದ ಬೇಗೆಯಲ್ಲಿ ಬಳಲುತ್ತಿದ್ದಾನೆ. ತನಗಾಗಿರುವ ಅನ್ಯಾಯದ ವಿರುದ್ಧ ಆತ ಯಾವತ್ತೂ ಧ್ವನಿಯನ್ನು ಎತ್ತಿಲ್ಲ. ಇದು ಆ ದೇವರು ನಮಗೆ ನೀಡಿರುವ ಶಾಪವೆಂದು ಭಾವಿಸಿಕೊಂಡು, ಸಂವಿಧಾನವು ನೀಡಿರುವ ತನ್ನ ಹಕ್ಕುಗಳಿಂದ ವಂಚಿತರನ್ನಾಗಿ ಅಸಹಾಯಕ ಜೀವನವನ್ನು ಮಾಡುತ್ತಿರುವುದಕ್ಕೆ, ಬಂಡವಾಳಶಾಹಿಗಳು ಇಡೀ ದಲಿತರ ಮೂಲಭೂತ ಹಕ್ಕುಗಳು ಸಿಗದಂತೆ ಅವರನ್ನು ಆರ್ಥಿಕವಾಗಿ ದುರ್ಬಲರನ್ನಾಗಿ ಮಾಡಿದ್ದಾರೆ.

ತನ್ನ ಮಗಳಿಗೆ ತೊಟ್ಟುಕೊಳ್ಳಲು ಸರಿಯಾದ ಬಟ್ಟೆಗಳಿಲ್ಲದೆ ಇತರರಂತೆ ತಾನು ಸಮಾಜದಲ್ಲಿ ಆನಂದದಿಂದ ಬದುಕಲು ಸಾಧ್ಯವಾಗದೆ ತನ್ನ ಪ್ರಾಣವನ್ನೆ ಕಳೆದುಕೊಳ್ಳುವುದು ದಲಿತ ಮೋಚಿ ಮುದುಕ ಮಗಳೇ ನಿನಗೆ ಈ ಜನ್ಮದಲ್ಲಿ ಸಿಗಲಾರದ್ದು ಮುಂದಿನ ಜನ್ಮದಲ್ಲಾದರೂ ಸಿಗಲಿಯೆಂದು ಬೇಡಿಕೊಳ್ಳುವುದು ಆತನ ಅಸಹಾಯಕ ಜೀವನದ ಚಿತ್ರಣವನ್ನು ತೋರಿಸಿ ಕೊಡುತ್ತದೆ. ಮೋಚಿಯ ಮಗಳು ತನ್ನ ಬಡತನದಿಂದ ನೊಂದುಕೊಂಡು ಇಂತಹ ಸ್ಥಿತಿಯಲ್ಲಿ ಬದುಕಲಾರದೆ ಫಣಿಕ್ಕರ್ ಧಣಿಗಳು ಮಾಡಿರುವ ಅವಮಾನದಿಂದ ಪ್ರಾಣ ಬಿಡುವುದು. ಇಡೀ ದಲಿತ ತಳಸಮುದಾಯದ ಎಲ್ಲ ಹೆಣ್ಣು ಮಕ್ಕಳಿಗೆ ಬಂಡವಾಳಶಾಹಿಗಳು ಮಾಡಿರುವ ಆರ್ಥಿಕ ಶೋಷಣೆಯಾಗಿದೆ. ಹಾಗೂ ಅವಳ ಸಾವಿಗೆ ಧಣಿಗಳೇ ಕಾರಣವಾಗಿದ್ದಾರೆ.

ಇದು ಸವರ್ಣೀಯರು ದಲಿತರಿಗೆ ಅವಮಾನವನ್ನು ಮಾಡಿ ಮಾನಸಿಕ ವ್ಯಥೆಯಿಂದ ಬಲಿಯಾಗುವಂತೆ ಮಾಡುವ ಶೋಷಣೆಯ ಅನ್ಯಾಯವಾಗಿದೆ. ಇದ್ದ ಒಬ್ಬ ಮಗಳನ್ನು ಕಳೆದುಕೊಂಡು ಏಕಾಂಗಿಯಾಗಿ ಮುದುಕ ಬದುಕಲು ಹೇಗೆ ಸಾಧ್ಯವಿಲ್ಲವೋ ಅದೇ ರೀತಿ ದಲಿತರೆಲ್ಲರೂ ತಮ್ಮಗಿರುವ ಆರ್ಥಿಕ ಸಂಪತ್ತನ್ನು ಕಳೆದುಕೊಂಡು ಅತಂತ್ರರಾಗಿ ಜೀವಿಸಬೇಕಾಗಿರುವ ಸಂದರ್ಭವನ್ನು ಅನುಭವಿಸುವ ಸ್ಥಿತಿ ಉಂಟಾಗಿರುವುದನ್ನು ಕಂಡು ಈ ಘಟನೆಯ ಮೂಲಕ ಕಥೆಗಾರರು ದಲಿತರ ನೋವುಗಳನ್ನು, ಅವಮಾನಗಳನ್ನು, ಸಮಾಜದಲ್ಲಿರುವ ಆರ್ಥಿಕ ಅಸಮಾನತೆಯನ್ನು ಈ ಕತೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ಫಣಿಕ್ಕರ್ ಧಣಿಗಳಂತ ಬಂಡವಾಳಶಾಹಿಗಳು ಸಮಾಜದಲ್ಲಿ ಅಸಮಾನತೆಯನ್ನು ಸೃಷ್ಟಿ ಮಾಡಿ ಅದರ ಲಾಭವನ್ನು ತೆಗೆದುಕೊಂಡು ದಲಿತರಿಗೆ ಅವಮಾನವನ್ನು ಮಾಡಿ ಮೂಲಭೂತ ಸೌಕರ್ಯಗಳಾದ ವಸತಿ, ವಸ್ತ್ರ, ಶುದ್ಧನೀರು ಕುಡಿಯಲು ಸಿಗದಂತೆ ಮಾಡಿ ಸಮಾಜದಿಂದ ಹೊರತಳ್ಳಿದ್ದಾರೆ. ಆದ್ದರಿಂದ ದಲಿತರ ಜೀವನ ಇಂದು ನೋವಿನ ಮಡುವಿನಲ್ಲಿ ತುಂಬಿಕೊಂಡಿದೆ. ಇದನ್ನೆ ಕಥೆಗಾರರು ತಮ್ಮ ಕಥೆಯಲ್ಲಿ ಸೂಕ್ಷ್ಮ ಸಂವೇದನೆಗಳಲ್ಲಿ ದಲಿತರ ಸಾಮಾಜಿಕ ಸ್ಥಾನ ಮಾನಗಳನ್ನು ಕುರಿತು ಅವರ ವಾಸ್ತವ ಜೀವನ ಚರಿತ್ರೆಯ ಚಿತ್ರಣವನ್ನು ಮಾರ್ಕ್ಸ ಮತ್ತು ಲೋಹಿಯ ಚಿಂತನೆಗಳಿಂದ ಚಿತ್ರಿಸಿದ್ದಾರೆ.

ಡಿ.ಎಸ್.ಚೌಗತಿಯವರು ಆಯ್ಕೆ ಮತ್ತು ಅನುವಾದ ಮಾಡಿರುವ 'ನಿನ್ನ ಮೇಲೆ ಸಿಟ್ಟಲ್ಲ ಮಾಯೀ..." ಆಯ್ದ ಮರಾಠೀ ಕಥೆಗಳು ಎಂಬ ಕಥಾಸಂಕಲನದಲ್ಲಿರುವ ನಾಮದೇವ್ ಕಾಂಬಳೆಯವರು ಬರೆದ 'ಹಸಿವು' ಎಂಬ ಕಥೆಯು ಮಾತಂಗ ಕೇರಿಯ ಜನರು ಹಸಿದ ಹೊಟ್ಟೆಗೆ ಅನ್ನಸಿಗಲಾರದೆ ಸತ್ತ ಎಮ್ಮೆಯನ್ನು ಸುಲಿದು ತಿನ್ನುವ ಘಟನೆಯನ್ನು ವಿವರಿಸುತ್ತದೆ. ಮನುಷ್ಯನು ಉಸಿರಾಡುವುದಕ್ಕೆ ಅನ್ನವೇ ಕಾರಣವಾಗಿರುತ್ತದೆ. ದಲಿತ ವರ್ಗಕ್ಕೆಬೇಕಾಗಿರುವುದು ಅನ್ನ ಮಾತ್ರ. ಆ ಅನ್ನಕ್ಕಾಗಿ ಹಗಳಿರುಳು ಮೈ ಬೆವರಿಳಿಸಿ ದುಡಿದರೂ ಸಿಗದ ಅನ್ನ ಅವರನ್ನು ಹಸಿದ ಹೊಟ್ಟೆಯಲ್ಲಿ ಮಲಗುವಂತೆ ಮಾಡಿದೆ. ಅವರು ಹಸಿವಿನಿಂದ ಬಳಲುತ್ತಿರುವುದಕ್ಕೆ ಮೇಲ್ವರ್ಗದವರ ಶೋಷಣೆಯೇ ನೇರವಾದ ಕಾರಣವಾಗಿದೆ. ಏಕೆಂದರೆ, ಮೋಸ, ವಂಚನೆ ಗೊತ್ತಿಲ್ಲದೆ ಅವರ ಸಹನೆ ತಾಳ್ಮೆಯಿಂದ

ಬಂಡವಾಳಶಾಹಿಗಳ ಬುದ್ಧಿವಂತಿಕೆಗೆ ಬಲಿಯಾಗಿದ್ದಾರೆ. ದುಡಿಯುವ ಶ್ರಮ ದಲಿತರದೆ ಆದರೂ ಅದನ್ನು ಸುಖಿಸುವ ಜನರು ಮೇಲ್ವರ್ಗದವರಾಗಿದ್ದಾರೆ.

ಕಾಲವೂ ಅವರ ಜೊತೆ ಆಟವಾಡಿದಂತೆ ಬಂಡವಾಳಶಾಹಿಗಳು ಸಹ ಅವರ ಜೀವದ ಜೊತೆ ಆಟವಾಡುತ್ತಿದ್ದಾರೆ. ದಲಿತರಿಗೆ ಬೇಕಾಗಿರುವುದು ಆಸ್ತಿ, ಸಂಪತ್ತು, ಒಡವೆಗಳಲ್ಲ ಅವರಿಗೆ ಮೂಲಭೂತವಾಗಿ ಬೇಕಾಗಿರುವ ಆಹಾರ, ವಸ್ತ್ರ, ವಸತಿಗಳು ಸಿಕ್ಕರೆ ಸಾಕು. ಹೆಚ್ಚಿನ ದುರಾಸೆ ಅವರಿಗೆ ಬೇಕಿಲ್ಲ. ಅವರ ಈ ಗುಣವೇ ಬಡತನದಿಂದ ಬದುಕುವುದಕ್ಕೂ ಕಾರಣವಾಗಿದೆ. ಹಸಿವು ಬದುಕನ್ನು ತಿಳಿಸಿದಂತೆ ಆಕ್ರೋಶಕ್ಕೂ ಕಾರಣವಾಗುತ್ತದೆ. ಹಸಿವಿನ ಹಸಿವು ಅದರ ಬಾಧೆ ಹಸಿದವರೇ ಬಲ್ಲರು. ಆದರೆ ಹಸಿವೆನೆಂದರೇ ತಿಳಿಯಲಾರದ ಬಂಡವಾಳಶಾಹಿಗಳು ನೊಂದ ದಲಿತರನ್ನು ಹಸಿವಿನಲ್ಲಿಯೇ ಮುಳುಗುವಂತೆ ಮಾಡುತ್ತಿದ್ದಾರೆ. ಈ 'ಹಸಿವು' ಕಥೆಯೂ ಕೂಡ ಹಸಿದವರ ಜೀವನ ಸ್ಥಿತಿ ಅದಕ್ಕೆ ಕಾರಣರಾಗಿರುವವರ ಕುರಿತು ಸೂಕ್ಷ್ಮ ಸಂವೇದನೆಗಳ ಮೂಲಕ ತಿಳಿಸುತ್ತ ಹೋಗುತ್ತದೆ.

ನಿಲ್ಲದ ಮಳೆಯು ಧಾರಾಕಾರವಾಗಿ ಸುರಿಯುತ್ತಿದೆ. ಪಾಯರು ಹಾಗೂ ಆತನ ಹೆಂಡತಿ ಹರಣಿ ತಮ್ಮ ಮಕ್ಕಳೊಂದಿಗೆ ಕೆಲಸವಿಲ್ಲದೆ ಮನೆಯಲ್ಲಿಯೇ ಕುಳಿತುಕೊಂಡಿದ್ದಾರೆ. ಹಸಿದ ಮಕ್ಕಳು ಆಹಾರಕ್ಕಾಗಿ ಪರಿತಪಿಸುತ್ತಿವೆ. ಹೆಂಡತಿ ಗಂಡನಿಗೆ ಊರೊಳಗೆ ಹೋಗಿ ಯಾರನ್ನಾದ್ರೂ ಬೇಡಿ ಜ್ವಾಳ ಹಿಸಕೊಂಡು ಬಾ ಎನ್ನುತ್ತಾಳೆ. ಮನಸ್ಸಿಲ್ಲದೆ ನಿಲ್ಲದಿರುವ ಮಳೆಯೊಳಗೆ ಒಂದು ಖಾಲಿ ಗೋಣಿ ಚೀಲವನ್ನು ಮಡಿಚಿ ಮೂಲೆ ಮಾಡಿ ಒಳಗೆ ಸೇರಿಸಿ ತಲೆಗುಲಾಯಿ ಮಾಡಿ ತಲೆಗೆ ಹೊದ್ದು ಕೊಂಡು ಹೋಗುತ್ತಾನೆ. ಊರಲ್ಲಿ ಅದೇಷ್ಟು ಜನರು ಮಳೆರಾಯನಿಗೆ ಕೈ ಮುಗಿದರೂ ಮಳೆ ನಿಲ್ಲುತ್ತಿಲ್ಲ. ಇಡೀ ಮಾತಂಗಿ ಕೇರಿಯೂ ಹಸಿವಿನಿಂದ ಯಾರಾದರೂ ಅನ್ನ ಕೊಡುತ್ತಾರೇನಂತ ಊರೊಳಗೆ ಅಲೆದಾಡುತ್ತಿದ್ದಾರೆ. ಪಾಯರು ಜ್ವಾಳಕ್ಕಾಗಿ ಹುಡುಕುತ್ತಾ ಹೋಗುತ್ತಿರುವಾಗ ವಾಡೆಯಿಂದ ಹರಿಜಾಧವರವರು ಹೋಗುತ್ತಿರುವುದನ್ನು ಕಂಡು ನಮಸ್ಕಾರ ಮಾಡಿ ಮನೆಯಲ್ಲಿ ಹೆಂಡತಿ ಮಕ್ಕಳು ಉಣ್ಣುವುದಕ್ಕೆ ಹಿಟ್ಟಿಯಿಲ್ಲದೆ ಹಸಿವಿನಿಂದ ಇದ್ದಾರೆ ದಯಮಾಡಿ ನನಗೆ ನಾಲ್ಕು ಸೇರು ಜ್ವಾಳ ಕೊಡಿ ಎಂದು ಕೇಳುತ್ತಾನೆ.

ಆತನ ಅಂತಕರಣ ; ಕರಗದೆ ಹೇ ಮಗನ, ಈ ಸಾರಿ ಜ್ವಾಳ ಹೆಚ್ಚಾಗಿ ಎಲ್ಲಿ ಬೆಳದಿಲ್ಲ ಹೋಗು  ನೀನಗೆಲ್ಲಿಂದ ತರಬೇಕು ಜ್ವಾಳ ಎಂದು ಗದರಿಸುತ್ತಾನೆ. ಹಾಗೆ ಮುಂದಕೆ ಪಾಯರು ಮಳೆಯಲ್ಲಿ ಸಾಗುತ್ತಾರೆ. ಮುಂದಿನ ದೇಶಮುಖರ ಮನೆಗೆ ಹೋಗಿ ಮನೆಯಲ್ಲಿ ಮಾಲಕರು ಇದ್ದಾರೇನ್ರಿ ಎಂದು ಕೇಳಿದಾಗ, ಯಾವನೋ ಅವನು ಅಂತ ದಿಂಬಿಗೆ ಒರಗಿ ಕೂತಿದ್ದ ದೇಶಮುಖ ಗೋಪಾಳರಾವ್‌ರವರು ಪ್ರಶ್ನಿಸುತ್ತಾರೆ. ನಾನ್ರಿಯಪ್ಪ ಪಾಯರು ಎಂದು ಕೈ ಮುಗಿದು ನಿಂತುಕೊಂಡು ನನಗೆ ನಾಲ್ಕು ಸೇರು ಜ್ವಾಳ ಕೊಡಿ ನನ್ನ ಹೆಂಡತಿ ಮಕ್ಕಳಿಗೆ ತಿನ್ನುವುದಕ್ಕೆ ಮನೆಯಲ್ಲಿ ಏನೂ ಇಲ್ಲ ಎಂದು ಬೇಡಿಕೊಳ್ಳುತ್ತಾನೆ. ಆಗ ಗೊಂಡಿಮೀಸೆ ತಿರುವುತ್ತಾ ನಗುವಿನಿಂದ ದೇಶಮುಖ ಗೋಪಾಳರಾವ್

ರವರು ನಿನ್ನ ಹೆಂಡತಿಯನ್ನು ಸ್ವಲ್ಪ ಕಳಿಸಿಕೊಡು ಜ್ವಾಳ ಕೊಡುತ್ತೇನೆ ಎಂದು ಹೇಳುತ್ತಾನೆ. ಈ ಮಾತನ್ನು ಹೇಗೆ ಅಂತ ಅರ್ಥ ಮಾಡಿಕೊಳ್ಳಲಾರದೆ ಪಾಯರ ಮನೆಗೆ ಬಂದು ಹೆಂಡತಿಯನ್ನು ಕಳಿಸಿ ಕೊಡುತ್ತಾರೆ. ಆದರೆ ದೇಶಮುಖನು ಒಬ್ಬ ಕಾಮುಕ, ನೀಚನೆಂದು ಊರಿನ ಜನಕೆ ಗೊತ್ತಿತ್ತು.

ನಂತರ ಅಂಗಡಿಗೆಂದು ಪಾಯರ ಹೋದಾಗ 'ವಾಣಿ' ಅಂಗಡಿ ಮಾಲಕ ಪಾಯರನ್ನು ನೋಡಿ ನೀನು ಬಂದಿದ್ದು ಒಳ್ಳೆಯದೇ ಆಯಿತು ನಮ್ಮ ಎಮ್ಮೆ ಯಾವುದೋ ರೋಗ ಬಂದು ಸತ್ತು ಹೋಗಿದೆ ಅದನ್ನು ಎತ್ತಿಕೊಂಡು ಹೋಗು ಎಂದು ಹೇಳುತ್ತಾರೆ. ಊರಿನೊಳಗೆ ಅನ್ನಕ್ಕಾಗಿ ಅಲೆದಾಡುತ್ತಿದ್ದ ಪಾಯರರರಿಗೆ ಹಬ್ಬವೇ ಸಿಕ್ಕಂತಾಯಿತು. ಆ ಸುದ್ಧಿಯನ್ನು ತನ್ನ ಮಾತಂಗಕೇರಿಗೆ ಹೋಗಿ ವಾಣ್ಯಾನ್ ಎಮ್ಮೆ ಸತ್ತಿದೆ ಬನ್ನಿಯೆಂದು ಎಲ್ಲರಿಗೂ ವಿಷಯ ತಿಳಿಸುತ್ತಾನೆ. ಕೇರಿಯ ಶಿವರ್‍ಯಾ, ಬುಗ್ಯಾ, ಸುದಾಮಿ, ಪುಸ್ತಕ ಓದುತ್ತಾ ಕುಳಿತಿದ್ದ ರಘು ಕೇರಿಯ ಎಲ್ಲಾ ಜನರು ಸೇರಿ ಸಿಕ್ಕ ಸಿಕ್ಕ ಶಸ್ತ್ರ, ತಗಡಿನ ಬುಟ್ಟಿ, ಬೋಗಾಣಿ, ಪಾತೇಲಿ, ಡಬ್ಬಿ, ಚಹಾದ ಪ್ಲೈವುಡ್ಡಿನ ಡಬ್ಬಿ ಮನೆಯಲ್ಲಿರುವ ಎಲ್ಲಾ ವಸ್ತುಗಳನ್ನು ತೆಗೆದುಕೊಂಡು ಗಂಡಸರು, ಹೆಂಗಸರು ಸೇರಿಕೊಂಡು ಎಮ್ಮೆ ಸತ್ತಿರುವ ಹೊಲಕ್ಕೆ ಹಿಗ್ಗಿನಿಂದ ಹೋಗುತ್ತಾರೆ.

ಸತ್ತ ಎಮ್ಮೆಯ ಹಿಂದಿನ ಮುಂದಿನ ಕಾಲುಗಳನ್ನು ಜೋಡಿಯಾಗಿ ಕಟ್ಟಿ ಎರಡು ಕಾಲಿನಲ್ಲಿ ಒಂದರಂತೆ ಎರಡು ಕೋಲಗಳನ್ನು ಒಳಗೆ ಸೇರಿಸಿ ಎಡಬಲಕ್ಕೆ ಇಬ್ಬಿಬ್ಬಿರು ನಿಂತು ಕೊಂಡು ಎಮ್ಮೆಯನ್ನು ಹೊತ್ತುಕೊಂಡು ಬರುತ್ತಾರೆ.ನಂತರ ತಂದ ಎಮ್ಮೆ ಕಾಲಿನ ಹಗ್ಗ ಬಿಚ್ಚಿ ಅದರ ಚರ್ಮ ಸುರಿಯಲು ಮುಂದಾಗುತ್ತಾರೆ. "ನಾಲ್ವರು ಎಮ್ಮೆ ಹಿಂದಿನ ಕಾಲಿನ ಮಾಂಸ ಬಿಚ್ಚಿದರು. ಹೊಟ್ಟೆ ಬಗೆದು ಅದರೊಳಗಿನ ಯಕೃತ ಪುಪ್ಪಸ, ಹೃದಯ, ಕೊಬ್ಬು...ಮುಂತಾದ ಮಾಂಸವನ್ನು ಬಗೆದು ಬದಿಗಿರಿಸಿದರು. ಪೂರ್ತಿ ಚರ್ಮ ಸುಲಿದು ಅಲ್ಲೇ ಬಾಜೂದಲ್ಲಿ ಹಾಸಿದರು. ಬಿಚ್ಚಿದ ಮಾಂಸವನ್ನು ಅದರ ಮೇಲೆ ಒಟ್ಟಿ ಚರ್ಮವನ್ನು ಮಡಚಿದರು. ಒಂದು ಕೋಲಿನ ಸುತ್ತ ಚರ್ಮ ಸುತ್ತಿ ಹಗ್ಗದಿಂದ ಗಟ್ಟಿಯಾಗಿ ಬಿಗಿದರು."[೨೦] ಮಾತಂಗ ಕೇರಿಯ ಜನಕೆ ಊರಲ್ಲಿ ಯಾರು ಜ್ವಾಳ ನೀಡದಿದ್ದರೂ ಸತ್ತ ಎಮ್ಮೆಯೇ ಅವರಿಗೆ ಆಹಾರವಾಗಿ ಸಿಕ್ಕಿದ್ದು ಅವರ ಅನ್ನಕ್ಕಾಗಿ ಅಲೆದಾಡುವ ಬದುಕು ಇವೆಲ್ಲವೂ ದಲಿತರಿಗೆ ಬಂಡವಾಳಶಾಹಿಗಳೂ ನೀಡುತ್ತಿರುವ ಶೋಷಣೆಯ ಶಿಕ್ಷೆಗಳೇ ಆಗಿವೆ.

ಮತ್ತೆ ಅನ್ನವಿಲ್ಲದ ಇವರ ಬದುಕು ಕೊನೆಯಾಗಲು ಸಮಾನವಾದ ಆರ್ಥಿಕ ಬಲವು ದಲಿತರಿಗೆ ಬೇಕಾಗಿರುವುದು ಇವರ ಆಹಾರ ಸಮಸ್ಯೆಗೆ ನೈಸರ್ಗಿಕವಾದ ಸಂಪನ್ಮೂಲಗಳು ಸರಿಯಾಗಿ ಸಮವಾಗಿ ಹಂಚಲ್ಪಡಬೇಕು. ಅವು ದಲಿತರಿಗೆ ಸಿಕ್ಕರೆ ಹಸಿವು ನಿಲ್ಲಲು ಸಾಧ್ಯ. ದಲಿತ ಕುಟುಂಬದವರಾದ ಪಾಯರು ಮತ್ತು ಆತನ ಹೆಂಡತಿ ಹರಣಿ ಬಂಡವಾಳಶಾಹಿಗಳು ಮಾಡಿರುವ ಆರ್ಥಿಕ ಶೋಷಣೆಯಿಂದಲೇ ಇಡೀ ಕುಟುಂಬವೇ ಹಸಿವಿನಿಂದ ನರಳಾಡುವಂತಾಗಿದೆ. ಆರ್ಥಿಕ ಅಸಮಾನತೆಯಿಂದಲೆ ಒಬ್ಬರು ಶ್ರೀಮಂತರು ಮತ್ತೊಬ್ಬರು ಬಡವರಾಗಿ ಸಮಾಜದಲ್ಲಿ ಒಬ್ಬರು ಮತ್ತೊಬ್ಬರ ಗುಲಾಮರಾಗಿ ಬದುಕಬೇಕಾಗಿದೆ. ಈ ವ್ಯವಸ್ಥೆಗೆ ಬಂಡವಾಳಶಾಹಿಗಳು ದಲಿತರಿಗೆ

ಮಾಡಿದ ವಂಚನೆಯೇ ಕಾರಣವಾಗಿರುತ್ತದೆ. ಅವರಿಗೆ ಅವರದೆಯಾದ ಸರಿಯಾದ ಸ್ವಂತ ಮನೆಯಿಲ್ಲದೆ, ಬದುಕುವುದಕ್ಕಾಗಿ ಬೇಸಾಯ ಮಾಡಿಕೊಂಡು ಜೀವನ ನಡೆಸಬೇಕೆಂದರೆ ದಲಿತರ ಭೂಮಿಗಳನ್ನು ಸಾಲಬಡ್ಡಿ ರೂಪದಲ್ಲಿ ವಶಪಡಿಸಿಕೊಂಡಿದ್ದಾರೆ.

ದಲಿತರ ಜೀವನ ನಿರ್ವಹಣೆಗಾಗಿ ಯಾವುದೇ ಆಸ್ತಿಪಾಸ್ತಿಗಳಿಲ್ಲದೆ ಬರೀಗೈಯಲ್ಲಿ ಬದುಕುವಂತಾಗಿದೆ. ಇದರ ದುಷ್ಪರಿಣಾಮದಿಂದ ಬಡತನದ ಹಸಿವಿನಿಂದ ಬಳಲುವಂತಾಗಿದೆ. ವಾಡೆಯಲ್ಲಿರುವ ಹಂಜಾಧವರವರು ಪಾಯರ ಹಸಿವಿನ ವಿಷಯ ಕೇಳಿ ಆತನಿಗೆ ಉಣ್ಣುವುದಕ್ಕೆ ಒಂದು ಹಿಡಿ ಹಿಟ್ಟನ್ನು ನೀಡದೆಯೇ ನಿರ್ದಾಕ್ಷಣ್ಯವಾಗಿ ನಡೆದುಕೊಳ್ಳುವ ರೀತಿ ಉಳ್ಳವರು ದಲಿತರ ಮೇಲೆ ನಡೆಸುತ್ತಿರುವ ಕರುಣೆಯಿಲ್ಲದ ದುರ್ವರ್ತನೆಯಾಗಿದೆ. ಇದು ಮನುಷ್ಯರನ್ನು ಮನುಷ್ಯರಂತೆ ಕಾಣದೆ ಮಾಡುತ್ತಿರುವ ಸಾಮಾಜಿಕ ಅನ್ಯಾಯವಾಗಿರುತ್ತದೆ. ದಲಿತರು ತಮಗಿರುವ ಅಸಹಾಯ ಸ್ಥಿತಿಯಲ್ಲಿ ಯಾರ ವಿರುದ್ಧವೂ ಯಾವುದೇ ಅನ್ಯಾಯಕ್ಕೆ ಧ್ವನಿ ಎತ್ತಲು ಅಶಕ್ತರಾಗಿದ್ದಾರೆ. ಅದಕ್ಕೆ ಅವರಿಗಿರುವ ಬಡತನದ ಹಸಿವು ಕಾರಣವಾಗಿರುತ್ತದೆ. ನಂತರ ಪಾಯರ ತನ್ನ ಹೆಂಡತಿ ಮಕ್ಕಳ ಹಸಿವಿನ ಹೊಟ್ಟೆಯ ಸಲುವಾಗಿ ದೇಶಮುಖ ಗೋಪಾಳರಾವ್‌ರವರ ಮನೆಗೆ ಹೋಗಿ ಉಣ್ಣುವುದಕ್ಕಾಗಿ ಏನಾದರೂ ನೀಡಿಯೆಂದು ಬೇಡಿಕೊಂಡಾಗ ಆಗ ಅವರು ಹೇಳುವ ಮಾತು ಪಾಯರರವರಿಗೆ ಏನೆಂದು ಅರ್ಥ ಮಾಡಿಕೊಳ್ಳಲು ಸಹ ಸಾಧ್ಯವಾಗುವುದಿಲ್ಲ.

'ನಿನ್ನ ಹೆಂಡತಿಯನ್ನು ಮನೆಗೆ ಕಳುಹಿಸು' ಈ ಮಾತಿನ ಹಿಂದೆ ದಲಿತರಿಗೆ ಹಸಿವಿನ ಬಾಧೆಯಿಂದ ಬಳುತ್ತಿದ್ದರೆ ಅದೇ ಅಸಹಾಯಕ ಸ್ಥಿತಿಯನ್ನು ತಮಗೆ ಒದಗಿರುವ ಒಂದು ಅವಕಾಶವೆಂದುಕೊಂಡು ದಲಿತ ಹೆಣ್ಣು ಮಕ್ಕಳ ಮೇಲೆ ತಮ್ಮ ಕಾಮುಕ ಕಣ್ಣನ್ನು ಬೀರುತ್ತಿರುವ ಬಂಡವಾಳಶಾಹಿಗಳು ದಲಿತರ ಮೇಲೆ ನಡೆಸುತ್ತಿರುವ ಅತ್ಯಾಚಾರವಾಗಿರುತ್ತದೆ. ಸಮಸಮಾಜವೆಂದು ಘೋಷಿಸಿಕೊಂಡು ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿ ಬದುಕುತ್ತಿದ್ದರೂ ದಲಿತರಿಗೆ ಸರಿಯಾದ ರೀತಿಯಲ್ಲಿ ಮೂಲಭೂತ ಸೌಕರ್ಯಗಳು ಸಿಗದೆ ಮೂಲಭೂತ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಇದು ಅಧಿಕಾರಿಶಾಹಿಗಳೂ ಮತ್ತು ಬಂಡವಾಳಶಾಹಿಗಳು ಸೇರಿಕೊಂಡು ದಲಿತರ ಮೇಲೆ ಮಾಡುತ್ತಿರುವ ದೌರ್ಜನ್ಯದ ಶೋಷಣೆಯಾಗಿರುತ್ತದೆ. ಇದನ್ನೇ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ತಮ್ಮ ಈ ಕಥೆಯಲ್ಲಿ ದಮನಿತರ ಬದುಕಿನ ಒಳನೋವುಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಬಂಡವಾಳಶಾಹಿಗಳ ಶೋಷಣೆಯಿಂದ ದಲಿತರು ಪಡುತ್ತಿರುವ ಸಾಮಾಜಿಕ ಸ್ಥಿತಿಗತಿಗಳನ್ನು ಮತ್ತು ಅವರಿಗಿರುವ ಸಾಮಾಜಿಕ ಸ್ಥಾನಮಾನಗಳನ್ನು ತಿಳಿಸಿಕೊಟ್ಟಿದ್ದಾರೆ. ದಲಿತರು ಹಸಿವಿನಿಂದ ನರಳಾಡುತ್ತಿರುವುದಕ್ಕೆ ಉಳ್ಳವರು ದಲಿತರಿಗೆ ಮಾಡಿದ ಆರ್ಥಿಕ ಶೋಷಣೆಯೇ ಕಾರಣವಾಗಿರುತ್ತದೆ. ಇದನ್ನೇ ಈ ಕಥೆಯ ಮೂಲಕ ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಿಂದ ದಲಿತರ ಸಂವೇದನೆಗಳನ್ನು ಕ್ರೋಡಿಕರಿಸಿ ಅರ್ಥವತ್ತಾಗಿ ದಲಿತ ಕುಟುಂಬದ ಪಾಯರು ಮತ್ತು ಆತನ ಹೆಂಡತಿ ಹರಣಿ ಪಾತ್ರಗಳ ಮೂಲಕ ಇಡೀ ದಲಿತ ಸಮುದಾಯದ ನೋವುಗಳನ್ನು ಚಿತ್ರಿಸಿದ್ದಾರೆ.

'ಭೂಮಿಯಷ್ಟು ಬದುಕು' ಎಂಬ ಮಲಿಯಾಳಂ ಸಣ್ಣ ಕಥೆಗಳನ್ನು ಡಾ.ಪಾರ್ವತಿ ಜಿ.ಐತಾಳ್ ರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಗಾಂಧಿ ಜಂಕ್ಷನ್‌ನಲ್ಲಿನ ರಾತ್ರಿಗಳು' ಎಂಬ ಕತೆಯನ್ನು ಅರ್ಷಾದ್ ಬತೇರಿಯವರು ಬರೆದಿರುತ್ತಾರೆ. ಈ ಕಥೆಯು ತುಂಬ ವಿಶಿಷ್ಟವಾದ ನಮಗೆ ಗೊತ್ತಿತ್ತು ಗೊತ್ತಿರದ ಹಾಗೆ ನಟನೆಯಲ್ಲಿ ತೊಡಗಿಕೊಂಡ ಒಂದು ಲೈಂಗಿಕ ಹಿಂಸೆಯ ಆಯಾಮವನ್ನು ಈ ಕಥೆಯ ಮೂಲಕ ಅರ್ಷಾದ್ ಬತೇರಿಯವರು ಅಭಿವ್ಯಕ್ತಪಡಿಸಿದ್ದಾರೆ. ಸಾಮಾನ್ಯವಾಗಿ ಲೈಂಗಿಕ ಶೋಷಣೆಯು ಒಂದು ಗಂಡಿನಿಂದ ಹೆಣ್ಣಿನ ಮೇಲೆ ನಡೆಯುವಂತದ್ದಾಗಿರುತ್ತದೆ. ಹಾಗೆಯೇ ಗಂಡು-ಗಂಡುವಿನ ನಡುವೆ ನಡೆಯುವ ಲೈಂಗಿಕತೆಯೂ ಸಮಾಜದಲ್ಲಿ ಒಂದು ಅಪರೂಪವೇ ಆಗಿರುತ್ತದೆ. ಆ ಅಪರೂಪದ ಸಲಿಂಗಕಾಮವನ್ನು ಸಮ್ಮತದಿಂದ ಒಪ್ಪಿಕೊಳ್ಳದಿದ್ದರೂ ಅದೊಂದು ಸಾಮಾಜಿಕವಾದ ಶೋಷಣೆಯಾಗಬಾರದು. ಇಲ್ಲಿ ಲೇಖಕರು ಕೇವಲ ಲೈಂಗಿಕತೆಯನ್ನು ಮನೋವಿಶ್ಲೇಷಣೆಯ ಮೂಲಕವಾಗಿ ಲೈಂಗಿಕತೆಯನ್ನು ವಿಶ್ಲೇಷಿಸದೆ, ಆ ಲೈಂಗಿಕತೆಯ ದೌರ್ಜನ್ಯಕ್ಕೆ ಕಾರಣವಾಗುವಂತಹ ಹಿನ್ನೆಲೆಗಳನ್ನು ಈ ಕಥೆಯ ಆ ಪುಟ್ಟ ಹುಡುಗನ ಮೂಲಕ ಸೂಕ್ಷ್ಮ ಸಂವೇದನೆಗಳನ್ನು ಹೊರಹಾಕಿರುತ್ತಾರೆ. ಇಲ್ಲಿ ಮುಖ್ಯವಾದ ಕಥಾ ವಸ್ತು ಒಬ್ಬ ಹುಡುಗನ ಮೇಲೆ ನಡೆಸುವಂತಹ ಬಲಾತ್ಕಾರದ ಸಲಿಂಗ ಕಾಮ. ಆ ಪುಟ್ಟ ಹುಡುಗನ ಮೇಲಾಗುತ್ತಿರುವ ಮೃಗೀಯ ಹಿಂಸೆಯ ನಿಜವಾದ ಕಾರಣ ಯಾರು...? ಇಂತಹದ್ದೊಂದು ಘನವಾದ ಚರ್ಚೆಯನ್ನು ಹಾಕುತ್ತಾರೆ.

ಬಡತನವನ್ನು ಹೇಗೆ ಉಪಯೋಗಿಸಿಕೊಂಡು ಬಂಡವಾಳಶಾಹಿಗಳು ದಮನಿತರ ಮೇಲೆ ದೌರ್ಜನ್ಯ ನಡೆಸುತ್ತಿದ್ದಾರೆ ಎಂಬುದನ್ನು ತಿಳಿಸಿದ್ದಾರೆ. ಅವರ ಅತ್ಯಾಚಾರಗಳೇ ಆ ಪುಟ್ಟ ಹುಡುಗನ ಮೇಲೆ ಲೈಂಗಿಕ ಬಲತ್ಕಾರ ಮಾಡುವುದಕ್ಕೆ ಕಾರಣವಾಗಿರುತ್ತದೆ. ಆರ್ಥಿಕ ಸಮಾನತೆಯಿಲ್ಲದೆ ಬೀದಿಯಲ್ಲಿ ಬದುಕುತ್ತಿರುವ ದಮನಿತರ ಕಣ್ಣೀರನ್ನು ಕುರಿತು ಈ ಕಥೆಯಲ್ಲಿ ತನ್ನಲ್ಲಿ ಉಂಟಾದ ಹಸಿವಿನ ಹಿಂಗಿತದ ಹಿಂದೆ ಇರುವ ಸಮಸ್ಯೆಗಳನ್ನು ಕಲೆ ಹಾಕುತ್ತ ಅದಕ್ಕೆ ಕಾರಣವಾದ ಅಂಶಗಳನ್ನು ಕಥೆಯ ಮೂಲಕವಾಗಿಯೇ ಅಸಮಾನತೆಯ ಆಳದಲ್ಲಿ ಹೊಕ್ಕು ಅರ್ಷಾದ್ ಬತೇರಿಯವರು ಈ 'ಗಾಂಧಿ ಜಂಕ್ಷನ್ ರಾತ್ರಿಗಳು' ಎಂಬ ಕಥೆಯಲ್ಲಿ ದಲಿತರಲ್ಲಿರುವ ಒಳಸಂವೇದನೆಗಳನ್ನು ಸಮಾಜಮುಖಕ್ಕೆ ತಂದು ತೋರಿಸಿಕೊಟ್ಟಿದ್ದಾರೆ. ಪುಟ್ಟ ಹುಡುಗನ ಮೇಲೆ ಬಲಾತ್ಕಾರದ ಲೈಂಗಿಕ ಅತ್ಯಾಚಾರ ಮಾಡುತ್ತಿರುವುದಕ್ಕೆ ಅವರಲ್ಲಿರುವ ಕೊಬ್ಬು ತುಂಬಿದ ಅಧಿಕಾರ ಹಣ ಕಾರಣವಾದರೆ, ಆ ಪುಟ್ಟ ಹುಡುಗ ಅತ್ಯಾಚಾರದ ಲೈಂಗಿಕ ಹಿಂಸೆಗೆ ಒಳಗಾಗುತ್ತಿರುವುದಕ್ಕೆ ಆತನಲ್ಲಿರುವ ಅಸಹಾಯಕತೆಯ ಬಡತನವೇ ಕಾರಣವಾಗಿರುತ್ತದೆ.

ಇವರೆಡಕ್ಕೂ ಕಾರಣ ಆಳುವ ಪ್ರಜಾಪ್ರತಿನಿಧಿಗಳೇ ಕಾರಣರಾಗಿರುತ್ತಾರೆ. ಬತೇರಿಯ ಈ ಪ್ರದೇಶದ ಭಾಗ ಬಹುಕಾಲದವರೆಗೂ ಯಾರಿಗೂ ಬೇಡವಾಗಿ ಬಯಲಿನಿಂದ ಹಾಗೆ ಬಿದ್ದಿತ್ತು. ಈ ಬಯಲು ಪ್ರದೇಶದಲ್ಲಿ ಮನೆಯಿಲ್ಲದವರು ಮತ್ತು ಅನಾಥರು ಗುಡಿಸಲುಗಳನ್ನು ಹಾಕಿಕೊಂಡು

ತಮ್ಮ ಜೀವನ ನಡೆಸುತ್ತಿದ್ದರು. ಆದರೆ ಕಾಲಕಳೆದಂತೆ ಈ ಪ್ರದೇಶದಲ್ಲಿರುವ ಎಲ್ಲಾ ಗುಡಿಸಲುಗಳು ಖಾಲಿಯಾಗಿ ಹೇಗೋ 'ಗಾಂಧಿ ಜಂಕ್ಷನ್' ಆಗಿ ಮಾರ್ಪಾಡು ಹೊಂದಿತು. ಈಗ ಈ ಜಂಕ್ಷನ್‌ನಲ್ಲಿ ಬದುಕಲು ಪ್ರಯತ್ನಿಸುವವರಿಗಿಂತಲೂ ನಟಿಸುವವರೇ ಹೆಚ್ಚು ಮಂದಿ ಇರುತ್ತಾರೆ. ಪ್ರತಿಯೊಬ್ಬರೂ ನಟರೇ ತುಂಬಿರುವ ಜಾಗ ಇದಾಗಿದೆ. ರಾತ್ರಿ ಹೊತ್ತು ಇಲ್ಲಿ ಬದುಕಿನ ಬೇರೆ ಬೇರೆ ತರದ ಮುಖಗಳಿಂದ ಬರುವ ಧ್ವನಿಗಳನ್ನು ಕೇಳಬಹುದು. ಬದುಕಿನ ಬವಣೆಯನ್ನು ಹೊತ್ತುಕೊಂಡು ವಿವಿಧ ಊರುಗಳಿಂದ ವಿವಿಧ ರೀತಿಯ ಜನಮಾನಸಗಳು ಇಲ್ಲಿ ಸಿಗುತ್ತವೆ.

ಇಲ್ಲಿ ಎಲ್ಲರದೂ ಒಂದೊಂದು ಆಟ ಆ ಆಟದಲ್ಲಿ ಬಂದವರು ಹೋದವರು ತಮಗೆ ಬೇಕಾದ್ದನ್ನು ಪಡೆದುಕೊಂಡು ಹೋಗುತ್ತಾರೆ. ಅದರಲ್ಲಿ ಸ್ವಾರ್ಥ ನಿಸ್ವಾರ್ಥಗಳ ಪ್ರಶ್ನೆ ಇಲ್ಲ. ನ್ಯಾಯ ಅನ್ಯಾಯಗಳ ಸುಳಿವಿನ ಆಲೋಚನೆ ಇಲ್ಲ. ಯಾರು ಯಾರಿಗೆ ಬೇಕಾದರೂ ಮೋಸ ಮಾಡಬಹುದು. ಯಾರೋ ಮತ್ತೊಬ್ಬರಿಂದ ಮೋಸಕ್ಕೆ ಒಳಪಡಲುಬಹುದು. ಇಂತಹ ವಾತಾವರಣ ತುಂಬಿದ ಮಹಾತ್ಮ ಗಾಂಧಿಜಿಯ ಒಂದು ಪ್ರತಿಮೆಯಾಗಲಿ, ಗಾಜಿನ ಚೌಕಟ್ಟನೊಳಗೆ ಇಟ್ಟ ಫೋಟೋ ಆಗಲಿ ಎಲ್ಲೂ ಇಲ್ಲದ 'ಗಾಂಧಿ ಜಂಕ್ಷನ್' ಎಂದು ನಾಮಕರಣ ಮಾಡಿದವರು ಯಾರೆಂದು ಒಂದು ಸ್ನೇಹಿತರ ಬಳಗದಲ್ಲಿ ಪ್ರಶ್ನೆ ಮೂಡಿತ್ತು. ಅವರಲ್ಲಿ ರವಿಶಂಕರ, ರಾಮು, ಅನಂತಕೃಷ್ಣ, ಸಾಜನ್, ಅಶ್ರಫ್ ಇನ್ನಿತರ ಸ್ನೇಹಿತರು ಈ ಜಂಕ್ಷನ್‌ನಲ್ಲಿ ರಾತ್ರಿ ಹೊತ್ತು ಕುಳಿತುಕೊಂಡು ಆಲೋಚಿಸುತ್ತಿದ್ದರು. ಅದು ಜನವರಿ ತಿಂಗಳು ಅಲ್ಲಿ ವಿಪರಿತ ಚಳಿ ಇತ್ತು. ಈ ಚಳಿಯನ್ನು ಸಹಿಸಲು ಸಾಧ್ಯವಾಗದೆ ಒಂದು ಟ್ರಾವಲ್ಸ್‌ನಲ್ಲಿ ರಾತ್ರಿ ಹೊತ್ತು ಗಂಟೆಗಟ್ಟಲೇ ಈ ಸ್ನೇಹಿತರು ಕಾಲಹರಣ ಮಾಡುತ್ತಿದ್ದರು.

ಒಂದು ರಾತ್ರಿ ಆ ಚಳಿಯಲ್ಲಿ ಜಂಕ್ಷನ್ನಿನ ಮರೆಯಲ್ಲಿದ್ದ ಒಂದು ಮೂಲೆಯಿಂದ ಒಬ್ಬ ಸ್ತ್ರೀಯ ಧ್ವನಿಯು ಕೇಳಿಸುತ್ತದೆ. ಅವಳ ಹೆಸರು ಶಾಂತಾ ತನ್ನ ಮಗನನ್ನು ಎಳೆದುಕೊಂಡು ಬರುತ್ತಿದ್ದಾಳೆ. ನಿನಗೇನು ನುಂಗುವುದಕ್ಕೆ ಬೇಡವೇ...? ಹೋಗು ಎಂದು ಅಳುತ್ತಿರುವ ಮಗನನ್ನು ಎಳೆದುಕೊಂಡು ಒಂದು ಕೈಯಲ್ಲಿ ಗೋಣಿ ಚೀಲವನ್ನು ಹಿಡಿದುಕೊಂಡು ಬರುತ್ತಿದ್ದಾಳೆ. ಇದನ್ನು ನೋಡಿದ ರಾಮು, ಶಾಂತ ಮೊದಲು ಶಾಂತಾ ತುಂಬ ಆರೋಗ್ಯವತಿಯಾಗಿದ್ದಳು ಈಗ ಒಣಗಿ ಸಣಕಲಾಗಿ ರೋಗ ಹಿಡಿದವಳಂತೆ ಕಾಣುತ್ತಿದ್ದಾಳೆ. ಆದರೂ ಪ್ರತಿರಾತ್ರಿ ಹೊತ್ತು ಇಂತಹ ನಡುಗುವ ಚಳಿಯಲ್ಲಿ ಬಿಡದೆ ತನ್ನ ಮಗನ ಜೊತೆ ಕಾಣುತ್ತಾಳೆ ಎನ್ನುತ್ತಾನೆ ರಾಮು. ಅವಳು ಯಾಕೆ ಆ ಹುಡುಗನನ್ನು ರಾತ್ರಿ ಹೊತ್ತು ಕರೆದುಕೊಂಡು ಬರುತ್ತಾಳೆ ಯಾವುದಾದರೊಂದು ಅನಾಥಾಶ್ರಮಕ್ಕೆ ಸೇರಿಸಿ ಬಿಡಬಾರದೆ ಎಂದು ರವಿಶಂಕರ ಹೇಳುತ್ತಾನೆ. ಆ ಹುಡುಗ ಹೇಗೆ ಬೆಳೆದರೂ ಅವನಲ್ಲಿ ಯಾವ ದೋಷಗಳು ಕಾಣುತ್ತಿರಲಿಲ್ಲ. ಶಾಂತಳ ಧ್ವನಿ ಏರಿನಿಂದ ಕೂಗುತ್ತಿದ್ದಳು.

ಆ ಹುಡುಗ ಕೈ ಬಿಡದೆ ಎಲೆಕ್ಟ್ರಿಕ್ ಕಂಬವನ್ನು ಹಿಡಿದುಕೊಂಡು ನಿಂತಿದ್ದಾನೆ. ಅವಳು ಗೋಣಿ ಚೀಲದಿಂದ ಬೀಸಿ ಬೀಸಿ ಹೊಡೆಯುತ್ತಿದ್ದಾಳೆ. ಕೂದಲನ್ನು ಹಿಡಿದು ಜಗ್ಗುತ್ತಿದ್ದಾಳೆ. ಅವನು ತಲೆ ಬಗ್ಗಿಸಿಕೊಂಡು ಅಳುತ್ತ ಕುಳಿತಿದ್ದಾನೆ. ನೀನು ಆ ಹುಡುಗನ್ನು ಕರೆದುಕೊಂಡು ಬೇಗ

ಬರ್ತಿಯೋ ಇಲ್ಲವೋ ಎಂದು ಶಾಂತಾಳನ್ನು ಹಿಂದಿನಿಂದ ಒಬ್ಬ ಗದರಿಸಿ ಕೇಳುತ್ತಿದ್ದಾನೆ. ಗಾಂಧಿ ಜಂಕ್ಷನ್ನಿನ ಆ ರಾತ್ರಿ ತುಂಬ ನಿಶ್ಯಬ್ದತೆಯಿಂದ ಕೂಡಿತ್ತು. ಆದರೆ ಆ ಹುಡುಗನ ಅಳು ಕರುಣಾಜನಕವಾಗಿತ್ತು. ಇಂತಹ ಅಪರಾಧವನ್ನು ತಡೆಯಬೇಕೆಂದು ರಾಮು ಆ ಹುಡುಗನನ್ನು ಹಿಡಿದುಕೊಳ್ಳುವುದಕ್ಕೆ ಓಡಿ ಹೋಗುತ್ತಾನೆ. ಆ ಹುಡುಗ ಭಯದಿಂದ ರಾಮುವಿಗೆ ಸಿಗದಂತೆ ಮುಂದೆ ಓಡುತ್ತಿರುತ್ತಾನೆ. ರಾಮು ಕೆಳಗಡೆ ಬಿದ್ದು ಮೈ ತುಂಬ ಗಾಯವನ್ನು ಮಾಡಿಕೊಳ್ಳುತ್ತಾನೆ. ಆಗ ಅಲ್ಲಿ ಜನರೆಲ್ಲ ಸೇರುತ್ತಾರೆ. ಕಾರಣವನ್ನು ಕೇಳುತ್ತಾರೆ. ಆ ಹುಡುಗ ನಿನ್ನಿಂದ ಹಣವನ್ನು ಕದ್ದುಕೊಂಡು ಬಂದನೆ ಎಂದು ಕೇಳುತ್ತಾರೆ. ಇಲ್ಲವೆಂದು ರಾಮ ಹೇಳುತ್ತಾನೆ.

ಆಗ ಪೊಲೀಸ್ ಪೇದೆ ಬಂದು ಹುಡುಗರನ್ನು ಕೆಟ್ಟ ನೋಟದಿಂದ ನೋಡಿ ಅವರನ್ನು ಭಯಬೀಳಿಸಿ ಅವರನ್ನು ಹಿಡದುಕೊಳ್ಳಲು ಬರುತ್ತಿಯಂತ ರಾಮುವಿಗೆ ಎರಡೇಟು ಹೊಡೆಯುತ್ತಾನೆ. ಅಷ್ಟರಲ್ಲಿ ರಾಮು ತಪ್ಪಿಸಿಕೊಂಡು ಪುನಃ ಗಾಂಧಿ ಜಂಕ್ಷನ ಕಡೆ ಬರುತ್ತಾನೆ. ಮರುದಿನ ಅದೇ ಪೊಲೀಸ್ ಪೇದೆ ಶಾಂತಾಳ ಮುಂದೆ ಗಾಂಧಿ ಜಂಕ್ಷನ್ನಿನ ಕತ್ತಲು ರಾತ್ರಿಯಲ್ಲಿ ನಿಂತುಕೊಂಡಿದ್ದಾನೆ. "ಅವರು ಇನ್ನೂ ಒಂದಷ್ಟು ಮುಂದೆ ನಡೆದರು ಶಾಂತಾ ಗೋಡೆಗೊರಗಿ ಕುಳಿತಿದ್ದಾಳೆ. ಕವಚಿ ಮಲಗಿದ ಒಬ್ಬ ವ್ಯಕ್ತಿ ಆತನ ದೇಹ ಪೂರ್ತಿಯಾಗಿ ಒಂದೇ ಸಮನೆ ಏರಿಳಿಯುತ್ತಿದೆ. ಆ ದೇಹದ ಅಡಿಯಿಂದ ಏನೋ ಒಂದು ನರಳಾಟ ಕೇಳಿ ಬರುತ್ತಿದೆ. ಯಾವದೋ ಕ್ಷಣದಲ್ಲಿ ಆತನ ಚಲನೆ ನಿಂತು ಹೋಯಿತು. ಆತನ ಎದುಸಿರು ಬಿಡುತ್ತ ಎದ್ದ. ಅಷ್ಟರಲ್ಲಿ ಅವರು ಅವನನ್ನು ಕಂಡರು. ಗೋಣಿ ಚೀಲದ ಮೇಲೆ ಹುಡುಗ ನಗ್ನವಾಗಿ ಮಲಗಿದ್ದ."೨೧ ಎದ್ದು ನಿಂತ ವ್ಯಕ್ತಿ ಪ್ಯಾಂಟಿನ ಮೇಲೆ ಬೆಲ್ಟ ಬಿಗಿದ ನಂತರ ಅದಕ್ಕಾಗಿ ಮತ್ತೊಬ್ಬನನ್ನು ಕಾದು ನಿಂತಿದ್ದ ಆ ಹುಡುಗ ಸಾಕು, ಸಾಕು, ಬೇಡ, ಬೇಡವೆಂದು ಅಳುತ್ತಿದ್ದನು.

ಆಗಲ್ಲ ಅಮ್ಮಾ, ಅಯ್ಯೋ, ದೇವರೇ ಎಂದು ಅರಚುತ್ತಿರುವ ಈ ಹುಡುಗನ ಇಂಥ ಘೋರ ಸ್ಥಿತಿಗೆ ಅಧಿಕಾರಿಶಾಹಿಗಳು, ಬಂಡವಾಳಶಾಹಿಗಳು ಶೋಷಿತರ ಮೇಲೆ ನಡೆಸುತ್ತಿರುವ ನಿತ್ಯ ನಿರಂತರವಾದ ಅತ್ಯಾಚಾರಗಳಾಗಿವೆ. ಆ ಹುಡುಗನ ಮೇಲೆ ಆಗುತ್ತಿರುವ ಮೃಗೀಯ ಹಿಂಸೆಯ ಕೂಗಿನಲ್ಲಿ ಸಮಾಜದಲ್ಲಿ ಶೋಷಿಸಲ್ಪಟ್ಟ ದಲಿತರ ಸಂವೇದನೆಗಳನ್ನು ಒಳಗೊಂಡಿರುತ್ತವೆ.ಬಡತನದ ಹಸಿವು ಏನೆಲ್ಲವನ್ನು ಮಾಡಿಸುತ್ತದೆ. ಒಳ್ಳೆಯದನ್ನು, ಕೆಟ್ಟದ್ದನ್ನೂ ಅಥವಾ ಎರಡನ್ನೂ ಮಾಡಿಸುತ್ತದೆ. ಶಾಂತಾಳ ಜೀವನ ಈ ಮೊದಲೇ ಸಮಾಜವು ನೀಡಿರುವ ಯಾತನೆಯನ್ನು ಅನುಭವಿಸಿದೆ. ಬಂಡವಾಳಶಾಹಿಗಳು ಅವಳ ದೇಹವನ್ನು ಬಳಸಿಕೊಂಡು ರೊಗದ ಕೋಣೆಯಾದಾಗ ಬೀದಿಯಲ್ಲಿ ಬಿಟ್ಟು ನಿರಾಶ್ರಿತಳನ್ನಾಗಿ ಮಾಡಿದ್ದಾರೆ. ಅದರ ಸತ್ಯದ ಅರಿವು ಅವಳಿಗಿದೆ. ಅವಳು ಮಾಡುತ್ತಿದ್ದ ದೇಹದ ವ್ಯಾಪಾರದಿಂದ ಸಿಕ್ಕಿದ್ದು ರೋಗ ಮಾತ್ರವೇ ಯಾವ ಹಣವೂ ಉಳಿಯಲಿಲ್ಲ, ದೇಹವನ್ನು ಕಳೆದುಕೊಂಡರೂ ಸಿಕ್ಕಿದ್ದು ಏನೂ ಇಲ್ಲ.

ಹೊಟ್ಟೆಗಾಗಿ ಮಾಡಿದ್ದು ಮತ್ತೆ ಹಸಿದ ಹೊಟ್ಟೆಯಿಂದ ನರಳಾಡುವಂತೆ ಮಾಡಿದೆ. ಅವಳು ಅನುಭವಿಸಿದ ಜೀವನದಿಂದಲೇ ತನ್ನ ಮಗನನ್ನು ಅಂತಹ ಕೆಲಸಕ್ಕೆ ಬಲಿ ಕೊಡಬಾರದಿತ್ತು. ಆದರೆ ತಾನು ಬಲಿಯಾದಂತೆ ತನ್ನ ಮಗನು ಆ ಕೆಲಸದಿಂದ ಬಲಿಯಾಗುತ್ತಾನೆ ಎಂಬ ಸತ್ಯ ಅವಳಿಗೆ ತಿಳಿದಿದ್ದರೂ ಏನೂ ಮಾಡುವುದು ಬೇರೆಯ ದಾರಿಯೇ ಇಲ್ಲ. ಈ ಮೊದಲು ಅವಳ ಜೊತೆ ನಡೆಸಿದಂತೆ ಅತ್ಯಾಚಾರದ ಸಮಾಜ ಮತ್ತೆ ಅವಳನ್ನು ಅವಳ ಮಗನನ್ನು ನೋಡುವ ದೃಷ್ಟಿಯೂ ಅದೇ ಆಗಿರುತ್ತದೆ. ಇದರಿಂದ ಮಾನಸಿಕ ಬಾಧೆಯಿಂದ ಸಮಾಜದಲ್ಲಿ ಅವಳು ನೆಮ್ಮದಿಯಿಂದ ಬದುಕಲು ಸಾಧ್ಯವಿಲ್ಲದೆ ಹಾಗೂ ತನ್ನ ಮಗನನ್ನು ಬಿಟ್ಟರೆ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕೆ ಬೇರಾವ ಆಸ್ತಿಯೂ ಅವಳಲ್ಲಿ ಉಳಿದಿರುವುದಿಲ್ಲ. ಅವನನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದರ ಅರಿವು ಅವಳಿಗಿಲ್ಲ. ಅರಿವಿಲ್ಲದ ಸ್ಥಿತಿಯ ಜೀವನವನ್ನು ಬಂಡವಾಳಶಾಹಿಗಳು ಶಾಂತಾಳಿಗೆ ಮಾನಸಿಕವಾಗಿ ಹುಚ್ಚಿಯನ್ನಾಗಿ ಮಾಡಿದ್ದಾರೆ.

ಇತರೆ ಮಕ್ಕಳಂತೆ ಒಳ್ಳೆಯ ವಸ್ತ್ರಗಳನ್ನು ಧರಿಸಿ ಶಾಲೆಗೆ ಹೋಗಿ ಶಿಕ್ಷಣವನ್ನು ಪಡೆದು ಗೆಳೆಯರ ಜೊತೆ ಊಟ ಮಾಡಿ ಆಟವಾಡಿಕೊಂಡು ಬೆಳೆಯುವ ಭಾಗ್ಯ ಶಾಂತಾಳ ಮಗನಿಗೆ ಸಿಕ್ಕಿರುವುದಿಲ್ಲ. ಅದನ್ನು ಅವಳಿಂದ ಕೊಡಲು ಸಾಧ್ಯವಾಗುವುದಿಲ್ಲ. ಯಾಕೆಂದರೆ ಬಂಡವಾಳಶಾಹಿಗಳು ಅವಳ ಮೇಲೆ ಈ ಮೊದಲೇ ನಡೆಸಿರುವ ದೌರ್ಜನ್ಯದ ಅತ್ಯಾಚಾರದಿಂದ ಮಾನಸಿಕವಾಗಿ ಅಸ್ವಸ್ಥಳಾಗಿದ್ದಾಳೆ. ಸರಿ ತಪ್ಪುಗಳ ಅರಿವು ಅವಳಿಗಿಲ್ಲ. ತನಗೆ ಬೇಕಾಗಿರುವುದು ಊಟ ಮಾಡಲು ಅನ್ನ ತನ್ನ ಹಸಿವನ್ನು ಹಿಂಗಿಸಿಕೊಳ್ಳಲು ತನ್ನ ಹಾಗೂ ತನ್ನ ಮಗನದೇಹದಿಂದ ಬಂಡವಾಳಶಾಹಿಗಳಿಗೆ ಸುಖಪಡಿಸಿ ತಮ್ಮ ದೇಹವನ್ನು ಹಿಂಸೆಯಿಂದ ನರಳಾಡಿಸಿಕೊಂಡು ಸಮಾಜದಲ್ಲಿ ಬಲಿಯಾಗಿ ಬದುಕುತ್ತಿದ್ದಾರೆ. ಕಾನೂನನ್ನು ಕಾಪಾಡಬೇಕಾಗಿರುವ ಪೋಲೀಸ್ ಪೇದೆಯೇ ಅವಳ ಮಗನ ಮೇಲೆ ನಡೆಸುತ್ತಿರುವ ಮೃಗಿಯ ಹಿಂಸೆಯು ಅಧಿಕಾರಿಶಾಹಿಗಳು ದೀನದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯದ ಪ್ರತೀಕವಾಗಿ ಈ ಕಥೆಯಲ್ಲಿ ಮೂಡಿ ಬಂದಿದೆ. ಶಾಂತಾ ಮತ್ತು ಅವಳ ಮಗನ ಜೀವನದ ವ್ಯಥೆಯ ಬದುಕನ್ನು ಕೇಳುವವರ್‍ಯಾರು...? ಇಂತಹ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಅದೇಷ್ಟೋ ನಿರಾಶ್ರಿತ ಕುಟುಂಬಗಳ ಶೋಷಣೆಗೆ ಕೊನೆ ಯಾವಾಗ...?.

ದಲಿತರು, ನೊಂದವರು, ನಿರಾಶ್ರಿತರು, ಶೋಷಿಸಲ್ಪಟ್ಟರು ಈ ಸಮಾಜದಲ್ಲಿ ಆರ್ಥಿಕವಾಗಿ ಪ್ರಬಲರಾಗಿ ಇತರರಂತೆ ತಮ್ಮ ಹೊಟ್ಟೆ ಹಸಿವಿನಿಂದ ಮುಕ್ತಿ ಪಡೆಯುವುದು ಯಾವಾಗ...? ಎಂಬೆಲ್ಲ ಪ್ರಶ್ನೆಗಳನ್ನು ಕಥೆಗಾರರು ಈ ಕಥೆಯ ಮೂಲಕ ಸಮಾಜದಲ್ಲಿ ದಲಿತರು ಉಳ್ಳವರ ಬಲಾತ್ಕಾರದಿಂದ ಪಡುತ್ತಿರುವ ಸಂಕಟಗಳನ್ನು ಈ ಕಥೆಯ ಮೂಲಕ ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ದಲಿತರ ಹೀನ ಸ್ಥಿತಿಯ ಜೀವನಕ್ಕೆ ಅಧಿಕಾರಿಶಾಹಿಗಳು ಮತ್ತು ಬಂಡವಾಳಶಾಹಿಗಳು ನೇರವಾಗಿ ಕಾರಣವಾಗಿದ್ದಾರೆ ಎಂಬುವುದನ್ನು ಈ ಕತೆಯು ಮಾರ್ಕ್ಸ ಮತ್ತು ಲೋಹಿಯವಾದದ ನೆಲೆಯಿಂದ ಪ್ರತಿಪಾದಿಸುತ್ತದೆ.

ರತ್ನಾಕರ ಶೆಟ್ಟಿಯವರು ಅನುವಾದಿಸಿದ 'ಮರಾಠಿ ಕಥಾ ಸಂಹಿತೆ'ಯ ಕಥಾ ಸಂಕಲನದಲ್ಲಿ ಮರಾಠಿಯ ಲೇಖಕರಾದ ಹ.ಮೊ.ಮರಾಠೆಯವರು ಬರೆದಂತಹ 'ಕಿಡಿ' ಯೆಂಬ ಕಥೆಯು ಸಂವಿಧಾನದ ಮೂಲಭೂತ ಹಕ್ಕುಗಳನ್ನು ಸರಕಾರವು ಸರಿಯಾಗಿ ಪಾಲಿಸದೆ ಇರುವುದರಿಂದ ಅಸಮಾನತೆಯಿಂದ ನೊಂದ ಸಮುದಾಯವು ಸ್ವತಂತ್ರತೆಯನ್ನು ಹುಡುಕುವುದಕ್ಕೆ ತಮ್ಮದೆಯಾದ ಸ್ವತಂತ್ರದೇಶ ಕಟ್ಟಿಕೊಳ್ಳುವುದಕ್ಕಾಗಿ, ತಮ್ಮ ಮೂಲಭೂತ ಹಕ್ಕುಗಳನ್ನು ಪಡೆದುಕೊಳ್ಳುವುದಕ್ಕಾಗಿ, ಸಮಸಮಾಜದ ನಿರ್ಮಾಣಕ್ಕಾಗಿ, ಬ್ರಿಟಿಷರು ಬಿಟ್ಟುಕೊಟ್ಟು ಹೋದ ಸ್ವತಂತ್ರ ಬೂಟುಗಳಿಗೆ ಸಿಕ್ಕಿದೆಯೇ ವಿನಃ ಚಪ್ಪಲಿಗಳಿಲ್ಲದೆ ಬರಿಗಾಲಲ್ಲಿ ತಿರುಗುತ್ತಾ, ಹರಿದ ಚಿಂದಿ ಬಟ್ಟೆಯನ್ನು ತೊಟ್ಟುಕೊಂಡು ಮೂರೊತ್ತಿನ ಊಟದಲ್ಲಿ ಒಂದೊತ್ತು ಊಟವಿಲ್ಲದ ಹಸಿವಿನಿಂದ ಬಳಲುತ್ತಿರುವ ಹೊಲೆಯ ಮಾದಿಗರ ಕೇರಿಯ ಜನಗಳಿಗೆ ಸಿಕ್ಕಿಲ್ಲ. ಇದರ ನೋವನ್ನು ಹೊತ್ತುಕೊಂಡು ಸರಕಾರದ ವಿರುದ್ಧ ಹೋರಾಟಕ್ಕಿಳಿದ ನಕ್ಸಲೈಟ್‌ರ ಪ್ರಭಾವದಿಂದ ಈ 'ಕಿಡಿ' ಕಥೆಯು ಅನಾವರಣಗೊಂಡಿರುತ್ತದೆ.

ಸರಿಯಾದ ಶಿಕ್ಷಣ ಪದ್ಧತಿಯಿಂದ ವಂಚಿತರಾಗಿ, ಶಿಕ್ಷಣವನ್ನು ಪಡೆದರೂ ಉದ್ಯೋಗವಿಲ್ಲದೆ ಯುವಕರ ಬದುಕಿನ ಜೊತೆ ಆಟವಾಡುತ್ತಿರುವ ಸರಕಾರ ಇಲ್ಲಸಲ್ಲದ ನಿಯಮಗಳನ್ನು ಮಾಡಿ ಉದ್ಯೋಗಗಳು ಉಳ್ಳವರ ಸೊತ್ತಾಗಿ, ಮಾರಾಟ ಮಾಡಿಕೊಂಡು ಬಡವರ ಕಂಬನಿಯ ಜೊತೆ ಕನಿಕರದವಿಲ್ಲದೆ ರಕ್ತವನ್ನು ಸುರಿಸುತ್ತಿದೆ. ಸರಿಯಾದ ಆರ್ಥಿಕ ಭದ್ರತೆಯನ್ನು ಒದಗಿಸದೆ ಜಮೀನ್ದಾರರನ್ನು ಒಡೆಯರನ್ನಾಗಿ ಮಾಡಿ, ಬಡ ಭೂರಹಿತ ವರ್ಗವನ್ನು ಗುಲಾಮರನ್ನಾಗಿ ಮಾಡಿರುವ ಆಳುವ ಸರಕಾರದ ವಿರುದ್ಧ ಕ್ರಾಂತಿಕಾರರು ಹೋರಾಟಕ್ಕೆ ಇಳಿದ ಪ್ರಸಂಗವನ್ನು ಈ 'ಕಿಡಿ' ಕಥೆಯು ಅದರಿಂದಾಗುವ ಕೇರಿಯ ದುಃಸ್ಥಿತಿಯನ್ನು ಸರಕಾರ ದಮನಿತರ ಮೇಲೆ ಮಾಡುವ ದೌರ್ಜನ್ಯವನ್ನು 'ಗೋಲಿಬಾರಿನ' ಕಿಡಿಗಳ ಮೂಲಕ ದಲಿತರ ಕೇರಿ ಸ್ಮಶಾನವಾಗುವ ಹೃದಯ ಕಲಕುವ ವಿದ್ರಾವಕ ಘಟನೆಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಕೆರಿಯ ಮೇಲೆ ಗುಂಡುಗಳ ಸುರಿಮಳೆ ಸುರಿಯುತ್ತದೆ. ಕೇರಿ ಜನ ಭಯಭೀತರಾಗಿ, ತಮ್ಮ ಜೀವವನ್ನು ಉಳಿಸಿಕೊಳ್ಳುವುದಕ್ಕಾಗಿ ತಮ್ಮ ತಮ್ಮ ಮನೆಗಳನ್ನು ಬಿಟ್ಟು ಓಡುತ್ತಿದ್ದಾರೆ. ಕೇರಿಯ ಸುತ್ತ ಸರಿಯಾದ ರಸ್ತೆಗಳಿಲ್ಲ, ಮುಳ್ಳು ಕಲ್ಲು ಎನ್ನದೆ ನಡೆದದ್ದೆ ದಾರಿಯೆನ್ನುವ ರೀತಿಯಲ್ಲಿ, ತೋಟದತ್ತ, ನೀರಿನತ್ತ, ಕಾಡಿನತ್ತ, ಗದ್ದೆಗಳತ್ತ ಎತ್ತ ಬಂದರೆ ಅತ್ತ ತಮ್ಮ ಪ್ರಾಣವನ್ನು ಸೈನಿಕರಿಂದ ಉಳಿಸಿಕೊಳ್ಳಲು ಕೇರಿಗೆ ಕೇರಿಯೇ ಓಡುತ್ತಿದೆ.

ವಯಸ್ಸಾದ ಮುದುಕರು ಸಹ ಹಿಂದೆ ನೋಡುತ್ತಾ, ಕುಂಟುತ್ತಾ ಕುಂಟುತ್ತಾ ಭಾವಾವೇಶದಿಂದ ಓಡುತ್ತಿದ್ದಾರೆ. ಅದರಲ್ಲಿ ಅವಳು ತನ್ನ ಮಗುವನ್ನು ಎತ್ತಿಕೊಂಡು ಮರದ ಮರೆಯಲ್ಲಿ ಕುಳಿತುಕೊಂಡಿದ್ದಾಳೆ. ಮಡಿಲಲ್ಲಿ ವರ್ಷ ತುಂಬಿದ ಮಗು ಅಳುತ್ತಿದೆ. ತಾನು ಗುಂಡಿನ ಸದ್ದು ಬರುಬರುತ್ತಿದ್ದಂತೆ ಮನೆಯಿಂದ ಹೊರಗೆ ಬಂದಿದ್ದಾಳೆ. ಗಂಡ ಹೊರಗಡೆ ಹೋದವ ಇನ್ನೂ ಬಂದಿರಲಿಲ್ಲ. ಇನ್ನೊಬ್ಬ ಮಗ ಮನೆಯಲ್ಲಿರಲಿಲ್ಲ. ಮುದುಕ ಮಾವನನ್ನು ಕರೆತರುತ್ತ ದಣಿದು ಮರದ ಮರೆಯಲ್ಲಿ ಕುಳಿತಿದ್ದರೂ ಆಕೆಗೆ ಗಂಡನದೆ ಚಿಂತೆ. ಉಗ್ರ ಚಹರೆಗಳುಳ್ಳ, ಬೂದು ಬಣ್ಣದ ದಪ್ಪ ಪೋಷಾಕು

ಧರಿಸಿರುವ, ಬಂದೂಕನ್ನು ಹಿಡಿದ ಸೈನಿಕ ಕೇರಿಯ ಮೇಲೆ ದಾಳಿ ಮಾಡಲು ಕಾರಣವೇನೆಂದರೆ ಅವರ ಕೇರಿಯಲ್ಲಿ ಸರಕಾರದ ವಿರೋಧಿ ಕ್ರಾಂತಿಕಾರರಿಗೆ ನೀವು ಆಶ್ರಯ ಕೊಟ್ಟಿದ್ದೀರಿ ಅವರು ನಿಮ್ಮ ಕೇರಿಯಲ್ಲಿಯೇ ಅಡಿಗಿ ಕುಳಿತಿದ್ದಾರೆ. ಅವರನ್ನು ನಮಗೆ ಒಪ್ಪಿಸಬೇಕು ಇಲ್ಲದಿದ್ದರೆ ಅವರ ಜೊತೆ ನಿಮ್ಮನ್ನು ಸುಡುತ್ತೇವೆ ಎಂದು ಗೋಲಿಬಾರ್ ಮಾಡುತ್ತಿದ್ದರು.

ಕೇರಿಯ ಜನ ನಾವು ಯಾರನ್ನು ಆಶ್ರಯವಾಗಿ ಇಟ್ಟು ಕೊಂಡಿಲ್ಲವೆಂದು ಹೇಳಿದರೂ ಕೇಳದೆ ಕೇರಿಯ ಮೇಲೆ ಗುಂಡುಗಳನ್ನು ಹಾರಿಸುತ್ತಿದ್ದರು. ಆಕೆಯ ಮಗ ಇಪ್ಪತ್ತರ ವಯಸ್ಸಿನವ ಅವನೂ ಒಮ್ಮೊಮ್ಮೆ ಹೇಳುತ್ತಿದ್ದ ಕ್ರಾಂತಿಕಾರ ಪಡೆಯಲ್ಲಿ ನಾನು ಸರಕಾರದ ಜೊತೆ ಯುದ್ಧ ಮಾಡಬೇಕು. ಕ್ರಾಂತಿಕಾರರು ನಡೆಸುತ್ತಿರುವ ಹೋರಾಟದಲ್ಲಿ ನಾನು ಭಾಗಿಯಾಗಿ ನಮ್ಮಂತ ಬಡಜನರಿಗೆ ಸ್ವತಂತ್ರವನ್ನು ತಂದುಕೊಡಬೇಕೆಂದು. ಆದರೆ ಆಕೆ ಮಗನಿಗೆ ಬೈಯುತ್ತಿದ್ದಳು. ನಮಗ್ಯಾಕೆ ನಾವು ಬಡವರು ಸರಕಾರದವರು ನಮ್ಮನ್ನು ಎಳೆದು ಕೊಂಡು ಹೋಗಿ ಸೆರೆಮನೆಯಲ್ಲಿ ಹಾಕುತ್ತಾರೆ. ಆದರೂ ಮಗ ಕೇಳದೆ ನಾವು ಬಂದೂಕು ಎತ್ತ ಬೇಕಾಗಿದೆ ಎನ್ನುತ್ತಾನೆ. ಇದನ್ನು ನೆನೆಯುತ್ತಾ ಮರದ ಮರೆಯಲ್ಲಿ ಆಕೆ ಕೂಸನ್ನೆತ್ತಿಕೊಂಡು ಕುಳಿತಿದ್ದಾಳೆ. ಅವಳಿಗೆ ಅತ್ತ ಗಂಡನದೆ ಚಿಂತೆ. ಅವನು ಸೈನಿಕರ ಕೈಗೆ ಸಿಕ್ಕಿಕೊಂಡನೋ ಇನ್ನು ಬರಲಿಲ್ಲವಲ್ಲವೆಂದು. ಸೈನಿಕರಿಗೆ ಕೇರಿಯ ಜನ ನಾವೇನು ತಪ್ಪು ಮಾಡಿದ್ದೇವೆ ಸ್ವಾಮಿ ನಮ್ಮ ಮೇಲೆ ಯಾಕೆ ಗುಂಡುಗಳನ್ನು ಹಾರಿಸುತ್ತಿರಿ.

ನಾವು ಯಾವ ಕ್ರಾಂತಿಕಾರರಿಗೂ ಆಶ್ರಯ ನೀಡಿಲ್ಲವೆಂದು ಹಪಿಹಪಿಯಾಗಿ ಬೇಡಿ ಕೊಂಡರೂ "ಸೈನಿಕರ ಮುಖಂಡನೆಂದ ಸೈನಿಕರು ಮುನ್ನುಗ್ಗಿ, ಕೇರಿಯ ಜನರ ಮೇಲೆ, ಸ್ತ್ರೀಯರ ಬೆನ್ನಿಗೆ ಬಂದೂಕಿನ ಹಿಡಿಕೆಯಿಂದ ಹೊಡೆತ ಕೊಡುತ್ತ, ಅವರನ್ನು ಗಾಯಗೊಳಿಸಿ, ಕೆಳಗೆ ಬೀಳಿಸಿ, ಹೆದರಿಸಿ ಬಿಟ್ಟು, ಮನೆ ಮನೆಗೆ ನುಸುಳಿದರು. ಒಳಗಿಂದ ಸರಕು ಸಾಮಾನುಗಳನ್ನು ಎತ್ತಿ ಹೊರಗೆ ಬಿಸಾಕಿದರು. ಅವರು ಹಾಗೆ ಮಾಡಬಾರದು ಎಂದು ಸ್ತ್ರೀಯರು ಬೊಬ್ಬಿಡುತ್ತಾ ಬಂದರು. ಆಗ ಅವರು ಗಾಳಿಯಲ್ಲಿ ಬಂದೂಕಿನ ಗೋಲಿಗಳನ್ನು ಹಾರಿಸಿದರು. ಆ ಶಬ್ದ ಕೇಳಿ ಬೆದರಿದ ಕೇರಿಯ ಜನ ದೂರ ಸರಿದರು."[೨೨] ಅಧಿಕಾರದ ಬೂಟುಗಳು ಶೋಷಿತರ ಮೇಲೆ ನಡೆಸುವ ದೌರ್ಜನ್ಯ ಇದಾಗಿದೆ.ಸರಕಾರದ ವಿರೋಧಿಗಳಾಗಿದ್ದಾರೆ ಎಂಬುವುದಕ್ಕಿಂತ ಹಾಗೆ ಅವರು ಆಗುವುದಕ್ಕೆ ನಮ್ಮಲ್ಲಿರುವ ದೋಷಗಳು ಯಾವುವು...? ಅವರನ್ನು ಹಾಗೆ ಮಾಡಿದವರು.... ಯಾರು...? ಹೀಗೇಕೆ ಅವರಾಗಿದ್ದಾರೆ...? ಇಂಥ ಪ್ರಶ್ನೆಗಳನ್ನು ಆಳುವ ವರ್ಗ ಹಾಕಿಕೊಂಡರೆ ಅವರಿಗೆ ದಲಿತ ದಮನಿತರ ನೋವು ಅರ್ಥವಾಗುತ್ತದೆ.

ಭಾರತದ ಸ್ವತಂತ್ರ್ಯ ಆಳುವುದಕ್ಕಾಗಿಯೆ...? ಅಥವಾ ಆಳಾದವರಿಗೂ ಆಶ್ರಯ ನೀಡಿ ಸಮಾಜವನ್ನು ಸಮಾನತೆಯ ಕಡೆ ತರುವುದಾಗಿಯೇ...? ಸರಕಾರದವರು ಒಮ್ಮೆ ಆಲೋಚಿಸಬೇಕಾಗಿದೆ. ಕಥೆಯ ಕೊನೆಯಲ್ಲಿ ಆಕೆಯ ಗಂಡನನ್ನು ಸೈನಿಕರು ಗುಂಡಿಕ್ಕಿ ಕೊಲ್ಲಿದ್ದಾರೆ. ಕೇರಿಯ ಪ್ರತಿಯೊಂದು ಮನೆ ಮನೆಯಲ್ಲಿ ಹೆಣದ ರಾಶಿಯು ತುಂಬಿಕೊಂಡಿದೆ. ಗುಂಡಿನ ಸದ್ದು ನಿಂತಾದ ಮೇಲೆ ಎಲ್ಲರೂ

ಮನೆಗೆ ಬಂದು ಅರಚುತ್ತಿದ್ದರು. ಆಕೆಯ ಮಗನು ಬಂದಿದ್ದಾನೆ. ತಾಯಿ ಮಗನನ್ನು ನೋಡಿ ಮನೆಯ ಒಳಗೆ ಹೋಗಿ ಆಯುಧಗಳನ್ನು ತಂದು ಹೋಗು...! ಎಂದು ಹೇಳುವ ಅವಳ ಆಕ್ರಂದನದಲ್ಲಿ ಸೇಡು... ಕಿಡಿಯಾಗಿ ಈ ಕಥೆಯ ಮೂಲಕ ಹರಿದುಬಂದಿದೆ. ಸ್ವತಂತ್ರ ಸಿಗುವವರೆಗೂ ನಮ್ಮ ಹೋರಾಟ ಎನ್ನುವ ದಮನಿತರ ಧ್ವನಿ ಈ ಕಥೆಯಲ್ಲಿ ಪ್ರಜ್ವಲಿಸುತ್ತಿದೆ. ಯಾರಿಗೆ ಬಂತು ಸ್ವತಂತ್ರವೆಂಬಂತೆ ಅಧಿಕಾರಿಶಾಹಿವರ್ಗದವರು ದಲಿತರ ಮೇಲೆ ನಡೆಸುತ್ತಿರುವ ಈ ದೌರ್ಜನ್ಯಕ್ಕೆ ದಲಿತರಿಗಿರುವ ಅಸಹಾಯಕತೆಯೇ ಕಾರಣವಾಗಿರುತ್ತದೆ.

ಸರಕಾರದ ವಿರುದ್ಧ ಅವರು ಮಾಡುತ್ತಿರುವ ತಪ್ಪುಗಳ ವಿರುದ್ಧ, ಧ್ವನಿಯನ್ನೆತ್ತಿದ್ದರೆ ಅವರನ್ನು ಅಪರಾಧಿಗಳೆಂದು ತೀರ್ಮಾನಿಸಿ ಅವರನ್ನು ಗೋಲಿಬಾರ್ ಮುಖಾಂತರ ಹತ್ಯೆಗೈಯುತ್ತಿರುವುದು ಸರಕಾರದ ದೋಷವಾಗಿದ್ದು, ತಮ್ಮ ತಮ್ಮ ಹಿತ ದೃಷ್ಟಿಯಿಂದ ಅಧಿಕಾರಿಶಾಹಿಗಳು ಬಡವರ ಮೇಲೆ ತಮ್ಮ ಅಧಿಕಾರವನ್ನು ಚಲಾಯಿಸುತ್ತಿದ್ದಾರೆ. ಆದರೆ ಅಪರಾಧಿಗಳೆಂದು ಸರಕಾರದ ವಿರುದ್ಧ ಧ್ವನಿಯನ್ನೆತ್ತುವವರ ನೋವುಗಳನ್ನು ತಿಳಿಯಬೇಕಾಗಿರುವುದು ಸರಕಾರದ ಆದ್ಯ ಕರ್ತವ್ಯವಾಗಿದೆ. ಅವರು ಅಪರಾಧಿಗಳಾಗುವುದಕ್ಕೆ ಕಾರಣವಾಗುವ ಅಂಶಗಳನ್ನು ಸರಕಾರವು ವಿಶ್ಲೇಷಣೆಗೆ ಒಳಪಡಿಸಬೇಕು. ದಲಿತರು ತಮಗೆ ಸಂವಿಧಾನವು ನೀಡಿರುವ ಮೂಲಭೂತ ಹಕ್ಕುಗಳನ್ನು ಕೇಳಿದರೆ ಅಪರಾಧಿಗಳೆಂದು ನಿರ್ಧರಿಸುವುದು ತಪ್ಪೆಂದು ಸರಕಾರದ ಅಧಿಕಾರಿಶಾಹಿ ವರ್ಗದವರಿಗೆ ಅರಿವಾಗಬೇಕು. ಈ ತಪ್ಪಿನಿಂದಲೇ ದಲಿತರ ತಮ್ಮ ನೋವುಗಳಿಗಾಗಿ ನಡೆಸುತ್ತಿರುವ ಹೋರಾಟಗಾರರನ್ನು ಅಪರಾಧಿಗಳೆಂದು ತೀರ್ಮಾನಿಸಿದಾರೆ.

ಕಾನೂನನ್ನು ಕೈಗೆ ತೆಗೆದುಕೊಂಡು ತಮ್ಮ ಮನಬಂದಂತೆ ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯವು ಕಾನೂನು ವಿರೋಧಿ ಚಟುವಟಿಕೆಯಾಗಿದೆ. ಪ್ರಶ್ನಿಸುವ ಹಕ್ಕು ಎಲ್ಲರಿಗೂ ಇದೆ. ತಮ್ಮ ಹಕ್ಕುಗಳಿಗಾಗಿ ಕೇಳಿಕೊಳ್ಳುತ್ತಿರುವ ಹಕ್ಕು ಅದು ಮೂಲಭೂತ ಹಕ್ಕಾಗಿರುತ್ತದೆ. ಅದನ್ನು ಸಂವಿಧಾನವು ಎಲ್ಲರಿಗೂ ನೀಡಿರುತ್ತದೆ. ಈ ಹಿನ್ನೆಲೆಯಲ್ಲಿ ದಲಿತರು ತಮ್ಮಗಾಗಿರುವ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಶೋಷಣೆಗಳ ವಿರುದ್ಧ ಧ್ವನಿಯನ್ನೆತ್ತುವುದು ಯಾವ ಅಪರಾಧವೂ ಆಗಲಾರದು. ಆದರೆ ದಲಿತರ ಮೇಲೆ ಈ ಕಥೆಯಲ್ಲಿ ಅಧಿಕಾರಿಶಾಹಿಗಳು ನಡೆಸುತ್ತಿರುವ ದೌರ್ಜನ್ಯವು ದಲಿತರಿಗಾಗಿಯೇ ಮಾಡುತ್ತಿರುವ ಸಾಮಾಜಿಕ ಸ್ವತಂತ್ರದ ಶೋಷಣೆಯಾಗಿರುತ್ತದೆ. ಈ ಕಾರಣದಿಂದ ಮತ್ತೆ ದಲಿತರು ತಮ್ಮ ಹಕ್ಕುಗಳಿಗಾಗಿ ತಮ್ಮ ಜೀವವನ್ನು ನೀಡಿದರು. ಅದರ ಪರಿಣಾಮದಿಂದ ಸಮಾಜದಲ್ಲಿ ಮತ್ತೆ ಕ್ರಾಂತಿ ಉಂಟಾಗುತ್ತದೆ. ದಲಿತರು ಕ್ರಾಂತಿಯನ್ನುಂಟು ಮಾಡಿದರೆ ಮಾತ್ರ ಅವರಿಗೆ ಸ್ವತಂತ್ರದ ಶಾಂತಿ ದೊರಕುತ್ತದೆ.ಎಂಬುವುದನ್ನು ಕಥೆಗಾರರು ತಮ್ಮ ಸೂಕ್ಷ ಸಂವೇದನೆಗಳಲ್ಲಿ ದಲಿತರ ಸಾಮಾಜಿಕ ನ್ಯಾಯವನ್ನು ದೊರಕಿಸಿ ಕೊಡಬೇಕೆಂದು ಆಳುವ ಅಧಿಕಾರಿಶಾಹಿ ವರ್ಗದವರಿಗೆ ಈ ಕಥೆಯ ಮೂಲಕ ಸಂದೇಶವನ್ನು ನೀಡುತ್ತಿದ್ದಾರೆ.

ದಲಿತರು ಸಹಿಸಿಕೊಂಡಷ್ಟು ಅವರ ನೋವುಗಳು, ಅವಮಾನಗಳು, ಅತ್ಯಾಚಾರಗಳು, ಶೋಷಣೆಗಳು ಹೆಚ್ಚಾಗುತ್ತವೆ. ಶಿಕ್ಷಣ, ಸಂಘಟನೆ, ಮತ್ತು ಹೋರಾಟದ ತ್ರಿವಳಿ ಮಂತ್ರದಿಂದ ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಬೇಕು. ನಮ್ಮ ಹಕ್ಕುಗಳನ್ನು ಪಡೆಯಬೇಕಾಗಿರುವುದು ಅದು ನಮ್ಮ ಜವಾಬ್ದಾರಿಯೇ ಆಗಿರುತ್ತದೆ. ಆದ್ದರಿಂದ ದಲಿತರು ತಮ್ಮ ಬಡತನದ ಕಣ್ಣೀರಿನ ಸಹನೆಯಿಂದ ಹೊರ ಬಂದು ಅಧಿಕಾರಿಶಾಹಿಗಳು ನಡೆಸುತ್ತಿರುವ ದೌರ್ಜನ್ಯವನ್ನು ಮೆಟ್ಟಿನಿಲ್ಲಬೇಕು. ದೇಶದಲ್ಲಿ ಬದುಕುತ್ತಿರುವ ಎಲ್ಲರೂ ಒಂದೇ ಆದ್ದರಿಂದ ದೇಶದ ಸಮಾನತೆಯಲ್ಲಿ ನಮ್ಮದು ಹಕ್ಕು ಇದೆ. ಎಂಬ ದಲಿತರ ಕ್ರಾಂತಿಕಾರಕ ಧ್ವನಿಗಳನ್ನು ಅಂಬೇಡ್ಕರವಾದ ಮತ್ತು ಲೋಹಿಯವಾದದ ನೆಲೆಯಿಂದ ಈ ಕಥೆಯು ಹೊರ ಚೆಲ್ಲುತ್ತದೆ.

ಮರಾಠಿ ದಲಿತ ಸಾಹಿತ್ಯದ ಬರಹಗಾರರಾದ ಬಾಬು ರಾವ್ ಬಾಗೂಲ ರವರು ಬರೆದಿರುವ 'ನಾನು ಜಾತಿ ಕದ್ದಾಗ' ಎಂಬ ಮರಾಠಿ ಕಥಾ ಸಂಕಲನವನ್ನು ಚಂದ್ರಕಾಂತ್ ಪೋಕಳೆಯವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಹಸಿವು' ಎಂಬ ಕಥೆಯು ಒಂದು ಬಡ ಅಂಬಿಗರ ಕುಟುಂಬ ಅನ್ನಕ್ಕಾಗಿ ಹಪಹಪಿಸಿ ನೊಂದು ಬೆಂದು ಕೊನೆಗೆ ತನ್ನ ಪ್ರಾಣವನ್ನು ಕಳೆದುಕೊಳ್ಳುವ ಹೆಣ್ಣಿನ ದುರಂತ ಕಥೆಯನ್ನು ಒಳಗೊಂಡಿರುತ್ತದೆ. ಪ್ರತಿಯೊಂದು ಜೀವಿಗೂ ಬದುಕುವುದಕ್ಕೆ ಬೇಕಾಗಿರುವ ಅನ್ನ. ಆ ಅನ್ನಕ್ಕಾಗಿ ದಿನನಿತ್ಯ ಕೂಲಿ ಮಾಡಿ ಉಣ್ಣುವ ಜನರು ಧಾರಾಕಾರ ಮಳೆಯಿಂದಾಗಿ ಹಸಿವಿನಿಂದ ಒದ್ದಾಡುತ್ತಿದ್ದಾರೆ. ಹಸಿವು ತಾಳಲಾರದೆ ಪ್ರತಿಯೊಬ್ಬರೂ ರೋಗದಲ್ಲಿ ಮುಳುಗಿಕೊಂಡಿದ್ದಾರೆ. ಅದರಲ್ಲಿ ಅಂಬಿಗರ ಭಾಗೂ ಸಹ ಒಬ್ಬಳು. ಅವಳ ಮಕ್ಕಳು ಭೀಕೂ, ಮತ್ತು ಸಟವಾರವರು ಹಸಿವಿನಿಂದ ತಾಯಿಯ ಬಳಿ ಕುಳಿತುಕೊಂಡು ಬಳಲುತ್ತಿದ್ದಾರೆ. ಅವರ ಸಂಕಟದ ಸದ್ದು ಕೇಳಿ ವರುಣದೇವ ತನ್ನ ಆರ್ಭಟವನ್ನು ನಿಲ್ಲಿಸಿದ.

ಬಳಿಕ ಅಂಬಿಗರ ಭಾಗೂ ಹಸಿದ ತನ್ನ ಮಕ್ಕಳನ್ನು ಕರೆದು 'ಭೀಕೂ' ಊರೊಳಗೆ ಹೋಗಿ ಗೌಡತಿಯ ಹತ್ತಿರ ಹಿಟ್ಟು ಬೇಡಲು ಬಲವಂತವಾಗಿ ತಾಯಿ ಅವನನ್ನು ಭಿಕ್ಷೆ ಬೇಡಲು ಕಳಿಸುತ್ತಾಳೆ. ಅದರಂತೆ ಸಟವಾನೂ ಸಹ ಊರಿನೊಳಗೆ ಭಿಕ್ಷೆ ಬೇಡಲು ಹೋಗುತ್ತಾನೆ. ಇಬ್ಬರು ಮಕ್ಕಳು ತಂದೆ ಭಿಕ್ಷಾನ್ನದಿಂದ ತಾಯಿ ಮಕ್ಕಳು ಹಂಚಿಕೊಂಡು ತಿನ್ನುತ್ತಾರೆ. ಭಾಗೂ ರೋಗದಿಂದ ನರಳುತ್ತಿರುವುದರಿಂದ ಅವಳಿಗೆ ಅನ್ನ ರುಚಿಸುವುದಿಲ್ಲ. ಮಕ್ಕಳು ತಾನೂ ತಿನ್ನದಿದ್ದರೆ ಅವು ತಿನ್ನುವುದಿಲ್ಲವೆಂದು ಮಾತೃ ಹೃದಯ ಮಕ್ಕಳಿಗಾಗಿ ತಿನ್ನುತ್ತಿರುವಂತೆ ನಟಿಸಿ ಮಕ್ಕಳಿಗೆ ಉಣ್ಣಿಸುತ್ತಾಳೆ. ಭೀಕೂ ಹಾಗೆ ತಿನ್ನುವವನಲ್ಲ ತಾಯಿ ಅವನ ತಲೆ ಸವರಿ ಮುತ್ತು ಕೊಟ್ಟು ರಮಿಸಿ ಇಬ್ಬರು ಮಕ್ಕಳನ್ನು ಕಂಡು ಆನಂದಿಸುತ್ತಾಳೆ. ಮಕ್ಕಳು ಉಂಡರೆ ತಾನೆ ತಾಯಿಯ ಹಸಿವು ಹಿಂಗುವುದು. ಮಕ್ಕಳನ್ನು ಕರೆದು ಹೊಳೆಯು ಇಳಿದಿದೆಯೇನು ನೀರು ನೋಡಿಕೊಂಡು ಬನ್ನಿಯೆಂದು ಅಹಿರ ಮೀನು ಸಿಕ್ಕರೆ ಮಕ್ಕಳಿಗೆ ಮೈಯಲ್ಲಿ ಶಕ್ತಿ ಬರುತ್ತೆಂದು ತಿಳಿದು ಹೊಳೆಗೆ ಕಳಿಸಿಕೊಡುತ್ತಾಳೆ.ತಾಯಿಯ ಮಾತಿನಿಂದ ಊಟ ಮಾಡಿ ಆಟವಾಡುತ್ತಿದ್ದ ಮಕ್ಕಳು ಹೊಳೆಯ ಕಡೆ ಓಡಿ ಹೋಗುತ್ತಾರೆ. ಅವಳು ಅನಾರೋಗ್ಯದಿಂದಿದ್ದರೂ

ಮಕ್ಕಳದ್ದೇ ಅವಳ ಚಿಂತೆ.ಮನೆಯಲ್ಲಿ ಏನೂ ಇಲ್ಲ ಕೊನೆ ಪಕ್ಷ ಹೊಳೆಯಲ್ಲಿ ಮೀನು ಸಿಕ್ಕರೆ ಅದೇ ಆಹಾರವಾಗುತ್ತೆಂದು ಭಾವ ಅವಳದು. ಮಕ್ಕಳು ಓಡಿ ಬಂದು ನೀರು ಇಳಿದಿದೆಂದು ಹೇಳುತ್ತಾರೆ.ಅಹಿರ ಮೀನಿಗಾಗಿ ತಾಯಿ ಮಕ್ಕಳಿಬ್ಬರು ಹೊಳೆಯ ಕಡೆ ಹೋಗುತ್ತಾರೆ.

ಕೆಸರು ತುಂಬಿದ ಮಡುವಲ್ಲಿ ನೂರಾರು ಹಾವುಗಳಿದ್ದವು. ಅವುಗಳನ್ನು ಲೆಕ್ಕಿಸದೆ ಮೂವರು ಮುನ್ನುಗ್ಗುತ್ತಿದ್ದರು. ಭೀಕೂ ಹಾವು ಹಿಡಿಯುವುದರಲ್ಲಿ ನಿಪುಣ ಸವಟಾ ಹಾವು ಕಚ್ಚುತ್ತದೆ ಹಿಡಿಯ ಬೇಡ ಎನ್ನುತ್ತಿದ್ದನು. ತಾಯಿ ಗದರಿಸಿದಾಗ ಹಾವನ್ನು ಎಸೆಯುತ್ತಿದ್ದ. ತಾಯಿ ಹೊಳಿಯಲ್ಲಿ ಬಲೆ ಚೀಲವನ್ನು ಬೀಸುತ್ತಿದ್ದಳು. ಭೀಕೂ ಸಿಕ್ಕ ಮೀನುಗಳನ್ನು ಬುಟ್ಟಿಯಲ್ಲಿ ಹಾಕಿಕೊಳ್ಳುತ್ತಿದ್ದ.ಹಾಗೆ ಅಹಿರ ಮೀನವನ್ನು ಹುಡುಕುತ್ತಾ ಮುಂದೆ ಸಾಗುತ್ತಿದ್ದರು. ದಪ್ಪದಾದ ಕರಿಹಾವು ಭೀಕೂಗೆ ಕಾಣಿಸುತ್ತದೆ. ಅದು ತಾಯಿಗೆ ಕಚ್ಚುತ್ತೆಂದು ಅದರ ತಲೆಯ ಮೇಲೆ ಕಲ್ಲು ಎಸೆಯುತ್ತಾರೆ. ಆ ಹಾವು ನೀರಿನಲ್ಲಿ ಕಾಣದಾಗುತ್ತದೆ. ತಾಯಿಯ ಮಾತಿನಂತೆ ಮೀನು ಮಾರಿಕೊಂಡು ಬರಲು ಭೀಕೂ ಊರಿನೊಳಕ್ಕೆ ಹೋಗುತ್ತಾನೆ. ಇತ್ತ ತಾಯಿ, ಸವಟಾ ಅಹಿರ ಮೀನನ್ನು ಹುಡುಕುತ್ತಾ ನೀರಿನಲ್ಲಿ ನಿಂತಿರುವಾಗ ಚಳಿ ಜ್ವರ ಹೆಚ್ಚಾಗುತ್ತದೆ. ಕೊನೆಗೂ ಅಹಿರ ಮೀನು ಬಲೆಯೊಳಕ್ಕೆ ಸಿಕ್ಕಿಕೊಳ್ಳುತ್ತದೆ. ಆಗ ಆ ತಾಯಿಗೆ ಆನಂದವೇ ಆನಂದ.

'ಭೀಕೂ' ಮೀನುಗಳನ್ನು ಮಾರಿಕೊಂಡು ಮನೆಗೆ ಹಸಿದ ಹೊಟ್ಟೆಯಿಂದ ಓಡೋಡಿ ಬರುತ್ತಾನೆ. ಅವನು ಬಂದ ತಕ್ಷಣವೇ ತಾಯಿ ಅವನಿಗೆ ಕೈ ತೊಳಿಸಿ ತಟ್ಟೆ ಹಾಕಿ ಊಟಕ್ಕೆ ನೀಡುತ್ತಾಳೆ. ತಾಯಿ ಇಬ್ಬರು ಮಕ್ಕಳು ಹೊಟ್ಟೆ ತುಂಬಾ ಊಟ ಮಾಡುತ್ತಾರೆ. ಭೀಕೂ ತಾಯಿಯನ್ನು ಹೊಳೆಯಲ್ಲಿ ಕರಿಹಾವು ಕಂಡಿಲ್ಲೇನು ಎಂದು ಕೇಳುತ್ತಾನೆ. ತಾಯಿ ಇಲ್ಲ ಎನ್ನುತ್ತಾಳೆ. ಮತ್ತೆ ನೀ ಯಾಕ ಕಿರಚತ್ತಿದ್ದಿ ? ಎಂದು ಭೀಕೂ ಮತ್ತೆ ಕೇಳಿದಾಗ "ಅವಳ ಹೃದಯ ಭಯದಿಂದ ಜೋರಾಗಿ ಚೀರಿತು. ಅವಳ ಕಣ ಕಣಗಳಲ್ಲಿ ಭೀತಿಯು ಹರಡಿತು. ಅವಳು ಕಂಪಿಸಲಾರಂಭಿಸಿದಳು. ಬೆವರಿನಿಂದ ತೊಯ್ದಳು. ಅವಳ ಶಕ್ತಿ ಹ್ರಾಸಗೊಂಡಿತು. ಅವಳು ಒದ್ದಾಡುತ್ತ ಎದ್ದು ಮೀನಿನ ಸಾರಿದ್ದ ಪಾತ್ರೆಯ ಸಮೀಪ ಬಂದಳು. ಒಲೆಯ ಎದುರಿಗೆ ಹಿಡಿದು ನೋಡಿದಳು. ಮೀನಿನ ಮೇಲೆ ಕೈಯಾಡಿಸಿದಳು. ಮೀನಿನ ಪ್ರತಿ ತುಂಡು ಅವಳಿಗೆ ಹಾವಿನಂತೆ ಕಾಣುತ್ತಿತ್ತು."[೨೩] ಮಕ್ಕಳೆಲ್ಲ ಹಸಿವಿನಿಂದ ಹಾವು ತಿಂದವು ನನ್ನ ಮಕ್ಕಳು ಸಾಯುತ್ತವೆ ಎಂಬ ಭೀತಿಯಿಂದ ಮಕ್ಕಳನ್ನು ಕೂಗುತ್ತಾ ಅವಳ ದೇಹದಲ್ಲಿ ಉರಿಯುತ್ತಿದ್ದ ಪ್ರಾಣ ಜ್ಯೋತಿಯು ನಂದಿ ಹೋಗುತ್ತದೆ.

ಇದರಿಂದ ಮಕ್ಕಳ ವೇದನೆ ತಾಯಿಗಾಗಿ ಮುಗಿಲ ಮುಟ್ಟಿತು. ಹಸಿವು ಅನ್ನುವುದು ಎಷ್ಟೊಂದು ಘೋರವಾಗಿದೆ. ಮಕ್ಕಳ ಹಸಿವಿಗಾಗಿ ತನ್ನ ಜೀವವನ್ನು ಭಾಗೂ ಕಳೆದುಕೊಂಡಳು. ಈಗ ತಾಯಿಯಿಲ್ಲದೆ ಭೀಕೂ ಸವಟಾ ಬದುಕುವುದಾದರೂ ಹೇಗೆ...? ಅವರ ಹಸಿವನ್ನು ನೀಗಿಸುವವರು ಯಾರು...?. ಈ ಹಸಿವಿನಿಂದ ಬಳಲುವುದಕ್ಕೆ ಸಮಾಜದಲ್ಲಿನ ಅಂತರವೇ ಕಾರಣವಾಗಿದೆ. ಉಳ್ಳವರು ಮಾಡುವ ಶೋಷಣೆಯಿಂದಲೇ ಬಡ ಜೀವಿಗಳಿಗೆ ಸರಿಯಾಗಿ ಅನ್ನ

ಸಿಗದಂತಾಗಿದೆ. ಹಸಿವು ಎಲ್ಲವನ್ನು ಮಾಡಿಸುತ್ತದೆ. ಹಸಿದವರಿಗೆ ಅನ್ನ ಸಿಗದಿದ್ದರೆ ಆಗ ಅವರ ಮನಸ್ಸು ಕೆರಳುತ್ತದೆ. ಇದರಿಂದಾಗಿ ಸಮಾಜದಲ್ಲಿ ಅಶಾಂತಿವುಂಟಾಗಲು ಈ ಹಸಿವೇ ಕಾರಣವಾಗುತ್ತದೆ. ಹಸಿದವರಿಗೆ ಅನ್ನ ನೀಡದ ಸಮಾಜ ಅದು ತನಗೆ ತಾನು ಮಾಡಿಕೊಳ್ಳುವ ಮೋಸವಾಗಿದೆ. ಹಸಿವು ಎಂಬ ಒಂದು ಪದವೇ ತುಂಬ ಸಂಕೀರ್ಣವಾದುದು. ಅದು ಮಾತ್ರ ಜೀವನವನ್ನು ಪರಿಚಯಿಸುತ್ತದೆ. ಜೀವವನ್ನು ತಗೆಯುವುದು, ಜೀವನವನ್ನು ನೀಡುವುದು ಹಸಿವು ಆಗಿರುತ್ತದೆ. ಆದರೆ ಹಸಿವಿಗೆ ಅಸುನೀಗುವ ದುರಂತದ ಕಥೆ ಇದಾಗಿರುತ್ತದೆ.

ಭಾಗೂ ತನ್ನ ಬದುಕಿನ ಹೋರಾಟದಲ್ಲಿ ಸೋತು ಹೋಗಿದ್ದಾಳೆ. ತನ್ನ ಇಬ್ಬರು ಮಕ್ಕಳಾದ ಭೀಕೂ ಮತ್ತು ಸವಟಾರವರ ಜೀವನವನ್ನು ಕುರಿತು ಬಿದ್ದ ಹಾಸಿಗೆಯಲ್ಲಿಯೇ ಕೊರಗುತ್ತಿದ್ದಾಳೆ. ಮಕ್ಕಳಲ್ಲಿರುವ ಹಸಿವನ್ನು ಕಂಡು ಏನಾದರೂ ಮಾಡಿ ಹೊಳೆಗೆ ಹೋಗಿ ಮೀನನ್ನು ಹಿಡಿದುಕೊಂಡು ಬಂದು ತಿನ್ನಿಸಬೇಕೆಂದು ಹಂಬಲಿಸುತ್ತಾಳೆ.ಊರಿನ ಗೌಡತಿಯಲ್ಲಿ ಭೀಕೂ ಅನ್ನದ ಭಿಕ್ಷೆಕೇಳಲು ಹೋದರೆ ಅವನನ್ನು ಅವಮಾನ ಮಾಡಿ ಹೆದರಿಸಿ ಕಳಿಸುತ್ತಾಳೆ. ಇದು ಉಳ್ಳವರು ಬಡವರ ಮೇಲೆ ಮಾಡುತ್ತಿರುವ ಅಮಾನವೀಯತೆಯ ದೌರ್ಜನ್ಯದ ನಿದರ್ಶನವಾಗಿರುತ್ತದೆ. ಇದರಿಂದಾಗಿ ಹೊಳೆಗೆ ಹೋಗಿ ಭಾಗೂ, ಭೀಕೂ, ಸವಟಾ ಕಷ್ಟಪಟ್ಟು ಮೀನನ್ನು ತರುತ್ತಾರೆ. ತಾಯಿ ಭಾಗೂ ಈ ಮೊದಲೇ ಅವಳ ಆರೋಗ್ಯ ಸರಿ ಇಲ್ಲದಿರುವುದು, ಅವಳ ಆರೋಗ್ಯಕ್ಕೆ ಸರಿಯಾದ ಚಿಕಿತ್ಸೆ ಸಿಗದೆ ಜ್ವರದ ಭಾದೆಯಿಂದ ನರಳಾಡುವುದಕ್ಕೆ ಅಧಿಕಾರಿಶಾಹಿಗಳು ದಲಿತರ ಮೇಲೆ ತೋರುತ್ತಿರುವ ನಿರ್ಲಕ್ಷತನಕ್ಕೆ ಉದಾಹರಣೆಯಾಗಿರುತ್ತದೆ.

ಕಥೆಯ ಕೊನೆಯಲ್ಲಿ ಮೀನನ್ನು ಮಾಡಿ ತಾಯಿ ಮಕ್ಕಳಿಗೆ ಉಣ ಬಡಿಸಲೆಂದು ಸಿದ್ಧವಾದಾಗ ತನ್ನ ಮಕ್ಕಳು ಹಸಿದ ಹೊಟ್ಟೆಯಿಂದ ಮೀನೆಂದು ತಿಳಿದುಕೊಂಡು ಹಾವನ್ನು ತಿಂದಿದ್ದಾರೆಂದು ಎದೆ ಹೊಡೆದು ಕೊಂಡು ಹಸಿದ ಹೊಟ್ಟೆಯಲ್ಲಿ ಭಾಗೂ ತನ್ನ ಪ್ರಾಣವನ್ನು ಬಿಡುವುದರಲ್ಲಿ, ದಲಿತರು ಬಂಡವಾಳಶಾಹಿಗಳೆಂಬ ಹಾವಿನ ನಂಜಿನಿಂದ ಯಾವ ಅನ್ನವೂ ಸಿಗದೆ ಕೊನೆಗೆ ಹಸಿವಿನಿಂದಲೇ ಸತ್ತು ಹೋಗುತ್ತಾರೆ. ದಲಿತರಿಗೆ ಹಸಿವಿನಿಂದ ಮುಕ್ತಿ ಸಿಗಲು ಸಾಧ್ಯವಿಲ್ಲ, ಅವರು ಆರ್ಥಿಕವಾಗಿ ಸಬಲರಾಗಿ ಸ್ವತಂತ್ರ ಬಾಳನ್ನು ನಡೆಸಲು ಆಗುವುದಿಲ್ಲ. ಸದಾ ಶೋಷಣೆಯಲ್ಲಿಯೇ ಹುಟ್ಟಿಕೊಂಡು ಬಂದು ಮತ್ತೆ ಕೊನೆಗೆ ಶೋಷಣೆಯಲ್ಲಿ ಸಾಯಬೇಕಾಗುತ್ತದೆ. ಇದರ ಸಂಕೇತದ ನಿದರ್ಶನವಾಗಿ ಕಥೆಗಾರರು ಭಾಗೂ ಪಾತ್ರದ ಮೂಲಕ ಇಡೀ ದಲಿತ ಸಮುದಾಯಗದವರ ಭವಿಷ್ಯತ್ತಿನ ಸ್ಥಿತಿಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ಭಾಗೂವಿನ ಮಕ್ಕಳು ತಾಯಿಯನ್ನು ಕಳೆದುಕೊಂಡು ಭೀಕೂ, ಮತ್ತು ಸವಟಾ ಹೇಗೆ ಬದುಕಲು ಸಾಧ್ಯವಿಲ್ಲವೋ ಹಾಗೆಯೇ ಸಂವಿಧಾನಾತ್ಮಕವಾಗಿ ಡಾ. ಬಿ.ಆರ್.ಅಂಬೇಡ್ಕರ್‌ರವರು ನೀಡಿರುವ ಹಕ್ಕುಗಳನ್ನು ಕಳೆದುಕೊಂಡರೆ ಸಮಾಜದಲ್ಲಿ ದಲಿತರು ಬದುಕಲು ಸಾಧ್ಯವಿಲ್ಲ. ಎಂಬುವುದರ ಸತ್ಯಾಂಶವನ್ನು ಕಥೆಗಾರರು ಈ ಕಥೆಯ ಕೊನೆಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ.

ನಮ್ಮ ಹಕ್ಕುಗಳನ್ನು ಪಡೆದುಕೊಳ್ಳಬೇಕಾದರೆ ಭಿಕ್ಷೆಯನ್ನು ಬೇಡಬೇಕಾಗಿಲ್ಲ.ಶಿಕ್ಷಣ, ಸಂಘಟನೆ ಹೋರಾಟದ ಮೂಲಕ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಂಡವಾಳಶಾಹಿಗಳು ಮತ್ತು ಅಧಿಕಾರಿಶಾಹಿಗಳು ಮಾಡುತ್ತಿರುವ ದಲಿತ ಶೋಷಣೆಗೆ ಮುಕ್ತಿ ಹೇಳಬೇಕು. ಇಲ್ಲದಿದ್ದರೆ ಭಾಗೂ ಮತ್ತು ಆಕೆಯ ಮಕ್ಕಳಾದ ಭೀಕೂ, ಸವಟಾರಂತೆ ಇಡೀ ದಲಿತ ಸಮುದಾಯವೇ ಹಸಿವಿನಿಂದ ನರಳಾಡಬೇಕಾಗುತ್ತದೆ. ಬಂಡವಾಳಶಾಹಿಗಳ ಕುತಂತ್ರದಿಂದ ಈ ಸಾಮಾಜಿಕ ವ್ಯವಸ್ಥೆಯು ಅಸಮಾನತೆಯಿಂದ ಕೂಡಿರುತ್ತದೆ. ಇದರ ಪ್ರತಿಫಲವಾಗಿ ದಲಿತರು ತಮ್ಮ ಶೋಷಣೆಯ ನೋವುಗಳನ್ನು ಸಹಿಸಿಕೊಂಡು ಹಸಿವಿನಿಂದ ಬಾಳುತ್ತಿದ್ದಾರೆ. ಎಂಬ ವಾಸ್ತವಾಂಶದಿಂದ ಕಥೆಗಾರರುದಲಿತರು ಪಡುತ್ತಿರುವ ಹಸಿವಿನ ಸಂಕಟವನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಲ್ಲಿ ಈ ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

### ಅಡಿ ಟಿಪ್ಪಣಿಗಳು

೧. ಪಾಲಗುಮ್ಮಿ ಪದ್ಮರಾಜು (ಮೂ) /ಆರ್ಬೀಯೆಸ್ ಸುಂದರಂ (ಅ)– ಬಿರುಗಾಳಿ – ಪು.ಸಂ– ೧೮೪

೨. ವಾಸುದೇವನ್ ನಾಯರ್ (ಮೂ)/ ಮೋಹನ ಕುಂಟಾರ್ (ಅ)– ವಾಸುದೇವನ್ ನಾಯರ್ ಕಥೆಗಳು – ಪು.ಸಂ –೧೮೫

೩. ರಾವೂರಿ ಭರಧ್ವಾಜ (ಮೂ) / ಎಚ್.ಎಸ್. ಸುಜಾತ (ಅ) – ಜೀವನ ಸಮರ(ನೊಂದವರ ಸತ್ಯ ಕಥೆಗಳು) – ಪು.ಸಂ –೯೭

೪. ಪೊನ್ ಕುನ್ನಂ ವರ್ಕಿ (ಮೂ) / ಕೆ.ಎಸ್. ಕರುಣಾಕರನ್ (ಅ) – ಮಲೆಯಾಳಂ ಕಥೆಗಳು – ಪು.ಸಂ– ೩೭&೩೮

೫. ಅಶೋಕ ಮಿತ್ರನ್ (ಮೂ) / ಲಿಂಗದೇವರು ಹಳೆಮನೆ (ಅ) – ತಮಿಳು ಕಥಾ ಸಂಕಲನ – ಪು.ಸಂ–೮೯

೬. ಮುಕುಂದನ್ (ಮೂ) / ಶ್ರೀ ಕೃಷ್ಣಭಟ್ಟ ಅರ್ತಿಕಜೆ (ಅ)–ಮಲಿಯಾಳಂ ಕಥೆಗಳು–ಪು.ಸಂ–೧೦೪

೭ ಸಿ.ಎಸ್. ರಾವು (ಮೂ) / ವೀರಭದ್ರ (ಅ) – ತೆಲುಗು ಕಥಾ ಸಂಕಲನ _ ಪು.ಸಂ– ೧೦೭

೮. ಶ್ರೀ ಪವಣ್ಣನ್ (ಮೂ) ಬಿ.ಎಸ್. ಖೂಬಾ (ಅ) – ಕಥಾ ಭಾರತಿ – ಪು.ಸಂ– ೦೭

೯. ರಾಸಾನಿ (ಮೂ) / ಟಿ.ಡಿ. ರಾಜಣ್ಣ ತಗ್ಗಿ (ಅ) – ರಾಸಾನಿ ಕಥೆಗಳು - ಪು.ಸಂ– ೧೧೪

೧೦. ಎಮ್.ಮುಕುಂದನ್ (ಮೂ) / ಕೆ.ಕೆ. ಗಂಗಾಧರನ್ (ಅ) – ಗೌರಿ (ಮಲಿಯಾಳಂ ಕಥಾ ಸಂಕಲನ) – ಪು.ಸಂ –೫೦

೧೧. ಶರಣಕುಮಾರ ಲಿಂಬಾಳೆ (ಮೂ) / ಪ್ರಮಿಳಾ ಮಾಧವ್ (ಅ) – ದಲಿತ ಬ್ರಾಹ್ಮಣ–ಪು.ಸಂ– ೪೧

೧೨. ಮಾರಿ ಅರವಷಿ (ಮೂ) / ಡಿ.ಎನ್. ಶ್ರೀನಾಥ (ಅ)–ಇಪ್ಪತ್ತು ಭಾರತೀಯ ಕಥೆಗಳು–ಪು.ಸಂ– ೧೪೧

೧೩. ಶರಣಕುಮಾರ ಲಿಂಬಾಳೆ (ಮೂ) / ಮಹೆಬೂಬ ಇಮಾಮಸಾಬ ಜಿಡ್ಡೆ (ಅ) – ಸದಾ ಪ್ರವಹಿಸುವ ಕಥೆಗಳು – ಪು.ಸಂ– ೫೦

೧೪. ತಮಿಳವನ್ (ಮೂ) / ಕೆ. ನಲ್ಲತಂಬಿ (ಅ) – ಹತ್ತು ತಮಿಳು ಕಥೆಗಳು – ಪು.ಸಂ– ೯೫

೧೫. ಡಾ. ಬಾಬೂರಾವ್ ಗಾಯಕವಾಡ (ಮೂ) – ಡಾ. ವಿಜಯಾ ಆರ್ ಕಾಂಬಳೆ – ಮನುಷ್ಯರನ್ನು ಹುಡುಕುತ್ತಾ – ಪು.ಸಂ– ೧೩

೧೬. ಡಾ. ಶರಣಕುಮಾರ ಲಿಂಬಾಳೆ (ಮೂ) / ಡಾ. ಪ್ರಮೀಳಾ ಮಾಧವ್ (ಅ) – ಅಸ್ಪೃಶ್ಯ ಕಥಾ ಸಂಕಲನ – ಪು.ಸಂ –೨೭

೧೭. ದೇವಿ ಭಾರತಿ (ಮೂ) / ಶ್ರೀಮತಿ ಜಯಲಲಿತ (ಅ)– ಬಾಗಿಲು (ಈ ಹೊತ್ತಿನ ತಮಿಳು ಕಥೆಗಳು) – ಪು.ಸಂ– ೯೪

೧೮. ಗಂಗಾಧರ ಗಾಡಗೀಳ (ಮೂ) / ಚಂದ್ರಕಾಂತ ಪೋಕಳೆ (ಅ)–ಗಾಡ ಗೀಳರ ಆಯ್ದ ಕಥೆಗಳು– ಪು.ಸಂ–೩೦

೧೯. ಪುಳಿಯಾನ್ ಪರಮೇಶ್ವರ ಪಿಳ್ಳೆ (ಮೂ) / ಕೆ.ಕೆ. ನಾಯರ್ (ಅ) – ಆಯ್ದ ಮಲಿಯಾಳ ಸಣ್ಣ ಕಥೆಗಳು – ಪು.ಸಂ– ೧೬೬

೨೦. ನಾಮದೇವ್ ಕಾಂಬಳೆ (ಮೂ) / ಡಿ.ಎಸ್. ಚೌಗತಿ (ಅ) (ಸಂ) – ನಿನ್ನ ಮೇಲೆ ಸಿಟ್ಟಿಲ್ಲ ಮಾಯೀ –ಪು.ಸಂ– ೯೯ ಮತ್ತು ೧೦೦

೨೧. ಅರ್ಷಾದ್ ಬತೇರಿ (ಮೂ) / ಡಾ. ಪಾರ್ವತಿ ಐತಾಳ್ (ಅ) – ಭೂಮಿಯಷ್ಟು ಬದುಕು – ಪು.ಸಂ– ೪೪

೨೨. ಹ.ಮೊ. ಮರಾಠೆ (ಮೂ) / ರತ್ನಾಕರ ಶೆಟ್ಟಿ (ಅ) – ಮರಾಠಿ ಕಥಾ ಸಂಹಿತೆ – ಪು.ಸಂ– ೮೦

೨೩. ಬಾಬುರಾವ್ ಬಾಗೂಲ (ಮೂ) / ಚಂದ್ರಕಾಂತ ಪೋಕಳೆ (ಅ)–ನಾನು ಜಾತಿ ಕದ್ದಾಗ– ಪು.ಸಂ–೮೯

ಅಧ್ಯಾಯ : ನಾಲ್ಕು

# ಕನ್ನಡ ಅನುವಾದಿತ ಕಥೆಗಳು : ಮಹಿಳಾ ಸಂವೇದನೆ

೪.೧. ಪ್ರವೇಶ

೪.೨. ದಲಿತ ಮಹಿಳೆ ಮತ್ತು ವೇಶ್ಯಾ ಪದ್ಧತಿ

೪.೩. ಬಡತನದ ನೋವು ಮತ್ತು ದುರ್ಬಲರ ಮೇಲೆ ಅತ್ಯಾಚಾರ

೪.೪. ಮಹಿಳಾ ಶೋಷಣೆ ಮತ್ತು ದಲಿತ ಮಹಿಳಾ ಬದುಕಿನ ಚಿತ್ರಣ

೪.೫. ಮಹಿಳಾ ಅಸಹಾಯಕತೆ ಮತ್ತು ಬಂಡವಾಳಶಾಹಿಗಳ ದುರುಪಯೋಗ

ಅಧ್ಯಾಯ : ನಾಲ್ಕು

# ಕನ್ನಡ ಅನುವಾದಿತ ಕಥೆಗಳು : ಮಹಿಳಾ ಸಂವೇದನೆ

## ೪.೧. ಪ್ರವೇಶ

ಮಹಿಳೆ ಸಮಾಜದ ಕೇಂದ್ರಬಿಂದು. ಅವಳನ್ನು ಪೂಜ್ಯಭಾವನೆಯಿಂದ ಕಾಣುವುದು ಸಮಾಜದ ಆದ್ಯ ಕರ್ತವ್ಯ. ಈ ಕಾರಣದಿಂದಲೇ ಸಮಾಜದ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಗೆ ಉನ್ನತವಾದ ಸ್ಥಾನಮಾನಗಳಿದ್ದವು. ಆಗ ಸಮಾಜವು ನೆಮ್ಮದಿಯಿಂದ ಕೂಡಿತ್ತು. ಕೈಯಲ್ಲಿ ಆಯುಧ ಹಿಡಿದು ಬೇಟೆಯಾಡಿ ಬದುಕುತ್ತಿದ್ದ ಕಾಲದಲ್ಲೂ ಮಹಿಳೆಯು ಸ್ವಾವಲಂಬಿ, ಸ್ವಾಭಿಮಾನದಿಂದ, ಸ್ವತಂತ್ರ ಜೀವನವನ್ನು ಕಳೆಯುತ್ತಿದ್ದಳು. ಎಲ್ಲಿ ಮಹಿಳೆಯರನ್ನು ಗೌರವಿಸುತ್ತಾರೋ ಅಲ್ಲಿಯೇ ದೇವತೆಗಳು ನೆಲೆಸಿರುತ್ತಾರೆ ಎಂಬ ಆದರ್ಶವೂ ಈ ಹಿಂದೆ ಸಮಾಜದಲ್ಲಿ ತುಂಬಿಕೊಂಡಿತ್ತು. ಆಗ ಮಹಿಳೆಗೆ ಸಮಾಜದಲ್ಲಿ ಗೌರವ ಸ್ಥಾನಮಾನಗಳು ಸಿಗುತ್ತಿದ್ದವು. ನಂತರದ ಅವಧಿಯಲ್ಲಿ ಅದು ಮುಸ್ಲಿಂರ ದಾಳಿಯಿಂದ ಮಹಿಳೆಯರ ಸ್ಥಾನಮಾನಗಳು ಕಡಿಮೆಯಾಗತೊಡಗಿದವು. ಪರ್ದಾ ಪದ್ಧತಿ, ಸತಿ ಪದ್ಧತಿ,ಬಾಲ್ಯವಿವಾಹ, ವೇಶ್ಯಾಪದ್ಧತಿ, ಇಂತಹ ದುಷ್ಟ ಸಾಮಾಜಿಕ ಸಮಸ್ಯೆಗಳಿಂದ ಮಹಿಳೆಯರ ರಕ್ತವನ್ನು ಹೀರುವ ಆಚರಣೆಗಳು ಬೆಳೆಯತೊಡಗಿದವು.

ಅದರಂತೆ ನ್ಯಾಯಶಾಸ್ತ್ರ, ಧರ್ಮ ಶಾಸ್ತ್ರಗಳು, ಮೌಢ್ಯ, ನೀತಿ ಸಂಪ್ರದಾಯಗಳಿಂದ ಮಹಿಳೆಯನ್ನು ಶೋಷಣೆಗೆ ಒಳಪಡಿಸಿದವು. ಮಹಿಳೆಗೆ ಸ್ವತಂತ್ರವಾಗಿ ಬದುಕಲು ಭದ್ರಬುನಾದಿಯಾದ ಶಿಕ್ಷಣದಿಂದ ವಂಚಿತಳಾಗುವಂತೆ ಮಾಡಿ ಅವಳನ್ನು ಅಧಿಕಾರ ಮತ್ತು ಸ್ವಾತಂತ್ರ್ಯದಿಂದ ದೂರ ನಿಲ್ಲಿಸಿದರು. ಅವಳನ್ನು ಕೇವಲ ಅಡುಗೆ ಮನೆಗೆ ಮಾತ್ರಸೀಮಿತಗೊಳಿಸಿ ಅವಳ ಮನಸ್ಸು ಮತ್ತು ದೇಹದ ಮೇಲೆ ನಿರಂತರ ಭಯದಭೂತ ಸಂಚಾರವಾಗುವಂತೆ ಮಾಡಿದರು. ಹೀಗಾಗಿ ಈ ಸಮಾಜದಲ್ಲಿ ಮೊಟ್ಟಮೊದಲು ದಾಸ್ಯದ ನೊಗಹೇರಿಸಿಕೊಂಡ ಮಾನವ ಜೀವಿ ಅಂದರೆ ಅದು ಮಹಿಳೆ ಎಂಬುವುದಕ್ಕೆ ಸಾಕ್ಷಿಯಾದಳು. ಈ ಕಾರಣಗಳಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಶೋಷಿತಳಾದ ಮಹಿಳೆ ಅಸಹಾಯಕತೆಯಿಂದ ಅಶಕ್ತಳಾಗಿ ಸಮಾಜದಲ್ಲಿ ಬದುಕುವಂತಾದಳು.

ಸ್ವತಂತ್ರ ಭಾರತದ ನಂತರವೂ ಪುರೋಹಿತಶಾಹಿಗಳು ಸೃಷ್ಟಿಸಿದ ವರ್ಣವ್ಯವಸ್ಥೆಯಿಂದ ಸಮಾಜದಲ್ಲಿ ಸಮಾನತೆಯಿಲ್ಲದೆ ಅಸಮಾನತೆಯಿಂದ ಕೂಡಿಕೊಂಡಿದೆ. ಶ್ರೇಷ್ಠ- ಕನಿಷ್ಟ, ಶ್ರೀಮಂತ

– ಬಡವ, ಸ್ಪೃಶ್ಯ – ಅಸ್ಪೃಶ್ಯರೆಂಬ ತಾರತಮ್ಯದ ಸಾಮಾಜಿಕ ವ್ಯವಸ್ಥೆ ರೂಪುಗೊಂಡು ಉಳ್ಳವರು– ಉಳ್ಳದವರ ಅಂದರೇ ದಲಿತರ ಮೇಲೆ ದೌರ್ಜನ್ಯಗಳನ್ನು ಮಾಡಲು ಪ್ರಾರಂಭಿಸಿದರು. ಅದರಲ್ಲೂ ದಲಿತ ಮಹಿಳೆಯರನ್ನು ಅತ್ಯಾಚಾರ ಮಾಡುವುದರ ಮೂಲಕ ಮಾನಸಿಕವಾಗಿ, ದೈಹಿಕವಾಗಿ, ಸಾಮಾಜಿಕವಾಗಿ, ಶೋಷಣೆಯನ್ನು ಮಾಡಿದರು. ಇದರ ವಿರುದ್ಧವಾಗಿ ಸಾಹಿತ್ಯದ ಮೂಲಕ ಪ್ರತಿಭಟನೆಯು ಪ್ರಾರಂಭವಾಯಿತು ಅದುವೇ ದಲಿತ ಸಾಹಿತ್ಯ.

ಒಂದು ನಿರ್ದಿಷ್ಟ ಉದ್ದೇಶ, ಗುರಿಯನ್ನು ಇಟ್ಟುಕೊಂಡು ದಲಿತ ಲೇಖಕರು ತಮ್ಮ ಬರಹದ ಮೂಲಕ ಜಾಗೃತಿಯ ಹೋರಾಟವನ್ನು ಮಾಡಿದರು. ಅದರಂತೆ ಈ ಸಾಹಿತ್ಯದಲ್ಲಿ ಮಹಿಳೆಯರ ಸಮಸ್ಯೆಗಳನ್ನು ಕುರಿತಂತೆ 'ಮಹಿಳಾ ಸಂವೇದನೆ' ಎಂಬ ಪದಬಳಕೆಯನ್ನು ಮಾಡಿ ಅದರ ಮೂಲಕ ಮಹಿಳೆಯರು ಸಾಮಾಜಿಕವಾಗಿ ಪಡುತ್ತಿರುವ ಸಮಸ್ಯೆಗಳನ್ನು ಕುರಿತು ತಮ್ಮ ಸಂವೇದನೆಗಳನ್ನು ಅಭಿವ್ಯಕ್ತಪಡಿಸಿದರು. ಈ ಅಧ್ಯಾಯವು 'ಕನ್ನಡ ಅನುವಾದಿತ ಕಥೆಗಳಲ್ಲಿ ಮಹಿಳಾ ಸಂವೇದನೆ' ಎಂಬುದಾಗಿದ್ದು ಇಲ್ಲಿ ದಲಿತ ಮಹಿಳೆಯರ ತಲ್ಲಣಗಳನ್ನು ಅಭಿವ್ಯಕ್ತಿಸಿದ ತೆಲುಗು, ತಮಿಳು, ಮಲಿಯಾಳಂ, ಮರಾಠಿ ಅನುವಾದಿತ ಕಥೆಗಳ ಅಧ್ಯಯನ ಮಾಡಲಾಗಿದೆ.

### ೪.೨. ದಲಿತ ಮಹಿಳೆ ಮತ್ತು ವೇಶ್ಯಾ ಪದ್ಧತಿ

'ಕಮಲಾದಾಸ್ ಕಥೆಗಳು' ಎಂಬ ಮಲಿಯಾಳಂ ಕಥಾ ಸಂಕಲನವನ್ನು ಕೆ.ಕೆ. ಗಂಗಾಧರನ್ ರವರು ಕನ್ನಡಿಕರಿಸಿದ್ದಾರೆ. ಕಮಲಾದಾಸ್‌ರವರು ಬರೆದ 'ಪದ್ಮಾವತಿ ಎಂಬ ವೇಶ್ಯೆ' ಕಥೆಯು ಒಂದು ಹೆಣ್ಣಿನ ಮಹತ್ತರವಾದ ಮನಸ್ಸನ್ನು ಶೋಧಿಸುವುದರ ಮೂಲಕ, ದೇಹ ಮತ್ತು ಮನಸ್ಸು ಇವೆರಡಕ್ಕಿರುವ ಅವಿನಾಭಾವ ಸಂಬಂಧದಲ್ಲಿ ಪರಿಶುದ್ಧತೆಯನ್ನು ಹುಡುಕಿಕೊಂಡು ಸಾಗುತ್ತದೆ. ಹೆಣ್ಣಿನ ಒಳಧ್ವನಿಯಲ್ಲಿರುವ ಅವಳ ನಿಲುವುಗಳನ್ನು ತೆರೆದಿಟ್ಟು, ಸಮಾಜದ ಕನ್ನಡಿಗೂ ಮನಸ್ಸಿನ ಕನ್ನಡಿಗೂ ವ್ಯತ್ಯಾಸವನ್ನು ಕಂಡು ಸಮಾಜವು ತನ್ನನ್ನು ನೋಡಿದ ಬಗೆ, ಕೊಟ್ಟ ಬಹುಮಾನದ ಸಂಕಟಗಳು ತುಲನೆಮಾಡಿ, ನಾನು ನನ್ನ ದೇಹದಿಂದಾಚೆಯಿರುವ ಪರಿಶುದ್ಧ ವೇಶ್ಯೆ. ನನ್ನ ದೇಹವನ್ನು ಎಲ್ಲರೂ ನೋಡಿದರೂ ಎನೇನೋ ಮಾಡಿದರೂ, ನನ್ನ ಮನಸ್ಸು ಯಾರೂ ನೋಡಲಿಲ್ಲ. ನೋಡುವ ಪ್ರಯತ್ನವನ್ನು ಮಾಡಲಿಲ್ಲ. ಕಾಮುಕ ಸಮಾಜವನ್ನು ನನ್ನ ದೇಹದಿಂದ ತಣಿಸುವ ನಾನೊಬ್ಬ ವೇಶ್ಯೆ.

ಆದರೆ ನನ್ನ ಮನಸ್ಸನ್ನು ಮೀಸಲಿಟ್ಟು ಪಡೆದುಕೊಂಡಿದ್ದೇನೆ. ದೇವರಂಥ ಗಂಡನನ್ನು....! ಅಲ್ಲ....! ನನ್ನ ಗಂಡ ದೇವರು ಇಂತಹ ಭಾವಚಿತ್ರಣವನ್ನು ಹೊತ್ತುಕೊಂಡು ನಿರ್ಮಿತವಾದದ್ದು ಕಥೆಯೇ 'ಪದ್ಮಾವತಿ ಎಂಬ ವೇಶ್ಯೆ'ದೇವರನ್ನು ಕಂಡು ದೇವರಾಗುವವಳನ್ನು ಪುರುಷಕೇಂದ್ರಿತ ಸಮಾಜ ಆಕೆಯನ್ನು ವೇಶ್ಯೆಯನ್ನಾಗಿ ಮಾಡಿ ದೇಹವನ್ನು ಉಪಯೋಗಿಸಿಕೊಂಡು, ಬರೀ ಒಣಗಿದ ಮೂಳೆಗಳನ್ನು ಬಿಟ್ಟುಕೊಟ್ಟು ಅಲ್ಪ ಸುಖಕ್ಕಾಗಿ ಹೆಣ್ಣಿನ ಮನಸ್ಸನ್ನು ಅರಿಯದೆ ಅವಳ ದೇಹವನ್ನು ದಂಡಿಸುವ, ಹಿಂಸಿಸುವ, ಪ್ರವೃತ್ತಿಯನ್ನು ಹೊಂದಿದ ಬಂಡವಾಳಶಾಹಿಗಳು ಒಂದು ಹೆಣ್ಣನ್ನು

ನೋಡುವ ಬಗೆಯನ್ನು, ಮಾಡುವ ಅತ್ಯಾಚಾರವನ್ನು ಹೆಣ್ಣಿನ ಸೂಕ್ಷ್ಮ ಸಂವೇದನೆಗಳನ್ನು ಪದ್ಮಾವತಿ ಪಾತ್ರದ ಮೂಲಕ ಕಮಲಾದಾಸ್‌ರವರು ಕಟ್ಟಿಕೊಟ್ಟಿದ್ದಾರೆ. ಒಬ್ಬ ವೇಶ್ಯೆಗೆ ಬೇಕಾಗಿರುವುದು ಹಣವಲ್ಲ, ದೇಹದ ಸುಖವಲ್ಲ ಅವಳಿಗೂ ಅವಳದೇ ಆದ ಮನಸ್ಸು ಇದೆ. ಅದು ದೇಹಕ್ಕೆ ಸಂಬಂಧಿಸಿದ್ದಲ್ಲ.

ಅಂತಹ ಪರಿಶುದ್ಧವಾದ ಮನಸ್ಸನ್ನು ಪರಿಶುದ್ಧವಾದ ಮನಸ್ಸಿನಿಂದ ಪುರುಷಕೇಂದ್ರಿತ ಸಮಾಜ ನೋಡಬೇಕು. ಹೆಣ್ಣಿನ ಮನಸ್ಸಿನ ತಲ್ಲಣಗಳನ್ನು ಅರ್ಥ ಮಾಡಿಕೊಳ್ಳಬೇಕು. ಹೆಣ್ಣು ಅಂದರೆ ಕೇವಲ ಅವಳನ್ನು ದೈಹಿಕವಾಗಿ ಮಾತ್ರ ಗಮನಿಸಬಾರದು. ವೇಶ್ಯೆ ಎಂಬ ಹೆಣ್ಣಿಗೂ ಸೂಕ್ಷ್ಮ ಸಂವೇದನೆಗಳಿರುತ್ತವೆ. ಅವುಗಳನ್ನು ಹುಡುಕಬೇಕು.ದೇಹ ತುಂಬಿದ ಹೆಣ್ಣೆಂದು ಮಾತ್ರ ಗ್ರಹಿಸಬಾರದು. ಇದು ಪದ್ಮಾವತಿಯ ಒಳಸಂವೇದನೆಯಾಗಿದೆ. ಪದ್ಮಾವತಿಯೆಂಬ ವೇಶ್ಯೆಯು ಬೆಟ್ಟದ ತುದಿಯಲ್ಲಿರುವ ದೇವಸ್ಥಾನಕ್ಕೆ ದೇವರ ದರ್ಶನಕ್ಕಾಗಿ ಹೋಗುತ್ತಾಳೆ. ದೇವಸ್ಥಾನದ ಭಕ್ತಸಮೂಹವು ಬೆಟ್ಟದ ತಪ್ಪಲಿನಲ್ಲಿಯೇ ತಲೆಗೂದಲನ್ನು ತೆಗೆಸಿಕೊಂಡು ದೇವರಿಗೆ ಹರಕೆ ಮಾಡಿಕೊಂಡಂತೆ ತಾವು ತಂದಿರುವಂತ ಹಲವಾರು ದ್ರವ್ಯಗಳನ್ನು ಅರ್ಪಿಸಿ, ತಮ್ಮ ಮನದಾಳದ ಬೇಡಿಕೆಗಳನ್ನು ಪೂರೈಸು ತಂದೆ ಎಂದು ಬೇಡಿಕೊಂಡು ಭಕ್ತರೆಲ್ಲ ಹಿಂತಿರುಗಿ ಬರುತ್ತಿದ್ದರು. ಆಗ ದೇವಸ್ಥಾನಕ್ಕೆ ಹೋಗುತ್ತಿರುವ ಪದ್ಮಾವತಿಯನ್ನು ನೋಡಿ ಕತ್ತಲಾಗಿದೆ, ದೇವಸ್ಥಾನದ ಬಾಗಿಲು ಮುಚ್ಚಲಾಗಿದೆ ನೀನು ಹೋಗಬೇಡ ಇನ್ನು ನೀನು ಅಲ್ಲಿಗೆ ಹೋಗುವುದರಿಂದ ಉಪಯೋಗವಿಲ್ಲ.

ಅಷ್ಟೊಂದು ದೂರ ಈ ಬೆಟ್ಟಗಳ ಸಾಲಿನಲ್ಲಿ ನೀನೊಬ್ಬಳೇ ಅಲ್ಲಿಗೆ ಹೋಗದಿರು ಎಂದು ಪದ್ಮಾವತಿಗೆ ಸಲಹೆಯನ್ನು ನೀಡಿದರು. ಆದರೆ ಅವಳು ದೇವರ ದರ್ಶನಕ್ಕಾಗಿಯೇ ಬಹಳ ದೂರದಿಂದ ನಡೆದುಕೊಂಡು ಬಂದಿರುತ್ತಾಳೆ. ದೇವಸ್ಥಾನ ಮತ್ತು ಅದರೊಳಗಿರುವ ದೇವರನ್ನು ನೋಡದೆ ಹಿಂದಿರುಗಿ ಹೋಗಲು ಅವಳಿಗ್ಯಾಕೋ ಮನಸ್ಸು ಬರುವುದಿಲ್ಲ. ದೇವರ ದರ್ಶನಕ್ಕೆಂದು ರಾತ್ರಿಯಲ್ಲಿಯೇ ತನ್ನ ಹೆಜ್ಜೆಗಳನ್ನು ಮುಂದಕ್ಕೆ ಹಾಕಿದಳು. ದಾರಿಯಲ್ಲಿ ನಾಲ್ಕುಜನ ಹುಡುಗರು ತಡೆದು ನಿಲ್ಲಿಸುತ್ತಾರೆ. ಕೆಲವೊಂದು ಬಯಕೆಗಳನ್ನು ತಿಳಿಸುತ್ತಾರೆ. ತುಂಬಾ ಅಸಹ್ಯವಾಗಿ ಮಾತನಾಡುತ್ತಾರೆ. ಏನೇ ಮಾಡಿದರೂ ಏಕಾಂಗಿಯಾಗಿ ದೇವಸ್ಥಾನಕ್ಕೆ ಬರುತ್ತಾಳೆ. ದೀಪಗಳೆಲ್ಲ ನಂದಿ ಹೋಗಿರುತ್ತವೆ. ಕತ್ತಲಲ್ಲಿ ದೇವಾಲಯದ ಬಾಗಿಲು ಸಹ ಮುಚ್ಚಿಕೊಂಡಿರುತ್ತದೆ.

'ಬಾಗಿಲು ತೆರೆಯಿರಿ' ಅವಳು ಬಾಗಿಲ ಬಳಿನಿಂತು ಕೇಳಿಕೊಂಡಳು. "ನಾನು ಬಹಳ ದೂರದಿಂದ ತಮ್ಮನ್ನು ಕಾಣುವ ಸಲುವಾಗಿ ಇಲ್ಲಗೆ ಬಂದಿದ್ದೇನೆ. ತಮಗೆ ನೀಡಲೆಂದೇ ಕೊಂಡುಬಂದ ಉಡುಗೊರೆಗಳೆಲ್ಲವನ್ನೂ ದಾರಿಯಲ್ಲಿ ಒಬ್ಬೊಬ್ಬರಾಗಿ ಕಿತ್ತುಕೊಂಡರು ಈಗ ಉಳಿದಿರುವುದು ಈ ದೇಹ ಮಾತ್ರ. ಎಷ್ಟು ಮಂದಿ ಜಲಕ್ರೀಡೆಯಾಡಿದ್ದರೂ, ಎಷ್ಟು ಮಂದಿ ಮುಳುಗಿ ಮುಳುಗಿ ಮಿಂದರೂ, ಎಷ್ಟು ತೆಪ್ಪಗಳು ತೇಲಿದರೂ, ಕ್ಷಯಿಸದ ನದಿಯಂತೆ ಕೊನೆಯಿಲ್ಲದಾದದ್ದು ಈ ಸ್ತ್ರೀ ದೇಹ. ಇದನ್ನು ತಾವು ಸ್ವೀಕರಿಸಬೇಕು. ಅಳಸಲಾಗುತ್ತಿರುವ ಈ ದೇಹದ ಹೊರತು ಇನ್ನೇನೂ

ನನ್ನಲ್ಲಿಲ್ಲ.ತಮಗೆ ಕಾಣಿಕೆಯಾಗಿ ನೀಡಲು ನನಗೆ ನನ್ನದೆಂದು ಹೇಳಿಕೊಳ್ಳಲು ನನ್ನಲ್ಲಿ ಬೇರೇನೂ ಇಲ್ಲ.."[೧] ಪದ್ಮಾವತಿಗೆ ದೇಹದ ಮೇಲೆ ಆದ ಹಿಂಸೆ ದೇಹವನ್ನೇ ಹಂಬಲಿಸುವ ಬಲಿಷ್ಟ ಪುರುಷರನ್ನು ಕಂಡು ದೇಹದ ಮೇಲೆ ವ್ಯಾಮೋಹವೇ ಕಳೆದುಹೋಗಿದೆ. ಈಗ ಅವಳಲ್ಲಿರುವ ಪರಿಶುದ್ಧವಾದ ಮನಸು ಅದನ್ನು ದೇವರಿಗಾಗಿ ಅರ್ಪಿಸುವುದಕ್ಕಾಗಿ ಬಂದಿರುವ ವೇಶ್ಯೆ ಪದ್ಮಾವತಿಯನ್ನು ಕಂಡು ದೇವಸ್ಥಾನದ ಬಾಗಿಲು ತೆರೆಯುತ್ತದೆ.

ದೇವರು ಪ್ರತ್ಯಕ್ಷವಾಗಿ ಅವಳ ಮನದ ಹಿಂಗಿತದಂತೆ ಅವಳಲ್ಲಿ ಅವನು ಒಂದಾಗುತ್ತಾನೆ. ದೇವರಲ್ಲಿ ಪದ್ಮಾವತಿ ತನ್ನನ್ನು ತಾನೇ ಸಮರ್ಪಿಸಿಕೊಳ್ಳುತ್ತಾಳೆ. ದೇವರು ಪದ್ಮಾವತಿಯ ಪರಿಶುದ್ಧ ಮನಸ್ಸಿಗೆ ಮೆಚ್ಚಿ ನಾನು ನೀನು ಬೇರೆಯಲ್ಲ. ನಾನು ನಿನ್ನವನಾಗುವುದಕ್ಕಿಂತಲೂ ಹೆಚ್ಚಾಗಿ ನಾನು ನನ್ನವನೇ ಆಗುತ್ತೇನೆ. ಕಾರಣ ನೀನು ಹಾಗೂ ನಿನ್ನ ಸರ್ವಸ್ವವೂ ನನ್ನದಲ್ಲವೇನು. ಎಂದು ದೇವರು ವೇಶ್ಯೆಯಾದ ಪದ್ಮಾವತಿಯನ್ನು ಸ್ವೀಕರಿಸುತ್ತಾನೆ. ಅದಕ್ಕೆ ಕಾರಣ ಅವಳು ದೇಹವನ್ನು ಮತ್ತೊಬ್ಬರ ಜೊತೆ ಹಂಚಿಕೊಂಡಿದ್ದಳು ಮನಸ್ಸು ಮಾತ್ರ ಅದು ದೇವರಲ್ಲಿ ಮಾತ್ರ ಲೀನವಾಗಿತ್ತು. ಆ ಮನಸ್ಸಿನಿಂದ ದೇವರನ್ನು ಒಲಿಸಿಕೊಳ್ಳುತ್ತಾಳೆ. ಆದರೆ ಇಂದಿನ ಪ್ರಸ್ತುತ ಸಮಾಜದಲ್ಲಿ ವೇಶ್ಯೆ ಎಂದರೆ ಅವಳನ್ನು ಒಬ್ಬ ಸಾಮಾನ್ಯ ವ್ಯಕ್ತಿಯಂತೆ ಯಾರೂ ನೋಡುವುದಿಲ್ಲ. ಅವರಿಗೆ ಯಾರು ಆದರವನ್ನು ತೋರುವುದಿಲ್ಲ. ಗಂಡಸರು ಕೋಣೆಯಲ್ಲಿ ದೈಹಿಕವಾಗಿ ಹಿಂಸಿಸಿದರೆ ಹೊರಗೆ ಮಾನಸಿಕವಾಗಿ ಒಬ್ಬ ವೇಶ್ಯೆಗೆ ಹಿಂಸೆಯನ್ನು ನೀಡುತ್ತಿರುತ್ತಾರೆ.

ವೇಶ್ಯೆ ದೇವರಿಗೆ ಅರ್ಹಳಾದವಳು, ಮನುಷ್ಯರಿಗೆ ಯಾಕೆ ಅರ್ಹಳಲ್ಲ. ಅವಳನ್ನು ತಮ್ಮಂತೆ ಕಂಡು ಅವಳಿಗೆ ಅವಳದೇ ಆದ ಸ್ಥಾನಮಾನಗಳನ್ನು ನೀಡಿ ಗೌರವದಿಂದ ಕಾಣಬೇಕು. ವೇಶ್ಯೆ ಎಂದರೆ ಕೇವಲ ಭೋಗದ ವಸ್ತುವೆಂದು ತಿಳಿಯಬಾರದು. ದೇವರಿಗೆ ಪ್ರೀಯವಾಗುವ ವೇಶ್ಯೆ ಮನುಷ್ಯರಿಗೆ ಏಕೆ ಪ್ರಿಯಳಲ್ಲವೆಂಬ ಸಂದೇಶದೊಂದಿಗೆ,ವೇಶ್ಯೆಯ ಜೀವನದಲ್ಲಿರುವ ತತ್ವಾದರ್ಶನಗಳನ್ನು ಕಮಲಾದಾಸರು ಸೂಕ್ಷ್ಮವಾಗಿ ಪರಿಶೀಲಿಸಿ ಮಾರ್ಮಿಕವಾಗಿ ದಲಿತ ಸ್ತ್ರೀ ಸಂವೇದನೆಗಳನ್ನು ಪದ್ಮಾವತಿ ಎಂಬ ವೇಶ್ಯಾ ಪಾತ್ರದ ಮೂಲಕ ಬಿಂಬಿಸಿದ್ದಾರೆ. ಒಬ್ಬ ವೇಶ್ಯೆಯನ್ನು ಕಾಣುವ ಪುರುಷಸಮುದಾಯ ಅವಳು ವೇಶ್ಯೆಯಾಗುವದಕ್ಕೂ ಕಾರಣವಾದ ಈ ಸಮಾಜ ಅವಳನ್ನು ಮನೋವ್ಯಥೆಯಲ್ಲಿ ಬದುಕುವಂತೆ ಮಾಡಿದೆ. ಬಾಳಿನಲ್ಲಿ ಅಸಹಾಯಕಳಾಗಿ ನೊಂದು ಸಮಾಜದ ತಿಸ್ಕಾರಗಳನ್ನು ಸಹಿಸಿಕೊಂಡು, ಪದ್ಮಾವತಿಯು ಸಮಾಜದ ಜೀವನಕ್ಕೆ ವಿಮುಖಳಾಗಿರುವುದು ಅವಳಲ್ಲಿರುವ ಸಂಕಟವನ್ನು ತೋರಿಸಿ ಕೊಡುತ್ತದೆ.

ಇದಕ್ಕೆ ಕಾರಣವಾದ ಬಂಡವಾಳಶಾಹಿಗಳು ವೇಶ್ಯೆಯನ್ನು ಒಂದು ಹೆಣ್ಣನ್ನು ಹೆಣ್ಣಾಗಿ ಕಾಣಬೇಕು. ಅವಳನ್ನು ಕೇವಲ ದೈಹಿಕ ವಸ್ತುವಂತೆ ಕಾಣುತ್ತಿರುವುದರಿಂದ ಅದರಿಂದಾಗುವ ಮಾನಸಿಕ ಒತ್ತಡಗಳು ಹೆಣ್ಣನ್ನು ಹೇಗೆ ಬಾಧಿಸುತ್ತವೆ ಎಂಬುದನ್ನು ಈ ಕಥಾ ನಿರೂಪಣೆಯ ಮೂಲಕ ಸ್ತ್ರೀ ಸಂವೇದನೆಗಳನ್ನು ಕಮದಾಸ್‌ರವರು ತೋರಿಸಿಕೊಟ್ಟಿದ್ದಾರೆ. ವೇಶ್ಯೆಯಾದ ಪದ್ಮಾವತಿ

ತನ್ನ ದೇಹವನ್ನು ಮಾರಿಕೊಳ್ಳುವಂತೆ ಈ ಸಮಾಜ ಅಂತಹ ಪರಿಸ್ಥಿತಿಯನ್ನು ಅವಳಿಗೆ ತಂದಿರುತ್ತದೆ. ಆದರೆ ತನ್ನ ಮನಸ್ಸನ್ನು ಮಾತ್ರ ದೇವರಿಗೆಂದು ಮೀಸಲಿಟ್ಟಿದ್ದಾಳೆ. ಒಂದು ಹೆಣ್ಣು ತನ್ನ ಜೀವನದಲ್ಲಿ ಪ್ರತಿದಿನ ಮನಸ್ಸಿನ ಜೊತೆ ಮಾತನಾಡಿಕೊಳ್ಳುತ್ತಿರುತ್ತಾಳೆ. ನಾನು ದೇವರಿಗೆ ಸಲ್ಲಬೇಕೆಂದು.ಅದರಂತೆ ಅವಳು ಕನಸುಗಳನ್ನು ಕಟ್ಟಿಕೊಂಡು ಪರಿಶುದ್ಧವಾದ ದೇವರನ್ನು ಕಾಣುವುದಕ್ಕಾಗಿ ಅಂದರೆ ಒಳ್ಳೆಯದನ್ನೇ ನೋಡುವುದಕ್ಕಾಗಿ ತನ್ನಲ್ಲಿ ತಾನು ಬಯಸುತ್ತಿರುತ್ತಾಳೆ. ಆದರೆ ಅವಳ ಬದುಕು ತಂದ ಅನಿವಾರ್ಯತೆಯ ಪರಿಸ್ಥಿತಿಗಳಲ್ಲಿ ಸಿಲುಕಿಕೊಂಡಾಗ, ಬಂಡವಾಳಶಾಹಿಗಳು ಅವಳ ಮೇಲೆ ಆರದಗಾಯವನ್ನು ಮಾಡಿಬಿಡುತ್ತಾರೆ.

ಆಗ ಅಲ್ಲಿಗೆ ಸಮಾಜದ ಮೇಲಿನ ನಂಬಿಕೆಯನ್ನು ಕಳೆದುಕೊಂಡು ತನ್ನ ವೃತ್ತಿ ಜೀವನವನ್ನು ಅಧರ್ಮದ ನೆಲೆಯಲ್ಲಿ ಕೈಗೊಂಡರೂ, ತನ್ನ ಮನಸ್ಸಿನ ಧರ್ಮದಲ್ಲಿ ಮಾತ್ರ ಶುದ್ಧಳಾಗಿ ಜೀವಿಸುತ್ತಿರುತ್ತಾಳೆ. ತಾನು ಬಯಸಿದಂತ ಜೀವನ ತನಗೆ ಸಿಗದಿದ್ದರೂ, ತನ್ನಲ್ಲಿ ಆ ಜಗತ್ತನ್ನು ಕಂಡುಕೊಂಡು ಮನಶಾಂತಿಯಲ್ಲಿ ಬದುಕುತ್ತಾಳೆ. ಅವಳಲ್ಲಿರುವ ಯೌವ್ವನ ಕಿತ್ತುಕೊಂಡು ಕೊನೆಗೆ ದೇಹವನ್ನು ಮಾತ್ರ ಉಳಿಸಿದಾಗ, ದೇವರೇ ನಿನಗೆ ಈ ದೇಹವೇ ನನ್ನ ಕೊಡುಗೆ. ನೀನು ಕೊಟ್ಟಿದ್ದು ನೀನೇ ತೆಗೆದುಕೊ. ಸಮಾಜದಲ್ಲಿ ಇದರ ಮೇಲೆ ನೂರಾರು ಕ್ರಿಮಿಗಳು ಕುಳಿತುಕೊಂಡವು, ಅವುಗಳಿಂದ ನಾನು ತಪ್ಪಿಸಿಕೊಳ್ಳಲಾಗಲಿಲ್ಲ. ಆದರೂ ನನ್ನ ದೇಹವನ್ನು ಉಳಿಸಿಕೊಂಡು ಬರಿಗೈಯಲ್ಲಿ ಬಂದಿದ್ದೇನೆ ತೆಗೆದುಕೋ ಎಂದು ಹೇಳುವ ಪದ್ಮಾವತಿಯ ಮಾತಿನಲ್ಲಿ, ಅವಳು ಈ ಕೆಟ್ಟ ಸಮಾಜದಲ್ಲಿ ಬಂಡವಾಳಶಾಹಿಗಳಿಂದ ಅನುಭವಿಸಿದ ಅವಮಾನಗಳು, ಆಂತರಿಕ ಒಳವೇದನೆಯು ದೈಹಿಕವಾಗಿ ಮಾನಸಿಕವಾಗಿ ದಂಡಿಸುತ್ತಿದೆ.

ತನಗೆ ಮಾಡಿರುವ ಶೋಷಣೆಯಿಂದ ಈ ಲೌಕಿಕ ಪ್ರಪಂಚದ ಮೇಲೆ ನಂಬಿಕೆಯನ್ನು ಕಳೆದುಕೊಂಡಿದ್ದಾಳೆ. ಬಂಡವಾಳಶಾಹಿಗಳು ದೇವರಿಗಾಗಿ ನೀರಿನಲ್ಲಿ ಮುಳುಗಿಕೊಂಡು ತಮ್ಮ ಪಾಪಗಳನ್ನು ಕಳೆದುಕೊಳ್ಳಲು ತಮ್ಮ ತಲೆಕೂದಲುಗಳನ್ನು ದೇವರ ಹೆಸರಿನಲ್ಲಿ ಕೊಡುತ್ತಾರೆ. ಮತ್ತೆ ಅವರು ಮನೆಗೆ ಬಂದ ಮೇಲೆ ನೊಂದ ಬಡ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರಗಳನ್ನು ಮಾಡುತ್ತಾರೆ. ಅವರು ಬದಲಾಗುವುದಿಲ್ಲ ಅವರಲ್ಲಿರುವ ಬಂಡವಾಳವು ಅವರ ಕಣ್ಣುಗಳನ್ನು ಮುಚ್ಚಿಸಿದೆ. ತೆರೆದು ನೋಡಲು ಒಳಗಣ್ಣು ಅವರಿಂದ ಸಾಧ್ಯವಾಗುವುದಿಲ್ಲ. ಇದರಿಂದಾಗಿ ದೇವರ ಹೆಸರಿನಲ್ಲಿಯೇ ಶೋಷಣೆಯನ್ನು ಮಾಡುತ್ತಾರೆ. ಅವರಿಗೆ ಬೇಕಾಗಿರುವುದು ದೇವರಲ್ಲ. ದೇವರಂತಿರುವ ದಲಿತ ಬಡ ಹೆಣ್ಣುಮಕ್ಕಳ ದೇಹಗಳು. ಇದನ್ನೇ ಕಥೆಗಾರರು ಈ ಕಥೆಯಲ್ಲಿ ಪದ್ಮಾವತಿಯೆಂಬ ವೇಶ್ಯೆ ಜೀವನವನ್ನಾಧರಿಸಿಕೊಂಡು, ಅವರಲ್ಲಿರುವ ಪರಿಶುದ್ಧದ ಮನಸ್ಸು ಅದನ್ನೇ ಕೊಲ್ಲುತ್ತಿರುವ ಬಂಡವಾಳಶಾಹಿಗಳ ದುರ್ವರ್ತನೆಯನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಗ್ರಹಿಸಿಕೊಂಡಿದ್ದಾರೆ.

ದಲಿತರ ಹೆಣ್ಣುಮಕ್ಕಳು ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಶೋಷಣೆಗೊಳಗಾಗಿ, ತಮ್ಮ ಜೀವನವನ್ನು ತುಳಿತಕ್ಕೆ ಒಳಪಡಿಸಿಕೊಂಡಿರುವುದನ್ನು ಈ ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

ದಲಿತ ಮಹಿಳೆಯರ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸ್ವತಂತ್ರವಾಗಿ ಬದುಕಬೇಕು.ಮಹಿಳೆಯರಿಗೆ ಸಿಗಬೇಕಾದ ಸಾಮಾಜಿಕ ಸ್ಥಾನಮಾನಗಳು ದೊರೆಯುವಂತಾಗಬೇಕು. ಎಂಬ ಆಶಯದಿಂದ ಪ್ರಸ್ತುತ ದಲಿತ ಮಹಿಳೆಯರು ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆಯಿಂದ ಹೇಗೆ ಬಂಡವಾಳಶಾಹಿಗಳಿಂದ ಅತ್ಯಾಚಾರಕ್ಕೊಳಪಡುತ್ತಾರೆ ಹಾಗೂ ಅತಂತ್ರದ ಬದುಕಿನಲ್ಲಿ ಮಹಿಳೆಯರು ವೇಶ್ಯಾ ಜೀವನದಲ್ಲಿ ಅನುಭವಿಸುತ್ತಿರುವ ಅಂತರಾಳದ ನೋವುಗಳನ್ನು ಈ ಕಥೆಯಲ್ಲಿ ಸ್ತ್ರೀವಾದದ ನೆಲೆಯಿಂದ ಪ್ರತಿಪಾದಿಸಿದ್ದಾರೆ.

ಓಲ್ಗಾ ಎನ್ನುವ ಕಾವ್ಯ ನಾಮದಿಂದ ಸುಪರಿಚಿತರಾಗಿರುವ ಆಂಧ್ರದ ಪ್ರಸಿದ್ಧ ಲೇಖಕಿ ಪೋಪೂರಿ ಲಲಿತಕುಮಾರಿ ಅವರ ಕಥೆಗಳನ್ನು 'ರಾಜಕೀಯ ಕಥೆಗಳು' ಎಂದು ಜಿ.ವೀರಭದ್ರ ಗೌಡರವರು ಕನ್ನಡನುವಾದವನ್ನು ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಅಯೋನಿ' ಕಥೆಯು ಒಂದು ಹೆಣ್ಣಿಗಾಗುವ ನರಕ, ಹಸಿವು, ಭಯ, ಕತ್ತಲು ಇವುಗಳಿಗಿರುವ ಭಯಂಕರ ಅರ್ಥವನ್ನು ತಿಳಿಸಿ ಹೆಣ್ಣಾಗಿ ಹುಟ್ಟಿ ಹೆಣ್ಣಾಗಿರುವುದೇ ತಪ್ಪು. ನಾನು ಹೆಣ್ಣಾಗಬಾರದೆಂಬ ಹೆಣ್ಣಿನ ಒಳಲೋಕದ ನರಕಯಾತನೆಗಳನ್ನು ಈ ಕಥೆಯ ಮೂಲಕ ತೋರಿಸಿಕೊಟ್ಟಿದ್ದಾರೆ. ಓಲ್ಗಾರವರು ಹೆಣ್ಣಿನ ಜೀವನ ಅದೆಂಥ ಸಂಕಟಗಳಿಗೆ ಒಳಗಾಗಿರುತ್ತದೆ ಎಂಬುದನ್ನು ವಿವರಿಸಿದ್ದಾರೆ. ಹತ್ತು ವರ್ಷದ ಹುಡುಗಿನ್ನು ಒಂದು ವೇಶ್ಯೆಯ ಗೃಹದಲ್ಲಿ ತಂದು ಹಾಕಿದ್ದಾರೆ. ಆ ವಯಸ್ಸಿನಲ್ಲಿ ದಿನಕ್ಕೆ ಮೂರ್‍ನಾಲ್ಕು ಗಂಡಸರು ಬಂದು ಹೋದಾಗ ಆ ಮಗುವಿನ ಮನಸ್ಸಿನ ಮೇಲೆ ಆಗುವ ಪರಿಣಾಮ, ಅವಳು ದೈಹಿಕವಾಗಿ ಹಿಂಸೆಯನ್ನನುಭವಿಸಿದ್ದು, ಇವೆಲ್ಲವೂಗಳಿಂದ ನನಗೆ ಯೋನಿ ಇಲ್ಲದಿದ್ದರೆ ಎಷ್ಟೊಂದು ಚೆನ್ನಾಗಿರುತ್ತಿತ್ತು. ನಾನು ಅಯೋನಿಯಾಗಬೇಕು. ಅದು ಇರುವುದರಿಂದಲೇ ತಾನೆ ನನಗೆ ಈ ನರಕದ ಯಾತನೆ.

ಯೋನಿ-ಅಯೋನಿ, ಯೋನಿಜೆ-ಅಯೋನಿಜೆ ಇವುಗಳಲ್ಲಿ ನಾನು ಅಯೋನಿಯಾದರೆ ಯಾವ ವಿಷಸರ್ಪಗಳ ಕಾಟ ನನಗಿರುವುದಿಲ್ಲ. ನನ್ನನ್ನು ನೋಡುತ್ತಿರುವುದು ಎಲ್ಲರೂ ಯೋನಿ ಎಂದೇ. ಇಲ್ಲಿಗೆ ಬರುವವರು ಅದಕ್ಕಾಗಿಯೇ. ನನ್ನೆಲ್ಲ ಒಳ ಲೋಕದ ಸ್ಪಷ್ಟ ಕಲ್ಪನೆಗಳು ಯಾರಿಗೂ ಬೇಕಿಲ್ಲ. ಅವುಗಳನ್ನು ಕೇಳಲು ನನಗೆ ತಂದೆ-ತಾಯಿಯೂ ಇಲ್ಲಿಲ್ಲ. ಇಲ್ಲಿನ ಈ ಪ್ರಪಂಚ ಬಿಟ್ಟು ಬೇರೇನೂ ನೋಡಲು ನನಗೆ ಸಾಧ್ಯವಿಲ್ಲ. ಹಾಗೆ ನನನ್ನು ಇಲ್ಲಿ ಬಂಧಿಸಿದ್ದಾರೆ ಎಂದು ಯಾತನೆಯಲ್ಲಿ ಮುಳುಗಿರುವ ಒಂದು ಹೆಣ್ಣಿನ ಮೇಲೆ ಹೇಗೆ ಬಂಡವಾಳಶಾಹಿಗಳು ತಮ್ಮ ದೇಹದ ಹಸಿವನ್ನು ಹೇಗೆ ತೀರಿಸಿಕೊಳ್ಳುತ್ತಿದ್ದಾರೆ, ಹಾಗೆ ಅವಳ ದೇಹವನ್ನೇ ಹೇಗೆ ಬಂಡವಾಳವನ್ನಾಗಿ ಮಾಡಿಕೊಳ್ಳುತ್ತಿದ್ದಾರೆ, ಮನುಷ್ಯರಾಗಿ ಮನುಷ್ಯತ್ವವೇ ಇಲ್ಲದೆ ಮೃಗಗಳಂತೆ ಹೆಣ್ಣಿನ ಮೇಲೆ ನಡೆಸುತ್ತಿರುವ ಈ ಅತ್ಯಾಚಾರದಲ್ಲಿ ದಮನಿತರ ಕೂಗು ಕೇಳುವವರಾರು.....? ಕೇಳುವುದಕ್ಕೆ ಅಸಹ್ಯವಾದರೂ ಈ 'ಅಯೋನಿ' ಕಥೆಯು ಸತ್ಯದ ಸಮಾಜದಲ್ಲಿ ಪುರುಷಸಮುದಾಯದ ಬಲತ್ಕಾರವನ್ನು ಧಿಕ್ಕರಿಸುತ್ತಿದೆ. ನಾನು ಕಥೆಯನ್ನು ಬರೆಯಬೇಕು ಅದು ನನ್ನ ಕಥೆಯನ್ನು ಬರೆದು ಸತ್ತು ಹೋಗಬೇಕು.

ನಾನು ನನ್ನ ಕಥೆಯನ್ನು ಬರೆಯುವುದಕ್ಕಾಗಿಯೇ ಬದುಕಿರುವೆ. ಕಥೆ ಬರೆಯುವುದಕ್ಕಾಗಿಯೇ ಸೂಕ್ತ ಪದವೊಂದು ಸಿಕ್ಕಿದೆ. ಕಥೆ ಅಸಹ್ಯದಿಂದ ಕೂಡಿದೆಯೆಂದು ನೀವು ಕೋಪ ಮಾಡಿಕೊಂಡರೂ ನನ್ನನ್ನು ಕ್ಷಮಿಸಿ ನಾನು ಹೇಳುವುದು ಕಲ್ಪನೆಯ ರಾಜಕುಮಾರಿಯ ಕಥೆಯಲ್ಲ ಆದ್ದರಿಂದ ನಾನು ನನ್ನದೇ ಕಥೆಯನ್ನು ಹೇಳುತ್ತಿದ್ದೇನೆ. ವೇಶ್ಯಾಗೃಹದಲ್ಲಿ ಬಂಧಿಯಾಗಿರುವ ಗೆಳತಿಯರ ಜೊತೆ ಕಥೆಗಾರ್ತಿ ಗೆಳತಿ ಭಾಗ್ಯಕ್ಕನಿಗೆ ಕಥೆ ಹೇಳುತ್ತಿದ್ದಾಳೆ. ಆ ದಿನ ಜನವರಿ ನಾಲ್ಕನೇ ತಾರೀಖು ಅಂದೇ ಪರೀಕ್ಷೆಗಳು ಮುಗಿದು ಸಂಕ್ರಾಂತಿ ಹಬ್ಬಕ್ಕೆ ರಜೆ ಕೊಟ್ಟಿದ್ದರು. ನಾನು ನನ್ನ ಮನೆಯವರ ಸಂಗಡ ಆನಂದದಿಂದ ಮನೆಯ ಮುಂದೆ ರಂಗೋಲೆ ಹಾಕಿಕೊಂಡು ಆಟವಾಡುತ್ತಾ ರಜೆ ದಿನಗಳನ್ನು ಕಳೆಯುತ್ತಿದ್ದೆ.

ನನ್ನ ಪರೀಕ್ಷೆಗಳು ಮುಗಿದ ಸಂತೋಷದಲ್ಲಿ ನನ್ನ ಗೆಳತಿ ರಾಧಾರಾಣಿಯ ಮನೆಯಲ್ಲಿ ಕ್ಯಾರಮ್ ಆಟದಲ್ಲಿ ಸೋತ ಕಾರಣ ಕೋಪದಿಂದ ಮನೆಗೆ ಹೋಗುವಾಗ ಸ್ವಲ್ಪ ತಡವಾಯಿತು. ಆಗ ಅಮ್ಮ ಬೈಯುತ್ತಾಳೆಂದು ಭಯದಿಂದ ಅವಸರದಿ ಹೋಗುವಾಗ ಒಂದು ಕಾರು ಕಪ್ಪನೆ ಬಣ್ಣದ್ದು ಬಂದು ಅದರಲ್ಲಿ ನನ್ನನ್ನು ತಳ್ಳಿ ಎರಡು ಹಾವುಗಳು ನನ್ನ ಮೇಲೆ ವಿಷವನ್ನು ಚಿಮ್ಮಿದವು. ಅಂದೇ ನಾನು ಸತ್ತು ಹೋದೆ. ಸತ್ತಿದ್ದರೆ ತುಂಬಾ ಚೆನ್ನಾಗಿತ್ತು.ಅವತ್ತೇ ನನಗೆ ಗೊತ್ತಾದದ್ದು ಹಸಿವು, ನರಕ, ಭಯ,ಕತ್ತಲೆಗಳಿಗಿರುವ ಇನ್ನೊಂದು ಅರ್ಥ. ಆದರೆ ಅವರು ತಿನ್ನುತ್ತಿರುವುದು ಅನ್ನವೋ ರಕ್ತವೋ ತಿಳಿಯದ ಸ್ಥಿತಿಯಲ್ಲಿ ನಾನಿದ್ದೆ. ವಾರಕ್ಕೆ ಮೂರು ದಿನಗಳು ಅದೇ ಕೆಲಸ. ನನಗೆ ಆಗ ಹತ್ತು ವರ್ಷ ವಾರಕ್ಕೆ ಮೂರು ದಿನ ಗಂಡಸರು ಬಂದು ಹೋಗುತ್ತಿದ್ದರು. ಕಾರಣ ಅವರಿಗೆ ರೋಗಗಳಿವೆಯಂತೆ ನನ್ನನ್ನು ಸೀಳಿದರೆ ಅವರ ರೋಗ ಹೋಗುತ್ತದೆಯಂತೆ. ನಾನು ಹುಡುಗಿಯಲ್ಲ, ಮನುಷ್ಯಳೂ ಅಲ್ಲ, ಪ್ರಾಣಿಯೂ ಅಲ್ಲ ಒಬ್ಬ ಯೋನಿ. ಆದ್ದರಿಂದಲೇ ನಾನು ಅಯೋನಿಯಾಗಬೇಕೆಂದು ತನ್ನ ಈ ಕಥೆಯನ್ನು ಭಾಗ್ಯಕ್ಕಳಿಗೆ ಹೇಳಿದಾಗ ಅವಳು ನೀನು ದೊಡ್ಡವಳಾದಮೇಲೆ ನೋವಾಗುವುದಿಲ್ಲ.

ಏನು ಮಾಡುವುದು ನಮ್ಮಂತವರ ಜೀವನ ಇದೇ ಸಹಿಸಿಕೊಳ್ಳಬೇಕು ಎಂದು ಹೇಳಿದಳು. ಆದರೆ ಕಥೆಗಾರ್ತಿಗೆ ಈ ಸಮಾಜದಲ್ಲಿರುವ ಬಂಡವಾಳಶಾಹಿಗಳ ಅತ್ಯಾಚಾರಕ್ಕೆ ನೊಂದು ತನ್ನ ಜೀವವನ್ನೇ ಹಿಂಡಿಕೊಂಡು ಮನೋವ್ಯಥೆಯಲ್ಲಿ ತನ್ನೆಲ್ಲಾ ಸಂವೇದನೆಗಳನ್ನು ಈ 'ಅಯೋನಿ' ಕಥೆಯಲ್ಲಿ ಬರೆದುಕೊಂಡಿದ್ದಾರೆ. ಹೆಣ್ಣಿಗೆ ಆಗುತ್ತಿರುವ ಇಂತಹ ಘೋರ ಅನ್ಯಾಯಕ್ಕೆ ಸಮಾಜದಲ್ಲಿರುವ ಉಳ್ಳವರು ಕಾರಣರಾಗಿದ್ದಾರೆ. ಅವರಲ್ಲಿರುವ ಅಧಿಕಾರ, ಹಣದ ಬಲದಿಂದ ದಿಕ್ಕಿಲ್ಲದ ಅಸಹಾಯಕ ಹೆಣ್ಣುಮಕ್ಕಳಿಗೆ ಇಂತಹ ಸ್ಥಿತಿಯಲ್ಲಿ ತಂದು ಹಾಕಿ ಅವರ ಜೀವನವನ್ನು ನರಕದಲ್ಲಿಟ್ಟಿದ್ದಾರೆ. ಹೆಣ್ಣುಮಕ್ಕಳನ್ನು ಅಪಹರಿಸಿ ವೇಶ್ಯಾಗೃಹದಲ್ಲಿ ಬಂಧಿಸಿಡುವುದರ ಮೂಲಕ ಅವಳಿಗಿರುವ ಬದುಕಿನ ಸ್ವತಂತ್ರತೆಯನ್ನೇ ಕಿತ್ತುಕೊಂಡಿದ್ದಾರೆ. ದೇಹವನ್ನು ಬಳಸುವುದಕ್ಕಾಗಿ ಹೆಣ್ಣಿಗೆ ನೀಡುವ ಚಿತ್ರಹಿಂಸೆಯೂ ಪುರುಷ ಬಲಿಷ್ಠರು ಮಾಡುವ ಅಪರಾಧವಾಗಿದೆ. ಇದು ಕೇವಲ ದಲಿತ ಸ್ತ್ರೀಯರ ಮೇಲೆ ಮಾತ್ರ ಜರುಗುವ ಸಾಮಾನ್ಯ ಸಮಸ್ಯೆಗಳಾಗಿವೆ.

ಅದಕ್ಕಾಗಿಯೇ ಕಥೆಗಾರ್ತಿಯು “ನನಗೆ ಮಾತ್ರ ತಕ್ಷಣ ಅಯೋನಿಯಾಗಬೇಕೆನಿಸುತ್ತಿದೆ. ನನ್ನ ಬಯಕೆ ಅಸಹ್ಯವಾಗಿದೆಯೆಂದು ಒಳ್ಳೆಯದಲ್ಲವೆಂದು ನೀವು ಅಂದುಕೊಳ್ಳುತ್ತಿದ್ದರೆ, ಮೊದಲು ಈ ಹಿಂಸೆಯನ್ನು ನಿಲ್ಲಿಸಿ. ಸಣ್ಣ ಸಣ್ಣ ಹುಡುಗಿಯರನ್ನು ಅವರ ಯೋನಿಗಾಗಿ ಎತ್ತಿಕೊಂಡು ಬರುವ ನಾಗರ ಹಾವುಗಳನ್ನು ತಿವಿದು ತಿವಿದು ಕೊಲ್ಲಿರಿ. ಈ ವ್ಯಾಪಾರವನ್ನು ನಿಲ್ಲಿಸಿ. ಅದು ಕೈಲಾಗದೆ ನನ್ನನ್ನು ನೋಡಿ ನೀವು ಅಸಹ್ಯ ಪಡುವಿರಿ.ಯಾಕೆ ನನ್ನ ಕಥೆ ಅಸಹ್ಯವಾಗಿದೆ ಎನ್ನುವಿರಿ.”[೨] ಎಂದು ಪ್ರಶ್ನಿಸುವುದು ವಾಸ್ತವದ ಸಂಗತಿಯಾಗಿದೆ. ಪ್ರತಿಯೊಂದು ಹೆಣ್ಣು ತನ್ನ ಹೆಣ್ಣುತನವನ್ನು ಆನಂದಿಸುತ್ತದೆ. ತಾಯಿಯಾಗಿ ಇಡೀ ಲೋಕವನ್ನೇ ಪ್ರೀತಿಸುತ್ತಾಳೆ. ಹೀಗಿರುವಾಗ ನಾನು ಹೆಣ್ಣಾಗುವುದುಬೇಡ ಅನ್ನುವುದರ ಹಿನ್ನೆಲೆಯಲ್ಲಿ ಅವಳು ಕಾಣುತ್ತಿರುವ ಲೋಕದಲ್ಲಿ ಕೊಳೆತ ಮನುಷ್ಯರಿದ್ದಾರೆ. ಅವರಿಗಿರುವ ಸೊಕ್ಕಿನ ಸಂಪತ್ತು ದೀನದುರ್ಬಲರನ್ನು ತಮ್ಮಂತೆ ಕಾಣದೆ ತಮ್ಮಿಚ್ಚೆಯಂತೆ ಉಪಯೋಗಿಸಿ ಬಿಸಾಕುವ ಆಟದ ಸಾಮಾನುಗಳಾಗಿವೆ.

ಕೆಳವರ್ಗದವರ ಬದುಕಿನ ಭಾವನೆಗಳು ಅವರಿಗೆ ಗೊತ್ತಿಲ್ಲ ಅವರ ಬಡತನದಿಂದಲೇ ತಾವು ಬಂಡವಾಳಶಾಹಿಗಳಾಗಿ ಅವರ ಮೇಲೆಯೇ ತಮ್ಮ ಅನೀತಿಯ ಅತ್ಯಾಚಾರಗಳನ್ನು ಮಾಡಿ ಬೀದಿಯಲ್ಲಿ ನಿಲ್ಲಿಸಿದ್ದಾರೆ. ಸಮಸಮಾಜದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಯಾವ ಲಿಂಗ ಬೇಧವೂ ಇಲ್ಲದೆ ಸಮಾನತೆಯ ಸಮಾಜವನ್ನು ಕಟ್ಟುವ ಬದಲು ದಲಿತರನ್ನು ನೋವಿನ ಮಡುವಿನಲ್ಲಿ ಮುಳುಗಿಸಿದ್ದಾರೆ. ಇಂತಹ ವಿಚಾರಗಳ ಬಲದಿಂದಲೇ ಓಲ್ಗಾರವರು ಈ ‘ಅಯೋನಿ’ ಕಥೆಯ ನಿರೂಪಣೆಯ ಮೂಲಕ ದಲಿತ ಸ್ತ್ರೀ ಸಂವೇದನೆಗಳನ್ನು ಸೂಕ್ಷ್ಮವಾಗಿ ಸಮಾಜಕ್ಕೆ ತಿಳಿಸಿಕೊಟ್ಟಿದ್ದಾರೆ. ಯೋನಿ ಎಂಬ ಪದದಲ್ಲಿ ತಾಯಿ, ತಂಗಿ, ಹೆಂಡತಿ ಇದ್ದಾಳೆ. ಇವುಗಳ ಕಲ್ಪನೆಯಿಲ್ಲದವರಲ್ಲಿ ಯೋನಿ ಎಂಬುದೊಂದು ತಮ್ಮಿಚ್ಚೆಯಂತೆ ಉಪಯೋಗಿಸಿಕೊಳ್ಳುವ ಒಂದು ಕೇವಲ ರಂಧ್ರವಾಗಿರುವುದರಿಂದ ಈ ಕಥೆಯ ಕಥೆಗಾರ್ತಿಯು ಯೋನಿ ಇರುವುದರಿಂದಲೇ ತಾನು ಅನುಭವಿಸಿದ ನರಕಯಾತನೆಗಳನ್ನು ಕುರಿತು, ಇಡೀ ತಳಸಮುದಾಯದ ಬಡ ಹೆಣ್ಣುಮಕ್ಕಳ ಮಾನಸಿಕ, ದೈಹಿಕ ಯಾತನೆಗಳನ್ನು ಈ ಕಥೆಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ.

ಒಂದು ಹೆಣ್ಣು ಸ್ವತಂತ್ರವಾಗಿ ನಿರ್ಭೀತಿಯಿಂದ ಮಧ್ಯರಾತ್ರಿಯಲ್ಲಿ ತಿರುಗಾಡುವಂತ ವಾತಾವರಣ ಸೃಷ್ಟಿಯಾಗಬೇಕು. ಆಗ ದೇಶದ ಸ್ವತಂತ್ರ ನಿಜವಾಗಿಯೂ ಸಿಕ್ಕಿದೆ ಎಂಬುದು ಅರ್ಥ. ಆದರೆ ಇಂದು ಹಗಲಿನಲ್ಲಿ ಒಂಟಿಯಾಗಿ ಒಂದು ಹೆಣ್ಣು ಎಲ್ಲಿಯೂ ತಿರುಗುವಹಾಗಿಲ್ಲ. ಅವಳ ಮೇಲೆ ಕಾಮುಕ ಕಣ್ಣು ಬೀಳುತ್ತಲೇ ಇರುತ್ತದೆ. ಹೆಣ್ಣಿನ ಅಸಹಾಯಕತೆಯನ್ನು ಕಂಡುಕೊಂಡ ಪುರುಷ ವಿಷಹಾವುಗಳು ಬಡ ಹೆಣ್ಣುಮಕ್ಕಳ ಮೇಲೆ ತಮ್ಮ ವಿಷವನ್ನು ಕಾರುತ್ತಲೇ ಇರುತ್ತಾರೆ. ಇದನ್ನು ಸಹಿಸಿಕೊಂಡು ನರಕದ ನರಳಾಟದಲ್ಲಿ ಜೀವನವನ್ನು ನಡೆಸುವುದಕ್ಕೆ ಈ ಯೋನಿಯೇ ಕಾರಣವಾಗಿರುತ್ತದೆ. ಎಂಬುದರಿಂದಲೇ ಇಲ್ಲಿ ಕಥೆಗಾರ್ತಿಯು ಇಂತಹ ಅತ್ಯಾಚಾರದ ಸಮಾಜದಲ್ಲಿ, ನಾನು ಹೆಣ್ಣಾಗಿ ಇರಲು ನನ್ನಿಂದ ಸಾಧ್ಯವಿಲ್ಲ ನಾನು ‘ಅಯೋನಿ’ಯಾಗಬೇಕೆಂದು ಬಯಸುತ್ತಿರುವುದು,

ಬಂಡವಾಳಶಾಹಿಗಳು ಬಡ ಹೆಣ್ಣುಮಕ್ಕಳನ್ನು ಕೇವಲ ಒಂದು ಭೋಗದ ವಸ್ತುವೆಂದು ತಿಳಿದುಕೊಂಡು ತಮ್ಮಲ್ಲಿನ ಹಣದ ಸೊಕ್ಕಿನಿಂದ ಹೆಣ್ಣಿನ ಮೇಲೆ ಅತ್ಯಾಚಾರಗಳನ್ನು ನಡೆಸುತ್ತಿದ್ದಾರೆ.

ನಗರದ ಪ್ರದೇಶಗಳಲ್ಲಿ ಒಂದು ರೀತಿಯ ಅತ್ಯಾಚಾರವಾದರೆ, ಹಳ್ಳಿಗಳಲ್ಲಿ ಗೌಡರ ಮಕ್ಕಳು ಬಡ ಹೆಣ್ಣುಮಕ್ಕಳನ್ನು ಸ್ವಲ್ಪ ಜನರ ಸುಳಿವಿಲ್ಲದಿದ್ದರೆ ಸಾಕು, ಕೆಲಸಕ್ಕೆಂದು ಹೋದಕಡೆಯಲೆಲ್ಲ ಬಲಾತ್ಕಾರದಿಂದ ಅತ್ಯಾಚಾರ ಮಾಡುತ್ತಾರೆ. ಅವರಿಷ್ಟದಂತೆ ನಡೆದುಕೊಳ್ಳದಿದ್ದರೆ ನಿಮ್ಮನ್ನು ಊರಿನಲ್ಲಿ ಬಾಳಲು ಬಿಡುವುದಿಲ್ಲವೆಂದು ಭಯವನ್ನು ಹುಟ್ಟಿಸುತ್ತಾರೆ. ಅಲ್ಲಿನ ಹೆಣ್ಣುಮಕ್ಕಳ ಕೂಗನ್ನು ಯಾರುತಾನೆ ಕೇಳಲು ಸಾಧ್ಯ. ಶಿಕ್ಷಣವಿಲ್ಲದೆ, ಕಾನೂನಿನ ಅರಿವಿಲ್ಲದೆ ಬಡತನದಲ್ಲಿ ಬದುಕುತ್ತಿರುವ ದಲಿತ ಕುಟುಂಬಗಳು ಬಂಡವಾಳಶಾಹಿಗಳು ಮಾಡುತ್ತಿರುವ ಅತ್ಯಾಚಾರಗಳನ್ನು ಸಹಿಸಿಕೊಂಡು ಸುಮ್ಮನಿರಬೇಕು. ನಗರಗಳಲ್ಲಂತೂ ಕೇಳುವವರೇ ಇಲ್ಲ.

ಪ್ರತಿಯೊಂದು ಕ್ಷೇತ್ರದಲ್ಲೂ ಕೆಲಸ ಮಾಡುತ್ತಿರುವ ಹೆಣ್ಣಿಗೆ ಅತ್ಯಾಚಾರದ ಕಣ್ಣು ತಾಕಿಯೇ ಇರುತ್ತದೆ. ಬಡತನದಿಂದ ಕೆಲಸಕ್ಕೆಂದು ನಗರ ಪ್ರದೇಶಗಳಲ್ಲಿ ಸೇರಿಕೊಂಡರೆ ಕೆಲಸ ಮಾಡುವ ನೆಪದಲ್ಲಿ ಹೆಣ್ಣಿನ ಅತ್ಯಾಚಾರವೇ ಆಗಿರುತ್ತದೆ. ಒಂದು ಹೆಣ್ಣು ಎಲ್ಲಿಯೇ ಹೋಗಲಿ, ಏನೇಮಾಡಲಿ ಅಲ್ಲಿರುವ ಪುರುಷಹಾವುಗಳು ಮಾತ್ರ ತಮ್ಮ ವಿಷಕಾರುವುದನ್ನು ಮಾತ್ರ ಬಿಡುವುದಿಲ್ಲ. ಇಂತಹ ಸ್ಥಿತಿಯಲ್ಲಿ ನಾನು ಹೆಣ್ಣಾಗಿ ಬದುಕುವುದಕ್ಕಿಂತ ಅಯೋನಿಯಾಗಿ ಬದುಕಿದರೆ ನಾನೆಷ್ಟು ಆನಂದದಿಂದ ಇರಬಹುದಲ್ಲವೇ....? ಆದ್ದರಿಂದಲೇ ಒಂದು ಹೆಣ್ಣಿನ ಯೋನಿಯನ್ನು ಅಸಹ್ಯವೆಂದು ಭಾವಿಸಿಕೊಳ್ಳದೆ ಕಥೆಗಾರ್ತಿಯು ಅಲ್ಲಿ ಹೆಣ್ಣಿನ ಮೇಲೆ ನಡೆಯುತ್ತಿರುವ ಅತ್ಯಾಚಾರಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ಗ್ರಹಿಸಿ ಪುರುಷಕಾಮಿಗಳಿಂದ ಹೆಣ್ಣುಪಡುತ್ತಿರುವ ನರಕ ಜೀವನದ ಸಂಗತಿಗಳನ್ನು ಈ ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ದಲಿತರ ಮೇಲೆ ಬಂಡವಾಳಶಾಹಿಗಳು ಮಾನಸಿಕ ಮತ್ತು ದೈಹಿಕ ಶೋಷಣೆಯನ್ನು ಮಾಡುತ್ತಿದ್ದಾರೆ. ದಲಿತ ಹೆಣ್ಣುಮಕ್ಕಳ ಕೇವಲ ಒಂದು ಭೋಗದ ವಸ್ತುವಿನಂತೆ ಕಾಣುತ್ತಿದ್ದಾರೆ. ಇದರಿಂದಾಗಿ ಕಥೆಗಾರ್ತಿಯು ದಲಿತ ಹೆಣ್ಣುಮಕ್ಕಳ ಮನಸ್ಸಿನ ಸಂವೇದನೆಗಳನ್ನು ಈ ಅಯೋನಿ ಕಥೆಯ ಮೂಲಕ ತಮ್ಮ ಸೂಕ್ಷ್ಮ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ.ಈ ಕಥೆಯು ಸ್ತ್ರೀವಾದದ ನೆಲೆಯಿಂದ ಒಂದು ಹೆಣ್ಣು ಪಡುತ್ತಿರುವ ನೋವಿನ ಸಂವೇದನೆಗಳನ್ನು ಒಳಗೊಂಡಿರುತ್ತದೆ.

'ನನ್ನ ಚೀರಾಳಜ್ಜನ ಕಡುಗತ್ತಿ ಮತ್ತು ಇತರ ಮಲಿಯಾಳಿ ಕಥೆಗಳು' ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ. ಐತಾಳ್ ರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಮಲಿಯಾಳಂ ಲೇಖಕಿಯಾದ ಮಾಧವಿ ಕುಟ್ಟಿ (ಕಮಲಾದಾಸ್)ರವರೇ ಬರೆದಿರುವ 'ಸೋನಾ ಗಚ್ಚಿ' ಎಂಬ ಕಥೆಯು ಒಬ್ಬ ವೈಶ್ಯೆಯು ತನ್ನದೆಲ್ಲವನ್ನೂ ಕಳೆದುಕೊಂಡು, ಸಾಮಾಜಿಕ ವ್ಯವಸ್ಥೆಯಿಂದ ವಂಚಿತಳಾಗಿ ಬಂಡವಾಳಶಾಹಿಗಳ ಶೋಷಣೆಯಿಂದ ಕೊನೆಗೆ ಬೀದಿಯಲ್ಲಿ ಬದುಕಬೇಕಾಗಿರುವ ಹೀನಾಯ ಸ್ಥಿತಿಯ ಚಿತ್ರಣವನ್ನು, ಈ ಕಥೆಯು ಶೋಷಿತರ ವರ್ಗವನ್ನು ಪ್ರತಿನಿಧಿಸುತ್ತ ದುರ್ಬಲಳಾದ ಸ್ತ್ರೀ ಶೋಷಣೆಯನ್ನು ಅಭಿವ್ಯಕ್ತಗೊಳಿಸುತ್ತದೆ. ಒಂದು ಹೆಣ್ಣಿಗೆ

ಬದುಕಲು ಬೇಕಾಗುವ ಅಗತ್ಯ ವಸ್ತುಗಳಿಂದ ವಂಚಿತಳಾಗಿ ಪ್ರಪಂಚದಲ್ಲಿ ಅತಂತ್ರಳಾಗಿ ನಿಂತಾಗ ಅವಳಿಗೆ ಕಾಣುವುದು ಹಾಗೂ ಅವಳಲ್ಲಿರುವುದು ತನ್ನ ಆಸ್ತಿ ಎಂದರೆ ತನ್ನ ದೇಹ ಮಾತ್ರ.

ಅದನ್ನೇ ತನ್ನ ಹಸಿದ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿ ಉಪಯೋಗಿಸಿಕೊಳ್ಳುವ ಅನಿವಾರ್ಯತೆಯನ್ನು ಅವಳ ಬಡತನದ ಅಸಹಾಯಕ ಜೀವನವೇ ಅವಳಿಗೆ ತಂದುಬಿಡುತ್ತದೆ. ಹಸಿದ ಹೊಟ್ಟೆಗೆ ಬೇಕಾಗುವುದು ಪಾಪ ಪುಣ್ಯಗಳಲ್ಲ, ನೀತಿ ಆದರ್ಶ ತತ್ವಗಳಲ್ಲ, ಪವಿತ್ರ ಅಪವಿತ್ರವೆನ್ನುವ ಸಂಸ್ಕೃತಿಗಳಲ್ಲ ಅದಕ್ಕೆ ಬೇಕಾಗಿರುವುದೊಂದೆ 'ಅನ್ನ'. ಅನ್ನವಿಲ್ಲದ ಹೊಟ್ಟೆ ಏನನ್ನಾದರೂ ಮಾಡಿಸುತ್ತದೆ. ಅಂತವುಗಳಲ್ಲಿ ವೇಶ್ಯಾ ವಾಟಿಕೆಯು ಒಂದಾಗಿರುತ್ತದೆ. ಇಂತಹ ಚಟುವಟಿಕೆಗಳಲ್ಲಿ ಭಾಗಿಯಾಗಿರುವ ಒಂದು ಹೆಣ್ಣಿನ ವಾಸ್ತವಿಕ ಜೀವನವನ್ನು ಕೆದಕಿ ನಾವು ಹುಡುಕಿದಾಗ ಅವಳಲ್ಲಿ ಇಡೀ ಜಗತ್ತೇ ತೆರೆದುಕೊಳ್ಳುತ್ತದೆ. ಇಂತಹ ಚಿತ್ರಣವನ್ನು ಈ 'ಸೋನಾಗಚ್ಚಿ' ಎಂಬ ವೇಶ್ಯೆಯ ಜೀವನ ವೃತ್ತಾಂತದಲ್ಲಿನ ಕೆಲವು ಘಟನೆಗಳ ಮೂಲಕವಾಗಿ ಕಮಲಾದಾಸ್‌ರವರು ದೀನದಲಿತರ ಶೋಷಣೆಯ ಹೆಣ್ಣಿನ ನೆಲೆಗಳನ್ನು ತೋರಿಸಿಕೊಟ್ಟಿದ್ದಾರೆ.

ವೇಶ್ಯಾವೃತ್ತಿ ಕೆಟ್ಟದ್ದಾದರೂ ಅದನ್ನು ನಿರ್ಮಾಣ ಮಾಡಲು ಕಾರಣರಾದವರೂ ಅದಕ್ಕಿಂತಲೂ ಸಮಾಜಕ್ಕೆ ಕೆಟ್ಟವರೆಂಬ ಅಭಿಪ್ರಾಯದ ಸತ್ಯವನ್ನು ಈ ಕಥೆಯು ಸೂಕ್ಷ್ಮವಾಗಿ ಸೂಚಿಸುತ್ತದೆ. ಇದಕ್ಕೆ ನೇರವಾಗಿ ಬಂಡವಾಳಶಾಹಿಗಳಲ್ಲಿರುವ ಸ್ವಾರ್ಥತೆಯಿಂದಾಗಿ ಆರ್ಥಿಕ ಅಸಮಾನತೆಯಲ್ಲಿ ನಲುಗುತ್ತಿರುವ ತಳಸಮುದಾಯದ ಹೆಣ್ಣುಮಕ್ಕಳು ಇಂತಹ ನಿರ್ಗತಿಕ ಬದುಕಿಗೆ ಬಲಿಯಾಗುತ್ತಾರೆ.ತಮ್ಮ ದೇಹದಿಂದ ಮತ್ತೊಬ್ಬರಿಗೆ ಆಹಾರವಾಗಿ ಕೊನೆಗೆ ತಾವೇ ತಮ್ಮ ಹೊಟ್ಟೆಗೆ ಆಹಾರವಿಲ್ಲದೆ ಬೀದಿ ಬೀದಿಯಲ್ಲಿ ಹಸಿದ ಹೊಟ್ಟೆಯಿಂದ ಅಲೆಯುತ್ತ ತಮ್ಮ ಜೀವನವನ್ನೇ ರೋಗಮಯವನ್ನಾಗಿಸಿಕೊಳ್ಳುತ್ತಾರೆ. ಇದು ದಲಿತಾಪಿ ಜನರಿಗೆ ಒದಗಿರುವ ದುರಂತವಾದ ಸತ್ಯದ ಸಂಗತಿಯಾಗಿರುತ್ತದೆ. ಕಲ್ಕತ್ತದಲ್ಲಿರುವ ವೇಶ್ಯಾಗೃಹದಲ್ಲಿ 'ಅಮಲಾ' ಅನ್ನುವವಳು ತನ್ನ ಬಡತನದ ದುಸ್ಥಿತಿಯಿಂದ ತನ್ನ ದೇಹವನ್ನು ಮಾರಿಕೊಂಡು ತನ್ನ ಜೀವನವನ್ನು ನಡೆಸುತ್ತಿರುತ್ತಾಳೆ. ಆ ಮನೆಯು ಅಷ್ಟೊಂದು ಶುಚಿಯಲ್ಲದ ವಾತಾವರಣದಿಂದ ತುಂಬಿಕೊಂಡಿದ್ದು ಮಲಗಲು ಹಾಸಿಗೆಯಿದೆ, ಗೋಡೆಯ ಮೇಲೆ ನಿಲುವುಗನ್ನಡಿಯಿದೆ, ಕೃತಕ ರೋಜಾ ಹೂಗಳಿವೆ, ಸೊಳ್ಳೆಯ ರಕ್ತದ ಕಲೆಗಳಿದ್ದ ಹಾಸಿಗೆ ಬಟ್ಟೆಗಳಿವೆ, ತಿಗಣೆಗಳಿವೆ, ಹೇನುಗಳು ಹರಿದಾಡುತ್ತಿರುತ್ತವೆ.

ಆದರೆ ಇಲ್ಲಿಗೆ ಬಂದ ಗಿರಾಕಿಗಳಿಗೆ ಇದ್ಯಾವುದೂ ಕಾಣಿಸದೆ ಕೇವಲ ಅಮಲಾಳ ದೇಹ ಮಾತ್ರ ಕಾಣಿಸುತ್ತಿರುತ್ತದೆ. ಅದು ಪುರುಷನ ಕಾಮದಲ್ಲಿರುವ ಬಲಹೀನತೆಯ ಸಂಕೇತವಾಗಿರುತ್ತದೆ. ಅವರಿಗೆ ಕಾಣುವುದು ಅಮಲಾಳಲ್ಲಿರುವ ಬಡತನದ ಹಸಿವು ಅಲ್ಲ ಅಮಲಾಳಲ್ಲಿರುವ ದೇಹ ಸೌಂದರ್ಯ. ಹಸಿದ ಹೊಟ್ಟೆಯ ಪರಿಕಲ್ಪನೆಯೇ ಅವರಿಗೆ ತಿಳಿಯದು ತಮ್ಮ ಕಾಮದ ಹಸಿವನ್ನು ಮಾತ್ರ ತೀರಿಸಿಕೊಂಡು ಹೋಗುತ್ತಿರುತ್ತಾರೆ. ಇಂತಹ ಅಮಲಾಳ ವೇಶ್ಯಾಗೃಹಕ್ಕೆ ನೂರಾರು ಗಿರಾಕಿಗಳು ಬಂದುಹೋಗುತ್ತಿರುವಾಗ ಒಂದು ದಿನ ಒಬ್ಬ ಶ್ರೀಮಂತ ತನ್ನ ಮಡದಿಯನ್ನು ಬಿಟ್ಟು

ಅಮಲಾಳು ಇರುವ ವೇಶ್ಯಾಗೃಹಕ್ಕೆ ಬರುತ್ತಾನೆ. ಅಲ್ಲಿರುವ ಮುದುಕಿಗೆ ಮುನ್ನೂರು ರೂಪಾಯಿಗಳನ್ನು ಕೊಟ್ಟು ಅಮಲಾಳಿರುವ ಕೋಣೆಯೊಳಗೆ ಪ್ರವೇಶಿಸುತ್ತಾನೆ. ಆತ ಕುಡಿದಾಗಲೆಲ್ಲ, ಗೆಳೆಯರ ಜೊತೆ ಬಂಗಾಳಿ ಹುಡುಗಿಯರ ಆಕರ್ಷಣೆಯ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡುವುದನ್ನು ನೆನಪಿಸಿಕೊಳ್ಳುತ್ತಾನೆ. ಅಮಲಾಳನ್ನು ನೋಡಿ, ಅವಳ ಕೇಶರಾಶಿರನ್ನು ನೋಡಿ ಬೆರಗಾಗುತ್ತಾನೆ.

ನಾನು ನಿನ್ನ ಜೊತೆ ಬೆಳಗಿನ ತನಕ ಇರುತ್ತೇನೆಂದು ಸಾವಿರದ ಮುನ್ನೂರು ರೂಪಾಯಿಗಳನ್ನು ಕೊಡುತ್ತಾನೆ. ಆ ರಾತ್ರಿ ಅಮಲಾಳ ಜೊತೆ ಬೆಳಗಾಗುವತನಕ ಅವಳ ತೋಳುಗಳಲ್ಲಿ ಅವಳ ಕೂದಲನ್ನು ಆಘ್ರಾಣಿಸುತ್ತಾ ಮಲಗಿದನು. ಆಗ ಅವಳು ಇಲ್ಲಿಗೆ ಬರುವ ಗಿರಾಕಿಗಳು ಹೆಚ್ಚಾಗಿ ತಮ್ಮ ತೋಳುಗಳಿಂದ ನನ್ನನ್ನು ಹರಿದು ಮುಕ್ಕುತ್ತಾರೆ ಎಂಬ ವೇದನೆಯನ್ನು ಆ ಶ್ರೀಮಂತನಿಗೆ ಹೇಳುತ್ತಾಳೆ. ಆಗ ಅವನು ನಾನು ಹೋಗಿ ಬರುತ್ತೇನೆಂದು ಹೇಳಿ ಹೋಗುವಾಗ ಅವನ ಕಣ್ಣುಗಳು ಅಮಲಾಳನ್ನೇ ನೋಡುತ್ತಿದ್ದವು. ಆಕೆಯ ಹಣೆಯ ಮೇಲೆ ಬಿದ್ದಿದ್ದ ಕುರುಳುಗಳು ಬೆವರಿನಿಂದ ವದ್ದೆಯಗಿದ್ದವು. ಅವಳನ್ನು ಬಿಟ್ಟು ಹೊರಟಾಗ ಕಿಟಕಿಯ ಬಳಿ ನಿಂತು ತನ್ನ ಹೂವಿನಂತೆ ಅರಳಿದ ಮುಖದಿಂದ ದಿಟ್ಟಿಸಿ ನೋಡುತ್ತಾ ಅವನನ್ನು ಕಳಿಸಿ ಕೊಟ್ಟಳು.

ಆ ಶ್ರೀಮಂತ ವ್ಯಕ್ತಿಯು ಆತನ ಸ್ಥಾನಮಾನಗಳ ಕಾರಣದಿಂದಾಗಿ ಆ ವೇಶ್ಯಾಗೃಹಕ್ಕೆ ಮತ್ತೇ ಹೋಗಲು ಸಾಧ್ಯವಾಗಲಿಲ್ಲ. ಆತ ಪ್ರಸಿದ್ಧ ವ್ಯಕ್ತಿಯಾಗಿ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದನು. ಆ ಉದ್ಯಮಿಗಳ ಕುಟುಂಬದ ಹೆಣ್ಣನ್ನು ಮದುವೆಯಾಗಿದ್ದನು. ಆತ ತೀರಾ ಭಿನ್ನವಾದ ನೆಲೆಯಿಂದ ಬಂದವನಾಗಿರುವುದರಿಂದ ಕೆಲವು ದಿನಗಳ ಕಾಲ ತನ್ನ ಕಾರ್ಯಕ್ರಮಗಳಲ್ಲಿ ಮಗ್ನನಾದನು. ಕೆಲವು ದಿನಗಳ ನಂತರ ಒಂದು ದಿನ ಸುಖ ನಿದ್ರೆಯಲ್ಲಿ ಮಲಗಿಕೊಂಡಿರುವಾಗ, ಆ ಭಾನುವಾರ ರಾತ್ರಿ ಅಮಲಾಳನ್ನು ತನ್ನ ತೋಳುಗಳಲ್ಲಿ ತಾನು ತುಂಬಿಕೊಂಡಿರುವಂತೆ ಕನಸು ಕಾಣುತ್ತಾನೆ. ಅವಳಿಲ್ಲದಿದ್ದರೆ ತನ್ನ ಬದುಕೇ ವ್ಯರ್ಥವೇನೋ ಎಂಬಂತೆ ಭಯವಾಗುತ್ತದೆ.ಅವಳ ನೀಳವಾದ ಕತ್ತಿನ ಮೇಲೆ ಬೆರಳುಗಳನ್ನಾಡಿಸಲು, ಅವಳ ಕೂದಲಿನಲ್ಲಿ ತನ್ನ ಮುಖವನ್ನು ಹುದುಗಿಸಲು, ಅವಳ ಸಾಮಿಪ್ಯ ಸುಖವನ್ನು ಸವಿಯುತ್ತ ಹಾಗೆಯೇ ಆ ಆಸೆಯಿಂದಲೇ ಎಚ್ಚರಗೊಳ್ಳುತ್ತಾನೆ. ಮತ್ತೆ ಕಲ್ಕತ್ತಕ್ಕೆ ಹೋಗಲು ನಿರ್ಧರಿಸಿಕೊಂಡು ಅಮಲಾಳು ಇರುವ ವೇಶ್ಯಾಗೃಹವನ್ನು ಹುಡುಕಿಕೊಂಡು ಹೋಗುತ್ತಾನೆ. ಆದರೆ ಕಲ್ಕತ್ತ ಪೂರ್ತಿಯಾಗಿ ಬದಲಾಗಿರುತ್ತದೆ.

ಪರಿಚಿತ ಮನೆಗಳು ಮಾಯವಾಗಿ ಎಲ್ಲೆಲ್ಲೂ ಪ್ಲಾಟ್‌ಗಳು ತಲೆಯೆತ್ತಿಕೊಂಡಿದ್ದವು. ಆ ವೇಶ್ಯಾಗೃಹದ ಏಜೆಂಟ್ಗಳು ಕೊಟ್ಟಿದ್ದ ವಿಳಾಸವನ್ನು ಹುಡುಕುತ್ತಾ ಆತ ಸಂಜೆ ಹೊತ್ತಿನ ತನಕ ಅಲೆಯುತ್ತಾನೆ. ಅಮಲಾ ಅವಳು ತನ್ನದೇ ಆದ ಸ್ವಂತ ಮನೆಯಲ್ಲಿ ಬದುಕುತ್ತಾ ಶ್ರೀಮಂತಳಾಗಿ ಈ ವೇಶ್ಯಾವೃತ್ತಿಯನ್ನು ಬಿಟ್ಟು ಒಳ್ಳೆಯ ರೀತಿಯಲ್ಲಿ ಒಂದೆಡೆ ನೆಲೆಸಿರಬಹುದೆಂದು ತನ್ನಲ್ಲಿ ಊಹಿಸಿಕೊಂಡು ಅವಳನ್ನು ಹುಡುಕುತ್ತಾ ಅವಳಿರುವ ಕಾಲೋನಿಯ ಸ್ಥಳಕ್ಕೆ ಹೋಗುತ್ತಾನೆ. ಅಲ್ಲಿ ಅಮಲಾಳು ಒಂದು ಹುಲ್ಲು ಮಾಡಿನ ಗುಡಿಸಲಿನಲ್ಲಿ ವಾಸವಾಗಿರುತ್ತಾಳೆ. ಹೊರಗಡೆ ಕೋಳಿ ಗರಿಗಳಿಂದ ಮತ್ತು

ಮೀನಿನ ರೆಕ್ಕೆಗಳಿಂದ ಮನೆಯ ಮುಂದಿನ ಅಂಗಳ ತುಂಬಿಕೊಂಡಿತ್ತು. ಎದುಸಿರು ಬಿಡುತ್ತ ಒಂದು ಬೀದಿನಾಯಿ ಮಲಗಿರುತ್ತದೆ. ಆತ ಗುಡಿಸಲಿನ ಮುಂದೆ ನಿಂತು ಅಮಲಾಳವೆಂದು ಕೂಗಿದಾಗ ಒಳಗಿನಿಂದ ಯಾರು ಎಂದು ನಡುಗುತ್ತಿರುವ ಸ್ವರದಲ್ಲಿ ಕೇಳುತ್ತಾಳೆ.

ಆಗ ಅತನು ನನ್ನನ್ನು ಮರೆತೆಯಾ....? ನಾನು ರಾಜೇಂದ್ರ ಎಂದು ಹೇಳುತ್ತಾ ಆ ಗುಡಿಸಲಿನ ಒಳಗೆ ಹೋದಾಗ ಅವಳು "ನಾನು ನನ್ನ ವ್ಯಾಪಾರ ನಿಲ್ಲಿಸಿ ಎಷ್ಟೋ ಕಾಲವಾಯಿತು ನನಗೆ ಕ್ಷಯ ರೋಗ ತಗುಲಿತು. ನನ್ನ ಎರಡೂ ಪಕ್ಕೆಗಳನ್ನು ಆಪರೇಷನ್ ಮಾಡಿ ತೆಗೆದರು. ಆದರೆ ನಾನು ಈಗಲೂ ಎಡೆಬಿಡದೆ ಕೆಮ್ಮುತ್ತೇನೆ"[೩] ನನಗೀಗ ಯಾರು ಅಂತ ನೀನು ತಿಳಿಯುವುದಿಲ್ಲ. ನನಗೆ ಯಾರ ನೆನಪೂ ನನ್ನಲ್ಲಿ ಉಳಿದಿರುವುದಿಲ್ಲ. ನನಗೆ ಯಾರ ಮುಖವೂ ನೆನಪಾಗುತ್ತಿಲ್ಲವೆನ್ನುತ್ತ ಆ ಬಡಪಾಯಿ ಅಮಲಾ, ತನ್ನ ಕಪ್ಪುಗಟ್ಟಿದ ಹಲ್ಲುಗಳನ್ನು ಪ್ರದರ್ಶಿಸುತ್ತಾಳೆ. ಈ ಸ್ಥಿತಿಯ ಕಥೆಯಲ್ಲಿ ಒಂದು ದಲಿತ ಹೆಣ್ಣನ್ನು ಬಂಡವಾಳಶಾಹಿಗಳು ದೈಹಿಕ ಹಿಂಸೆಯನ್ನು ನೀಡುತ್ತಾ ಮನೋರೋಗಿಗಳನ್ನಾಗಿಸಿ, ಅವರನ್ನು ಬೀದಿಯ ಪಾಲಾಗುವಂತೆ ಮಾಡಿರುತ್ತಾರೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇದು ದಲಿತ ದಮನಿತ ಸ್ತ್ರೀಯರ ಮೇಲೆ ಉಳ್ಳವರು ಮಾಡುತ್ತಿರುವ ದೌರ್ಜನ್ಯದ ಪ್ರತಿರೂಪದಲ್ಲಿ ಇದೊಂದು ಶೋಷಣೆಯಾಗಿರುತ್ತದೆ. ಅಮಲಾಳ ಬದುಕಿನ ಚಿತ್ರಣದಲ್ಲಿ ದಲಿತ ಸ್ತ್ರೀಯರ ನೋವಿನ ಸಂವೇದನೆಗಳನ್ನು ಈ ಕಥೆಯು ತಿಳಿಸುತ್ತಿದೆ.ದೇಶದ ಅಸಮಾನತೆಯ ವ್ಯವಸ್ಥೆಯಲ್ಲಿ ಬಡತನದ ಸಂಕಟದಿಂದ ದಿನಗೂಲಿಯಿಂದ ಕೆಲಸ ಮಾಡಿಕೊಂಡು ಬದುಕನ್ನು ನಡೆಸಿದರೂ ಪ್ರತಿದಿನ ರಾತ್ರಿ ಊಟ ಸಿಗದಂತಹ ಸ್ಥಿತಿ ಉಂಟಾಗಿರುತ್ತದೆ. ಇದರಲ್ಲಿ ಯಾವದೋ ಕಾರಣದಿಂದ ವೇಶ್ಯಾವ್ಯವಸಾಯಕ್ಕೆ ಇಳಿದ ಸೆಕ್ಸ್ ವರ್ಕರ್ಸ್‌ಗಳ ಜೀವನ ತುಂಬಾ ದುರಂತದಿಂದ ಕೂಡಿರುತ್ತದೆ. ತಮ್ಮಲ್ಲಿಗೆ ಗ್ರಾಹಕರು ಬರದಿದ್ದರೆ ಉಪವಾಸ ಬೀಳುವಂತಹ ಪರಿಸ್ಥಿತಿ ಉಂಟಾಗುತ್ತದೆ. ಇವರಿಗೆ ಕೈಯಲ್ಲಿ ಹಣವಿಲ್ಲದಿದ್ದರೆ ಜೀವನವನ್ನು ಕಳೆಯಲು ದಿನವೊಂದು ಬೆಟ್ಟದಷ್ಟಾಗುತ್ತದೆ. ಅವರು ಪ್ರತಿದಿನ ಗಳಿಸಿದ ನಂತರವೇ ಊಟ ದೊರೆಯುತ್ತದೆ. ಅವರ ಕಡೆಗೆ ಬರುವ ವ್ಯಕ್ತಿ ಯಾರು....? ಎಲ್ಲಿಂದ ಬರುತ್ತಾನೆ ಎಂಬುವುದು ಅವರಿಗೆ ತಿಳಿದಿರುವುದಿಲ್ಲ. ಇದು ಎಲ್ಲಾ ವೇಶ್ಯೆಯರ ಸಾಮಾನ್ಯ ಸಮಸ್ಯೆಯಾಗಿರುತ್ತದೆ. ಮಹಿಳೆ ಹಾಗೂ ಬಾಲಕಲ್ಯಾಣ ಸಚಿವಾಲಯದ ವರದಿ ಪ್ರಕಾರ ದೇಶದಲ್ಲಿ ಸುಮಾರು ೩೦ ಲಕ್ಷ್ಯ ಸೆಕ್ಸ ವರ್ಕರ್ಸ್‌ಗಳಿದ್ದಾರೆ.

ಹ್ಯುಮನ್ ರೈಟ್ಸ ವಾಚ್ ಪ್ರಕಾರ ದೇಶದಲ್ಲಿ ಸುಮಾರು ೨ ಕೋಟಿ ಮಹಿಳೆಯರು ಈ ಕೆಲಸವನ್ನು ಮಾಡುತ್ತಿದ್ದಾರಂತೆ. ಸಮಾಜದ ಈ ಘಟಕ ದೇಶದಲ್ಲಿ ವಾಸಿಸುತ್ತಿದ್ದರೂ ಇವರ ಸಹಾಯಕ್ಕೆ ಸಂಬಂಧಿಸಿದ ಅನೇಕ ಯೋಜನೆಗಳು ಇವರಿಗೆ ತಲುಪುವುದಿಲ್ಲವೆಂಬ ಸಂಗತಿ ತುಂಬಾ ವಿಷಾದಕರವಾಗಿರುತ್ತದೆ. ಈ ಕೆಲಸವನ್ನು ಮಾಡುತ್ತಿರುವ ಸಾವಿರಾರು ಬಡಮಹಿಳೆಯರಿಗೆ ರೇಷನ್ ಕಾರ್ಡ ಇಲ್ಲದೆ ಇರುವುದರಿಂದ ಸರಕಾರ ನೀಡುತ್ತಿರುವ ಆಹಾರ ಸಾಮಗ್ರಿಗಳಿಂದಲೂ ವಂಚಿತರಾಗುತ್ತಿದ್ದಾರೆ. ಇವರ ವೇಶ್ಯಾವೃತ್ತಿಯ ಚಟುವಟಿಕೆಯಿಂದಲೇ ಅನ್ನವನ್ನು ಕಾಣಬೇಕಾಗುತ್ತದೆ.

ಈ ಕೆಲಸದಲ್ಲಿ ಮಾಡುವ ಅದೆಷ್ಟೋ ಮಹಿಳೆಯರು ಎಚ್.ಐ.ವಿ ಸೋಂಕಿನಿಂದ ಬಳಲುತ್ತಿದ್ದಾರೆ. ತಮಗಿರುವ ರೋಗಗಳನ್ನು ತೋರಿಸಿಕೊಳ್ಳಲು ಆಸ್ಪತ್ರೆಗೆ ಹೋಗಲು ಹಣವಿರುವುದಿಲ್ಲ. ಇವರಿಗೆ ಒಂದೊಂದು ಸಲ ಒಂದು ಹೊತ್ತಿನ ಊಟಕ್ಕೂ ಗತಿ ಇಲ್ಲದಂತಾಗುತ್ತದೆ. ಸರ್ಕಾರವೂ ಇವರಕಡೆ ಗಮನ ಕೊಡುವುದಿಲ್ಲ.

ದೇಶದಲ್ಲಿ ಬಹಳಷ್ಟು ರೆಡ್‌ಲೈಟ್ ಏರಿಯಾಗಳು ತುಂಬಾ ಚರ್ಚೆಯಲ್ಲಿರುತ್ತವೆ. ಇದರಲ್ಲಿ ಏಷ್ಯಾಖಂಡದಲ್ಲಿಯೇ ಅತೀ ದೊಡ್ಡದಾದದ್ದು ಕಲ್ಕತ್ತಾದ ಪ್ರಸಿದ್ಧ ಈ 'ಸೋನಾಗಚ್ಚಿ' ಇಲ್ಲಿ ಸರಿಸುಮಾರು ೩ ಲಕ್ಷ್ಯ ಮಹಿಳೆಯರು ಈ ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಅದರಂತೆ ಎರಡನೆಯ ಸ್ಥಾನದಲ್ಲಿ ಮುಂಬೈಯ 'ಕಾಮಾಠಿಪುರಾ' ಇದೆ ಇಲ್ಲಿ ಎರಡು ಲಕ್ಷ್ಯಕ್ಕು ಹೆಚ್ಚು ಸೆಕ್ಸ ವರ್ಕರ್ಸಗಳಿದ್ದಾರೆ. ಇದರ ನಂತರ ದೆಹಲಿಯ ಜಿ.ಪಿ ರೋಡ್, ಆಂಧ್ರದ ಕಾಶ್ಮೀರಿ ಮಾರ್ಕೆಟ್, ಗ್ವಾಲಿಯರ್ ದ ರೇಶಮ್ ಪುರ, ಹಾಗೂ ಪುಣೆಯ ಬುಧುವಾರ ಪೇಟೆ ಇವು ಬಹಳ ಚರ್ಚೆಯಲ್ಲಿರುವ ವೇಶ್ಯಾವೃತ್ತಿಯ ಪ್ರದೇಶಗಳಾಗಿರುತ್ತವೆ. ಆಲ್ ಇಂಡಿಯಾ ನೆಟ್‌ವರ್ಕ ಆಫ್ ಸೆಕ್ಸ ವರ್ಕರ್ ಸಂಘಟನೆಗೆ ಕೆಲಸ ಮಾಡುತ್ತಿರುವ 'ಕುಸುಮ' ಮಹಿಳೆಯರ ಹಕ್ಕು ಮತ್ತು ಅಧಿಕಾರಕ್ಕಾಗಿ ಹೋರಾಟ ಮಾಡುತ್ತಿದ್ದಾಳೆ.

ಇವರು ಹೇಳುವ ಪ್ರಕಾರ ಇಂತಹ ಮಹಿಳೆಯರ ಬಗ್ಗೆ ಯಾರೂ ಗಮನಹರಿಸುವುದಿಲ್ಲ ಅವರಿಗೆ ಬಾಡಿಗೆ ತುಂಬಲು ಸಹ ಹಣವಿರುವುದಿಲ್ಲವೆಂದು ಹೇಳುತ್ತಾರೆ. ಇದರಿಂದಾಗಿ ಈ ವೃತ್ತಿಯಲ್ಲಿ ತೊಡಗಿಸಿಕೊಂಡವರ ಸ್ಥಿತಿ ತುಂಬಾ ತೊಂದರೆಯಲ್ಲಿ ಸಿಲುಕಿಕೊಂಡಿದೆ ಎಂದಿದ್ದಾರೆ. ಇಂತಹ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕಥೆಗಾರರು ಇಲ್ಲಿ ಕಲ್ಕತ್ತದ 'ಸೋನಾ ಗಚ್ಚಿ' ಪ್ರದೇಶದಲ್ಲಿ ಅಮಲಾಳು ಪಡುತ್ತಿರುವ ವೇದನೆಗಳನ್ನು ಅವಳ ಪಾತ್ರದ ಮೂಲಕ ಇಡೀ ಬಡತನದ ದಲಿತ ಹೆಣ್ಣುಮಕ್ಕಳು ಇಂತಹ ವೇಶ್ಯಾವೃತ್ತಿ ಚಟುವಟಿಕೆಯಲ್ಲಿ ಸಿಲುಕಿಕೊಂಡು ಎಂತಹ ನೋವುಗಳನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಇಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಬಂಡವಾಳಶಾಹಿಗಳು ದಲಿತರನ್ನು ತಮ್ಮ ಕುತಂತ್ರದಿಂದ ಆರ್ಥಿಕ ಶೋಷಣೆಯನ್ನು ಮಾಡಿ ಇಂತಹ ಪರಿಸ್ಥಿತಿಯಲ್ಲಿ ಬದುಕುವಂತೆ ಮಾಡಿದ್ದಾರೆ. ಆದ್ದರಿಂದ ಆಳುವ ಸರ್ಕಾರಗಳಿಂತವರು ಪಡುತ್ತಿರುವ ನರಕಯಾತನೆಯ ಬದುಕಿಗೆ ಮುಕ್ತಿಯನ್ನು ಕೊಡಿಸುವಂತಾಗಬೇಕೆಂದು ಕಥೆಗಾರರು ಸ್ತ್ರೀವಾದದ ನೆಲೆಯಿಂದ ಇಲ್ಲಿ ಪ್ರತಿಪಾದಿಸಿದ್ದಾರೆ.

ಮಿ.ಪಾ. ಸೋಮಸುಂದರಂ ರವರು ಸಂಪಾದನೆ ಮಾಡಿರುವ 'ಕಥಾ ಭಾರತಿ ತಮಿಳು ಕಥೆಗಳು' ಎಂಬ ಕಥಾಸಂಕಲನದಲ್ಲಿ ರಾಜಾಜಿಯವರು ಬರೆದಿರುವ 'ದೇವಾನೈ' ಎಂಬ ಕಥೆಯನ್ನು ಶೇಷನಾರಾಣರವರು ಕನ್ನಡನುವಾದ ಮಾಡಿದ್ದಾರೆ. ಈ ಕಥೆಯು ಒಂದು ಹೆಣ್ಣಿನ ಮೇಲೆ ನಡೆಯುವ ಅತ್ಯಾಚಾರವನ್ನು ಕುರಿತು ವಿಶ್ಲೇಷಿಸುತ್ತದೆ. ಸೇಲಂನಲ್ಲಿ ಪೊನ್ನಮ್ಮಪೇಟೆಯ ಪೆರಿಯಣ್ಣ ಮೊದಲಿಯಾರ್ ಬೀದಿಯಲ್ಲಿ ಬದುಕುತ್ತಿರುವ ಒಂದು ಬಡಕುಟುಂಬ, ನೇಯ್ಗೆಯ ಕಾಯಕದವರು.

ಈ ಕುಟುಂಬದ ಇಪ್ಪತ್ತುವರ್ಷ ವಯಸ್ಸಿನ ದೇವಾನ್ಯೆಗೆ ಒಬ್ಬ ಅಣ್ಣ ವೈಯಾಪ್ಪುರಿ, ತಾಯಿ ಪಳಿನಿಯಮ್ಮ ಅವರು ತಮ್ಮ ಕುಲವೃತ್ತಿಯಿಂದ ಜೀವನ ನಡೆಸುತ್ತಿದ್ದಾಗ ವೃತ್ತಿ ಜೀವನ ಏರುಪೇರಾಗಿ ವ್ಯಾಪಾರ ಹೀನಸ್ಥಿತಿಗೆ ಬಂದಾಗ, ಆ ಮನೆತನದ 'ದೇವಾನ್ಯೆ' ಕಾಯಕದ ತನ್ನ ಹೊಟ್ಟೆಪಾಡಿಗಾಗಿ ಹೋದಕಡೆಗಳೆಲ್ಲ ಅವಳನ್ನು ಬಳಸಿಕೊಳ್ಳುವ ರೀತಿ, ಉಳ್ಳವರು ಅಸಹಾಯಕ ಒಂದು ಹೆಣ್ಣಿನ ಮೇಲೆ ನಡೆಸುವ ದೌರ್ಜನ್ಯವಾಗಿದೆ.

ಮಾನಸಿಕವಾಗಿ, ದೈಹಿಕವಾಗಿ ನೋಯಿಸುವ ಇವರ ಕಣ್ಣಲ್ಲಿ ಕಾಮತುಂಬಿದೆ ವಿನಃ ಅನ್ನಕ್ಕಾಗಿ ಅರಸಿಕೊಂಡು ವೃತ್ತಿಗೆ ಬಂದಿದ್ದಾರೆಂಬ ಕರುಣೆ ಅವರಲ್ಲಿಲ್ಲ, ಇದಕ್ಕೆ ಕಾರಣ ಹೆಣ್ಣಿನಲ್ಲಿ ಬಡತನದಿಂದ ತುಂಬಿದ ಒಂದು ಅಸಹಾಯಕ ಸ್ಥಿತಿ. ಇದನ್ನೇ ಇದ್ದವರು ಒಂದು ಅವಕಾಶವೆಂಬಂತೆ ವೃತ್ತಿಗಳಲ್ಲಿ ಹೆಣ್ಣಿನ ಮೇಲೆ ಅತ್ಯಾಚಾರಗಳನ್ನು ಮಾಡುತ್ತಿದ್ದಾರೆ. ಒಂದು ಹೆಣ್ಣಿನಿಂದ ಹುಟ್ಟಿ ಮತ್ತೊಂದು ಹೆಣ್ಣಿನ ಮೇಲೆ ನಡೆಸುವ ಅತ್ಯಾಚಾರಿಗಳು ಪಶುಗಳೇ ಹೊರತು ಮಾನವರಲ್ಲ. ಇಂತಹ ಪಶುಚಿತ್ತವೃತ್ತಿಗಳು ದೇವಾನ್ಯೆಯನ್ನು ಆರಂಭದಿಂದ ಕೊನೆಯವರೆಗೆ ವೃತ್ತಿಯಲ್ಲಿ ಹೇಗೆ ಮೋಸ ವಂಚನೆಯಿಂದ ಅವಳನ್ನು ದೈಹಿಕವಾಗಿ ಬಳಸಿಕೊಳ್ಳುತ್ತಾರೆ ಎಂಬುವುದನ್ನು, ದೇವಾನ್ಯೆ ಕಥೆಗಳಲ್ಲಿ ಬಂಡವಾಳಶಾಹಿಗಳು ಬಡ ಹೆಣ್ಣುಮಕ್ಕಳನ್ನು ಹೇಗೆ ಬೀದಿಪಾಲು ಮಾಡುತ್ತಾರೆ, ಅವಳ ದೇಹವನ್ನು ಉಪಯೋಗಿಸಿಕೊಂಡು ಒಂದು ವಸ್ತುವಂತೆ ಕಾಣುವುದನ್ನು 'ದೇವಾನ್ಯೆ' ಕಥೆಯ ಮೂಲಕ ತೋರಿಸಿಕೊಟ್ಟಿದ್ದಾರೆ.

ಅವಳು ಬ್ರಾಹ್ಮಣರ ಮನೆಯಲ್ಲಿ ಕಸಮುಸುರೆಯ ಕೆಲಸಕ್ಕೆ ಹೋಗುತ್ತಾಳೆ. ಆ ಮನೆಯಲ್ಲಿ ಒಬ್ಬ ನಿವೃತ್ತ ಅಧಿಕಾರಿ ದೇವಾನ್ಯೆ ಜೊತೆ ಅಕ್ರಮವಾಗಿ ನಡೆದುಕೊಳ್ಳುತ್ತಾನೆ. ಎಲ್ಲಿಯೂ ನಾನು ಹೀಗೆ ಮಾಡಿದೆ ಎಂದು ಹೇಳಬೇಡ ಹೇಳಿದರೆ......ಎಂದು ಹೆದರಿಸಿ ನಿನಗೆ ತಿಂಗಳಿಗೆ ಎರಡು ರೂಪಾಯಿ ಕೊಡುತ್ತೇನೆ ಎಂದು ಹೇಳುವುದು, ಅದೇ ರೀತಿ ಅಣ್ಣನ ಮಾತಿನಂತೆ ಮದರಾಸಿಗೆ ಕೆಲಸಕ್ಕಾಗಿ ಹೋಗುತ್ತಾಳೆ. ಅಣ್ಣ ದೇವಾನ್ಯೆಯನ್ನು ಗಿರಣಿಯಲ್ಲಿ ಕೆಲಸಕ್ಕೆ ಸೇರಿಸುತ್ತಾನೆ. ಅದರ ಮೇಸ್ತ್ರಿ ದೇವಾನ್ಯೆಯ ದೇಹಸಂಗ ಬಯಸುತ್ತಾನೆ. ಈ ನೋವನ್ನು ಅಲ್ಲಿರುವ ತನ್ನ ಕೆಲಸಗಾತಿಯ ಜೊತೆ ದೇವಾನ್ಯೆ ಹೇಳಿಕೊಂಡಾಗ "ಪಾಪ ನೀನು ಇಲ್ಲಿಗೆ ಹೊಸದಾಗಿ ಬಂದಿರುವವಳು ಅವರಲ್ಲಿ ನೀನು ಸರಿಯಾಗಿ ನಡೆದುಕೊಳ್ಳದಿದ್ದರೆ ನಿನ್ನ ಕೂಲಿಯಲ್ಲಿ ಅರ್ಧ ಭಾಗವನ್ನು ಅಪರಾಧ ಎಂದು ಹಿಡಿದು ಬಿಡುತ್ತಾರೆ. ಅವರು ಪ್ರಸನ್ನವಾಗಿದ್ದರೆ ಏನು ಬೇಕಾದರೂ ನಡೆಯುತ್ತದೆ ಎಂದಳು. ಬಡವರ ಕಷ್ಟವನ್ನು ಹೇಳುವವರು ಯಾರು..? ಕೇಳುವವರು ಯಾರು..? ಬಡಹೆಂಗಸರು ಅಂತಹ ಗಿರಣಿಗಳಲ್ಲಿ ಹೊಟ್ಟೆಪಾಡಿಗಾಗಿ ತಮ್ಮ ಸರ್ವಸ್ವವನ್ನೂ ತೆರಬೇಕಾಗಿತ್ತು."[೪] ಇದರೆಲ್ಲದರ ಫಲವಾಗಿ ದೇವಾನ್ಯೆ ಗರ್ಭಿಣಿಯಾಗುತ್ತಾಳೆ.

ನಂತರ ಪರೋಪಕಾರಿ ಮಹಿಳೆಯ ಮನೆಯಲ್ಲಿ ದೇವಾನ್ಯೆ ಆಶ್ರಯ ಪಡೆದುಕೊಳ್ಳುತ್ತಾಳೆ. ಈ ಮಗು ದೇವರು ಕೊಟ್ಟ ಚಿಗುರು ನಾನು ಸಾಕುತ್ತೇನೆ ಎಂದು ದೇವಾನ್ಯೆಗೆ ಎಲ್ಲಾ ಹಾರೈಕೆ ಮಾಡುತ್ತಾಳೆ. ಆದರೆ ಕೊನೆಗೆ ಆ ಪರೋಪಕಾರಿ ಮಹಿಳೆ ಇಂತಹ ಸಮಾಜದಲ್ಲಿ ವಂಚಿತರಾದ

ಹೆಣ್ಣುಮಕ್ಕಳನ್ನು ಮನೆಯಲ್ಲಿ ಸೇರಿಸಿಕೊಂಡು ಅಕ್ರಮ ವ್ಯವಹಾರ ನಡೆಸುತ್ತಿರುತ್ತಾಳೆ. ಇಲ್ಲಿಯೂ ಸಹ ದೇವಾನ್ಯೆ ಈ ಮೋಸದ ಜಾಲಕ್ಕೆ ಈಡಾಗುತ್ತಾಳೆ. ಅವಳು ಅಲ್ಲಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದಿರುವುದು ಈ ಮೇಲಿನ ಪ್ರತಿಯೊಂದು ಘಟನೆಗಲ್ಲಿಯೂ ದೇವಾನ್ಯೆಯನ್ನು ಬಡತನದ ಪರಿಸ್ಥಿತಿಯು, ಇದ್ದವರ ಅಧಿಕಾರ ಹೇಗೆ ಮೋಸ ವಂಚನೆಯಲ್ಲಿ ತೊಡಗಿಸುತ್ತದೆ,ಎಲ್ಲಿ ಹೋದರೂ ಒಂದು ವೃತ್ತಿಯಲ್ಲಿ ಹೆಣ್ಣನ್ನು ಕಾಣುವ ಕಣ್ಣುಗಳು ಕ್ರೂರಿಗಳಾಗಿವೆ.

ಇಷ್ಟಕ್ಕೆಲ್ಲ ಕಾರಣ ಬಡತನದಲ್ಲಿ ಹುಟ್ಟಿರುವುದೋ ಅಥವಾ ಹೆಣ್ಣಾಗಿ ಹುಟ್ಟಿರುವುದೋ, ಹೆಣ್ಣಿನ ಮನಸ್ಸನ್ನು ಅವಳ ಪರಿಸ್ಥಿತಿಯನ್ನು ಅಂತಃಕರಣದಿಂದ ನೋಡುವುದು ಯಾವಾಗ ಎಂಬುವುದನ್ನು 'ದೇವಾನ್ಯೆ' ಕಥೆಯ ಮೂಲಕ, ಸಮಸಮಾಜದ ದೃಷ್ಟಿಯಲ್ಲಿ ನೊಂದವರ ಕೂಗನ್ನು, ಅವಳ ಅಂತರಾಳದ ವೇದನೆಯನ್ನು ಲೇಖಕರು ತೋರಿಸಿಕೊಟ್ಟಿದ್ದಾರೆ. ದೇಹವನ್ನು ಬಯಸುವುದಕ್ಕಿಂತ ದೇಹದೊಳಗಿನ ಮನಸ್ಸನ್ನು ಬಯಸಬೇಕು. ಗಂಡು– ಹೆಣ್ಣಿನ ನಡುವೆ ಇರುವ ತಾರತಮ್ಯ ಇದ್ದವರ ಮತ್ತು ಇಲ್ಲದವರ ನಡುವಿನ ಅಸಮಾನತೆ ತೊಲಗಬೇಕು. ದೇವಾನ್ಯೆ ಬದುಕು ಯಾತನೆಯಿಂದ ಕೂಡಿ ಯಾತನೆಯಲ್ಲಿಯೇ ಕೊನೆಯಾಗಿದೆ. ಅವಳು ಮಗುವಿನೊಂದಿಗೆ ಭಿಕ್ಷುಕಿಯಾಗಿ ಬೀದಿ ಬೀದಿಯಲ್ಲಿ ತಿರುಗುತ್ತಿರುವುದು ಕಥೆಯ ಕೊನೆಯಲ್ಲಿ ಆಕೆ ತನ್ನನ್ನು ತಾನು ವಂಚಿಸಿಕೊಂಡಳೇ ಅಥವಾ ಸಮಾಜವೇ ಅವಳನ್ನು ವಂಚಿಸಿತೇ? ಇಲ್ಲ ಅವಳಿಗಿರುವ ಹಸಿವಿನ ಪರಿಸ್ಥಿತಿ ಇದಕ್ಕೆ ಕಾರಣವಾಯಿತೇಈ ಎಲ್ಲಾ ಸಮಸ್ಯೆಗಳ ಪ್ರಶ್ನೆಗಳಿಗೆ ಇಡೀ ಸಮಾಜವು ಕಾರಣವಾಗಿರುತ್ತದೆ.

ಹೀಗಿರುವಾಗ ದೇವಾನ್ಯೆಯನ್ನು ಜಾರಿಣಿಯನ್ನಾಗಿಸಿದ್ದು ಪರಿಸ್ಥಿತಿ ಮತ್ತು ಸಮಾಜ ಎರಡೂ ಬದಲಾಗಬೇಕಾಗಿದೆ. ಇದ್ದವರ ವರ್ತನೆ ಬದಲಾಗಬೇಕಾಗಿದೆ, ಇಲ್ಲದವರ ಬದುಕು ಸುದಾರಿಸಬೇಕಾಗಿದೆ. ದೇವಾನ್ಯೆ ಬಡಸಮುದಾಯದ ಎಲ್ಲಾ ಹೆಣ್ಣಿನ ಪ್ರತೀಕವಾಗಿದ್ದಾಳೆ. ಸಮಾಜದ ಆದ್ಯ ಕರ್ತವ್ಯ ಇದಾಗಬೇಕಾಗಿದೆ ಅದುವೇಅವಳನ್ನು ಅವಳಾಗುವಂತೆ ಮಾಡುವುದು. ಅವಳು ಹೀಗೆ ಆಗಬೇಕು ಎಂಬುವುದನ್ನು ಬಿಡಬೇಕು. ದೇವಾನ್ಯೆಯನ್ನು ಬಳಸಿಕೊಂಡು ಬೀದಿಯಲ್ಲಿ ಬಿಟ್ಟ ಬಳಕೆಗಾರರು ಹೆಣ್ಣಿನ ಸಂವೇದನೆಗಳನ್ನು ಅರ್ಥೈಸಿಕೊಳ್ಳಬೇಕೆಂಬ ಸೂಕ್ಷ್ಮ ಸಂವೇದನೆಗಳನ್ನು ಲೇಖಕರು ನೇರವಾಗಿ ಈ ಕಥೆಯ ಮೂಲಕ ಹೇಳಿದ್ದಾರೆ. ವೃತ್ತಿಗಳನ್ನು ಗೌರವಿಸಬೇಕು ಹೆಣ್ಣಿನ ಮೇಲೆ ನಡೆಸುವ ದೌರ್ಜನ್ಯ, ಅತ್ಯಾಚಾರಗಳು ಕೊನೆಯಾಗಬೇಕು. ಹೊಟ್ಟೆಯ ಹಸಿವು ಎಲ್ಲವನ್ನೂ ಮಾಡಿಸುತ್ತದೆ. ಆ ಹಸಿವು ನನ್ನದು ಹೌದು ಆ ಹಸಿವಿನ ಮೇಲೆ ಅತ್ಯಾಚಾರ ಮಾಡಬಾರದು ಎಂಬುವುದು ದೇವಾನ್ಯೆಯ ಆಶಯವಾಗಿದೆ.

ಅವಳು ನೊಂದು ಬೆಂದು ಬೀದಿಯಲ್ಲಿ ನಿಂತಂತೆ ಇತರರು ನಿಲ್ಲಬಾರದೆಂಬ ಮನಸ್ತಾಪ ಅವಳಲ್ಲಿದೆ. ಬಡತನದ ಹಸಿವಿನಿಂದ ಕೂಲಿಗಾಗಿ ಅಲೆಯಬೇಕಾಗುತ್ತದೆ. ಇದು ದಲಿತ ಹೆಣ್ಣುಮಕ್ಕಳು ಅನುಭವಿಸುತ್ತಿರುವ ಸಾಮಾನ್ಯ ಸಮಸ್ಯೆಯಾಗಿದೆ. ತಂದೆ ತಾಯಿಗಳಿಗೆ ಆಶ್ರಯವಾಗಿ ನಿಲ್ಲಬೇಕೆಂದು ಹೆಣ್ಣುಮಕ್ಕಳು ತಮ್ಮ ದುಡಿಮೆಯ ಮೂಲಕ ಸ್ವತಂತ್ರತೆಯನ್ನು ಕಟ್ಟಿಕೊಳ್ಳಲು ಅಸಾಧ್ಯವಾದ

ವಾತಾವರಣ ಈ ಸಮಾಜದಲ್ಲಿ ಸೃಷ್ಟಿಯಾಗಿರುವುದನ್ನು ಕಂಡು, ಕಥೆಗಾರರು 'ದೇವಾನ್ನೈ' ಕಥೆಯ ಮೂಲಕವಾಗಿ ಬಡ ಹೆಣ್ಣುಮಕ್ಕಳು ವಯಸ್ಸಿಗೆ ಬಂದ ಮೇಲೆ ಸಮಾಜದಲ್ಲಿ ಬದುಕುವದಕ್ಕಾಗಿ ಅವರು ಪಡುತ್ತಿರುವ ಸಂಕಷ್ಟದ ದಿನಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಚಿಕ್ಕ ವಯಸಿನಲ್ಲಿಯೇ ದೇವಾನ್ನೈಯನ್ನು ಬ್ರಾಹ್ಮಣನೊಬ್ಬ ತನ್ನ ಮನೆಯಲ್ಲಿ ಅತ್ಯಾಚಾರ ಮಾಡಿ ಯಾರಿಗೂ ಹೇಳದಂತಿರಬೇಕೆಂದು ಹೆದರಿಸುವುದು ಪ್ರಸ್ತುತ ದಲಿತ ಹೆಣ್ಣುಮಕ್ಕಳು ಮನೆಕೆಲಸಕ್ಕೆಂದು ಹೋದ ಮನೆಗಳಲ್ಲಿ ನಡೆಯುತ್ತಿರುವ ದೈಹಿಕವಾದ ಶೋಷಣೆಯನ್ನು ಪ್ರತಿಬಿಂಬಿಸುತ್ತದೆ.

ನಂತರ ಆ ಬ್ರಾಹ್ಮಣನ ಮನೆಕೆಲಸವನ್ನು ಬಿಟ್ಟು ಗಿರಣಿಯಲ್ಲಿ ಕೆಲಸಕ್ಕೆ ಹೋದಾಗ ಅಲ್ಲಿ ಮೇಸ್ತ್ರಿಯು ನಾನು ಹೇಳಿದಂತೆ ನೀನು ಕೇಳದಿದ್ದರೆ ನಿನ್ನನ್ನು ಕೆಲಸದಿಂದ ತೆಗೆದು ಹಾಕುತ್ತೇನೆ ಎನ್ನುವುದು ಇಂದಿನ ಬಂಡವಾಳಶಾಹಿಗಳು ದಿನಗೂಲಿ ಕೆಲಸಗಾರರನ್ನು ಕಾಣುತ್ತಿರುವ ಅವರ ಮಾನಸಿಕ ಅವಸ್ಥೆಯನ್ನು ಸೂಚಿಸುತ್ತದೆ. ದಲಿತ ಹೆಣ್ಣು ಮಕ್ಕಳ ದೇಹಮಾತ್ರ ಅವರಿಗೆ ಬೇಕು. ಅದೇ ಅವರು ಉಪಯೋಗಿಸಿ ಬಿಸಾಕುವ ದೇಹದ ಯಂತ್ರವಾಗಿದೆ. ಇದರ ಪ್ರತಿಫಲದಿಂದ ದೇವಾನ್ನೈ ಗರ್ಭಿಣಿಯಾಗಿ ಅತಂತ್ರದ ಜೀವನದಲ್ಲಿ ಸಿಲುಕಿಸಿಕೊಳ್ಳುವುದು ತನ್ನನ್ನು ತನ್ನ ಮಗುವನ್ನು ಬದುಕಿಸಿಕೊಳ್ಳಲು ಮತ್ತೆ ವಂಚಕರ ಕೈಯಲ್ಲಿ ಸಿಲುಕಿಕೊಂಡು ಬೀದಿಯಲ್ಲಿ ವೇಶ್ಯೆಯಾಗಿ, ರೋಗಿಯಾಗಿ, ತನ್ನ ಮಗುವಿನೊಂದಿಗೆ ಹುಚ್ಚಿಯಾಗಿ, ನಿರ್ಗತಿಕಳಾಗಿ, ಸತ್ತುಕೊಂಡು ಬದುಕಿರುವ ದೇವಾನ್ನೈಯ ಪರಿಸ್ಥಿತಿಯನ್ನು ಸಂಶೋಧಾತ್ಮಕವಾಗಿ ಚರ್ಚಿಸಿದಾಗ, ಸ್ವತಂತ್ರ ಭಾರತದ ಪ್ರಜಾಪ್ರಭುತ್ವ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ವಾಸಿಸುವ ದಲಿತ ಬಡ ಹೆಣ್ಣುಮಕ್ಕಳು ಎಂತಹ ಅಸಹಾಯಕ ಜೀವನದೊಂದಿಗೆ ಬಂಡವಾಳಶಾಹಿಗಳ ಆರ್ಥಿಕ ಶೋಷಣೆಯಿಂದ ನರಳಾಡುತ್ತಿದ್ದಾರೆ.

ಹೆಣ್ಣಿನ ಅಸಹಾಯಕತೆ ಮತ್ತು ಅನಿವಾರ್ಯತೆಯನ್ನು ಈ ಕಥೆಯು ಪ್ರಸ್ತಾಪಿಸುತ್ತದೆ. ಇದರ ಹಿನ್ನೆಲೆಯಲ್ಲಿ ಸಂವಿಧಾನದ ಮೂಲಭೂತ ಹಕ್ಕುಗಳು, ಒಂದು ಹೆಣ್ಣಿಗೆ ಕಾನೂನಾತ್ಮಕವಾಗಿ ಸಿಗಬೇಕಾಗಿರುವ ಸ್ಥಾನಮಾನಗಳು ಅವು ಕೇವಲ ಅಧಿಕಾರಿಶಾಹಿಗಳ ಕಾಲಿನಡಿಯಲ್ಲಿ ಬಿದ್ದುಕೊಂಡಿವೆ ಎಂಬುದನ್ನು ದಲಿತರು ಪಡುತ್ತಿರುವ ನೋವುಗಳೊಂದಿಗೆ, ಅವಮಾನಗಳೊಂದಿಗೆ, ಅತ್ಯಾಚಾರಗಳೊಂದಿಗೆ ಸೂಚಿಸುತ್ತವೆ. ಹೆಣ್ಣು ಮಧ್ಯರಾತ್ರಿಯಲ್ಲಿ ಸ್ವತಂತ್ರವಾಗಿ ನಿರ್ಭೀತಿಯಿಂದ ನಡೆದಾಡುವಂತಾಗಬೇಕು ಎಂಬುವ ಗಾಂಧೀಜಿಯ ಕನಸು ರಾಷ್ಟ್ರಪಿತನ ಕನಸಿನಲ್ಲಿಯೇ ಕನಸಾಗಿ ಉಳಿದಿರುವದಕ್ಕೆ ಸಾಕ್ಷಿಯಾಗಿರುತ್ತದೆ. ಇದು ಇಡೀ ದಲಿತ ಹೆಣ್ಣುಮಕ್ಕಳ ಸಾಮಾಜಿಕ ಶೋಷಣೆಯಾಗಿ ಅವರನ್ನು ಕೇವಲ ಒಂದು ಭೋಗದ ವಸ್ತುವಿನಂತೆ ಕಾಣುತ್ತಿರುವ ಸತ್ಯಾಂಶವನ್ನು ತಿಳಿಸಿಕೊಡುತ್ತದೆ. ಸಾಮಾಜಿಕ, ಆರ್ಥಿಕ, ಶೋಷಣೆಗಳಿಂದ ಬೆಂದ ಹೆಣ್ಣುಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಬಂಡವಾಳಶಾಹಿಗಳಿಂದ ಹಿಂಸೆಯನ್ನು ತಾಳಲಾರದೆ ಆತ್ಮಹತ್ಯೆಗಳಿಗೆ ಶರಣಾಗುತ್ತಿದ್ದಾರೆ.

ದಲಿತ ಹೆಣ್ಣುಮಕ್ಕಳು ತಮ್ಮ ಜೀವನವನ್ನು ಸ್ವಾಭಿಮಾನದಿಂದ ಸಮಾಜದಲ್ಲಿ ಬದುಕುವುದಕ್ಕೆ ಸಾಧ್ಯವಿಲ್ಲದೆ ಅವರು ತಮ್ಮ ಮಕ್ಕಳ ಹಸಿವನ್ನು ತೀರಿಸುವುದಕ್ಕಾಗಿ ವೇಶ್ಯಾವೃತ್ತಿಯಂತ ಚಟುವಟಿಕೆಗಳಲ್ಲಿ

ಭಾಗಿಯಾಗುತ್ತಿದ್ದಾರೆ. ಒಂದು ಹೆಣ್ಣನ್ನು ಸಮಾಜದಲ್ಲಿ ನೋಡುತ್ತಿರುವುದು ಅದು ಕೇವಲ ಅವಳ ದೇಹದಿಂದ ಮಾತ್ರ, ಆ ದೇಹದ ಬಳಕೆಗಾಗಿಯೇ ಎಲ್ಲಾ ಕ್ಷೇತ್ರಗಳಲ್ಲಿ ಬಯಸುತ್ತಾರೆ. ಅದರಿಂದಲೇ ದಲಿತ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರಗಳನ್ನು ನಡೆಸುತ್ತಾರೆ ಎಂಬುವುದನ್ನು ಕಥೆಗಾರರು ಸ್ತ್ರೀವಾದದ ನೆಲೆಯಿಂದ ಈ ಕಥೆಯಲ್ಲಿ ನೊಂದ ಹೆಣ್ಣು ಮಕ್ಕಳ ವೇದನೆಗಳನ್ನು ತಮ್ಮ ಸಂವೇದನೆಗಳ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

ಚಂದ್ರಕಾಂತ ಪೋಕಳೆಯವರು ಅನುವಾದಿಸಿದ "ಆಧುನಿಕ ಮರಾಠಿ ಕಥೆಗಳು" ಎಂಬ ಕಥಾಸಂಕಲನದಲ್ಲಿ ಮಹಾದೇವ ಮೋರೆಯವರು ಬರೆದ 'ಜೋಗತಿ' ಕಥೆಯು ಸ್ತ್ರೀ ಸಂವೇದನೆಯುಳ್ಳದ್ದಾಗಿರುತ್ತದೆ. ಬದುಕಿನ ಆಟದಲ್ಲಿ, ಸಮಾಜದ ಚೆಲ್ಲಾಟದಲ್ಲಿ ಯಾವುದು ಸರಿ ಯಾವುದು ತಪ್ಪೆಂದು ತಿಳಿದು ಬದುಕುವುದಕ್ಕೂ ಬದುಕಲಾರದ ಬದುಕು ಅವಳದು. ಹದಿನೈದು ವರ್ಷದ ಎಳೆಯ, ಮುಗ್ಧವಾಗಿದ್ದು ಆಕೆಗೆ ಒಬ್ಬ ತಂಗಿ, ತಮ್ಮ ಮತ್ತು ಪ್ರೌಢ ವಿಧವೆ ತಾಯಿ. ಸ್ವಂತದ್ದಾಗಿರುವ ಊರಿಲ್ಲ, ಸ್ವಂತದಾದ ಮನೆಯಿಲ್ಲ ಅಲೆಮಾರಿ ಬದುಕಿನಲ್ಲಿರುವ ಇವರ ಕುಟುಂಬದ ಪಯಣ ಅನ್ನಕ್ಕಾಗಿ ಪರಿತಪಿಸುತ್ತಿದೆ. ಯಾವುದೋ ಒಂದು ವಠಾರದಲ್ಲಿ ಬಾಡಿಗೆಯಿಂದ ಕಿತ್ತೋಗಿರೊ ಮನೆಯಲ್ಲಿ ಇವರ ವಾಸ. ವಿಧವೆ ತಾಯಿ ನಾಲ್ಕೈದು ಮನೆಯ ಕಸಮುಸುರೆ ಮಾಡಿ ಬಂದು ತನ್ನ ಮಕ್ಕಳೆಲ್ಲರನ್ನು ಸಾಕುತ್ತಿದ್ದಾಳೆ. ಅವರಲ್ಲಿರೋ ಮೌಢ್ಯತೆಯೇ ಅವರ ಬಡತನಕ್ಕೆ ಕಾರಣವಾಗಿದೆ. ಅದು ಅವರಿಗೆ ಅನಿವಾರ್ಯವೂ ಆಗಿದೆ.ಹದಿನೈದು ವರ್ಷ ಅವಳನ್ನು ಎಲ್ಲಮ್ಮನ ಹೆಸರಿನಲ್ಲಿ ಜೋಗತಿ ಮಾಡುವುದು, ಆ ಜೋಗತಿ ಪದ್ಧತಿಯಿಂದ ಅವಳನ್ನು ಬಂಡವಾಶಾಹಿಗಳು ಹೇಗೆ ಬಳಕೆ ಮಾಡಿಕೊಳ್ಳುತ್ತಾರೆ, ಅವಳನ್ನು ಒಂದು ಯಂತ್ರದಂತೆ ಉಪಯೋಗಿಸಿಕೊಂಡು ಹೇಗೆ ಬೀದಿಯಲ್ಲಿ ನಿಲ್ಲಿಸುತ್ತಾರೆ.

ಹೆಣ್ಣು ಸಮಾಜದಲ್ಲಿ ಎಷ್ಟೊಂದು ಅಸಹಾಯಕಳು ಎಂಬುದು ಈ 'ಜೋಗತಿ' ಕಥೆಯ ಹಂದರವಾಗಿದೆ. ಶಿಕ್ಷಣವನ್ನು ಕಲಿತು ಸಮಾಜಕ್ಕೆ ಆದರ್ಶವಾಗಬೇಕಾಗಿರೋ ಒಂದು ಹೆಣ್ಣನ್ನು ಮೌಢ್ಯತೆಯಲ್ಲಿ ಸಿಲುಕಿಸುವ ಅದಕ್ಕೆ ಎಲ್ಲಮ್ಮ ದೇವರ ಹೆಸರನ್ನು ಸೇರಿಸಿ ಅವಳ ಬಾಳನ್ನು ಹೇಗೆ ಸರ್ವನಾಶ ಮಾಡುತ್ತಿದ್ದಾರೆ, ಇದರಿಂದಿರುವ ಸತ್ಯಾಸತ್ಯತೆಯ ಅರಿವಿಲ್ಲದ ಅವಳು ತನ್ನ ದೇಹವನ್ನು ನೂರಾರು ಗಿರಾಕಿಗಳ ಜೊತೆ ದಂಡಿಸಿಕೊಂಡು ಮಾನಸಿಕವಾಗಿ ಹಿಂಸಿಸಿಕೊಂಡು ತನ್ನನ್ನು ತನ್ನ ಕುಟುಂಬದವರನ್ನು ಈ ಬಂಡವಾಳಶಾಹಿಗಳ ಕುತಂತ್ರಕ್ಕೆ ಬಲಿಕೊಡಬೇಕಾಗಿದೆ. ಬೀದಿ ಬೀದಿಯಲ್ಲಿ ಭಿಕ್ಷೆ ಬೇಡುತ್ತ, ಕಂಡವರ ಕಾಮಕ್ಕೆ ಬಳಕೆಯಾಗುತ್ತ ಭೋಗದ ವಸ್ತುವಾಗಿ ನಿರ್ಜೀವದ ಶವವಾಗಿ ಒಂದು ಹೆಣ್ಣು 'ಜೋಗತಿ' ಹೆಸರಿನಲ್ಲಿ ಸರ್ವನಾಶವಾಗುವುದು ಇದುದಲಿತರ ಮೇಲೆ ಪುರೋಹಿತಶಾಹಿಗಳು ಸೃಷ್ಟಿಸಿದ ಹುನ್ನಾರವಾಗಿದೆ. ಇದು ಅಂದಿನಿಂದ ಇಂದಿನವರೆಗೆ ದೇವರ ಹೆಸರಿನಲ್ಲಿ ದಲಿತರಿಗೆ ಮಾಡುತ್ತಿರುವ ಮೋಸವಾಗಿದೆ.

ಯಾವ ಪುರೋಹಿತಶಾಹಿಗಳು ತಮ್ಮ ಮಕ್ಕಳನ್ನು ಜೋಗತಿಯಾಗಿ ಬಿಟ್ಟಿರುವುದಿಲ್ಲ. ಆದರೆ ದಲಿತ ಮಹಿಳೆಯರೇ ಆಗಬೇಕೆ.....? ಇದು ದಲಿತರನ್ನು ಸಾಮಾಜಿಕವಾಗಿ ಶೋಷಣೆಯನ್ನು ಮಾಡಿ ಇಂತಹ ದುರಂತಕ್ಕೆ ಕಾರಣವಾಗಿದೆ. ಕಥಾ ನಿರೂಪಕ ಅವಳ ತಾಯಿಗೆ ಇವಳನ್ನು ಬೇರೆ ಕಡೆ ಒಬ್ಬನಿಗೆ ಮದುವೆ ಮಾಡಿ ಕೊಡಿ ಸುಖವಾಗಿರುತ್ತಾಳೆ. ಹೀಗೆ ಜೋಗತಿ ಮಾಡಿದರೆ ಒಬ್ಬನು ಕೆಲಕಾಲ ಇವಳ ಜೊತೆ ಇದ್ದು ಮತ್ತೊಬ್ಬನು.....ಹೀಗೆ ಆಗುತ್ತದೆ ಇವಳ ಬದುಕು.

ಜೋಗತಿ ಬಿಡಬೇಡಿ ಎಂದು ಹೇಳಿದರೆ "ಅದು ಹೇಗೆ ಸಾಧ್ಯವೀಗ....? ಎಲ್ಲಮ್ಮನಿಗೆ ಹರಕೆ ಹೊತ್ತಿದ್ದೇನೆ ನಾನು..... ಆಗ ನನಗೆ ಮಕ್ಕಳಾಗಿರಲಿಲ್ಲ ಸಾವಿರಾರು ಹರಕೆ ಹೊತ್ತರೂ ಫಲ ಸಿಗಲಿಲ್ಲ ಕೊನೆಗೆ ಎಲ್ಲಮ್ಮನಿಗೆ ಹರಕೆ ಹೊತ್ತೆ 'ದೇವರೆ ನನಗೆ ಮಕ್ಕಳಾಗಲಿ ಮೊದಲು ಮಗ ಹುಟ್ಟಿದರೆ ಜೊಗಪ್ಪನೆಂದು, ಮಗಳು ಹುಟ್ಟಿದರೆ ಜೋಗತಿ ಎಂದೂ ನಿನ್ನ ಅರಮನೆಯಲ್ಲಿ ಬಿಡುತ್ತೇನೆ....! ಮೊದಲನೆಯವಳಾಗಿ ಮಗಳು ಹುಟ್ಟಿದಳು. ಈಗ ವಯಸ್ಸಿಗೆ ಬಂದಿದ್ದಾಳೆ. ಅಂದ ಮೇಲೆ ಆಕೆಯನ್ನು ಹರಕೆ ಹೊತ್ತಂತೆ ಬಿಡಬೇಡವೇ.....? ಮತ್ತು ಒಂದು ವೇಳೆ ಬಿಡದಿದ್ದರೆ....? ಎಲ್ಲಮ್ಮ ಜಾಗೃತದೇವಿ ಹರಕೆ ಹೊತ್ತು ತೀರಿಸದಿದ್ದರೆ ಬದುಕು ಸರ್ವನಾಶವಾದೀತು....!"[೫] ಇಂಥ ಅನಿಷ್ಟ ಪದ್ಧತಿ ಸಮಾಜಕ್ಕೆ ಅಂಟಿರುವ ರೋಗವಾಗಿದೆ. ದೈವ ಯಾವತ್ತೂ ಇಂಥ ಆಚರಣೆಗಳನ್ನು ಮಾಡಲು ಹೇಳುವುದಿಲ್ಲ. ಇದೆಲ್ಲ ಆಕೆಯ ಭಕ್ತರು ಎಲ್ಲಮ್ಮನ ಹೆಸರಿನ ಮೇಲೆ ನಡೆಸಿದ ಆಟ. ಪುರುಷನಾದವನು ಹೆಂಗಸರಂತೆ ಸೀರೆ ಕುಪ್ಪಸ ತೊಟ್ಟು ಜೋಗಪ್ಪನಾಗುವುದು ಸ್ತ್ರೀ ಇತರೆ ಸ್ತ್ರೀಯರಿಗೆ ಸಿಗುವ ಸಂಸಾರಿಕ ಸೌಲಭ್ಯಗಳಿಂದ ವಂಚಿತಳಾಗಿ ಅಕ್ಕವ್ವಾ.....ಜೋಗವ್ವಾ ಎಂದು ಹೇಳುತ್ತಾ ಪ್ರತೀ ಮಂಗಳವಾರ ಮನೆಯ ಮುಂದೆ ಭಿಕ್ಷೆ ಬೇಡುವುದು ಉಳ್ಳವರು ಉಳ್ಳವರಾಗಿಯೇ ಬೆಳೆಯಲು ಇಲ್ಲದ ದೇವರ ಸೃಷ್ಟಿಸಿ, ಇರುವ ಬದುಕನ್ನು ಆರ್ಥಿಕವಾಗಿ ದುರ್ಬಲಗೊಳಿಸಿ ಮಾನಸಿಕವಾಗಿ ಸಂಪ್ರದಾಯಗಳ ಸುಳಿಯಲ್ಲಿ ಅವರೆಲ್ಲರನ್ನು ಸಿಲುಕಿಸಿ, ತಾವು ಅವರ ಬೆವರಬೆನ್ನಿನ ಮೇಲೆ ಆರಾಮದಿಂದ ಬಾಳುತ್ತಿದ್ದಾರೆ.

ಕೊನೆಗೂ ಆ ಹದಿನೈದು ವರ್ಷದ ಎಳೆಯ ಹುಡುಗಿಯನ್ನು ಕರೆದುಕೊಂಡು ಜೋಗತಿ ಮಾಡಲು ಎಲ್ಲಮ್ಮನಿಗೆ ಹೋಗುತ್ತಾರೆ. ಅಲ್ಲಿನ ಸರ್ವ ವಿಧಿವಿಧಾನಗಳಲ್ಲಿ ಅವಳನ್ನು ಜೋಗತಿ ಮಾಡಿದರು. ಕಾಲ ಬದಲಾದಂತೆ ಅವಳಲ್ಲಿ ಸಾಕಷ್ಟು ದೇಹದಲ್ಲಿ ಬದಲಾವಣೆಯಾಯಿತು. ದೇಹ ಅರಳಿತ್ತು ತಾಂಬೂಲದಿಂದ ತುಟಿಗೆ ರಂಗೇರಿಸಿಕೊಂಡ ಕಣ್ಣಿಗೆ ಕಾಡಿಗೆ ಅಚ್ಚಿಕೊಂಡು ಸಾದಾ ವಾಯಿಲ್ ಸೀರೆಯನ್ನು ಉಟ್ಟುಕೊಂಡು ಬಾಜಾರ ಬಸವಿಯಾಗಿ ವೈಯಾರ ಮಾಡುತ್ತ ಅಲೆದಾಡುತ್ತಿದ್ದಳು. ನಂತರ ಯಾವನೋ ಒಬ್ಬ ಕುಡುಕನ ಸೇರಿ ಬದುಕನ್ನು ಯಾತನೆಯಲ್ಲಿ ಕಳೆಯತೊಡಗಿದಳು. ಜೀವನವೆಲ್ಲ ಸಾಕಾಗಿ ಸಮಾಜದಲ್ಲಿ ಬದುಕಲು ಸಾಧ್ಯವಿಲ್ಲವೆಂದರಿತು ತಾಯಿಯನ್ನು ಕಳೆದುಕೊಂಡು ಅವಳು ವೇಶ್ಯಾಗೃಹವನ್ನು ಸೇರುತ್ತಾಳೆ. ಅಲ್ಲಿ ದಿನನಿತ್ಯ ಬಂಡವಾಳಶಾಹಿಗಳ ದೌರ್ಜನ್ಯದ ಕಾಮದ

ಚಲ್ಲಾಟಕ್ಕೆ ಒಂದು ಯಂತ್ರದಂತೆ ಬಳಕೆಯಾಗುತ್ತಾಳೆ. ಅವಳಿಗಾಗಿ ಬಂದ ಕಥಾ ನಾಯಕನು ಅವಳಿಗೆ ಒಂದು ಬದುಕಿನ ಸಂಬಂಧ ಕೊಡದೆ ಅದೇ ವೇಶ್ಯಾಗೃಹದಲ್ಲಿ ಬಿಟ್ಟು ಬರುತ್ತಾನೆ.

ಅವಳು ಅಲ್ಲಿ ದೇಹದ ಯಂತ್ರ ಸರಿಯಿರುವವರೆಗೆ ಇರಬೇಕು, ನಂತರ ಬೀದಿಯ ಹೆಣವಾಗಿ ಯಾರೂ ದಿಕ್ಕಿಲ್ಲದೆ ಎಲ್ಲರಿಗೂ ಬೇಕಾಗಿ ಎಲ್ಲರಿಂದಲೂ ತಿರಸ್ಕರಿಸಲ್ಪಡುವ ಜೋಗತಿಯ ದುರಂತ ಜೀವನಕ್ಕೆ ಸಮಾಜದ ಪ್ರತಿಯೊಂದು ವರ್ಗವೂ ಕೂಡ ಕಾರಣವಾಗಿರುತ್ತದೆ. ಅವಳ ಬದುಕಿನ ಸಂವೇದನೆಗಳಿಗೆ ಯಾರೂ ಸ್ಪಂದಿಸದೆ ಅತಂತ್ರಳನ್ನಾಗಿ ಮಾಡಿ, ಎಲ್ಲಾ ಮೂಲಗಳಿಂದ ಶೋಷಿಸಲ್ಪಟ್ಟು ಯವುದೊಂದು ದಿನ ನೆಮ್ಮದಿ ಕಾಣದೆ ಬರೀ ಭ್ರಮೆಯ ಸುಖದ ಹುಡುಕಾಟದಲ್ಲಿ ತನ್ನ ಜೀವನವನ್ನು ನಿರರ್ಥಕ ಮಾಡಿಕೊಳ್ಳುವ ಜೋಗತಿಯರ  ಜೀವನವು ಅಳತೆ ಅಗಲಗಳಿಲ್ಲದಷ್ಟು ಬರೀ ಬೆನ್ನಮೇಲೆ ನೋವುಗಳನ್ನು ಹೊತ್ತುಕೊಂಡು ಹಸಿದ ಹೊಟ್ಟೆಯಿಂದ ಬದುಕುವ ಜೋಗತಿಯರ ಶೋಷಣೆಗೆ ನೇರವಾಗಿ ಪುರೋಹಿತಶಾಹಿಗಳು ಕಾರಣವಾಗಿದ್ದಾರೆ ಎಂಬುದನ್ನು ಈ ಕಥೆಯು ಹೆಣ್ಣಿನಲ್ಲಿರುವ ಅಸಹಾಯಕದ ಜೀವನವನ್ನು ಎತ್ತಿ ತೋರಿಸುತ್ತದೆ. ದಲಿತರು ಸ್ವತಂತ್ರವಾಗಿ ತಮ್ಮ ಬದುಕನ್ನು ನಡೆಸುವಂತಾಗಬೇಕು.

ದಲಿತ ಹೆಣ್ಣು ಮಕ್ಕಳು ಮುಕ್ತವಾಗಿ ನಿರ್ಭೀತಿಯಿಂದ ಸಮಾಜದಲ್ಲಿ ಬಾಳುವಂತಾಗಬೇಕು. ಹೆಣ್ಣಿನ ಸ್ಥಾನ ಮಾನಗಳನ್ನು ದಲಿತರು ತಾವೇ ಪಡೆದುಕೊಳ್ಳಬೇಕು. ಶೋಷಣೆ ನಡೆಯುತ್ತಿರುವುದೇ ದಲಿತರ ಮೇಲೆ ಅದಕ್ಕೆ ಕಾರಣ ಅವರಲ್ಲಿರುವ ಬಡತನ. ಯಾವ ದಲಿತೇತರರು ತಮ್ಮ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ ಜೋಗತಿಯನ್ನು ಬಿಟ್ಟಿರುವುದಿಲ್ಲ. ದೇವರು ದಲಿತ ಹೆಣ್ಣು ಮಕ್ಕಳನ್ನೇ ಬೇಕೆಂದು ಹೇಳುತ್ತಾನೆಯೇ....? ಇದು ದಲಿತರ ಮೇಲೆ ದಲಿತೇತರರು ಮಾಡುತ್ತಿರುವ ದಲಿತ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರದ ಶೋಷಣೆಯಾಗಿದೆ. ದೇವರ ಹೆಸರಿನಲ್ಲಿ ಬಡತನದ ಹೆಣ್ಣುಮಕ್ಕಳನ್ನು ಜೋಗತಿಗಳನ್ನಾಗಿ ಮಾಡಿ ಉಳ್ಳವರು ತಮ್ಮ ದೇಹದ ಸುಖವನ್ನು ಪಡೆದುಕೊಳ್ಳಲು ಈ ಪದ್ಧತಿಯನ್ನು ತಮ್ಮ ಕುತಂತ್ರದಿಂದ ಮಾಡಿದ್ದಾರೆ. ದೇವರು, ಧರ್ಮದ ಹೆಸರಿನಲ್ಲಿ ದಲಿತರನ್ನು ಮೌಢ್ಯತೆಯಲ್ಲಿ ಬದುಕುವಂತೆ ಮಾಡಿ ತಾವು ಅವರ ಉಪಯೋಗವನ್ನು ಪಡೆದುಕೊಳ್ಳುತ್ತಾರೆ.

ದೇವರ ಹೆಸರಿನಲ್ಲಿ ಮುತ್ತನ್ನು ಕಟ್ಟಿಸಿಕೊಂಡ ಹೆಣ್ಣುಮಕ್ಕಳು ತಮ್ಮ ಜೀವನ ಪರ್ಯಂತ ಬಂಡವಾಳಶಾಹಿಗಳಿಗೆ ತಮ್ಮ ದೇಹವನ್ನು ಅರ್ಪಿಸಿಕೊಂಡು ಗುಲಾಮಳಂತೆ ಜೀವನ ನಡೆಸಬೇಕಾಗುತ್ತದೆ. ಕೊನೆಗೆ ಯಾರ ಆಶ್ರಯವೂ ಸಿಗದೆ ಬೀದಿಯಲ್ಲಿ ರೋಗಗ್ರಹಸ್ಥಳಾಗಿ ಭಿಕ್ಷೆಯನ್ನು ಬೇಡಿಕೊಂಡು ಅಲೆಯುತ್ತ ಬೀದಿಯಲ್ಲಿ ಹೆಣವಾಗಿ ಬೀಳಬೇಕಾಗುತ್ತದೆ. ಮುನಿಸಿಪಾಲಿಟಿಯವರು ತೆಗೆದುಕೊಂಡು ಹೋಗಿ ದಿಕ್ಕಿಲ್ಲದ ಇಂತವರನ್ನು ಶವಸಂಸ್ಕಾರ ಮಾಡಬೇಕಾಗುತ್ತದೆ. ಇಂತಹ ದುಸ್ಥಿತಿಯ ಪರಿಣಾಮವನ್ನು ಹೊಂದಿರುವ ಕಥೆಯೇ ಈ ಜೋಗತಿಯಾಗಿರುತ್ತದೆ. ತನ್ನ ಹದಿನೈದನೇಯ ವಯಸ್ಸಿನಲ್ಲಿಯೇ ದೇವರ ಹೆಸರಿನಲ್ಲಿ ಜೋಗತಿಯಾಗಿ ತನ್ನ ಕುಟುಂಬದ ಬಡತನಕ್ಕಾಗಿ ವೇಶ್ಯಾಗೃಹವನ್ನು ಸೇರಿ, ಅಲ್ಲಿ ಬಂಡವಾಳಶಾಹಿಗಳು ಕೊಡುವ ದೈಹಿಕ ಹಿಂಸೆಯನ್ನು ತಡೆದುಕೊಂಡು ಮನೋವ್ಯಥೆಯಿಂದ

ಮತ್ತೆ ಬೀದಿಯಲ್ಲಿ ಬಂದು ನಿಂತುಕೊಳ್ಳುವ ಆ ದಲಿತ ಹೆಣ್ಣಿನ ಸ್ಥಿತಿಗೆ ಕಾರಣವಾಗುವ ಅಂಶ, ಪುರೋಹಿತಶಾಹಿಗಳು ನಿರ್ಮಿಸಿಹೋದ ಹಳೆಯ ಸಂಪ್ರದಾಯಗಳೇ ಆಗಿವೆ.

ಇದರಿಂದಾಗಿ ದಲಿತ ಬಡಕುಟುಂಬದವರು ತಮ್ಮ ಮೌಢ್ಯತೆಯ ನಡೆಯಲ್ಲಿ ಏನೂ ಅರಿಯದ ಹೆಣ್ಣುಮಕ್ಕಳಿಗೆ ಮುತ್ತನ್ನು ಕಟ್ಟಿಸಿ ಜೋಗತಿಯನ್ನಾಗಿ ಮಾಡುತ್ತಾರೆ. ಇದರಿಂದಾಗಿ ಆ ಹೆಣ್ಣಿನ ಜೀವನವೇ ಸರ್ವನಾಶವಾಗುತ್ತದೆ. ಸಾಮಾಜಿಕವಾಗಿ ಯಾವ ಸ್ಥಾನ ಮಾನಗಳನ್ನು ನೀಡದೆ ಬರೀ ಅವಮಾನಗಳನ್ನು, ನೋವುಗಳನ್ನು ಅನುಭವಿಸಿಕೊಂಡು ಬದುಕಿನ ಯಾವ ತೃಪ್ತಿಯನ್ನು ಪಡೆದುಕೊಳ್ಳಲು ಸಾಧ್ಯವಾಗದೆ ಅತಂತ್ರತೆಯ ಜೀವನ ನಡೆಸಿ ಕೊನೆಗೆ ಮಾನಸಿಕ ವ್ಯಥೆಯಿಂದ ದುರಂತವಾಗಿ ಮುಗಿದುಹೋಗುತ್ತದೆ. ಜೋಗತಿಯವರ ಈ ಜೀವನವನ್ನು ಕಂಡು ಕಥೆಗಾರರು ಇಲ್ಲಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಹೆಣ್ಣುಮಕ್ಕಳ ಮಾನಸಿಕ ನೋವುಗಳನ್ನು ಮತ್ತು ದಲಿತೇತರರು ದಲಿತ ಬಡಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುವ ಅತ್ಯಾಚಾರಗಳನ್ನು ಈ ಕಥೆಯ ಮೂಲಕ ಸ್ತ್ರೀವಾದದ ನೆಲೆಯಿಂದ ಸ್ತ್ರೀ ದಲಿತ ಸಂವೇದನೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಪುರೋಹಿತಶಾಹಿಗಳ ಶಾಸ್ತ್ರ ಸಂಪ್ರದಾಯಗಳಿಂದ ದಲಿತರ ಬದುಕಿನ ಮೇಲೆ ಆಗಿರುವ ದುಷ್ಪರಿಣಾಮಗಳನ್ನು ತಿಳಿಸಿಕೊಡುತ್ತದೆ. ದಲಿತರು ಅನುಭವಿಸುತ್ತಿರುವ ಆರ್ಥಿಕ ಶೋಷಣೆಯನ್ನು ಗುರ್ತಿಸಿದ್ದಾರೆ. ಸಮಾಜದಲ್ಲಿರುವ ಅಸಮಾನತೆಯಿಂದ ದಲಿತರು ಬಡತನದ ನೋವಿನಿಂದ ಬದುಕುತ್ತಿದ್ದಾರೆ. ಈ ಹಿನ್ನಲೆಯಲ್ಲಿ ದಲಿತರು ಸಂವಿಧಾನಾತ್ಮಕ ಹಕ್ಕುಗಳನ್ನು ಪಡೆದುಕೊಂಡು ಶೋಷಣೆಗೊಳಪಡದೇ ಜಾಗೃತರಾಗಿ ಸಮಾನತೆಯ ರಾಷ್ಟ್ರವನ್ನು ಕಟ್ಟಬೇಕೆಂಬುದೇ ಈ ಕಥೆಯ ಆಶಯವಾಗಿದೆ.

### ೪.೩. ಬಡತನದ ನೋವು ಮತ್ತು ದುರ್ಬಲರ ಮೇಲೆ ಅತ್ಯಾಚಾರ

'ಮೊರಸುನಾಡು ಕಥೆಗಳು' ಎಂಬ ಕಥಾ ಸಂಕಲನವನ್ನು ಡಾ. ಬಂಜಗೆರೆ ಜಯಪ್ರಕಾಶರವರು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ನಶಿಸುತ್ತಿರುವ ದೃಶ್ಯಕಾವ್ಯಗಳು' ಎಂಬ ತೆಲುಗು ಕಥೆಯನ್ನು ಪಲಮನೇರು ಬಾಲಾಜಿಯವರು ಬರೆದಿದ್ದಾರೆ. ಈ ಕಥೆಯನ್ನು ಮಾಸ್ತಿ ಕೃಷ್ಣಪ್ಪನವರು ಕನ್ನಡನುವಾದ ಮಾಡಿದ್ದಾರೆ.ಈ ಕಥೆಯು ಒಬ್ಬ ದಲಿತ ಮಹಿಳೆಯು ತನ್ನ ಊರಿನಲ್ಲಿರುವ ಬಂಡವಾಳಶಾಹಿಗಳ ಮೋಸ ವಂಚನೆಯಿಂದ ಅಲ್ಲಿ ಬದುಕಲು ಸಾಧ್ಯವಾಗದೆ ಆ ಊರನ್ನೇ ಬಿಟ್ಟು ತನ್ನ ಹೊಟ್ಟೆಪಾಡಿಗಾಗಿ ನಗರಕ್ಕೆ ಬರುವ ದುಸ್ಥಿತಿಯನ್ನು ಕುರಿತು ಪ್ರತಿಪಾದಿಸುತ್ತದೆ. ಕೇರಿಯಲ್ಲಿ ಸ್ವತಂತ್ರದ ಸ್ವಾಭಿಮಾನದಿಂದ ಬದುಕುವುದನ್ನು ಕಂಡ ಮೇಲ್ವರ್ಗದವರು ಅದನ್ನು ಸಹಿಸಿಕೊಳ್ಳಲಾಗದೆ ಹಳ್ಳಿಗಳಲ್ಲಿ ಜಾತಿಯ ಹೆಸರಿನಲ್ಲಿ ಶೋಷಣೆಯನ್ನು ಮಾಡುತ್ತಿರುತ್ತಾರೆ. ದಲಿತರೆಂದರೆ ಸದಾ ಅವರು ಅವರ ಕಾಲಿನಡಿಯಲ್ಲಿ ಕೆಲಸ ಮಾಡಿಕೊಂಡು ಬಿದ್ದಿರಬೇಕು. ಅವರು ಹೇಳಿದಂತೆ ಗುಲಾಮಗಿರಿಯಿಂದ ನಡೆದುಕೊಳ್ಳಬೇಕು. ಅವರು ನಡೆಸುವಂತ ದೌರ್ಜನ್ಯಗಳನ್ನು ಸಹಿಸಿಕೊಳ್ಳಬೇಕು. ಅವರು ಆಸೆಪಟ್ಟು ಮಾಡುವ ಅತ್ಯಾಚಾರಗಳಿಗೆ ಮೂಕರಾಗಿರಬೇಕು.

ಇವುಗಳ ವಿರುದ್ಧ ಸ್ವಲ್ಪ ಧ್ವನಿ ತೆಗೆದರೆ ಸಾಕು ಅಂತವರನ್ನು ತಮ್ಮ ದುರ್ವರ್ತನೆಯಿಂದ ದಲಿತ ಮಹಿಳೆಯರ ಮನೆತನವನ್ನೇ ಸರ್ವನಾಶ ಮಾಡಿಬಿಡುತ್ತಾರೆ. ಅವರಿಗೆ ಅವಮಾನ ಮಾಡುತ್ತಾರೆ. ಊರಿನಿಂದ ಆಚೆ ಹಾಕುತ್ತಾರೆ.ಯಾರ ಸಂಪರ್ಕವಿಲ್ಲದಂತೆ ಮಾಡಿ ಅವರು ಜೀವನವನ್ನು ನಡೆಸಲು ಸಾಧ್ಯವಾಗದಂತೆ ಮಾಡುತ್ತಾರೆ. ಇದು ಬಂಡವಾಳಶಾಹಿಗಳು ದಲಿತ ಬಡ ಕುಟುಂಬದವರನ್ನು ಉದ್ದೇಶಪೂರ್ವಕವಾಗಿ ಮಾಡುತ್ತಿರುವ ಸಾಮಾಜಿಕ ಅನ್ಯಾಯವಾಗಿರುತ್ತದೆ. ಅದನ್ನೇ ದಲಿತ ಮಹಿಳೆಯರ ಮೇಲೆ ನಿರಂತರವಾಗಿ ತಾತ, ತಂದೆ, ಮಗ, ಮೊಮ್ಮಕ್ಕಳು ಮುಂದುವರೆಸಿಕೊಂಡೇ ಹೊಗುತ್ತಿದ್ದಾರೆ. ನಾವೆಂದರೆ ದಲಿತರ ಮೇಲೆ ಆಳ್ವಿಕೆಯನ್ನು ಮಾಡುವವರು, ಅವರು ಆಳ್ವಿಕೆಗೆ ಒಳಪಡಲೇಬೇಕೆಂಬ ಆಶಯದೊಂದಿಗೆ ತಮ್ಮ ಮಾನವಿಯತೆಯನ್ನು ಮರೆತು ಬಂಡವಾಳಶಾಹಿಗಳು ದಲಿತ ಮಹಿಳೆಯರ ಮೇಲೆ ಸಾಮಾಜಿಕ, ಆರ್ಥಿಕ ಶೋಷಣೆಗಳನ್ನು ಮಾಡುತ್ತಿದ್ದಾರೆ.

ಈ ಕಾರಣದಿಂದಲೇ ದಲಿತ ಮಹಿಳೆಯರು ತಮ್ಮ ಊರಿನಲ್ಲಿ ಸ್ವತಂತ್ರವಾದ ಬಾಳನ್ನು ನಡೆಸಲು ಸಾಧ್ಯವಾಗದೆ ಮಾನಸಿಕವಾಗಿ ನೊಂದು ಬೆಂದು ಅಸಮಾನತೆಯ ಅತಂತ್ರತೆಯಿಂದ ಬದುಕುತ್ತಿದ್ದಾರೆ. ಇದನ್ನೇ ಕಥೆಗಾರರು ಈ ಕಥೆಯಲ್ಲಿ ಶಿವಮ್ಮನ ಪಾತ್ರ ಚಿತ್ರಣದ ಮೂಲಕ ದಲಿತ ಮಹಿಳೆಯರ ಸಾಮಾಜಿಕ ಸ್ಥಿತಿಯನ್ನು ಈ ರೀತಿಯಲ್ಲಿ ನಿರೂಪಿಸಿ ಕೊಟ್ಟಿದ್ದಾರೆ. ಕಿಶೋರ್ ಮತ್ತು ಕುಮಾರ್ ಬಾಲ್ಯದಿಂದಲೂ ಇಬ್ಬರು ಸ್ನೇಹಿತರು ಕಿಶೋರ ತುಂಬಾ ಅನುಭವಿಯಾಗಿದ್ದನು. ಆದ್ದರಿಂದಲೇ ಕುಮಾರ್ ಆತನನ್ನು ಇಷ್ಟಪಡುತ್ತಿದ್ದನು. ಆತನ ಮಾತುಗಳನ್ನು ಕೇಳಬೇಕೆನ್ನುತ್ತಿದ್ದನು. ಇವರಿಬ್ಬರೂ ಒಂದೊಂದು ಉದ್ಯೋಗವನ್ನು ಪಡೆದುಕೊಂಡು ಬೇರೆ ಬೇರೆ ನಗರ ಪ್ರದೇಶದಲ್ಲಿ ಕೆಲಸ ಮಾಡುತ್ತಿದ್ದರು.

ಕುಮಾರ್ ಬೆಂಗಳೂರಿನಲ್ಲಿ ಕೆಲಸ ಮಾಡುತ್ತಿದ್ದನು. ಆತನಿಗಾಗಿ ಅಲ್ಲದಿದ್ದರೂ ಕಂಪನಿಯ ಕೆಲಸದ ಮೇಲೆ ಕಿಶೋರ್ ಬೆಂಗಳೂರಿಗೆ ಬರುತ್ತಾನೆ. ಇಬ್ಬರೂ ಸ್ನೇಹಿತರು ಸೇರಿಕೊಳ್ಳುತ್ತಾರೆ. ತಮ್ಮ ವಿಚಾರಗಳೊಂದಿಗೆ ನಗರದಲ್ಲಿರುವ ಪುಸ್ತಕ ಅಂಗಡಿಯಲ್ಲಿ ಉತ್ತಮವಾದ ಪುಸ್ತಕಗಳನ್ನು ಹುಡುಕುತ್ತಿರುತ್ತಾರೆ. ಪುಸ್ತಕ ವ್ಯಾಪಾರಿಗಳಿಂದ ಉತ್ತಮವಾದ ಕೆಲವು ಪುಸ್ತಕಗಳನ್ನು ತೆಗೆದುಕೊಳ್ಳುತ್ತಾರೆ.ಅವರವರ ಅನುಭವವನ್ನು ಪರಸ್ಪರ ಹಂಚಿಕೊಳ್ಳುತ್ತಾರೆ. ತಮ್ಮ ತಮ್ಮ ಕೆಲಸದಲ್ಲಿ ಬಿಡುವಿಲ್ಲದ ಕಾರಣ ಬಹಳ ದಿನಗಳ ನಂತರ ಬೇಟಿಯಾದದ್ದು ಪರಸ್ಪರರಲ್ಲಿ ಆನಂದ ಮೂಡಿಸಿತ್ತು. ಉತ್ತಮವಾದ ಪುಸ್ತಕಗಳು ಮನುಷ್ಯನ ಮನಸ್ಥಿತಿಯನ್ನು ಪರಿವರ್ತನೆಗೊಳಿಸುತ್ತವೆ ಎಂಬುದು ಕಿಶೋರನ ನಂಬಿಕೆಯಾಗಿತ್ತು. ಪುಸ್ತಕ ಪ್ರೇಮಿಯಾದ ಆತ ಮಸ್ತಕಗಳನ್ನು ಉತ್ತಮ ಸ್ನೇಹಿತನೆಂದು ಭಾವಿಸಿಕೊಂಡು ತನ್ನ ಕೆಲಸದ ಬಿಡುವಿನ ವೇಳೆಯಲ್ಲಿ ಮಸ್ತಕದ ಜೊತೆ ಬೆರೆತುಕೊಳ್ಳುತ್ತಿದ್ದನು. ಸಂಜೆಯ ಶೀತಗಾಳಿಯು ಬೀಸುತ್ತಿತ್ತು, ಅದರ ಜೊತೆ ಜೊತೆಗೆ ಮಳೆಯ ಸಣ್ಣ ಸಣ್ಣ ಹನಿಗಳು ಉದುರುತ್ತಿದ್ದವು. ಗುಲ್ ಮೊಹರ್ ಮರದಡಿಯಲ್ಲಿ ಕರಿದ ಪದಾರ್ಥಗಳ ಅಂಗಡಿಯು ಕಾಣಿಸುತ್ತದೆ. ಗೆಳೆಯರಿಬ್ಬರು ಆ ಅಂಗಡಿಯ ಕಡೆ ಹೋಗುತ್ತಾರೆ.

ಬಜ್ಜಿ, ಬೋಂಡ, ವಡೆ, ಪಕೋಡಗಳು ಎಣ್ಣೆಯಿಂದ ಮೇಲೆದ್ದು ಬಂದು ಬಂದವರನ್ನು ಕೂಗಿ ಕರೆಯುತ್ತಿದ್ದವು. ಅಲ್ಲಗೆ ಬಂದವರು ಅವುಗಳನ್ನು ತಿಂದು ಕಾಸು ಕೊಟ್ಟು ಹೋಗುತ್ತಿದ್ದರು. ಟೀ, ಕಾಫಿ, ಮಾಡುತ್ತಿದ್ದವರನ್ನು ಕುಮಾರನಿಗೆ ಎಲ್ಲೋ ನೋಡಿದ ಹಾಗೆ ಅನಿಸುತ್ತದೆ. ಹಾಗೆ ಸ್ಟೌ ಮುಂದೆ ಕುಳಿತಿರುವ ಅವಳನ್ನು ಕಂಡಾಗ ಆತನಿಗೆ ಆಶ್ಚರ್ಯವಾಗುತ್ತದೆ. ಇವರಿಬ್ಬರೂ ನಮ್ಮ ಊರಿನವರು ಅಷ್ಟೊಂದು ದೂರದ ಹಳ್ಳಿಯಿಂದ ಇಲ್ಲಗೆ ಬಂದಿದ್ದಾರೆ ಎಂಬುದು ಯಾಕೆ ಅಂತ ತಿಳಿಯದಾಗಿ ಮತ್ತೊಮ್ಮೆ ಕುಮಾರ್ ಅವರನ್ನು ಅನುಮಾನಿಸಿ ನೋಡುತ್ತಾನೆ. ಆಗ ಸ್ಪಷ್ಟವಾಗಿ ಆತನಿಗೆ ತಿಳಿಯುತ್ತದೆ. ಇವರಿಬ್ಬರೂ ನಮ್ಮ ಊರಿನವರು ಆಕೆ ಕೋಟೂರು ಶಿವಮ್ಮ ಆತ ಬನೀನು ಸುಬ್ರಮಣ್ಯ ಶಿವಮ್ಮಳ ಗಂಡ. ಅವರ ಸ್ಥಳ ಬೇರೆಯಾಗಿದ್ದರೂ, ನಾನು ನೋಡಿದ ಕಾಲ ಬದಲಾಗಿದ್ದರೂ, ಅವರಿಬ್ಬರಲ್ಲಿ ಹಲವಾರು ಬದಲಾವಣೆಗಳಾಗಿದ್ದರೂ, ನಗರದ ನಾಗರಿಕತೆಗಳಲ್ಲಿ ಅವರು ಜೀವಿಸುತ್ತಿದ್ದರೂ, ನಮ್ಮ ಊರಿನ ಮುಖಗಳೇ ಅವರಲ್ಲಿ ಕಾಣುತ್ತಿವೆ ಎಂದುಕೊಂಡು ಕುಮಾರ್ ಅವರ ಸಮೀಪಕ್ಕೆ ಹೋಗಿ ನೋಡಿದಾಗ ಆಕೆಗೆ ಸುಮಾರು ನಲವತ್ತೈದು ವರ್ಷಗಳಾಗಿರಬೇಕು ಎಂದು ಅನಿಸುತ್ತದೆ.

ಅವಳ ಗಂಡ ಆಕೆಗಿಂತ ಐದು ವರ್ಷ ದೊಡ್ಡವನಿರಬೇಕು ಮೊದಲಿಗಿಂತಲೂ ಶಿವಮ್ಮ ಈಗ ದೃಢಕಾಯದವಳಾಗಿದ್ದಾಳೆ.ಆತ ಬೆಳೆದ ಕುರುಚಲು ಗಡ್ಡದಿಂದ ಮೊದಲಿನ ಹಾಗೆ ಕಾಣುತ್ತಿದ್ದನು. ಸದಾ ಬನೀನು ಹಾಕುತ್ತಿದ್ದನು. ಅದಕ್ಕೆ ಆತನನ್ನು ಎಲ್ಲರೂ ಬನೀನು ಸುಬ್ರಮಣ್ಯ ಎಂದೇ ಕರೆಯುತ್ತಿದ್ದರು. ತನ್ನ ಹುಟ್ಟೂರಾದ ಕೋಟೂರಿನಿಂದ ಬೆಂಗಳೂರಿಗೆ ಅಷ್ಟೊಂದು ದೂರದಿಂದ ಇಲ್ಲಿಗೆ ಬರಲು ಶಿವಮ್ಮಳಿಗೆ ಬಂದ ಪರಿಸ್ಥಿತಿಯಾದರೂ ಏನೆಂದು ಆಲೋಚಿಸಿದನು.ನಾನು ಊರು ಬಿಟ್ಟುಬಂದು ತುಂಬಾ ವರ್ಷಗಳಾಗಿವೆ.

ಊರಲ್ಲಿ ನಡೆದ ಯಾವ ಸಂಗತಿಗಳೂ ನನಗೆ ತಿಳಿದಿರುವುದಿಲ್ಲ ಎಂದುಕೊಂಡಾಗ ಸುಬ್ರಮಣ್ಯ ಗೆಳೆಯರಿಬ್ಬರಿಗೂ ಟೀ ತಂದು ಕೊಡುತ್ತಾನೆ.ಟೀ ಕುಡಿಯುತ್ತಲೇ ತನ್ನ ಊರನ್ನೊಮ್ಮೆ ನೆನಪಿಸಿಕೊಳ್ಳುತ್ತಾನೆ. ಕೋಟೂರಿನ ಉತ್ತರದ ಕಡೆ ಕೆರ, ಸ್ವಲ್ಪ ಮುಂದೆ ಹೋದರೆ ರಸ್ತೆಯ ಪಕ್ಕದಲ್ಲಿ ಕಸ್ತೂರಮ್ಮನ ಹಂಚಿನ ಮನೆ. ಶಿವಮ್ಮನ ತಾಯಿ ಕಸ್ತೂರಮ್ಮ ಒಂಟಿಮನೆಯಲ್ಲಿ ವಾಸವಾಗಿದ್ದರು. ಕಸ್ತೂರಮ್ಮಳ ಗಂಡ ಮಹಾ ಕುಡುಕ ಕುಡಿದುಕೊಂಡು ಬಂದು ನಿತ್ಯವೂ ಹೆಂಡತಿಗೆ ಹೋಗಿ ಬರುವ ಗಂಡಸರಿಗೆಲ್ಲ ಸಂಬಂಧ ಕಲ್ಪಿಸಿ ಚಿತ್ರಹಿಂಸೆ ಕೊಡುತ್ತಿದ್ದನು. ಇದನ್ನು ಸಹಿಸಲು ಸಾಧ್ಯವಿಲ್ಲದೆ ತಾನೇ ಗಂಡನನ್ನು ಕೊಂದಳೆಂದು ಜನರು ಮಾತನಾಡಿಕೊಳ್ಳುತ್ತಿದ್ದರು. ಕುಡಿದ ಅಮಲಿನಲ್ಲಿ ಕಾಲು ಜಾರಿ ಬಾವಿಯಲ್ಲಿ ಬಿದ್ದು ಮರಣವನ್ನು ಹೊಂದಿದನು ಎಂದು ಕೆಲವರು ಮಾತಾಡಿದ್ದು ಉಂಟು. ಏನೇ ಆದರೂ ಆಕೆ ಗಂಡನ ಹಿಂಸೆಯಿಂದ ನೋವು ಯಾತನೆಯನ್ನು ತಡೆಯಲಾರದಷ್ಟು ಸ್ಥಿತಿ ಅವಳ ಕುಟುಂಬದಲ್ಲಿತ್ತೆಂಬುದು ಸತ್ಯವಾಗಿತ್ತು. ಕಸ್ತೂರಮ್ಮ ಕೂಲಿ ಮಾಡಿಕೊಂಡು, ಹಸುಗಳನ್ನು ಸಾಕಿಕೊಂಡು ಹಾಲು ಮಾರಿ ಆದರ ಜೊತೆ ತನ್ನ ಎರಡು ಎಕರೆ ಹೊಲದಲ್ಲಿ ವ್ಯವಸಾಯವನ್ನು ಮಾಡುತ್ತಿದ್ದಳು.

ಗಂಡ ಸತ್ತ ಮೇಲೆ ತಾನು ಪಟ್ಟಂತಹ ಕಷ್ಟವನ್ನು ತನ್ನ ಮಗಳು ಶಿವಮ್ಮ ಪಡಬಾರದೆಂದುಕೊಂಡು ತುಂಬಾ ಜವಾಬ್ದಾರಿಯಿಂದ ನೋಡಿಕೊಳ್ಳುತ್ತಿದ್ದಳು. ತನ್ನನ್ನು ಹೆತ್ತವರು ಇರುವ ಎರಡು ಎಕರೆ ಜಮೀನನ್ನು ನೋಡಿ ನನ್ನನ್ನು ಕುಡುಕ ಗಂಡನಿಗೆ ಗಂಟು ಹಾಕಿದರು. ನನ್ನಂತೆ ನನ್ನ ಮಗಳ ಜೀವನವಾಗಬಾರದೆಂದುಕೊಂಡು ಯಾವ ಆಸ್ತಿ ಪಾಸ್ತಿ ಇಲ್ಲದಿದ್ದರೂ ಪರವಾಗಿಲ್ಲ ಒಳ್ಳೆಯವನಾಗಿರಬೇಕೆಂದು, ನನ್ನ ಮಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಸುಬ್ರಮಣ್ಯನನ್ನು ತಂದು ಮನೆಯ ಅಳಿಯನನ್ನಾಗಿ ಇಟ್ಟುಕೊಂಡಳು. ಆದರೆ ಸುಬ್ರಮಣ್ಯ ಒಳ್ಳೆಯವನಾದರೂ ಬುದ್ಧಿ ಸ್ಥಿಮಿತದಲ್ಲಿ ಇರುತ್ತಿರಲಿಲ್ಲ. ಯಾರೇನೆಂದರೂ ಅನ್ನಿಸಿಕೊಳ್ಳುತ್ತಿದ್ದ ಮಕ್ಕಳು, ಹಿರಿಯರು ಈತನನ್ನು ರೇಗಿಸುತ್ತಿದ್ದರು. 'ತಾನೊಂದು ಬಗೆದರೆ ವಿಧಿ ತಾನೊಂದು ಬೇರೊಂದು ಬಗೆಯಿತು' ಅನ್ನುವಂತೆ ಮಗಳ ಬದುಕು ಹೀಗಾಯಿತಲ್ಲವೆಂದುಕೊಂಡು ಅದೇ ಕೊರಗಿನಲ್ಲಿ ಕೊರಗಿ ಕಸ್ತೂರಮ್ಮ ಅಸುನೀಗಿದಳು.

ಆಗ ಮನೆಯ ಜವಾಬ್ದಾರಿಯು ಶಿವಮ್ಮಳ ಮೇಲೆ ಬಿದ್ದಿತು. ಗಂಡನ ಅಸಹಾಯಕತೆಯನ್ನು ಕಂಡ ಊರಿನ ಗಂಡಸರು ಶಿವಮ್ಮಳ ಮೇಲೆ ತಮ್ಮ ಕಾಮದ ಕಣ್ಣನ್ನು ಬೀರತೊಡಗಿದರು. ಆದರೆ ಶಿವಮ್ಮ ಅವರಿಗ್ಯಾಕೆ ಅಂಜಬೇಕೆಂದು ಧೈರ್ಯತನದ ಪುರುಷನಂತೆ ತನ್ನ ಬಾಳನ್ನು ಕಟ್ಟಿಕೊಂಡಳು.ಶಿವಮ್ಮ ಯಾರನ್ನೂ ಲೆಕ್ಕಿಸಲಿಲ್ಲ. ಗಂಡನ ಬಗ್ಗೆ ಯಾರಾದರೂ ಏನಾದರೂ ಮಾತನಾಡಿದರೆ ಅವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ನನ್ನ ಗಂಡನದು ಅಮಾಯಕತನ, ಮಂದಬುದ್ಧಿ ಒಪ್ಪಿಕೊಳ್ತಿನಿ. ಆದರೆ ನಿಮ್ಮ ಗಂಡಸರು ನನ್ನ ಮನೆಯ ಹತ್ತಿರ ಬಂದು ತಿರುಗಾಡುವುದೇಕೆ....? ಅವರ ಕಾಲು ಮುರಿಯುತ್ತೇನೆಂದು ಎಲ್ಲರಿಗೂ ಗದರಿಸುತ್ತಿದ್ದಳು. ಹೀಗಾಗಿ ಇವಳನ್ನು ಕಂಡರೆ ಎಲ್ಲರಿಗೂ ಅಸೂಯೆಯ ಭಾವನೆ ಬೆಳೆಯತೊಡಗುತ್ತದೆ.

ಗಂಡನನ್ನು ತಪಾಸಣೆ ಮಾಡಿಸುವುದಕ್ಕೆ ಕೋಲಾರ, ತಿರುಪತಿ, ಚಿತ್ತೂರು, ಆಸ್ಪತ್ರೆಗಳ ಕಡೆ ಹಾಗೂ ಸುತ್ತಲು ಇರುವ ನಾಟಿ ವೈದ್ಯರ ಬಳಿ ಹೋಗುತ್ತಿದ್ದಳು. ಅಲ್ಲಿಯವರೆಗೆ ಮಾತ್ರ ನನಗೆ ಗೊತ್ತು.ಆಮೇಲೆ ನಾನು ಊರು ಬಿಟ್ಟು ಬಂದೆ,ಮುಂದೆ ಏನಾಯಿತೆಂದು ಶಿವಮ್ಮನನ್ನೇ ಕೇಳಬೇಕೆಂದು ಟೀ ಕೇಳಿದಾಗ ಶಿವಮ್ಮನೇ ಬಂದು ಕೊಡುತ್ತಾಳೆ. ಆಗ ಕುಮಾರ್ ಅವಳನ್ನು ನೋಡಿ ಏನ್ ಅತ್ತೆ ಚನ್ನಾಗಿದ್ದಿಯಾ ಎಂದು ಕೇಳುತ್ತಾನೆ. ಮಾವ ನನ್ನನ್ನು ಗುರುತಿಸಲಿಲ್ಲ ನೋಡತ್ತೆ ಎಂದು ಹೇಳುತ್ತಾನೆ. ಶಿವಮ್ಮ ತುಂಬಾ ಅಚ್ಚರಿಯಿಂದ ತನ್ನ ಮುಖದಲ್ಲಿ ಬದಲಾವಣೆ ಬಂದು ಮುಖ ಹೂವಿನಂತೆ ಅರಳುತ್ತದೆ. ತನ್ನ ಊರಿನವರು ಎಂದಕೂಡಲೇ ಅವಳಿಗೆ ಭಾವೋದ್ರೇಕದಿಂದ ಕುಮಾರನಲ್ಲಿ ಊರನ್ನು ಕಂಡಷ್ಟು ಸಂತೋಷವಾಗಿ ಮಾತನಾಡುತ್ತಾಳೆ.

ನೀವ್ಯಾಕೆ ಊರನ್ನು ಬಿಟ್ಟು ಇಲ್ಲಗೆ ಬಂದಿದ್ದೀರಿ ಎಂದು ಕೇಳಿದಾಗ ಶಿವಮ್ಮ "ದಂಡ ಕಟ್ಟಲೇಬೇಕೆಂದು ಪಂಚಾಯ್ತಿಯಲ್ಲಿ ಕಡ್ಡಿ ಮುರಿದಂಗೆ ತೀರ್ಪು ಕೊಟ್ಟರು. ಮೂವತ್ತು ಸಾವಿರ ಕಟ್ಟಬೇಕೆಂದರೆ ಸಾಧ್ಯವಾ ಚಿನ್ನಬ್ಬಾ ಮಾನ ಮರ್ಯಾದೆಗೆ ಅಂಜಿ ಜಮೀನು ಮಾರಾಟಕ್ಕಿಟ್ಟೆ ಒಂದು ಎಕರೆ ಮಾರೋಣವೆಂದರೆ ಯಾರೂ ಮುಂದೆ ಬರಲಿಲ್ಲ. ಪೂರ್ತಿ ಎರಡು ಎಕರೆ ಮಾರಿದರೆ

ಮಾತ್ರ ಕೊಳ್ಳುವುದಾಗಿ ಹೇಳಿದರು. ಹಾಗೇ ಆಗಲಿ ಎಂದು ಮಾರಿಬಿಟ್ಟೆ ಮೇಕೆಯನ್ನು, ಕೋಳಿ ಹುಂಜಗಳನ್ನೂ ಮಾರಿದೆ. ದಂಡಕಟ್ಟಿ ಉಳಿದ ಹಣವನ್ನು ಕೈಯಲ್ಲಿ ಹಿಡಿದುಕೊಂಡು ಮಾನ, ಮರ್ಯಾದೆ ಇಲ್ಲದ ಊರಲ್ಲಿ ಇರುವದೇ ಬೇಡವೆಂದು ಇಲ್ಲಗೆ ಬಂದು ಹೀಗೆ ಪರದೇಶಿ ಬದುಕು ಬದುಕುತ್ತಿದ್ದೇವೆ. ಇದ್ದುದರಲ್ಲಿ ತೃಪ್ತಿಯಿಂದ, ಗೌರವದಿಂದ ನಮ್ಮ ಬಾಳೇನೋ ನಾವು ಬಾಳುತ್ತಿದ್ದೇವೆ. ಇಲ್ಲಿ ಯಾರೂ ನಮ್ಮ ಕುಲ ಗೋತ್ರಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಕೀಳಾಗಿ ಕಾಣುವವರಿಲ್ಲ."[೬] ಎಂದು ಹೇಳುವ ಅವಳ ಮಾತಿನಲ್ಲಿ ಅವಳಿಗಾಗಿರುವ ಅನ್ಯಾಯ, ಅವಮಾನ, ಆರ್ಥಿಕ ಶೋಷಣೆಯಾಗಿರುವುದು ತಿಳಿಯುತ್ತದೆ.

ಬಂಡವಾಳಶಾಹಿಗಳ ಮಾತನ್ನು ಕೇಳದೆ ಸ್ವತಂತ್ರತನದಿಂದ ತನ್ನ ಬದುಕನ್ನು ನಿರ್ವಹಿಸುತ್ತಿರುವುದನ್ನು ಕಂಡು ಹಾಗೂ ಯಾವ ಕಾಮುಕರ ಕೈಗೆ ಸಿಗಲಾರದನ್ನು ಸಹಿಸದ ಊರಿನ ಗೌಡರು ಅವಳ ಸೊಕ್ಕನ್ನು ಮುರಿಯಬೇಕೆಂಬ ದುರುದ್ದೇಶವನ್ನಿಟ್ಟುಕೊಂಡು ಇಂತಹ ಹೆದರಿಕೆಯ ಸುಳ್ಳು ಆಪಾದನೆಯನ್ನು ಹೋರಿಸಿ ಶಿವಮ್ಮಳನ್ನು ಇಂತಹ ಸಂಕಷ್ಟದಲ್ಲಿ ಸಿಲುಕುವಂತೆ ಮಾಡಿದ್ದಾರೆ. ಶಿವಮ್ಮ ಮಾಡುತ್ತಿರುವ ವ್ಯವಸಾಯದ ಭುಮಿಯಲ್ಲಿ ತನ್ನ ಬೆಳೆಯನ್ನು ರಕ್ಷಿಸಿಕೊಳ್ಳುವುದಕ್ಕೆ ಹೊಲದ ಸುತ್ತ ಕರೆಂಟು ಕಂಬಿ ಹಾಕಿದ್ದಳು. ರಾತ್ರಿ ಕಾಡು ಹಂದಿ ಒಂದು ಸತ್ತುಹೋಗಿತ್ತು. ಇದರ ನೆಪವನ್ನು ಇಟ್ಟುಕೊಂಡು ಬಂದು, ರೆಡ್ಡಿಗಳು, ನಾಯಕರು ಒಂದಾಗಿ ನನ್ನ ಮೇಲಿನ ಹಳೇ ದ್ವೇಷಕ್ಕೆ ನನ್ನನ್ನು ಪಂಚಾಯ್ತಿ ಸೇರಿಸಿದರು. ಮನುಷ್ಯರನ್ನು ಕೊಲ್ಲುವುದಕ್ಕಿಂತ ಹಂದಿಯನ್ನು ಕೊಂದರೆ ಅದು ದೊಡ್ಡ ಅಪರಾಧ ನೀನು ಮೂವತ್ತು ಸಾವಿರ ಕೊಡದಿದ್ದರೆ ನಿನ್ನನ್ನು ಫಾರೆಸ್ಟ್ ಆಫೀಸರನ್ನು ಕರೆಯಿಸಿ ನಿನ್ನನ್ನು, ನಿನ್ನ ಗಂಡನನ್ನು ಜೈಲಿಗೆ ಕಳಿಸುತ್ತೇವೆಂದು ಹೇಳಿ ದಂಡವನ್ನು ಹಾಕಿ ಹೊಲವನ್ನು ಮಾರಿಸಿ ಊರುಬಿಟ್ಟು ಕಳಿಸುತ್ತಾರೆ.

ದಿನರಾತ್ರಿಯಾದರೆ ಶಿವಮ್ಮಳ ಮನೆ ಕಡೆ ಬಂದು ಜೊಲ್ಲು ಸುರಿಸಿಕೊಂಡು ಸುತ್ತುತ್ತಿರುವವರೇ ಇಂತಹ ಕೆಲಸವನ್ನು ಮಾಡಿದರು. ರೆಡ್ಡಿ, ಕಾಪು, ನಾಯಕ ನನ್ನ ಮಕ್ಕಳು ಅದೆಷ್ಟು ಸಲ ಅಡವಿ ಪ್ರಾಣಿಗಳನ್ನು ಭೇಟೆಯಾಡಿ ತಂದು ಮಾಂಸವನ್ನು ಹಂಚಿಕೊಂಡು ತಿನ್ನುತ್ತಾರೆ ಆಗ ಯಾವ ಫಾರೆಸ್ಟ್‌ನವರು ಮನೆ ಮುಂದೆ ಬಂದು ಯಾರನ್ನೂ ಕೇಳುವದಿಲ್ಲ. 'ಅಡವಿಯಲ್ಲಾಗಲಿ, ಊರಲ್ಲಾಗಲಿ ದುಡ್ಡಿದ್ದವನು ದೊಡ್ಡ ಕುಲದವನು ಏನು ಮಾಡಿದರೂ ನಡೆಯುತ್ತದೆ. ನನ್ನಂತ ಕೀಳು ಕುಲದವಳು ಒಂಟಿ ಹೆಂಗಸು ಎಂದರೆ ಮೇಲ್ವರ್ಗದವರಿಗೆಲ್ಲರಿಗೂ ಆಗುವುದಿಲ್ಲ. ಅವರು ಹೇಳಿದಂತೆ ನಾನು ಗುಲಾಮಳಾಗಿದ್ದರೆ ಅವರು ನನ್ನನ್ನು ಊರಲ್ಲಿ ಬದುಕಲು ಬಿಡುತ್ತಿದ್ದರು. ಎಂದು ತನ್ನ ಮನೋವೇದನೆಯನ್ನು ಹೇಳಿಕೊಳ್ಳುತ್ತಾಳೆ. ಕುಮಾರ್ ಅವಳ ಈ ವೇದನೆಯ ವೃತ್ತಾಂತವನ್ನು ಕೇಳಿ ಛೇ.. ಹೀಗಾಗಬಾರದಿತ್ತೆಂದು ಮರುಗುತ್ತಾನೆ. ಶಿವಮ್ಮಳ ಬಾಳು ತಾನು ತನ್ನ ಪೂರ್ವಕರೆಲ್ಲರೂ ಹುಟ್ಟಿ ಬೆಳೆದು ಬಾಳಿದ ಊರನ್ನು ಬಿಟ್ಟುಬಂದು ಬಾಳುವಂತಾಗುವ ಪರಿಸ್ಥಿತಿಗೆ ಬಂಡವಾಳಶಾಹಿಗಳು ದಲಿತ ಮಹಿಳೆಯ ಮೇಲೆ ನಡೆಸುವ ಸಾಮಾಜಿಕ ಶೋಷಣೆಯಾಗಿರುತ್ತದೆ.

ಒಂದು ಹಳ್ಳಿಯಲ್ಲಿ ದಲಿತ ಮಹಿಳೆ ಒಂಟಿಯಾಗಿ ತನ್ನ ಬದುಕನ್ನು ನಡೆಸಲು ಸಾಧ್ಯವಿಲ್ಲ. ಅವಳನ್ನು ಅಲ್ಲಿನ ಬಂಡವಾಳಶಾಹಿಗಳು ತಮ್ಮ ಕಾಮದ ಕಣ್ಣಿನಿಂದ ನೋಡುವುದು, ಅವಳನ್ನು ತಮ್ಮ ದೈಹಿಕ ಸುಖಕ್ಕಾಗಿ ದೌರ್ಜನ್ಯ ಮಾಡುವುದು ಎಲ್ಲದಕ್ಕೂ ಈ ಕಥೆಯು ಸಾಕ್ಷಿಯಾಗಿದೆ. ಕುಲದ ಹೆಸರನ್ನು ತೋರಿಸಿ ಕೀಳಾಗಿ ಕಂಡು ದಲಿತರನ್ನು ಮನುಷ್ಯರಂತೆ ಕಾಣುವುದಿಲ್ಲ. ಅವರನ್ನು ಸ್ಪರ್ಶಿಸುವುದಿಲ್ಲ. ಆದರೆ ಅದೇ ದಲಿತ ಹೆಣ್ಣುಮಕ್ಕಳನ್ನು ದೈಹಿಕ ಬಳಕೆಗಾಗಿ ಉಪಯೋಗಿಸಲು ಕಾಯುತ್ತಿರುತ್ತಾರೆ. ಆಗ ಯಾವ ಕುಲವೂ ಅವರ ಲೆಕ್ಕಕ್ಕೆ ಬರುವುದಿಲ್ಲ. ಬಳಸಿಕೊಳ್ಳುವುದಕ್ಕೆ ಯಾವ ಕುಲದ ಶೋಷಣೆಯೂ ಇಲ್ಲ. ತಮ್ಮ ಬಳಕೆ ಮುಗಿಸಿಕೊಂಡ ಮೇಲೆ ಬಂಡವಾಳಶಾಹಿಗಳು ದಲಿತ ಮಹಿಳೆಯರನ್ನು ಬೀದಿಯ ನಾಯಿಯಂತೆ ಕಾಣುತ್ತಾರೆ. ಇದು ದಲಿತ ಸಮುದಾಯದ ಮಹಿಳೆಯರಿಗೆ ಉಳ್ಳವರು ಮಾಡುತ್ತಿರುವ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಇದನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ದಲಿತ ಮಹಿಳೆಯ ಸಾಮಾಜಿಕ ಸ್ಥಿತಿಗತಿಗಳನ್ನು ಗ್ರಹಿಸಿಕೊಂಡಿದ್ದಾರೆ. ಬಂಡವಾಳಶಾಹಿಗಳಿಂದ ಒಳಪಟ್ಟ ದಲಿತ ಮಹಿಳೆಯರು ಪಡುತ್ತಿರುವ ಸಂಕಷ್ಟಗಳನ್ನು ಅವರ ಸಾಮಾಜಿಕ ಅವಮಾನಗಳನ್ನು, ಅತ್ಯಾಚಾರಗಳನ್ನು, ಸ್ತ್ರೀವಾದದ ಸಂವೇದನೆಯ ನೆಲೆಯಲ್ಲಿ ಹಾಗೂ ಅಂಬೇಡ್ಕರವಾದದಿಂದ ದಲಿತ ಮಹಿಳೆಯ ಮಾನಸಿಕ ವೇದನೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

'ಮಲಿಯಾಳದ ಪ್ರಸಿದ್ಧ ಪೆಣ್ ಕಥೆಗಳು' ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ.ಐತಾಳ್‌ರವರು ಕನ್ನಡಿಕರಿಸಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಸಿತಾರ ಎಸ್.ರವರು ಬರೆದಿರುವ 'ಸರಕು' ಎಂಬ ಕಥೆಯು ಒಬ್ಬ ವೇಶ್ಯೆಯ ಜೀವನವನ್ನಾಧರಿಸಿದರೂ ಭಿನ್ನವಾದ ಕಥಾ ನಿರೂಪಣೆಯಲ್ಲಿ ಸಮಾಜದಲ್ಲಿರುವ ಹೆಣ್ಣಿನ ಒಳಮನಸ್ಸಿನ ನೋವಿನ ಸಂವೇದನೆಗಳನ್ನು ಹೆಕ್ಕಿ ತೆಗೆದಿದ್ದಾರೆ. 'ಪ್ರತಿಯೊಬ್ಬ ವೇಶ್ಯೆಯ ಒಳಗೆ ಒಬ್ಬ ಪುರುಷನಿದ್ದಾನೆ' ಎಂದು ಆರಂಭವಾಗುವ ಕಥೆಯು 'ಪ್ರತಿಯೊಬ್ಬ ಪುರುಷನ ಒಳಗೆ ಒಬ್ಬ ವೇಶ್ಯೆ ಇರಬಹುದಲ್ಲವೇ..?' ಎಂಬ ಪ್ರಶ್ನೆಯೊಂದಿಗೆ ಕೊನೆಯಾಗುತ್ತದೆ.

ಈ ವಾಕ್ಯಗಳನ್ನು ಅವಲೋಕಿಸಿದಾಗ ಯಾರು ನಿಜವಾದ ವೇಶ್ಯೆಯರು....? ಎಂಬ ಪ್ರಶ್ನೆ ಸಂಶೋಧಕನಲ್ಲಿ ಮೂಡದಿರಲು ಸಾಧ್ಯವೇ ಇಲ್ಲ. ಈ 'ಸರಕು' ಕಥೆಯು ಮನಶಾಸ್ತ್ರದ ವೈಜ್ಞಾನಿಕತೆಯಿಂದ ಪರಿಷ್ಕರಿಸಲ್ಪಟ್ಟಿರುತ್ತದೆ. ಬೇಕಾದದ್ದನ್ನು ಕೊಡುವ ಮತ್ತು ಕೊಂಡುಕೊಳ್ಳುವ ಸರಕು ಎಂದರೆ ಅದು ವೇಶ್ಯೆ. ಇದ್ದವರಿಗೆ ವಸ್ತು ರೂಪದಲ್ಲಿ ಮಾರಾಟವಾಗುವ ವೇಶ್ಯಾವೃತ್ತಿ, ಅದೊಂದು ವೃತ್ತಿಯೊಂದು, ಅಲ್ಲವೆಂದು ಅದಕ್ಕೆ ಕಾರಣ ಸಮಾಜವೆಂದು, ಅಲ್ಲವೆಂದು ಸ್ತ್ರೀತ್ವವು ಅಪಮಾನ ಗೊಳಿಸುವುದಕ್ಕಾಗಿದೆಯೆಂದು, ಅಲ್ಲವೆಂದು ಹೀಗೆ ವೇಶ್ಯೆಯರ ಬದುಕಿನ ಕುರಿತು ಚರ್ಚಿಸುತ್ತಾ ಅದಕ್ಕೆ ಪರಿಹಾರಗಳನ್ನು ಹುಡುಕುತ್ತ ಒಂದು ಹೊಸ ಆಯಾಮದ 'ಸರಕು' ಕಥೆಯು ಸಾಗುತ್ತದೆ. ವೇಶ್ಯೆಯರ ಬದುಕಿನ ಹಿನ್ನೆಲೆಯನ್ನು ಅವಲೋಕಿಸುತ್ತ, ವೇಶ್ಯೆಯರ ಮುಂದಿನ ಭವಿಷ್ಯತ್ತನ್ನು ಕುರಿತು ವಿವೇಚನೆಯನ್ನು ಮಂಡಿಸುತ್ತ ಹೆಣ್ಣಿನ ಜೀವನಕ್ಕೆ ಕಳಂಕವಾಗಿರುವ ವೇಶ್ಯಾವಾಟಿಕೆಯನ್ನು ಯಾವುದರಿಂದ ನಿರ್ಮೂಲನೆ ಮಾಡಿ, ಅವರ ಬದುಕನ್ನು ದುಸ್ಥಿತಿಯ ಹೊಂಡದಿಂದ ಮೇಲೆ

ತಂದು ಇತರರಂತೆ ಬದುಕನ್ನು ಸಹಜವಾಗಿ ಸಾಗಲು ಸಾಧ್ಯತೆಗಳನ್ನು ಈ ಸರಕು ಕಥೆಯು ಕಟ್ಟಿಕೊಟ್ಟಿರುತ್ತದೆ.

ಲೈಂಗಿಕತೆ ಎನ್ನುವುದು ದೇಹಕ್ಕೆ ಸಂಬಂಧಿಸಿದ್ದು ಅಲ್ಲ. ಇದು ಮಾನಸಿಕ ಒತ್ತಡಕ್ಕೆ ಸಂಬಂಧಿಸಿದ್ದು. ಅದನ್ನು ಅದರಿಂದಾಗುವ ಒಳಿತು ಕೆಡುಕುಗಳನ್ನು ಮನೋವಿಶ್ಲೇಷಣಾತ್ಮವಾಗಿ ಈ ಕಥೆಯು ಒಂದು ಹೆಣ್ಣಿನ ಸ್ಥಿತಿಯು ಅವಳ ಆಲೋಚನಾ ಕ್ರಮಕ್ಕೂ ಬಿಗಿಭದ್ರತೆಯನ್ನು ಹಾಕಿ ಅರಿವಿನ ಆಳದಲ್ಲಿ ಶೋಧಿಸಿ ವೇಶ್ಯಾವೃತ್ತಿಯಿಂದ ಹೊರ ಬರಲು ಈ ಕಥೆಯು ಹೆಣ್ಣಿಗೆ ಪ್ರೇರಕ ಶಕ್ತಿಯಾಗಿದೆ. ಲೈಂಗಿಕ ಕಾರ್ಮಿಕರ ಪುನರ್ವಸತಿಗಾಗಿ, ಶ್ರಮಿಸುವ ಒಂದು ಸಾಮಾಜಿಕ ಸಂಘಟನೆಯ ಭಾಗವಾಗಿ 'ಸುಹಾನಾ' ತನ್ನ ಕಾಯಕವನ್ನು ಕೈಗೊಂಡಿದ್ದಾಳೆ. ಎಮ್.ಎಸ್.ಡಬ್ಲ್ಯೂ. ಕೋರ್ಸಿನ ಅಧ್ಯಯನದ ಹಿನ್ನೆಲೆಯಿಂದ ಮನಶಾಸ್ತ್ರೀಯವಾಗಿ ವೇಶ್ಯಾವೃತ್ತಿಯನ್ನು ಮಾಡುತ್ತಿರುವವರಿಗೆ ತಿಳುವಳಿಕೆಯನ್ನು ನೀಡುತ್ತ ಅವರಿಂದ ಮಾಹಿತಿಯನ್ನು ಸಂಗ್ರಹಿಸುತ್ತಿದ್ದಳು.

ಲಲಿತ ಎಂಬ ವೇಶ್ಯೆಗೆ ಸುಮ್ಮನೆ ಒಂಟಿಯಾಗಿ ನಿಂತು ಗಿರಾಕಿಗಳಿಗಾಗಿ ಕಾದು ಅವರು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ಅವರಿಂದ ಹಿಂಸೆಯನ್ನು ಅನುಭವಿಸುವ ಈ ಕೆಲಸವನ್ನು ಬಿಟ್ಟು ಸಮಾಜದಲ್ಲಿರುವ ಯಾವುದಾದರೊಂದು ಗೌರವಯುತ ಕೆಲಸವನ್ನು ಹುಡುಕಿಕೊಂಡು ಕೆಲಸ ಮಾಡು ಎನ್ನುತ್ತಾಳೆ. ಆಗ ಲಲಿತ ಧಾರಾಳವಾಗಿ ಹಣ ಸಿಕ್ಕುವ ಈ ವೃತ್ತಿಯನ್ನು ಸುಮ್ಮನೆ ಬಿಡುವುದೇ....? ನನ್ನಿಂದ ಸಾಧ್ಯವಿಲ್ಲ ಎನ್ನುತ್ತಾಳೆ. ಆಗ ಸುಹಾನಾ ಮತ್ತೇ ನೀನು ಈಗಿನ ಜೀವನವನ್ನು ಆಲೋಚನೆ ಮಾಡುತ್ತಿದ್ದೀಯಾ. ನಾಳೆ ನನ್ನ ಮತ್ತು ಮಕ್ಕಳ ಜೀವನವನ್ನು ಭವಿಷ್ಯತ್ತಿನಲ್ಲಿ ಒಮ್ಮೆ ಆಲೋಚನೆ ಮಾಡು. ನಿನ್ನ ಮಕ್ಕಳು ನಿನಗೆ ಗೌರವ ನೀಡುವುದಿಲ್ಲವೆಂದು ಹೇಳಿದಾಗ ಲಲಿತ ಮಕ್ಕಳು ನನ್ನನ್ನು ತಿರಸ್ಕಾರದಿಂದ ನೋಡಲಾರರು. ನನ್ನ ಮಕ್ಕಳ ಮಟ್ಟಿಗೆ ಅದೊಂದು ಸಮಸ್ಯೆಯೇ ಅಲ್ಲ ಮೇಡಂ. ಮಕ್ಕಳಿಗೆ ಬೇಕಾದ ಅಗತ್ಯಗಳನ್ನು ಹಣದಿಂದಲೇ ಪೂರೈಸಿದರೆ ಮಕ್ಕಳು ಸುಖವಾಗಿರುತ್ತಾರೆ.

ಇದನ್ನು ಬಿಟ್ಟು ತಿಂಗಳಿಗೆ ಸಾವಿರವೋ ಸಾವಿರದ ಇನ್ನೂರೋ ಸಿಗುವ ಯಾವುದಾದರೊಂದು ಮನೆಗೆಲಸ ಮಾಡಿ ಗುಡಿಸುವ, ಒರೆಸುವ, ಬಾಚುವ, ಕೆಲಸ ಮಾಡಿದರೆ ಮಕ್ಕಳ ಸಂತೋಷ ಹಾಳಾಗುವುದಲ್ಲದೇ, ಮನೆಯ ಬಾಡಿಗೆಯನ್ನು ಕಟ್ಟಲು ಸಾಧ್ಯವಿಲ್ಲದೆ, ಜೀವನವನ್ನು ನಡೆಸಿಕೊಂಡು ಹೋಗಲು ಸಾಧ್ಯವಾಗುವುದಿಲ್ಲ. ನಿಮಗೇನು ಒಂದು ಕೆಲಸವಿದೆ. ಗೌರವದ ಮಾತು ಹೇಳುತ್ತೀರಿ. ವಾಸ್ತವದ ಜೀವನದಲ್ಲಿ ನಿಮ್ಮಂತೆ ನನ್ನಿಂದ ಇರುವುದಕ್ಕೆ ಸಾಧ್ಯವಿಲ್ಲ ಎನ್ನುತ್ತಾಳೆ. ಇದು ಸುಹಾನಾಗೂ ಸತ್ಯವೆಂದು ತಿಳಿದು ಸುಮ್ಮನಾಗಿ ಈ ಸಮಸ್ಯೆಗೆ ಪರಿಹಾರ ಹುಡುಕುತ್ತಾಳೆ. ಈ ವೇಶ್ಯಾವೃತ್ತಿಯನ್ನು ಕುರಿತು ಬಹಿರಂಗವಾಗಿ ಚರ್ಚಿಸಲು ಒಂದು ವೇದಿಕೆಯನ್ನು ಸಿದ್ಧಪಡಿಸುತ್ತಾಳೆ. ವೇಶ್ಯೆಯರನ್ನು ಬೀದಿಯಿಂದ ಮಾನಸಿಕವಾಗಿ ಹೊರತಂದು, ನರ್ಸರಿಯಲ್ಲಿ ಆಯಾ ಕೆಲಸ ಮಾಡುತ್ತಿದ್ದ ತ್ರೇಸ್ಯಮ್ಮಳು ಎಲ್ಲಾ ಬೀದಿಯಿಂದ ವೇಶ್ಯೆಯರನ್ನು ವೇದಿಕೆಗೆ ಕರೆತಂದಿದ್ದಳು. ಅದರಲ್ಲಿ ಲಲಿತಳೂ ಇದ್ದಳು.

ಕುಸ್ತಿಪಟು ಪಂದ್ಯದಲ್ಲಿ ಇಳಿಯುವಂತೆ ವೇದಿಕೆಯಲ್ಲಿ ಚರ್ಚಾಕೂಟವೂ ಆರಂಭವಾಯಿತು. ಸ್ವಾಮಿನಾಥನ್ ಎದೆಯುಬ್ಬಸಿಕೊಂಡು ವೇದಿಕೆಯ ಮುಂದಿನ ಸಾಲಿನಲ್ಲಿ ಕುಳಿತಿದ್ದನು. ಆತ ವಿರೋಧಿಯಾಗಿ ಮಾತನಾಡಲು ಬಯಸಿದ್ದನು.ಸುಹಾನನ ಬಳಿಗೆ ಮೋಡರೇಟರ್ ಮೈಕು ತೆಗೆದುಕೊಂಡು ಬಂದು ಲೈಂಗಿಕ ಕಾರ್ಮಿಕರ ಪುನರ್ವಸತಿಯೆಂಬ ಆಶಯದ ಮೇಲೆ ನಿಮಗೆ ಇಷ್ಟೊಂದು ಕಾರ್ಯೋನ್ಮಕರಾಗಲು ಪ್ರೇರಣೆಯಾದದ್ದು ಯಾವದು ಎಂದು ಕೇಳಿದಾಗ ಸುಹಾನಾ ದುಃಸ್ಥಿತಿಯಲ್ಲಿ ಮುಳುಗಿದವರು ಅವರಿಗೂ ಒಂದು ಗೌರವಯುತ ಬದುಕನ್ನು ಕಟ್ಟಿಕೊಡಬೇಕಾದದ್ದು ಅದು ಎಲ್ಲರ ಕರ್ತವ್ಯ. ಅದೇ ನನ್ನ ಸಂತೋಷ. ಅದೇ ನನಗೆ ಪ್ರೇರಣೆಯೆಂದು ಹೇಳಿದಾಗ ಸ್ವಾಮಿನಾಥನ ಈ ಮಾತು ಸಮಾಜದ ಕಪಟ ನೈತಿಕ ಪ್ರಜ್ಞೆಯನ್ನು ಈ ಉತ್ತರ ತೋರಿಸುತ್ತದೆ. ಲೈಂಗಿಕ ವೃತ್ತಿಗೆ ಗೌರವವಿಲ್ಲವೇ....? ಅವರಿಗೆ ಇಷ್ಟವಾದ ಕೆಲಸ ಮಾಡುವುದನ್ನು ತಡೆಯುವ ಹಕ್ಕು ನಿಮಗೇನಿದೆ....? ನೀವು ಪುನರ್ವಸತಿ ವ್ಯವಸ್ಥೆ ಮಾಡಿಕೊಟ್ಟಿರೆಂದು ಹೇಳುವ ಸ್ತ್ರೀಯರು ಈಗಲೂ ವ್ಯಭಿಚಾರ ಮಾಡುವುದಿಲ್ಲ ಎನ್ನುವುದಕ್ಕೆ ಸಾಕ್ಷಿ ಎಲ್ಲದೆ....? ಎಂದು ಕೇಳುತ್ತಾನೆ.

ಸುಹಾನಾ ಈ ಮಾತಿನಿಂದ ಮೌನಿಯಾಗುತ್ತಾಳೆ. ತ್ರೇಸ್ಯಮ್ಮ ಸ್ವಾಮಿನಾಥನಿಗೆ ಮಹಿಳೆಯರು ಕೊಳಕಿನಲ್ಲಿಯೇ ಬಿದ್ದಿರಬೇಕೇ ಎಂದು ಪ್ರಶ್ನಿಸುತ್ತಾಳೆ. ಸುಹಾನಾ ನಾನು ಮಾಡುವ ಕೆಲಸದಲ್ಲಿ ಸ್ವತಂತ್ರವಿದೆ ಅದರ ಜೊತೆ ನನ್ನದೇ ಸಮರ್ಥನೆಯೂ ಇದೆ. ಎಂದಾಗ ಸ್ವಾಮಿನಾಥನ್ ನಿಮ್ಮ ಪ್ರವರ್ತನೆಗಳ ಹಿಂದೆ ಇರುವ ಹಿಡನ್ ಅಜೆಂಡಾಗಳ ಬಗ್ಗೆ ಎಲ್ಲರಿಗೂ ಗೊತ್ತು ಎಂದು ಹೇಳುತ್ತಾನೆ.ಇದರಿಂದ ಸುಹಾನಾ ರಮಣೀಯಕ್ಕನು ಬಳಲಿದ ರೂಪವನ್ನು ನೆನೆದು ಆವೇಶದಿಂದ ಬಂದು ಸ್ವಾಮಿನಾಥನ ಗಡ್ಡವನ್ನು ಹಿಡಿದೆಳೆದು ಆತನ ಮುಖಕ್ಕೆ ಹೊಡೆಯುತ್ತಾಳೆ. ನಂತರ ಹೊರಗಿನ ಮೆಟ್ಟಿಲುಗಳ ಮೇಲೆ ಸುಹಾನಾ ಕುಳಿತುಕೊಂಡು ಅಳುತ್ತಿರುವಾಗ ತ್ರೇಸ್ಯಮ್ಮ ಮತ್ತು ಲಲಿತಳು ಬಂದು "ಅಳಬೇಡ ಮಗಳೆ ಸುಹಾನಾಳ ಬಳಿ ಸಾರಿ ಬಂದು ಕುಳಿತು ಲಲಿತಾ ಅವಳನ್ನು ಅಪ್ಪಿ ಹಿಡಿದುಕೊಂಡಳು.ನಾವು ಹೆಣ್ಣುಮಕ್ಕಳ ಬದುಕೇ ಹೀಗೆ.... ಹಾಗಿಲ್ಲದಿದ್ದರೆ ಇಲ್ಲಿ ಈ ಕಾರ್ಯಕ್ರಮವು ಕೂಡ ನಡೆಯುತ್ತಿರಲಿಲ್ಲವಲ್ಲ....?"[೭]

ಸುಹಾನಾಳ ಒಳ ಮನಸ್ಸಿನಲ್ಲಿ ಈಗ ಅವು ಬಂದು ಕತ್ತಿಯ ಮೊನೆಯಂತೆ ಅವು ಚುಚ್ಚುತ್ತಿದ್ದವು. ಸ್ವಾಮಿನಾಥನಂತಹ ಎಷ್ಟೋ ಬಂಡವಾಳಶಾಹಿಗಳು ವೇಶ್ಯಾವೃತ್ತಿಯನ್ನು ಬೆಳೆಸುತ್ತಿದ್ದಾರೆ.ಪ್ರತಿಯೊಬ್ಬ ಪುರುಷನ ಒಳಗೆ ವೇಶ್ಯೆ ಇರುವಾಗ ವೇಶ್ಯಾವೃತ್ತಿ ಕೊನೆಯಾಗಲು ಸಾಧ್ಯವೇ....? ಎಂಬ ಪ್ರಶ್ನೆಯೊಂದಿಗೆ ಸುಹಾನಾಳ ಒಂದು ಹೆಣ್ಣಿನಲ್ಲಿರುವ ಮಾನಸಿಕ ವ್ಯಥೆಯನ್ನು ದಲಿತ ಸ್ತ್ರೀ ಸಂವೇದನೆಗಳನ್ನು ಈ 'ಸರಕು' ಎಂಬ ಕಥಾ ವಸ್ತುವಿನೊಂದಿಗೆ ಕಥೆಗಾರರು ಹಂಚಿಕೊಂಡಿದ್ದಾರೆ. ಆರ್ಥಿಕ ಭದ್ರತೆಯನ್ನು ಕಟ್ಟಿಕೊಳ್ಳಲು ವೇಶ್ಯಾವೃತ್ತಿಯು ಸಹಕಾರಿಯಾಗಿರುತ್ತದೆ. ಆದರಿಂದ ನಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ನೀಡಿ, ಅವರನ್ನು ಯಾವುದೋ ಒಂದು ಉನ್ನತ

ಸ್ಥಾನಕ್ಕೆ ತಲುಪಿಸಲು ಸಾಧ್ಯವಾಗುತ್ತದೆ. ಈ ವೃತ್ತಿಯಿಂದ ನಮ್ಮ ಮಕ್ಕಳ ಭವಿಷ್ಯಕ್ಕಾಗಿ ಅಷ್ಟೋ ಇಷ್ಟೋ ಹಣವನ್ನು ಸಂಗ್ರಹಿಸಿಡಬಹುದು.

ಇದನ್ನು ಬಿಟ್ಟರೆ ಬೇರೆ ವೃತ್ತಿಯಿಂದ ನಾವು ನಮ್ಮ ಹೊಟ್ಟೆಗೆ ಅನ್ನವನ್ನು ಕಾಣದೆ, ಮನೆಯ ಬಾಡಿಗೆಯನ್ನು ಕಟ್ಟಲು ಸಹ ಆಗುವುದಿಲ್ಲವೆಂದು ಹೇಳುವ ಲಲಿತಾಳ ಮಾತಿನಲ್ಲಿ ಸತ್ಯವಿದೆ. ವಾಸ್ತವ ಜಗತ್ತಿನ ತಿಳುವಳಿಕೆ ಇದೆ. ಆದರೆ ಇದರ ಹಿಂದೆ ಅತ್ಯಂತವಾದ ಮಾನಸಿಕ ಹಿಂಸೆಯ ನೋವೂ ಇದೆ. ವೇಶ್ಯಾವೃತ್ತಿಯಿಂದಲೇ ಒಂದು ಹೆಣ್ಣು ಸಮಾಜದಲ್ಲಿ ಬಾಳುವುದಕ್ಕೆ ಅನಿವಾರ್ಯತೆಯನ್ನು ಸೃಷ್ಟಿಸಿದ ಬಂಡವಾಳಶಾಹಿಗಳ ಆರ್ಥಿಕ ಶೋಷಣೆಯೂ ಅಡಗಿರುತ್ತದೆ. ಯಾವದೇ ಒಂದು ವೃತ್ತಿಯಿಂದ ಹೆಣ್ಣು ತನ್ನ ಕುಟುಂಬವನ್ನು ನೋಡಿಕೊಳ್ಳಲು ಸಾಧ್ಯವಿಲ್ಲವೆಂದರೆ ಅವಳಿಗಿರುವ ಸಾಮಾಜಿಕ ಅಸಮಾನತೆಯನ್ನು ಇದು ಸೂಚಿಸುತ್ತದೆ. ಅಲ್ಲದೆ ಯಾವುದೇ ವೃತ್ತಿಯನ್ನು ಮಾಡಲು ಒಂದು ಹೆಣ್ಣು ಹೋದರೆ ಅಲ್ಲಿ ದೈಹಿಕವಾಗಿ ಅತ್ಯಾಚಾರ ಮಾಡುತ್ತಾರೆ. ಕೂಲಿ ಕೆಲಸ ಮಾಡುವುದರ ಜೊತೆ ನನ್ನ ಮಾನವನ್ನು ಕಳೆದುಕೊಳ್ಳಬೇಕಾಗುತ್ತದೆ. ಇದಕ್ಕಿಂತ ನನ್ನ ದೇಹವನ್ನು ಮಾರಿಕೊಂಡು ಬದುಕುವುದೇ ಮೇಲೆಂದು ಈ ವೇಶ್ಯಾವೃತ್ತಿಯಲ್ಲಿ ತೊಡಗಿಕೊಂಡಿದ್ದೇನೆಂದು ಹೇಳುವ ಲಲಿತಾಳ ಮಾತು ಸುಹಾನಾಗೆ ಮಾತಿಲ್ಲದಂತೆ ಮಾಡುತ್ತದೆ.

ಈ ವೇಶ್ಯಾವೃತ್ತಿಯ ಚಟುವಟಿಕೆಯಿಂದ ಅತೀ ಹೆಚ್ಚು ಲಾಭವನ್ನು ಮಾಲೀಕರು ಪಡೆದುಕೊಳ್ಳುತ್ತಾರೆ. ಆದರೆ ಮುಂದೊಂದು ದಿನ ಈ ವೇಶ್ಯಾವೃತ್ತಿಯಲ್ಲಿ ತೊಡಗಿಕೊಂಡು ಹೆಣ್ಣುಮಕ್ಕಳು ಹಲವಾರು ರೋಗಗಳಿಗೆ ತುತ್ತಾಗಿ ಅದಕ್ಕೆ ತಕ್ಕ ಚಿಕಿತ್ಸೆಯನ್ನು ಪಡೆದುಕೊಳ್ಳಲು ಹಣವಿಲ್ಲದೆ ಬೀದಿಯ ಹೆಣವಾಗಿ ಹೋಗುತ್ತಾರೆ. ಅವರ ಇಷ್ಟೆಲ್ಲಾ ಸಂಕಟಗಳಿಗೆ ಬಂಡವಾಳಶಾಹಿಗಳು ಅವರನ್ನು ಬಳಸಿಕೊಂಡು ಬಿಸಾಕುವ ವಸ್ತುವಂತೆ ಮಾಡಿದ್ದಾರೆ. ಈ ಸಮಾಜದಲ್ಲಿ ಆರ್ಥಿಕ ಶೋಷಣೆಯಿಂದಾಗಿ ಹೆಣ್ಣು ಒಂದು ಸರಕಿನಂತೆ ಮಾರಾಟವಾಗುತ್ತಿದ್ದಾಳೆ. ಹೆಣ್ಣಿನ ಮನಸ್ಸಿಲ್ಲಿರುವ ಭಾವನೆಗಳನ್ನು ತಿಳಿಯದೆ, ಹೆಣ್ಣಿಗೆ ಗೌರವವನ್ನು ನೀಡದೆ ಅಧಿಕಾರಿಶಾಹಿಗಳು ಈ ವೇಶ್ಯಾವೃತ್ತಿಯ ಚಟುವಟಿಕೆಗಳಿಗೆ ಪ್ರೇರಣೆಯನ್ನು ನೀಡುತ್ತಾರೆ. ಅದಕ್ಕೆ ಕಾರಣ ಎಲ್ಲಾ ಪುರುಷರ ಮನಸ್ಸಿನಲ್ಲಿ ಒಬ್ಬ ವೇಶ್ಯೆ ಸುಳಿದಾಡುತ್ತಿರುತ್ತಾಳೆ. ಅಂದರೆ ಪುರುಷರಿಗೆ ಹೆಣ್ಣಿನ ದೇಹವನ್ನು ಸರಕು ರೂಪದಲ್ಲಿ ಕೊಂಡು ಉಪಯೋಗಿಸಿಕೊಳ್ಳುತ್ತಾನೆ.

ಆದರೆ ಅಂತಹ ಪರಸ್ಥಿತಿಗೆ ಆ ಹೆಣ್ಣಿನಲ್ಲಿರುವ ಮಾನಸಿಕ ವೇದನೆಗಳನ್ನು ಯಾರೂ ಕೇಳುವುದಿಲ್ಲ. ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿ ಒಂದು ಹೆಣ್ಣಿಗೂ ಸಮಾನತೆಯನ್ನು ಕಲ್ಪಿಸಿಕೊಡಲಾಗಿದೆ. ಅವಳಿಗೆ ಸ್ವಾಭಿಮಾನದ ಸ್ವಾತಂತ್ರ ಹಕ್ಕು ಇದೆ. ಆದರೆ ಬಂಡವಾಳಶಾಹಿಗಳು ಹೆಣ್ಣಿನ ಹಕ್ಕುಗಳನ್ನು ಕಸಿದುಕೊಂಡಿದ್ದಾರೆ ಎಂಬ ಹತಾಸೆಯ ನುಡಿಗಳನ್ನು ಸುಹಾನಾಳ ಮನಸ್ಥಿತಿಯಲ್ಲಿ ಕಾಣಬಹುದಾಗಿದೆ. ಈ ಮೇಲಿನ ಮಹತ್ವವಾದ ಅಂಶಗಳನ್ನು ಗಮನಿಸಿಕೊಂಡ ಕಥೆಗಾರರು ಈ ಕಥೆಯ ಮೂಲಕ ವೇಶ್ಯಾವೃತ್ತಿಯಿಂದ ದಲಿತ ಬಡ ಹೆಣ್ಣುಮಕ್ಕಳು ಎಂತಹ ಸಂಕಷ್ಟಗಳಿಗೆ

ಸಿಲುಕಿಕೊಂಡು ತಮ್ಮ ಜೀವನವನ್ನು ಅನುಭವಿಸುತ್ತಿದ್ದಾರೆ. ಅಲ್ಲದೆ ದಲಿತ ಹೆಣ್ಣುಮಕ್ಕಳೇ ಇಂತಹ ವೇಶ್ಯಾವೃತ್ತಿಯಲ್ಲಿ ಪಾಲ್ಗೊಳ್ಳುವುದಕ್ಕೆ ಅವರಿಗಿರುವ ಆರ್ಥಿಕ ಅಸಮಾನತೆಯನ್ನು ಗುರ್ತಿಸಿಕೊಂಡು ಈ ವೇಶ್ಯಾವೃತ್ತಿಯಿಂದ ದಲಿತ ಹೆಣ್ಣುಮಕ್ಕಳ ಅತಂತ್ರದ ಜೀವನ ವಾಸ್ತವ ಅಂಶಗಳನ್ನುತಮ್ಮ ಸೂಕ್ಷ್ಮ ಸಂವೇದನೆಗಳನ್ನು ಸ್ತ್ರೀವಾದದ ಹಿನ್ನೆಲೆಯಿಂದ ಅಭಿವ್ಯಕ್ತಗೊಳಿಸಿದ್ದಾರೆ.ಈ ವೇಶ್ಯಾವೃತ್ತಿಯ ಚಟುವಟಿಕೆಯಲ್ಲಿ ದಲಿತ ಹೆಣ್ಣುಮಕ್ಕಳು ಬಲಿಯಾಗದೆ ಸಮಾನತೆಯಲ್ಲಿ ಬದುಕುವಂತಾಗಬೇಕು. ಆರ್ಥಿಕ ಸಬಲತೆಯು ದಲಿತ ಸ್ತ್ರೀಯರಿಗೆ ದೊರೆಯಬೇಕೆಂಬ ಆಶಯದೊಂದಿಗೆ ವೇಶ್ಯಾಜೀವನವನ್ನು ಖಂಡಿಸಿದ್ದಾರೆ.

ಡಾ.ಶರಣ್ ಕುಮಾರ್ ಲಿಂಬಾಳೆಯವರು ಬರೆದಿರುವ 'ಚುವಾಚೂತ್' ಎಂಬ ಮರಾಠಿ ಕಥಾಸಂಕಲನವನ್ನು ಡಾ. ಪ್ರಮೀಳಾ ಮಾಧವ್‌ರವರು 'ಅಸ್ಪೃಶ್ಯ' ಶೀರ್ಷಿಕೆಯ ಕಥಾ ಸಂಕಲನವನ್ನು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಸೋನಿ' ಎಂಬ ಕಥೆಯು ಬಡತನದಿಂದ ಹುಟ್ಟಿದ ದಲಿತ ಮಹಿಳೆಯೊಬ್ಬಳು ತನ್ನ ಜೀವನವನ್ನು ಈ ಕೆಟ್ಟ ಸಾಮಾಜಿಕ ವ್ಯವಸ್ಥೆಯಲ್ಲಿ ವ್ಯವಸ್ಥಿತವಾಗಿ ಬದುಕನ್ನು ನಡೆಸಲು ಸಾಧ್ಯವಾಗದೆ ಹೇಗೆ ತನ್ನೆಲ್ಲ ಮಾನ, ಸ್ವಾಭಿಮಾನಗಳನ್ನು ತೊರೆದು ಬಡತನದ ಹಸಿವನ್ನು ಹಿಂಗಿಸಿಕೊಳ್ಳುವುದಕ್ಕಾಗಿ ಬೀದಿಯಲ್ಲಿ ವೇಶ್ಯೆಯಾಗಿ ಬದುಕನ್ನು ಬಲಿ ಕೊಡುತ್ತಾಳೆ ಎಂಬುದನ್ನು ಪ್ರತಿಪಾದಿಸುತ್ತದೆ.

ಒಂದು ದಲಿತ ಹೆಣ್ಣಿನ ಜೀವನ ಎಷ್ಟೊಂದು ನೋವು ಸಂಕಟಗಳಿಂದ ಕೂಡಿಕೊಂಡಿದೆ. ಅಸಹಾಯಕಳಾದ ಅವಳು ಸ್ವತಂತ್ರತೆಯಿಂದ ಬಾಳಲು ಬದುಕೇ ಇಲ್ಲದಂತಾಗಿರುತ್ತದೆ. ಅವಳು ಹುಟ್ಟಿದ ಮೂಲವೂ ಬಡತನ, ಹುಟ್ಟಿದ ಮೇಲೂ ಬಡತನ,ಹುಟ್ಟಿ ಬಾಳುವಾಗಲೂ ಬಡತನ, ಮತ್ತೆ ಸಾಯುವಾಗಲೂ ಬಡತನ, ಸತ್ತ ಮೇಲೂ ಬಡತನ, ತನ್ನ ಈ ವೇಶ್ಯಾವೃತ್ತಿಗೆ ಮೂಲ ಕಾರಣ ಬಡತನ. ಆದರೆ ಈ ದಲಿತ ಬಡ ಹೆಣ್ಣುಮಕ್ಕಳ ಶಾಶ್ವತ ಬಡತನಕ್ಕೆ ಕಾರಣವೇನು.....? ಇಂತಹ ಚಿಂತನೆಯೊಂದಿಗೆ ಈ ಕಥೆಯು 'ಸೋನಿ' ಎಂಬ ಪಾತ್ರದ ಮೂಲ ದಲಿತ ಸ್ತ್ರೀ ವೇದನೆಯ ಸಂವೇದನೆಯನ್ನು ತಿಳಿಸುತ್ತದೆ. ಸೋನಿಯ ತಾಯಿ ಗಿರಿಜ ಅವಳಿಗೆ ಇವಳೊಬ್ಬಳೇ ಮಗಳು ಮತ್ತೆ ಮಕ್ಕಳಾಗಲಿಲ್ಲ. ಈ ಕಾರಣಕ್ಕಾಗಿ ಗಿರಿಜೆಯ ಗಂಡ ಮನೆಯಿಂದ ಹೊರಗೆ ಹಾಕುತ್ತಾನೆ. ಅವನಿಗೆ ಗಂಡು ಮಗು ಹುಟ್ಟಲಿಲ್ಲ, ಹೆಣ್ಣು ಹುಟ್ಟಿದೆಯೆಂದು ತಾಯಿ ಮತ್ತು ಮಗಳನ್ನು ಮನೆಯಿಂದ ದೂರ ತಳ್ಳಿದನು.

ಗಿರಿಜ ತನ್ನ ಮಗಳಾದ ಸೋನಿಯನ್ನು ಕರೆದುಕೊಂಡು ಒಂಟಿತನದಿಂದ ಜೀವನವನ್ನು ಸಾಗಿಸುತ್ತಿದ್ದಳು. ಆಕೆಯ ಗಂಡ ನುಡಿದ ಮಾತು 'ಗಂಡಸರಿಂದ ಮನೆ ಅದನ್ನು ಕೊಡದ ಮರವನ್ನು ಇಟ್ಟುಕೊಂಡು ಏನು..? ಪ್ರಯೋಜನ' ಅದು ಅವಳಿಗೆ ನೋವನ್ನು ಕೊಡುತ್ತಿತ್ತು. ಮನೆಗೆ ಶೋಭೆಯನ್ನು ತರುವವರು ಮಹಿಳೆಯರು. ಆದರೆ ಗಂಡಸರು ಮಹಿಳೆಯನ್ನು ಕೇವಲ ಉಪಯೋಗಕ್ಕೆಂದು ಮಾತ್ರ ಇಟ್ಟುಕೊಂಡು ನಂತರ ಬಿಸಿಲಮಳೆಯಲ್ಲಿ ನೆನೆಸುತ್ತಾರೆಂದು ಶಪಿಸುತ್ತಾಳೆ.

ಗಿರಿಜೆಯ ಗಂಡ ಮತ್ತೊಂದು ಮದುವೆಯಾದನು.ಇತ್ತ ಗಿರಿಜಾ ಮತ್ತು ಮಗಳಾದ 'ಸೋನಿ' ಆ ಊರನ್ನು ಬಿಟ್ಟುಬಂದು ಕಷ್ಟದ ಬಡತನದಲ್ಲಿ ಜೀವನ ನಡೆಸುತ್ತಿದ್ದರು. ಚಿಕ್ಕ ವಯಸ್ಸಿಗೆ ಸೋನಿಗೆ ಮದುವೆಯಾಯಿತು. ಅವಳ ಗಂಡನ ಹೆಸರು ಬಾಬು. ಆತನ ಮೊದಲ ಹೆಂಡತಿ ಆತನು ಕೊಡುವ ಚಿತ್ರಹಿಂಸೆಯನ್ನು ತಾಳಲಾರದೆ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದಳು. ಮತ್ತೊಬ್ಬ ಹೆಂಡತಿ ತಾನು ಹೇಳಿದಷ್ಟು ವರದಕ್ಷಿಣೆ ತರಲಿಲ್ಲವೆಂದು ಪ್ರತಿದಿನ ಅವಳನ್ನು ಪೀಡಿಸುತ್ತಿರುವುದರಿಂದ ಅಸು ನೀಗಿದ್ದಳು. ಸೋನಿ ಬಾಬುಗೆ ಮೂರನೇ ಹೆಂಡತಿಯಾಗಿದ್ದಳು.

ವಯಸ್ಸಿನಿಂದ ಬಾಬು ಸೋನಿಗಿಂತ ಅದೆಷ್ಟೋ ದೊಡ್ಡವನಾಗಿದ್ದನು. ಸೋನಿ ಕೋಮಲ ಬಾಲಿಕೆಯಾಗಿದ್ದಳು. ಗಿರಿಜ ತನ್ನ ಬಡತನದ ಕಾರಣದಿಂದ ಹೆಣ್ಣು ಮನೆಯಲ್ಲಿ ಇಟ್ಟುಕೊಳ್ಳುವ ಪಾತ್ರೆಯಲ್ಲ, ಇನ್ನೊಂದು ಮನೆಗೆ ಸೇರಬೇಕಾದ ವಸ್ತು ಅವಳೆಂದು, ಮರ್ಯಾದೆಯ ಪ್ರಶ್ನೆಯಿಂದಲೂ ಸೋನಿಯನ್ನು ಮದುವೆ ಮಾಡಿ ಕೊಟ್ಟಳು.  ಒಬ್ಬ ನಿರ್ಗತಿಕ ತಾಯಿ ಮಗಳನ್ನು ಏನುತಾನೆ ಮಾಡಲು ಸಾಧ್ಯ......? ಕಟುಕರಂತವನಿಗೆ ಕೊಟ್ಟಾದರೂ ತನ್ನ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕಲ್ಲ. ಹೆಚ್ಚಾಗಿ ಬಡತನದಿಂದ ಕೂಡಿರುವ ಮನೆಯಲ್ಲಿ ಯಾವ ಗಂಡಿನ ಆಸರೆಯೂ ಅವರಿಗೆ ಇರಲಿಲ್ಲ. ಸೋನಿಯ ಗಂಡ ತುಂಬಾ ಕುಡುಕನಾಗಿದ್ದ ದಿನರಾತ್ರಿ ಕುಡಿದುಕೊಂಡು ಬಂದು ಆತ ಸೋನಿಯ ಮೇಲೆ ಅನೇಕ ಬಲಾತ್ಕಾರ ಮಾಡಿದನು. ಸೋನಿ ಚಿಕ್ಕವಯಸ್ಸಿನವಳಾಗಿದ್ದಳು. ಅಸಹಾಯಕಳಾಗಿ ಆತನಿಂದ ಗಾಯಗೊಳ್ಳುತ್ತದ್ದಳು. ಪ್ರತಿರಾತ್ರಿ ಕಣ್ಣೀರಿನಲ್ಲಿ ನೆನೆಯುತ್ತಿದ್ದಳು.

ಬಾಬುವಿನ ಬಾಯಿಯಿಂದ ಹೆಂಡದ ದುರ್ಗಧ ಹೊರ ಬರುತ್ತಿತ್ತು. ಅಶ್ಲೀಲವಾದ ಬೈಗುಳಗಳಿಂದ ಸೋನಿಯನ್ನು ಹಿಂಸಾಚಾರ ಮಾಡುತ್ತಿದ್ದನು. ಸೋನಿ ಆತನಿಗೆ ಕಣ್ಣೀರಿನಿಂದ ಮೈಯೊಡ್ಡುವುದು ಅನಿವಾರ್ಯವಾಗಿತ್ತು. ಈ ಹಿಂಸೆಯನ್ನು ತಾಳಲಾರದೆ 'ಸೋನಿ' ಅವನನ್ನು ಬಿಟ್ಟು ಓಡಿ ಹೋಗುತ್ತಾಳೆ. ನಂತರ ಬಾಬು ಇನ್ನೊಬ್ಬಳನ್ನು ತಂದು ಇಟ್ಟುಕೊಳ್ಳುತ್ತಾನೆ. ಒಬ್ಬ ಗಂಡು ಅದೆಷ್ಟು ಹೆಣ್ಣುಗಳನ್ನು ಬೇಕಾದರೂ ಈ ಸಮಾಜದಲ್ಲಿ ತಂದು ಇಟ್ಟುಕೊಳ್ಳಬಹುದು. ಆದರೆ ಒಂದು ಹೆಣ್ಣು ಮಾತ್ರ ಒಬ್ಬ ಗಂಡನಿಗಾಗಿ ಬದುಕಬೇಕು. ಇಲ್ಲದಿದ್ದರೆ ಈ ಸಮಾಜ ಅವಳನ್ನು ವೇಶ್ಯೆಯೆಂದೇ ಕರೆಯುತ್ತದೆ. ಇದು ಪುರುಷ ಸಮಾಜವು ಮಹಿಳೆಯರಿಗೆ ಮಾಡುತ್ತಿರುವ ಅನ್ಯಾಯದ ಶೋಷಣೆಯನ್ನು ಅಭಿವ್ಯಕ್ತಪಡಿಸುತ್ತದೆ. ಸೋನಿ ತನ್ನ ಅಮ್ಮನ ಬಳಿಗೆ ಬಂದು ವೃದ್ಧಾಪ್ಯದಲ್ಲಿ ಅವಳಿಗೆ ಊರುಗೋಲಾದಳು. ಅವರಿಬ್ಬರ ಜೀವನ ಕೇರಿಯಲ್ಲಿ ಸಾಗುತ್ತಿತ್ತು. ದಿನಗಳು ಕಳೆದಂತೆ ಸೋನಿಯ ಸೌಂದರ್ಯಕ್ಕೆ ಊರಿನ ಯುವಕರು ಹುಚ್ಚರಾದರು.

ಯಾವ ಗಂಡಸರ ಆಶ್ರಯವಿಲ್ಲದ ಮನೆಯ ಮೇಲೆ ಕಾಮದ ಕಣ್ಣು ಹಾಕತೊಡಗಿದರು. ಕಾಲ ಉರುಳಿದಂತೆ ಸೋನಿ ತನ್ನ ಮನೆಯ ಹಸಿವನ್ನು ಹಿಂಗಿಸಲು ಕತ್ತಲೆಯೊಂದಿಗೆ ಸಮರ್ಪಿಸಿಕೊಂಡಳು. ಹೊಟ್ಟೆಯ ಹಸಿವು ಅವಳ ಜೀವನವನ್ನು ಬಲಿತೆಗೆದುಕೊಂಡಿತು. ಸೋನಿಗೆ ಕತ್ತಲೆಯೇ ಬದುಕಾಗಿ ಕತ್ತಲೆಯಲ್ಲಿ ಬದುಕನ್ನು ನಡೆಸುತ್ತ ಕೊನೆಗೆ ಅದೇ ಕತ್ತಲು ಸೋನಿಯನ್ನು

ನುಂಗುತ್ತದೆ. ಸೋನಿಗೆ ರಾತ್ರಿಯೂ ಕೂಡ ಹಗಲಿನಂತೆ ಕಾಣುತ್ತದೆ. ರಾತ್ರಿಯ ಕತ್ತಲಿನಲ್ಲಿ ಅವಳ ಬದುಕಿನ ರಹಸ್ಯ ಅಡಗಿಕೊಂಡಿದೆ. ಪ್ರತಿ ರಾತ್ರಿಯು ಹೊಸ ಬದುಕನ್ನು ಪಡೆಯಬೇಕೆಂಬ ಆಸೆಯಿಂದ ರಾತ್ರಿಯನ್ನು ಹಗಲೆಂದುಕೊಂಡು ಬದುಕುತ್ತಿದ್ದಳು. ಭೂಮಿ ಮೇಲಿನ ಬೆಳಕು ಸರಿಯುತ್ತಿದ್ದಂತೆ ಸೋನಿಯನ್ನು ಕತ್ತಲು ಆವರಿಸಿಕೊಂಡು ಬಿಡುತ್ತಿತ್ತು. ಕತ್ತಲಿಗೆ ಮತ್ತೊಂದು ಹೆಸರು ಸೋನಿ ಎಂದು ಹೆಸರನ್ನು ಪಡೆದಳು. ರಸ್ತೆಯ ಬೀದಿ ದೀಪಗಳ ಸಾಲಿನ ಸೋನಿ ಬಂದು ನಿಂತರೆ ನಗರವೇ ಶೋಭಿಸುತ್ತಿತ್ತು.

ಚಂದ್ರಕಳೆಯಂತಿರುವ ಅವಳ ಶರೀರವು ನೋಡುಗರ ಕಣ್ಣು ಕುಕ್ಕುತ್ತಿತ್ತು. ಬಳುಕುವ ಬಳ್ಳಿಯಂತೆ ತನ್ನ ಶರೀರವನ್ನು ಕುಲುಕಾಡಿಸುತ್ತಿದ್ದಳು. ಅವಳು ಹೂವಿನ ಹಾರವನ್ನು ತನ್ನ ಹೆರಳಿಗೆ ಮುಡಿದುಕೊಂಡರೆ ಶಿವನ ತಲೆಯಲ್ಲಿ ಚಂದ್ರ ಹೇಗೋ ಹಾಗೆ ಶೋಭಿಸುತ್ತಿದ್ದಳು. ಅವಳ ಯೌವ್ವನ ಸರ್ವಾಲಂಕಾರಗಳಿಂದ ಹೂವಿನಂತೆ ಮಿಂಚುತ್ತಿತ್ತು. ಆದರೆ ಅವಳ ಭಾವನೆಯು ಹೂವಿನ ಕೆಳಗೆ ಮಲಗಿದ ಕೊಳೆತ ಅನಾಥ ಹೆಣವಾಗಿತ್ತು. ಅವಳ ಶರೀರವನ್ನು ಎಲ್ಲರೂ ನೋಡಿ ಸಂತೋಷಪಟ್ಟರು, ಆ ಶರೀರದ ಮೇಲೆ ಆಸೆ ಪಟ್ಟರು, ಆ ಶರೀರದ ಜೊತೆ ಆಟವಾಡಿದರು, ಆ ಶರೀರಕ್ಕಾಗಿ ಏನೇಲ್ಲ ಮಾಡಿದರು ಆದರೆ ಆ ಶರೀರದಲ್ಲಿರುವ ಸೋನಿಯ ಮನಸ್ಸನ್ನು ಯಾರೂ ನೋಡಲಿಲ್ಲ, ಮಾತನಾಡಿಸಲಿಲ್ಲ, ಆ ಮನಸ್ಸಿನ ಮಾತನ್ನು ಯಾರೂ ಕೇಳಲಿಲ್ಲ, ಅದು ಅವಳಿಗೆ ಮಾತ್ರ ಗೊತ್ತು. ತನ್ನ ಶೃಂಗಾರ ಶರೀರವನ್ನು ಹೊತ್ತುಕೊಂಡು ತಿರುಗುತ್ತಿರುವುದಕ್ಕೆ ಅವಳಲ್ಲಿದ್ದ ವೇದನೆ ಯಾರಿಗೂ ಕಾಣಿಸುವುದಿಲ್ಲ. ಎಲ್ಲರೂ ಅವಳನ್ನು ಬಯಸುತ್ತಾರೆ.

ಆದರೆ ಮತ್ತೇ ಎಲ್ಲರೂ ಅವಳಿಗೆ ಒಂದು ವೇಶ್ಯೆ ಎಂಬ ಪಟ್ಟಕಟ್ಟಿ ದೂರುತ್ತಾರೆ. ಉಪಯೋಗಿಸುದಕ್ಕಾಗಿ ಜೊಲ್ಲು ಸುರಿಸುತ್ತಾರೆ. ಮಾನವೀಯತೆಯಿಂದ, ಮಾನದಿಂದ ಬದುಕಲು ಒಂದು ಹೆಣ್ಣನ್ನು ಯಾರೂ ಬಿಡುವುದಿಲ್ಲ. ಸೋನಿ ತನ್ನ ಸಂಕಷ್ಟಗಳಿಂದ ತುಂಬಾ ಅನುಭವವನ್ನು ಪಡೆದಿದ್ದಾಳೆ. ನನಗೂ ಒಂದು ಒಳ್ಳೆಯ ಮನೆ, ಗಂಡ, ಮಕ್ಕಳು ಸಿಕ್ಕಿದ್ದರೆ ನನಗೆ ಇಂತಹ ಸ್ಥಿತಿಯಲ್ಲಿ ಬದುಕುತ್ತಿರುವ ಅನಿವಾರ್ಯತೆ ಬರುತ್ತಿರಲಿಲ್ಲವೆಂಬ ಕೊರಗು ಅವಳಲ್ಲಿದೆ. ಈಗ ಸೋನಿ ರಸ್ತೆಯಲ್ಲಿ ಗೊತ್ತು ಗುರಿ ಇಲ್ಲದೆ ಸುತ್ತುತ್ತಿರುವ ಒಬ್ಬ ವೇಶ್ಯೆಯಾಗಿದ್ದಾಳೆ. ಅವಳು ಶಹೀದಬಾಗ್, ಭಾಗವತ ಥಿಯಾಟರ್, ಬಸ್‌ಸ್ಟ್ಯಾಂಡ್, ಮಾರ್ಕೆಟ್, ರೈಲ್ವೆ ಸ್ಟೇಷನ್, ಸಂತೆ ಮಾಳ, ಮುಂತಾದ ಕಡೆಗಳಲ್ಲಿ ತನ್ನ ಕಾಲಿಗೆ ಹಸಿವಿನ ಚೀಲವನ್ನು ಕಟ್ಟಿಕೊಂಡು ಜನಗಳನ್ನು ಅರಸಿಕೊಂಡು ಅಲೆಯುತ್ತಿದ್ದಾಳೆ. ಜನಗಳನ್ನು ಮಾತನಾಡಿಸುತ್ತ ಯಾರಾದರೂ ಗ್ರಾಹಕರು ಸಿಕ್ಕರೆ ಮನೋಜ್ ಲಾಡ್ಜ್ ಗೆ ಕರೆದುಕೊಂಡು ಹೋಗುತ್ತಾಳೆ. ಅಲ್ಲಿ ಅವಳಿಗಾಗಿ ಒಂದು ಕೊಠಡಿ ಇದೆ. ಬಂದ ಗ್ರಾಹಕನೊಡನೆ ಕತ್ತಲಲ್ಲಿ ಕಲೆತುಕೊಳ್ಳುತ್ತಾಳೆ.

ಸೋನಿ ರಸ್ತೆಯಲ್ಲಿ ಹೋಡಾಡುವ ಅಸಂಖ್ಯಾತ ಜನಗಳನ್ನು ಮತ್ತೇರಿಸುತ್ತಾಳೆ. ಸೋನಿ ಮನೆಗೆ ಬರುವುದು ತಡವಾದರೆ ಅವಳ ತಾಯಿ ಗಿರಿಜಾ ಕೋಲು ಹಿಡಿದುಕೊಂಡು ಹುಡುಕುತ್ತಾ

ಹೋಗುತ್ತಿದ್ದಳು. ಸೋನಿ, ಸೋನಿ ಎಂದು ಧ್ವನಿ ರಸ್ತೆತುಂಬೆಲ್ಲಾ ಕೇಳುವ ಹಾಗೆ ಕರೆಯುತ್ತಿದ್ದಳು. ಸೋನಿ ಸಾಮಾನ್ಯವಾಗಿ ಮನೆಗೆ ಬೇಗ ಬರುತ್ತಿದ್ದಳು. ಸಂಪಾದಿಸಿಕೊಂಡು ಬರುವ ಮಗಳಿಗಾಗಿ ಗಿರಿಜ ಬಿಸಿನೀರನ್ನು ಕಾಯಿಸಿಡುತ್ತಿದ್ದಳು. ಅವಳು ಬಂದ ನಂತರ ಚೆನ್ನಾಗಿ ಸ್ನಾನ ಮಾಡುತ್ತಿದ್ದಳು. ಇಬ್ಬರೂ ಸೇರಿಕೊಂಡು ಹಣವನ್ನು ಲೆಕ್ಕ ಮಾಡುತ್ತಿದ್ದರು. ಈ ದಿನ ಸಂಪಾದನೆ ಇಷ್ಟೇ ಎಂದು ಮಾತನಾಡಿಕೊಂಡು ಅಂದಿನ ದಿನ ಗ್ರಾಹಕರ ಬಗ್ಗೆ ಚರ್ಚಿಸುತ್ತಿದ್ದರು. ಮಗಳ ಕಥೆಯನ್ನು ಕೇಳುತ್ತಾ ಗಿರಿಜ ಮಲಗಿಕೊಳ್ಳುತ್ತಿದ್ದಳು. ಸಾಮಾನ್ಯವಾಗಿ ಎಲ್ಲರಿಗೂ ರಾತ್ರಿ ಕಳೆದು ಬೆಳಗಾಗುತ್ತದೆ. ಆದರೆ ಸೋನಿಗೆ ಬೆಳಕು ಕೂಡ ರಾತ್ರಿಯಾಗಿರುತ್ತಿತ್ತು. ಸೋನಿ ತನ್ನ ಹಣ ಸಂಪಾದನೆಗಾಗಿ ಹೊರಡುತ್ತಿದ್ದಳು.

ಹೋಗುವಾಗ ತಾಯಿ ಮಗಳಿಗೆ ಬೇಗ ಬಾ ಸಿಕ್ಕಿದ್ದಷ್ಟು ಸಿಗಲಿ ಸುಮ್ಮನೆ ತಡ ಮಾಡಬೇಡ, ಸಿಗಿದಿದ್ದರೆ ಉಪವಾಸ ಮಲಗೋಣ ಆದರೆ ಮನೆಗೆ ಮಾತ್ರ ಬೇಗ ಬಾ ಎಂದು ಹೇಳಿ ಕಳಿಸುತ್ತಿದ್ದಳು. ಹೀಗೆಯೇ ಸೋನಿಯ ಜೀವನ ಸಾಗುತ್ತಿತ್ತು. ಒಂದು ದಿನ "ಸೊನಿ ತಾಯಿಯಾಗುವವಳಿದ್ದಳು ಮನೆಯಲ್ಲಿ ತಿನ್ನುವ ಬಾಯಿ ಹೆಚ್ಚಾಗುವದರಲ್ಲಿತ್ತು. ಅವಳಿಗೆ ಗರ್ಭಪಾತ ಮಾಡಿಸಬೇಕಾಗಿತ್ತು. ಅವಳಿಗೆ ಆಪರೇಷನ್ ಕೂಡ ಮಾಡಿಸುವುದು ಗಿರಿಜಳ ಇಚ್ಛೆಯಾಗಿತ್ತು. ಮಕ್ಕಳೂ ಆಗುವುದಿಲ್ಲ, ಮಾತ್ರವಲ್ಲ ಆಪರೇಷನ್ ಮಾಡಿಸಿಕೊಂಡರೆ ಸ್ವಲ್ಪ ಹಣವೂ ಸಿಗುತ್ತದೆ. ಅವಳು ಒಂದು ಒಳ್ಳೆಯ ಸೀರೆ ಬೇಕೆಂದು ಆಸೆಪಡುತ್ತಿದ್ದಳು. ಶರೀರದಲ್ಲಿ ಉತ್ತಮ ದಿರಿಸುಗಳಿದ್ದರೆ ಒಳ್ಳೆಯ ಗ್ರಾಹಕರು ಬರುತ್ತಾರೆ."[೮] ಸೋನಿ ತಾಯಿಯಾಗಿರುವುದರಿಂದ ಹುಟ್ಟುವ ಮಗುವನ್ನು ನಮ್ಮಿಂದ ಸಾಕಲು ಸಾಧ್ಯವಿಲ್ಲ. ನಾವಿಬ್ಬರೇ ಬದುಕುವುದಕ್ಕೆ ಎಷ್ಟೊಂದು ಹೋರಾಟ ಮಾಡುತ್ತಿದ್ದೇವೆ. ಬಡತನದಲ್ಲಿ ಹೆಣ್ಣಾಗಿ ಹುಟ್ಟಬಾರದು.

ನಾವು ಅನುಭವಿಸಿದಂತ ಕಷ್ಟವನ್ನು ನಮ್ಮ ಮಕ್ಕಳು ಅನುಭವಿಸಬಾರದು. ಮಕ್ಕಳು ಹುಟ್ಟುವುದರಿಂದ ಮತ್ತೆ ಮನೆಯಲ್ಲಿ ಹಸಿವಿನ ಬಾಧೆ ಹೆಚ್ಚಾಗುತ್ತೆಂಬ ಭಾವನೆಯಿಂದ ಮತ್ತು ಮಕ್ಕಳಾಗಬಾರದಂತೆ ಆಪರೇಷನ್ ಮಾಡಿಕೊಂಡರೆ ಸರಕಾರದವರು ಕುಟುಂಬ ಕಲ್ಯಾಣ ಯೋಜನೆಯ ಅಡಿಯಲ್ಲಿ ಪ್ರೋತ್ಸಾಹಧನ ನೀಡುತ್ತಾರೆ. ಅದರಿಂದ ಒಳ್ಳೆಯ ಸೀರೆಗಳನ್ನು ಕೊಂಡು ಕೊಳ್ಳೋಣ ಎಂಬ ಅವರಿಬ್ಬರ ಮಾತುಗಳಲ್ಲಿ ಬಡತನದ ನೋವು ಇದು ಎಷ್ಟೊಂದು ಭೀಕರ ಸ್ಥಿತಿಯನ್ನುಂಟು ಮಾಡಿದೆ ಎಂದು ತಿಳಿಯುತ್ತದೆ. ಬಡತನದಿಂದ ಒಂದು ಗೇಣು ಹೊಟ್ಟೆಯನ್ನು ಬದುಕಿಸಿಕೊಳ್ಳುದಕ್ಕಾಗಿ ಈ ಸಮಾಜದಲ್ಲಿ ಒಂದು ಹೆಣ್ಣು ಪಡುತ್ತಿರುವ ಸಂಕಷ್ಟಗಳು ದಲಿತ ಕುಟುಂಬದ ಮಹಿಳೆಯರು ಪಡುತ್ತಿರುವ ಹಸಿವಿನ ತೀವ್ರತೆಯನ್ನು 'ಸೋನಿ' ಪಾತ್ರದ ಮೂಲಕ ಕಥೆಗಾರರು ತೋರಿಸಿ ಕೊಟ್ಟಿದ್ದಾರೆ. ತನ್ನ ದೇಹವನ್ನು ಮಾರಿಕೊಂಡು ಬಂದರೂ ಬದುಕನ್ನು ನಡೆಸಲು ಸಾಧ್ಯವಿಲ್ಲದಂತ ಬಡತನ ದಲಿತ ಮಹಿಳೆಯರನ್ನು ಆವರಿಸಿದಾಗ ನೆಮ್ಮದಿಯಿಂದ ಈ ಸಮಾಜದಲ್ಲಿ ಬಾಳಬಹುದಾದ ಕನಸು ದಲಿತ ಸ್ತ್ರೀಯರಿಗೆ ಇಲ್ಲದಂತಾಗಿರುತ್ತದೆ.

ಸೋನಿಯ ಬದುಕು ಅವಳ ಜೀವನದ ಅತಂತ್ರದ ಸ್ಥಿತಿ ಎಲ್ಲದಕ್ಕೂ ಅವಳಿಗಾಗಿರುವ ಆರ್ಥಿಕ ಶೋಷಣೆಯಾಗಿರುತ್ತದೆ. ಕೆಲವು ದಿನಗಳ ನಂತರ ಸೋನಿಯ ತಾಯಿಯು ತೀರಿಕೊಳ್ಳುತ್ತಾಳೆ. ಕೇರಿಯ ಜನರೆಲ್ಲ ಸೇರಿಕೊಂಡು ಹನುಮ್ಯಾ, ಮಹಾದ್ಯಾ, ಮತ್ತು ಭೀಮ್ಯಾ ಮುಂತಾದವರು ಗಿರಿಜೆಯ ಚಟ್ಟವನ್ನು ಹೆಗಲಿಗೇರಿಸಿಕೊಂಡು ಅವಳ ಅಂತ್ಯಕ್ರಿಯೆಯನ್ನು ಮುಗಿಸುತ್ತಾರೆ. ಸೋನಿ ಒಂಟಿಯಾಗಿ ಮತ್ತೆ ತನ್ನ ಹಸಿದ ಹೊಟ್ಟೆಯನ್ನು ತುಂಬಿಸಿಕೊಳ್ಳಲು ರಾತ್ರಿ ತನ್ನ ಹೆಜ್ಜೆಗಳನ್ನು ಹಾಕುತ್ತ ಹೋಗುತ್ತಾಳೆ. ಪೊಲೀಸರು ಅವಳನ್ನು ಎಳೆದುಕೊಂಡು ಪೊಲೀಸ್ ಸ್ಟೇಷನ್‌ತ್ತ ಹೋಗುತ್ತಾರೆ. ಸೋನಿಯ ಜೀವನವನ್ನು ಸಾಮಾಜಿಕವಾಗಿ ಶೋಷಿಸಲ್ಪಟ್ಟು ಒಂದು ಸ್ವತಂತ್ರದ ಬದುಕನ್ನು ಕಾಣದೆ, ಒಂದು ದಿನವಾದರೂ ನೆಮ್ಮದಿಯಿಂದ ಮಲಗಿಕೊಳ್ಳಲು ಬಿಡದೆ ಅಸಹಾಯಕತೆಯಿಂದ, ಅತಂತ್ರತೆಯ ಬದುಕಿನಲ್ಲಿ ನರಳಾಡಿಕೊಂಡು ಬದುಕಿದಳು. ಅದಕ್ಕೆ ಕಾರಣ ಈ ಸಮಾಜದಲ್ಲಿ ಬಂಡವಾಳಶಾಹಿಗಳು ದಲಿತರನ್ನು ವಂಚಿಸಿ ಆರ್ಥಿಕ ಶೋಷಣೆಯನ್ನು ಮಾಡಿದ್ದರ ಫಲವಾಗಿದೆ.

ದಲಿತ ಮಹಿಳೆಯರು ಬಡತನದಿಂದ ನರಳಾಡುತ್ತಾ ಆರ್ಥಿಕ ನೆಲೆಯಿಲ್ಲದೆ ಜೀವನವನ್ನು ಅತಂತ್ರತೆಯಿಂದ ಕಳೆಯುತ್ತಿದ್ದಾರೆ. ಅದಕ್ಕೆ ಸಾಕ್ಷಿಯಾಗಿ ಸೋನಿಯ ಜೀವನವು ವಾಸ್ತವದ ನೆಲೆಯಲ್ಲಿ ಕಥೆಗಾರರು ತೋರಿಸಿಕೊಟ್ಟಿದ್ದಾರೆ. ಬಂಡವಾಳಶಾಹಿಗಳು ದಲಿತ ಮಹಿಳೆಯರನ್ನು ಒಂದು ವಸ್ತುವಿನಂತೆ ಬಳಸಿಕೊಂಡು ಬೀದಿಯಲ್ಲಿ ಬಿಸಾಕಿ ಹೋಗುತ್ತಾರೆ. ಅವರಿಗೆ ಬೇಕಾಗಿರುವ ದೇಹದ ತೃಪ್ತಿಯನ್ನು ಪಡೆದುಕೊಳ್ಳುತ್ತಾರೆ. ಆದರೆ ಒಂದು ಹೆಣ್ಣು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂತಹ ಸ್ಥಿತಿಯಲ್ಲಿ ಬದುಕುತ್ತಿರುವುದಕ್ಕೆ ನಾವೇ ಕಾರಣರೆಂದು ಆಲೋಚಿಸುವುದಿಲ್ಲ. ತಮ್ಮ ಮನೆಯ ಹೆಣ್ಣುಮಕ್ಕಳಿಗೆ ಇಂತಹ ಸ್ಥಿತಿ ಬಂದಿದ್ದರೆ ನಮಗೆ ಆಗುತ್ತಿದ್ದ ನೋವಿನ ಪರಿಕಲ್ಪನೆಯನ್ನು ಒಂದು ಸಾರೆ ಬಂಡವಾಳಶಾಹಿಗಳು ತಂದುಕೊಂಡಿದ್ದರೆ ಸೋನಿಯಂತಹ ದಲಿತ ಹೆಣ್ಣುಮಕ್ಕಳು ವೇಶ್ಯೆಯರಾಗಿ ಬೀದಿಯಲ್ಲಿ ನಿಲ್ಲುವಂತ ಸ್ಥಿತಿ ಬರುತ್ತಿರಲಿಲ್ಲ. ಆದ್ದರಿಂದ ಅಧಿಕಾರಿಶಾಹಿಗಳು ದಲಿತ ಹೆಣ್ಣುಮಕ್ಕಳ ಆರ್ಥಿಕ ಭದ್ರತೆಗಾಗಿ ಸಕ್ರಮಗಳನ್ನು ತೆಗೆದುಕೊಳ್ಳಬೇಕು.

ಸಂವಿಧನಾತ್ಮಕ ಆಡಳಿತದ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನಮಾನಗಳು ಸಿಗುವಂತಾಗಬೇಕು. ಸೋನಿ ಮತ್ತು ಅವಳ ತಾಯಿ ಗಿರಿಜ ಅನುಭವಿಸಿದಂತಹ ನೋವುಗಳು ಇಂದು ದಲಿತರಿಗೆ ಶಾಶ್ವತ ಉಡುಗೊರೆಯಾಗಿವೆ. ಮಹಿಳೆಯರಿಗೆ ಸಮಾನವಾದ ಶಿಕ್ಷಣವು ಸಿಕ್ಕಿ, ಅವರು ಸ್ವತಂತ್ರವಾದ ಬದುಕನ್ನು ಕಟ್ಟಿಕೊಂಡು ಸ್ವಾಭಿಮಾನದಿಂದ ಬಾಳಬೇಕು. ಆಗ ದಲಿತ ಸ್ತ್ರೀಯರಿಗೆ ಸ್ವತಂತ್ರ ಲಭಿಸಿದಂತಾಗುತ್ತದೆ. ಇಂತಹ ಆಶಯಗಳನ್ನು ಇಟ್ಟುಕೊಟ್ಟು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಮಹಿಳೆಯರು ಪಡುತ್ತಿರುವ ಆರ್ಥಿಕ ಅಸಮಾನತೆಯನ್ನು ಅದರಿಂದಾಗಿರುವ ಮಹಿಳಾ ಶೋಷಣೆಯನ್ನು ಈ ಕಥೆಯಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ದಲಿತ ಮಹಿಳೆಯರು ಪಡುತ್ತಿರುವ ಆರ್ಥಿಕ ತೊಂದರೆಗಳನ್ನು, ಸಾಮಾಜಿಕ ಸಂಕಷ್ಟಗಳನ್ನು ಸರಕಾರವು ಪರಿಹರಿಸಬೇಕು.

ಸಮಾನತೆಯ ಹಕ್ಕಿನಡಿಯಲ್ಲಿ ಎಲ್ಲರೂ ಬದುಕಬೇಕು. ಬಂಡವಾಳಶಾಹಿಗಳು ದಲಿತ ಮಹಿಳೆಯರ ಮೇಲೆ ಮಾಡುತ್ತಿರುವ ಶೋಷಣೆ ಅತ್ಯಾಚಾರಗಳನ್ನು ನಿಲ್ಲಿಸಬೇಕು ಎಂಬ ಆಶಯದೊಂದಿಗೆ ಈ ಕಥೆಯು ವಾಸ್ತವದ ನೆಲೆಯಲ್ಲಿ ದಲಿತ ಮಹಿಳೆಯರು ಪಡುತ್ತಿರುವ ಸಾಮಾಜಿಕ ಮಾನಸಿಕ ವೇದನೆಗಳನ್ನು 'ಸೋನಿ' ಎಂಬ ಪಾತ್ರ ಚಿತ್ರಣದೊಂದಿಗೆ ಈ ಕಥೆಯು ಸ್ತ್ರೀವಾದದ ನೆಲೆಯಿಂದ ಸ್ತ್ರೀ ಸಂವೇದನೆಗಳನ್ನು ಪ್ರತಿಪಾದಿಸುತ್ತದೆ.

"ಶ್ರೇಷ್ಠ ಅನುವಾದಿತ ಕಥೆಗಳು" ಸಂಪುಟ–೨ಎಂಬ ಕಥಾ ಸಂಕಲನವನ್ನು ವಿವಿಧ ಭಾಷೆಗಳಿಂದ ಬಂದ ಕಥೆಗಳನ್ನು ಸೊಂದಲಗೆರೆ ಲಕ್ಷ್ಮೀಪತಿಯವರು ಕನ್ನಡಿಕರಿಸಿಕೊಟ್ಟಿದ್ದಾರೆ. ಈ ಕಥಾ ಸಂಕಲನದಲ್ಲಿರುವ ತೆಲುಗಿನ ಲೇಖಕರಾದ ಭಾಸು ರವರು ಬರೆದ 'ಆಗಲಿ ಇಟ್ಕೊ' ಎಂಬ ಕಥೆಯು ಒಬ್ಬ ವೇಶ್ಯೆಯ ಜೀವನವನ್ನು ಕುರಿತು ಶೋಧಿಸುತ್ತಿದೆ. ಯೌವ್ವನದಿಂದ ಶೃಂಗಾಭರಿತವಾದ ದೇಹವಿರುವಾಗ ಅದನ್ನು ಬಳಸಿಕೊಂಡ ಅಧಿಕಾರಿಗಳ ವರ್ಗವು ಅದೇ ದೇಹ ಹಣ್ಣಾಗಿ ಬೀದಿಯಲ್ಲಿ ಬಿದ್ದಿರುವಾಗ ಯಾರೂ ಮುಟ್ಟಲು ಸಹ ಮುಂದೆ ಬರದಿರುವುದಿಲ್ಲ. ಒಬ್ಬ ಅಸಹಾಯಕ ಹೆಣ್ಣು ತನ್ನ ಜೀವವಿರುವವರೆಗೆ ದೇಹದಿಂದ ಮತ್ತೊಬ್ಬರನ್ನು ತಣಿಸಿ ಅದರಿಂದ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾಳೆ. ಬಲಹೀನದವರಾದ ದಲಿತ ಮಹಿಳೆಯರು ಬಂಡವಾಳಶಾಹಿಗಳ ಕಪಿಮುಷ್ಟಿಯಲ್ಲಿ ಸಿಲುಕಿ ತಮ್ಮ ಬದುಕನ್ನೇ ನಿರರ್ಥಕಮಾಡಿಕೊಂಡು, ಬದುಕಿನ ನೆಲೆಯಿಲ್ಲದೆ ಬೀದಿ ಬೀದಿಯಲ್ಲಿ ಅಲೆದು, ಬೀದಿಯಲ್ಲಿಯೇ ಬಿದ್ದು ಹೋಗುವ 'ಗುನ್ನಮ್ಮ' ಎಂಬ ವೇಶ್ಯೆಯ ಜೀವನ ಚಿತ್ರಣದೊಂದಿಗೆ ವೇಶ್ಯೆಯರು ಪಡುವ ನರಕಯಾತನೆಗಳಲ್ಲಿ ಬೆಂದು ಬಾಡಿಹೋಗುವ ಶೋಷಿತ ಹೆಣ್ಣಿನ ಕಥೆಯು ಸಮಾಜದಲ್ಲಿರುವ ಅಸಮಾನತೆಯ ಸಂಕೇತವಾಗಿ ಆರ್ಥಿಕ ಶೋಷಣೆಯ ಪ್ರತಿಬಿಂಬವಾಗಿ ಕಥನ ರೂಪದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ನೆಲೆಯಿಲ್ಲದ ನೆಲದಲ್ಲಿ ನೆಮ್ಮದಿಯಿಂದ ನೆಲೆಸುವುದಾದರು ಎಲ್ಲಿ..? ಬದುಕಿಗೆ ಅತ್ಯವಶ್ಯಕವಾದ ವಸತಿ, ಆಹಾರ, ನೀರು, ಮುಚ್ಚಿಕೊಳ್ಳಲು ದೇಹಕ್ಕೆ ಸರಿಯಾದ ಬಟ್ಟೆಗಳಿಲ್ಲದೆ ನಿರಾಶ್ರಿತರಾದ ಹೆಣ್ಣುಮಕ್ಕಳು ಸಮಾಜದಲ್ಲಿ ಜೀವಿಸುವುದಕ್ಕೆ ಇರುವುದಾದ ಮಾರ್ಗ ವೇಶ್ಯಾವಾಟಿಕೆಯಾಗಿದೆ. ಅದನ್ನು ಆ ರೀತಿಯಲ್ಲಿ ಬಂಡವಾಳಶಾಹಿಗಳು ತಮ್ಮ ಕಾಮದಾಸೆಯಿಂದ ತೃಪ್ತರಾಗಲು ಇಂತಹ ಶೋಷಣೆಯ ಜಾಲವನ್ನು ದಲಿತರ ಮೇಲೆ ಕಟ್ಟುತ್ತಲೇ ಇರುತ್ತಾರೆ. ಇದು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ಮಾಡುತ್ತಿರುವ ವಂಚನೆಯ ಅಪರಾಧವಾಗಿದೆ. ಒಂದು ಹೆಣ್ಣು ಈ ವೇಶ್ಯಾವಾಟಿಕೆಯ ಶೋಷಣೆಯಲ್ಲಿ ಸಿಲುಕಿಕೊಂಡರೆ ಮತ್ತೆ ಅದರಿಂದ ಕೇವಲ ರೋಗದ ಮೂಳೆಗಳನ್ನು ಹೊತ್ತುಕೊಂಡು ಬೀದಿಗಿಳಿಯಬೇಕಾಗುತ್ತದೆ. ಇಂತಹ ಸನ್ನಿವೇಶಗಳನ್ನು ಒಳಗೊಂಡ ಕಥೆ 'ಆಗಲಿ ಇಟ್ಕೊ' ಇದು ಶೋಷಿತ ವರ್ಗದವರ ಮೇಲೆ ಮೇಲ್ವರ್ಗದವರು ಮಾಡುತ್ತಿರುವ ನಿರಂತರ ದಂಧೆಯಾಗಿದೆ. ಇದೇ ದಲಿತರ ವ್ಯಥೆಯ ಕಥೆಯಾಗಿರುತ್ತದೆ. ಮುಖ್ಯ ರಸ್ತೆಯ ಹಿಂಭಾಗದಲ್ಲಿ ಕೊಳಚೆ ನಿವಾಸಿಗಳು ವಾಸಿಸುವ ಗೂಡುಗಳು ಸಾಲಾಗಿ ಇದ್ದವು. ಕೊಳಚೆ ನಿವಾಸಿಗಳು ತಿಗಣೆಯಂತೆ ಅಲ್ಲೇ ವಾಸ

ಮಾಡಿಕೊಂಡಿದ್ದಾರೆ. ಆ ಗುಡಿಸಲುಗಳ ಸಾಲಿನಲ್ಲಿ ಗುನ್ನಮ್ಮನದು ಒಂದು ಗುಡಿಸಲು ಮನೆ ಇರುತ್ತದೆ.

ಅವಳು ನೋಡಲು ತುಂಬಾ ನಯನ ಮನೋಹರವಾದ ರೂಪವನ್ನು ಹೊಂದಿರುತ್ತಾಳೆ. ಬದುಕಿನ ಅಭದ್ರತೆಯಿಂದ ಇವಳು ವೇಶ್ಯಾವೃತ್ತಿಯ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಸಾಮಾನ್ಯ ಕೆಲಸಗಾರರಿಂದ ಹಿಡಿದು ಅಧಿಕಾರಿ ವರ್ಗವೂ ಕೂಡ ಅವಳ ಗುಡಿಸಲಿಗೆ ಬಂದು ಹೋಗುತ್ತಿದ್ದಾರೆ. ಕಳೆದ ಆರು ತಿಂಗಳ ಹಿಂದೆ ಪೋಲೀಸರು ವೇಶ್ಯಾವಾಟಿಕೆಗಳ ಮೇಲೆ ರೈಡ್ ಮಾಡಿದಾಗ ಗುನ್ನಮ್ಮ ಮತ್ತು ಇತರೆ ಇಪ್ಪತ್ತೈದು ಮಂದಿ ಹರೆಯದ ವೇಶ್ಯೆಯರ ಜೊತೆ ಅವಳು ಸಿಕ್ಕಿಬಿದ್ದಳು. ಮ್ಯಾಜಿಸ್ಟ್ರೇಟ್‌ರವರಿಗೆ ದಂಡವನ್ನು ಕಟ್ಟಿ ಬಂದಿದ್ದಾಳೆ. ಮುನಿಸಿಪಾಲಿಟಿಯ ಚೇರ್‌ಮನ್ ಆದ ಬುಚ್ಚಿಬಾಬು ಗುನ್ನಮ್ಮನ ಗುಡಿಸಲಿಗೆ ಕಾಮೋದ್ರೇಕದಿಂದ ಹೋಗಿದ್ದು ಹಗರಣದ ರೂಪಕ್ಕೆ ತಿರುಗುತ್ತದೆ. ಹೀಗೆ ಗುನ್ನಮ್ಮ ತನ್ನ ವಯಸ್ಸನ್ನು ಅರವತ್ತರವರೆಗೂ ಹೀಗೇ ಕಳೆದಳು. ಉಕ್ಕಿ ಹರಿಯುವ ಪ್ರಾಯದಲ್ಲಿದ್ದಂತೆ 'ಗುನ್ನಮ್ಮ' ತನ್ನ ಅರವತ್ತರವಯಸ್ಸಿನಲ್ಲೂ ಪಾರಿವಾಳದಂತೆ ಕಾಣುತ್ತಿದ್ದಳು.

ಆಗಾಗೆ ವಯಸ್ಸಿನ ಅಂತರವಿಲ್ಲದೆ ತನ್ನ ದೇಹವನ್ನು ಮತ್ತೊಬ್ಬರಿಗೆ ನೀಡುತ್ತ ತನ್ನ ಬದುಕನ್ನು ನಡೆಸುತ್ತಿದ್ದಾಳೆ. ಕೊನೆಗೊಂದು ದಿನ ಗುನ್ನಮ್ಮ ಮೊಸಾಯಿಕ್ ಮೆಟ್ಟಿಲಿನ ಮೇಲೆ ತನ್ನ ಮೈ,ಕೈ, ಕಾಲುಗಳನ್ನು ಚಾಚಿಕೊಂಡು ಮಲಗಿದ್ದಾಳೆ. ಅದರ ಕೆಲಸಗಾರರು, ಮುನಿಸಿಪಾಲಿಟಿ ನೌಕರರು ಬಂದು ಎಚ್ಚರಿಸಿದರೂ ಮೇಲೆ ಏಳುವುದಿಲ್ಲ. ಕಾರಣ ಅವಳು ಅಶಕ್ತತೆಯಿಂದ ತುಂಬಾ ನಿತ್ರಾಣ ಸ್ಥಿತಿಯಲ್ಲಿ ಕಣ್ಣುಗಳನ್ನು ಅಷ್ಟೆ ತೆರೆದುಕೊಂಡು ಮಲಗಿರುತ್ತಾಳೆ. ಅದರಿಂದ ಅದರ ಗುಮಾಸ್ತ ಮುನಿಸಿಪಾಲಿಟಿ ಕೆಲಸಗಾರರನ್ನು ಇಲ್ಲಿಂದ ಅವಳಿರುವ ಗುಡಿಸಲಿಗೆ ತೆಗೆದುಕೊಂಡು ಹೋಗಲು ಹೇಳುತ್ತಾರೆ. ಹದಿನೈದು ರೂಪಾಯಿಗೆ ಒಪ್ಪಂದವಾಗುತ್ತದೆ. ಬೀದಿಗಳಲ್ಲಿ ಮಲಗಿರುವ ಗುನ್ನಮ್ಮನನ್ನು ನೋಡಲು ಬಂದಿದ್ದ ನೌಕರರು ಅಲ್ಲಿನ ಸುತ್ತ ಮುತ್ತಲಿನ ಕೆಲಸಗಾರ ಪುರುಷವರ್ಗವು ಗುನ್ನಮ್ಮನ ದೇಹವನ್ನು ಅನುಭವಿಸಿದ್ದವರೇ ಆಗಿದ್ದರು. ಅದು ಅವರ ಮನಸ್ಥಿತಿಯಲ್ಲಿ ಕಾಣುತ್ತಿತ್ತು.

ಅವಳ ದೇಹ ಬೀದಿಯಲ್ಲಿ ಕೊಳೆತು ಬಿದ್ದಿರುವುದನ್ನು ನೋಡಿ ಪ್ರತಿಯೊಬ್ಬರು ತಮ್ಮೊಳಗಿನ ಸತ್ಯದಿಂದ ಏನೂ ಮಾತನಾಡದೆ ನಿಂತಿದ್ದರು. ಗುನ್ನಮ್ಮನ ಸುದ್ದಿ ಕೇಳಿ ಆಕೆಯ ಕೇರಿಯ ಗುಡಿಸಲಿನ ನಿವಾಸಿಗಳು ಬಂದು ಅವಳ ದೇಹದ ಮೇಲೆ ಬಿದ್ದು ಅಳುತ್ತಿರುತ್ತಾರೆ.ಅಷ್ಟೊಂದು ಅವರಿಗೆ ತ್ಯಾಗಮಯಿಯಾಗಿ ತನ್ನ ಸಹಾಯವನ್ನು ಮಾಡಿದ್ದಳು. "ಡಿಪಾರ್ಟಮೆಂಟಲ್ ಸ್ಟೋರ್‌ನ ಯಜಮಾನ ಶ್ರೀ ಜಗನ್ನಾಥಸ್ವಾಮಿ ಬಂದ. ಆ ಸದ್ದುಗದ್ದಲದೊಳಕ್ಕೆ ಕಾರಿನಿಂದ ಇಳಿದವನೆ ಸೀದಾ ಪ್ರವೇಶಿಸಿದ. ಅಕೌಂಟ್ಸ ಕ್ಲರ್ಕ ಅವನ ಸಮೀಪ ಹೋಗಿ 'ಬಾಬು, ನಾವು ಮುಳುಗೋದೋ, ಅವಳು ಗುನ್ನಮ್ಮ ಅನ್ನಿಸುತ್ತೆ, ನಮ್ಮ ಸ್ಟೋರ್ಸನ ಬಾಗಿಲಲ್ಲೇ ಸತ್ತೋಗಿದ್ದಾಳೆ.' ಎಂದು ಹೇಳಿದ ಶ್ರೀ ಜಗನ್ನಾಥಸ್ವಾಮಿ ಕಳೆಬರಹದೆಡೆ ಕಣ್ಣಾಡಿಸಿದ ಒಂದು ಸುತ್ತು."[5] ಆಗ ಗುಮಾಸ್ತ ಯಾರೋ ಗುನ್ನಮ್ಮನಂತೆ ನಮ್ಮ ಅಂಗಡಿಯ ಮುಂದೆ ಸತ್ತು ನಮಗೆ ತುಂಬಾ ಕಿರಿಕಿರಿ ತಂದಿದ್ದಾಳೆ ಎನ್ನುತ್ತಾನೆ.

ಆ ಅಂಗಡಿಯ ಮಾಲೀಕನಾದ ಶ್ರೀ ಜಗನ್ನಾಥಸ್ವಾಮಿಗೆ ಇವಳು ಯಾರೆಂದು ಪರಿಚಯವಿರುವಂತೆ, ಅವಳು ಆಗಾಗ ಅಂಗಡಿಗೆ ಬಂದು ಆತನ ಜೊತೆ ಗೇಲಿ ಮಾಡಿ ಬಟ್ಟೆಗಳನ್ನು ತೆಗೆದುಕೊಂಡು ಹೋಗುತ್ತಿದ್ದಳು. ಬಟ್ಟೆ ಖರೀದಿಸುವಾಗ ತುಂಬಾ ಚೌಕಾಸಿ ಮಾಡುತ್ತಿದ್ದಳು. ಅವಳೆಷ್ಟೇ ಚೌಕಾಸಿ ಮಾಡಿದರೂ ಒಂದು ಪೈಸೆನೂ ಬಿಡುತ್ತಿರಲಿಲ್ಲ ಶ್ರೀ ಜಗನ್ನಾಥಸ್ವಾಮಿ. ಕೊನೆಗೆ ಕಾಸು ಕೊಟ್ಟುಬಿಡುತ್ತಿದ್ದಳು. ಆದರೆ ಕ್ಯಾಷ್ ಕೌಂಟರ್ ಬಿಡುವಾಗ "ಕಡಿಮೆ ಮಾಡಿಕೊಳ್ಳಲ್ವಾ ನೀನು....? ಆಯ್ತು ಇಟ್ಕೊ" ಎನ್ನುತ್ತಿದ್ದಳು.ಗುನ್ನಮ್ಮ ಅಲ್ಲಿಂದ ಅಗಲುವ ಮುನ್ನ ನಿತ್ಯ ಅವಳೇಳುವ ಪಲ್ಲವಿ ಇದೇ ಆಗಿತ್ತು. ಅದು ಸತ್ತು ಬಿದ್ದಿದ್ದ ಗುನ್ನಮ್ಮನ ಆ ಪಲ್ಲವಿ ಶ್ರೀ ಜಗನ್ನಾಥಸ್ವಾಮಿಗೆ ನೆನಪಿಗೆ ಬರುತ್ತದೆ. ಆದರೆ ಆ ಅಂಗಡಿಯ ಮಾಲೀಕರಾದ ಶ್ರೀಮಂತ ರಂಗನಾಯಕಲುರವರಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಗುನ್ನಮ್ಮನ ಮಗನನ್ನು ದತ್ತು ಖರೀದಿಸಿ ಸಾಕಿಕೊಂಡಿರುತ್ತಾನೆ. ಆತನೇ ಈ ಜಗನ್ನಾಥಸ್ವಾಮಿ.

ಮಗನನ್ನು ನೋಡಲು ನಿತ್ಯ ಅಲ್ಲಿಗೆ ಬರುತ್ತಿರುತ್ತಾಳೆ ಗುನ್ನಮ್ಮ. ಸೂಳೆ ಸಂತಾನಕ್ಕೆ ಜಾತಿ ಇಲ್ಲ, ಮತ ಇಲ್ಲ, ವರ್ಗವಿಲ್ಲವೆಂದು ತೆಗೆದುಕೊಂಡ ಮಗನೇ ಸತ್ತ ತಾಯಿಯ ದೇಹದ ಮುಂದೆ ನಿಂತಿದ್ದಾನೆ. ಅವಳ ಕಣ್ಣುಗಳು ಮಗನಿಗಾಗಿ ಹುಡುಕಿ ಹುಡುಕಿ ನಿಶ್ಚಲಗೊಂಡಿವೆ. ಆ ನಯನಗಳಲ್ಲಿ ಈಗಲೂ ಮಗನೇ ತುಂಬಿಕೊಂಡಿದ್ದಾನೆ. ಬಡತನದಲ್ಲಿರುವ ದುರ್ಬಲತೆಗಾಗಿ ತನ್ನ ದೇಹವನ್ನು ಮಾರಿಕೊಂಡು ಬದುಕುವ ವೇಶ್ಯೆ ಗುನ್ನಮ್ಮ. ತನ್ನಂತೆ ತನ್ನ ಮಗ ಬಡತನದಲ್ಲಿ ಬೆಳೆಯಬಾರದು ಬೀದಿಯಲ್ಲಿ ನಿಲ್ಲಬಾರದೆಂದು ಮಾರಿಕೊಂಡಿದ್ದಾಳೆ. ಅವಳ ದೇಹ ಮತ್ತು ಅವಳ ಮಗನನ್ನು ಮಾರಿಕೊಂಡು ಬದುಕುತ್ತಿರುವ ವೇಶ್ಯೆ ಗುನ್ನಮ್ಮಳ ಒಳಲೋಕದ ಬರೀ ಬಡತನದ ನೋವು, ಹೆಣ್ಣಿನ ಅಸಹಾಯಕತೆ, ಬದುಕಿನ ದುರ್ಬಲತೆಯೇ ತುಂಬಿಕೊಂಡಿವೆ. ಬಂಡವಾಳಶಾಹಿಗಳು ಕೆಳವರ್ಗದ ಹೆಣ್ಣಿನ ದೇಹದ ಮೇಲೆ ಮಾಡುತ್ತಿರುವ ದೌರ್ಜನ್ಯ ಮತ್ತು ಮಾನಸಿಕ ಕಿರುಕುಳವಾಗಿದೆ.

ಒಂದು ಹೆಣ್ಣು ಆರ್ಥಿಕವಾಗಿ ಶೋಷಣೆಗೊಳಪಟ್ಟು ಬಡತನದಲ್ಲಿ ಬದುಕುತ್ತಿರುವಾಗ ಅವಳಿಗೆ ಮೂಲಭೂತ ಸೌಕರ್ಯಗಳಾದ ಆಹಾರ, ನೀರು, ವಸತಿ, ವಸ್ತ್ರಗಳು ಸಿಗದೆ ಹೋದಾಗ ಅವಳ ದೇಹವೇ ಅವಳಿಗೆ ಆಸ್ತಿಯಾಗಿಬಿಡುತ್ತದೆ. ಅದಕ್ಕೆ ಕಾರಣ ಹೊಟ್ಟೆ ಹಸಿವಿನಿಂದ ಸಮಾಜದಲ್ಲಿ ದುಡಿದು ಬದುಕೋಣವೆಂದು ಹೋದ ಕಡೆಗಳಲ್ಲಿ ಹೆಣ್ಣನ್ನು ದೈಹಿಕ ಬಯಕೆಗಾಗಿಯೇ ಎಲ್ಲರೂ ದುಡಿಸಿಕೊಳ್ಳುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಸಿಲುಕಿಕೊಂಡ ಮಹಿಳೆ ಅನಿವಾರ್ಯವಾಗಿ ತನ್ನ ದೇಹದಿಂದ ಹೊಟ್ಟೆಯನ್ನು ತುಂಬಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ಕೆಲಸವಿಲ್ಲದೆ ಉಪವಾಸ ನರಳಾಡಬೇಕಾಗುತ್ತದೆ. ಕೊನೆಗೆ ಒಂದು ದಿನ ದುಡಿಮೆಯನ್ನು ತನ್ನ ದೇಹವನ್ನು ಮಾರಿಕೊಂಡು ಬದುಕುವ ವೇಶ್ಯಾವೃತ್ತಿಯನ್ನೇ ಆಯ್ಕೆ ಮಾಡಿಕೊಂಡು ಅದರಲ್ಲಿಯೇ ತನ್ನ ಜೀವನವನ್ನು ಕಳೆಯಬೇಕಾಗುತ್ತದೆ. ಆಗ ದೈಹಿಕವಾಗಿ ಮತ್ತು ಮಾನಸಿಕವಾಗಿ ನೋವಿನಲ್ಲಿ ನರಳಾಡಿದರೂ ಅದೇ ವೃತ್ತಿಯೇ ಅವಳಿಗೆ ಅಂತ್ಯವಾಗುತ್ತದೆ.

ಇದು ವೇಶ್ಯಾವೃತ್ತಿಯ ಚಟುವಟಿಕೆಗಳಲ್ಲಿ ಯಾವುದೋ ಕಾರಣಕ್ಕಾಗಿ ಸಿಲುಕಿಕೊಂಡಿರುವ ಪ್ರತಿಯೊಂದು ಹೆಣ್ಣಿನ ಜೀವನದ ಕಥೆಯಾಗಿರುತ್ತದೆ. ಇದನ್ನೇ ಕಥೆಗಾರರು ಈ ಕತೆಯಲ್ಲಿ ವಸ್ತುವನ್ನಾಗಿ ತೆಗೆದುಕೊಂಡು ಗುನ್ನಮ್ಮ ಎಂಬ ಪಾತ್ರದ ಮೂಲಕ ದಲಿತ ಹೆಣ್ಣುಮಕ್ಕಳು ಅನುಭವಿಸುತ್ತಿರುವ ಒಡಲಾಳದ ನೋವುಗಳನ್ನು, ವಾಸ್ತವ ಸಂಗತಿಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಗುನ್ನಮ್ಮ ತಾನು ವಯಸ್ಸಿಗೆ ಬಂದು ಅರವತ್ತೈದು ವರ್ಷಗಳವರೆಗೆ ತನ್ನ ಜೀವನವನ್ನು ವೇಶ್ಯಾವೃತ್ತಿಯಲ್ಲಿ ಕಳೆದು ರೋಗದಿಂದ ನರಳಾಡುತ್ತ, ಬೀದಿಯ ಅಂಗಡಿಯ ಮುಂದೆ ಹೆಣವಾಗಿ ಬಿದ್ದಿರುವುದು, ಅವಳನ್ನು ಕಂಡು ಆಕೆ ಸುಂದರಿಯಾಗಿರುವಾಗ ದೈಹಿಕ ಸಂಪರ್ಕ ಹೊಂದಿದ ಪ್ರತಿಯೊಬ್ಬ ಅಧಿಕಾರಿಶಾಹಿಗಳು ಮತ್ತು ಬಂಡವಾಳಶಾಹಿಗಳು ಮೃತದೇಹವನ್ನು ನೋಡಿ ಅಯ್ಯೋ ಎಂದು ದೂರ ಸರಿದು, ಯಾರೂ ಮುಟ್ಟದೆ ನಿಲ್ಲುವುದಕ್ಕೆ ಗುನ್ನಮ್ಮ ಸರಿಯಾಗಿ ಇದ್ದಾಗ ಅವರಿಗೆಲ್ಲ ಅವಳ ದೇಹ ಬೇಕಾಗಿತ್ತು ಅದನ್ನು ಉಪಯೋಗಿಸಿಕೊಂಡರು.

ಅದೆಲ್ಲದರ ಫಲವಾಗಿ ಗುನ್ನಮ್ಮ ರೋಗದಿಂದ ಬಳಲಿ ಬೀದಿಯಲ್ಲಿ ಹೆಣವಾಗಿದ್ದಾಳೆ. ಇದು ಬಂಡವಾಳಶಾಹಿಗಳು ದಲಿತರನ್ನು ಉಪಯೋಗಿಸಿಕೊಂಡು ನಂತರ ಬೀದಿ ಹೆಣವನ್ನು ಮಾಡುವುದಕ್ಕೆ ಗುನ್ನಮ್ಮ ವಾಸ್ತವದ ನಿದರ್ಶನವಾಗಿದ್ದಾಳೆ. ದಲಿತ ಹೆಣ್ಣುಮಕ್ಕಳ ದೇಹ ಮೇಲ್ವರ್ಗದವರಿಗೆ ಬೇಕು. ಅದಕ್ಕೆ ಅವರಿಗೆ ಅಸ್ಪೃಶ್ಯತೆ ಎಂಬುವುದಿಲ್ಲ. ಆದರೆ ಅದು ತೀರಿದ ಮೇಲೆ ಮತ್ತೇ ದಲಿತ ಹೆಣ್ಣುಮಕ್ಕಳನ್ನು ಬೀದಿಯಲ್ಲಿ ಬೀಳುವಂತೆ ಮಾಡುತ್ತಾರೆ. ಇದು ಈ ಕಥೆಯ ಗುನ್ನಮ್ಮನ ಜೀವನ ಸ್ಥಿತಿಯಾಗಿರುತ್ತದೆ. ತನ್ನ ದೇಹದಿಂದ ಎಲ್ಲರನ್ನೂ ತೃಪ್ತಿಪಡಿಸಿ ತಾನು ಮಾತ್ರ ಏನೂ ತೃಪ್ತಿಪಡದೆ ಬರೀ ನೋವಿನಿಂದ ತನ್ನ ಪ್ರಾಣವನ್ನು ಬಿಡಬೇಕಾಯಿತು. ಇದ್ದ ಒಬ್ಬ ಮಗನ ಜೊತೆ ನಾನು ನಿನ್ನ ತಾಯಿಯೆಂದು ಹೇಳಿಕೊಳ್ಳಲೂ ಸಹ ಸಾಧ್ಯವಾಗದಂತೆ ಆಗುವುದಕ್ಕೆ ಅವಳನ್ನು ವೇಶ್ಯೆಯನ್ನಾಗಿ ಮಾಡಿರುವ ಅಸಮಾನತೆಯ ಸಮಾಜದ ಬಂಡವಾಳಶಾಹಿಗಳೇ ಕಾರಣವಾಗಿರುತ್ತಾರೆ.ಇದು ದಲಿತ ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ಅನ್ಯಾಯದ ಅತ್ಯಾಚಾರವಾಗಿರುತ್ತದೆ. ಇದನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ಗುನ್ನಮ್ಮನ ಪಾತ್ರ ಚಿತ್ರಣದ ಮೂಲಕ ಬಡದಲಿತ ಹೆಣ್ಣುಮಕ್ಕಳು ಇಂದು ಸಾಮಾಜಿಕ ವ್ಯವಸ್ಥೆಯಲ್ಲಿ ವಂಚಿತರಾಗಿ, ಅಸಹಾಯಕತೆಯಿಂದ ವೇಶ್ಯಾವೃತ್ತಿಯಲ್ಲಿ ತೊಡಗಿಕೊಂಡು, ಬಂಡವಾಳಶಾಹಿಗಳಿಗೆ ಬಲಿಯಾಗುತ್ತಿರುವ ದಲಿತ ಸ್ತ್ರೀ ಸಂವೇದನೆಯ ನೋವುಗಳನ್ನು ಸ್ತ್ರೀವಾದದ ನೆಲೆಯಿಂದ ಈ ಕಥೆ ಅಭಿವ್ಯಕ್ತಪಡಿಸುತ್ತದೆ.

ಅಚ್ಯುತ ಕೇಶವ ಭಾಗವತರವರು ಸಂಪಾದನೆ ಮಾಡಿದ 'ಮರಾಠಿ ಸಣ್ಣ ಕಥೆಗಳ ಕಣಜ' ಎಂಬ ಕಥಾ ಸಂಕಲನವನ್ನು ಲ.ಜಿ. ಜೇಂದ್ರೆಯವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇದರಲ್ಲಿರುವ 'ಮನು' ಎಂಬ ಕಥೆಯನ್ನು ಮಾಮಾ ವರೇರಕರರವರು ಬರೆದಿದ್ದಾರೆ. ಈ ಕಥೆಯು ಅನಾಥೆಯಾಗಿರುವ ಒಂದು ಹೆಣ್ಣು ಮಾನಸಿಕವಾಗಿ ಹೇಗೆ ಸಂಕಟಗಳನ್ನು ಅನುಭವಿಸುತ್ತಿರುತ್ತಾಳೆ,

ಆಕೆಯನ್ನು ಸಮಾಜ ನೋಡುವ ಬಗೆ ಹೇಗೆ..? ಅವಳಲ್ಲಿರುವ ಒಳ ಸಂವೇದನೆಗಳು ಯಾವುವು....? ಜನ್ಮಕ್ಕೆ ಕಾರಣರಾದವರು ಕಾರಣಾಂತರಗಳಿಂದ ಒಂಟಿ ಮಾಡಿದ್ದಾರೆ.

ನಿರಂತರ ವಾತ್ಸಲ್ಯದ ಅಭಾವದಿಂದ ಕೊರಗುತ್ತ ಜೀವಿಸುವ ಆ ಹೆಣ್ಣುಜೀವಕ್ಕೆ ನೆಮ್ಮದಿಯ ನೆರಳು ಸಿಗುವುದು ಯಾವಾಗ....? ಅನಾಥರಾದವರಿಗೆ ಒಂದು ಕಡೆ ಅನ್ನದ ಕೊರತೆ, ಅನ್ನ ಇದ್ದು ಅನಾಥರಾದವರಿಗೆ ಸಿಗದಿರುವ ಆದರದ ಕೊರತೆ, ಅನ್ನ ಇದ್ದೂ ಇಲ್ಲದವರ ಅನಾಥರಿಗೆ ಸುರಕ್ಷತೆಯ ಕೊರತೆ, ಈ ಮೂರು ಅವಸ್ಥೆಗಳನ್ನು ಈ ಕಥೆಯಲ್ಲಿ 'ಮನು' ಎಂಬ ಹುಡುಗಿಯ ಜೀವನದುದ್ದಕ್ಕೂ ಕಾಡುತ್ತಿವೆ. ನಾನು ಅನಾಥೆ ಅನ್ನುವುದನ್ನು ಹೋಗಲಾಡಿಸಲು ಅವಳ ಮನಸ್ಸಿನಾಳದಲ್ಲಿ ತನಗೂ ತನ್ನದೇ ಆದ ಸಂಬಂಧವಿದೆ, ಎಂಬ ನಂಬಿಕೆ ಅವಳಲ್ಲಿ ಬೇರೂರಿದಾಗ ಮಾತ್ರ ಅನಾಥ ಪ್ರಜ್ಞೆಯಿಂದ ಮುಕ್ತಳಾಗಲು ಸಾಧ್ಯ. ಅಂತಹ ಸಂಬಂಧಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಿಗುತ್ತಿವೆಯೇ....? ಎಂಬುದನ್ನು 'ಮನು' ಕಥೆಯು ಶೋಧಿಸುತ್ತದೆ. ಯಾಕೆಂದರೆ ವ್ಯಕ್ತಿಯನ್ನು ಗುರ್ತಿಸುತ್ತಿರುವುದು ಲಿಂಗ, ಜಾತಿ, ಧರ್ಮ, ಪಂಗಡಗಳ ಮೇಲೆ ಇವುಗಳೇ ಇವತ್ತಿನ ಮನುಷ್ಯರನ್ನು ಆಳುತ್ತಿರುವಾಗ ಈ ಅನಾಥೆಯನ್ನು ಯಾವ ಜಾತಿ, ಧರ್ಮ, ಪಂಗಡದವರು ಇವಳು ನಮ್ಮವಳೇ ಎಂದು ಸೇರಿಸಿಕೊಳ್ಳುತ್ತಾರೆ.

ಈ ಅನಾಥೆಗೆ ಇವುಗಳು ಯಾರೂ ಎಂದು ಸಹ ಗೊತ್ತಿಲ್ಲ. ಇಂತಹ ಎಳೆಯನ್ನು ಇಟ್ಟುಕೊಂಡು ಮನು ಎಂಬ ಅನಾಥ ಹುಡುಗಿ ಹೇಗೆ ಮತ್ತೇ ಅನಾಥೆಯಾಗುತ್ತಾಳೆ, ಜಾತಿ, ಧರ್ಮ, ಪಂಗಡಗಳು ಹೇಗೆ ಮನುಷ್ಯನ ಮೇಲೆ ಆಳ್ವಿಕೆಯನ್ನು ಮಾಡುತ್ತಿವೆ ಎಂಬುದನ್ನು ಕಥೆಗಾರರು ಈ 'ಮನು' ಕಥೆಯಲ್ಲಿ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಇದು ಕಥೆಯೊಳಗಿನ ಸತ್ಯಕಥೆಯಾಗಿದೆ. ಮುಂಬೈಯ ಗುರುದೇವ ಅನಾಥಾಶ್ರಮದಲ್ಲಿ ಮನುಎಂಬ ಹುಡುಗಿ ಆಶ್ರಯ ಪಡೆದುಕೊಂಡಿದ್ದಾಳೆ. ಅಲ್ಲಿ ಉತ್ತಮವಾದ ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಳು. ಅವಳಿಗೆ ನಾನು 'ಅನಾಥೆ' ಎಂಬುದನ್ನು ಬಿಟ್ಟರೆ ಇನ್ನಾವುದೇ ಕೊರತೆಗಳಿಲ್ಲದಂತೆ ಬೆಳೆಯುತ್ತಿದ್ದಾಳೆ.ಅವಳೊಂದು ದಿನ ರೇಡಿಯೋ ಕಾರ್ಯಕ್ರಮದ ನಿರೂಪಕರಿಗೆ ಪತ್ರವನ್ನು ಬರೆಯುತ್ತಾಳೆ. 'ನಾನು ಈ ಆಶ್ರಮದಲ್ಲಿರುತ್ತೇನೆ. ನನಗೆ ತಂದೆ ತಾಯಿ ಇಲ್ಲ, ನೀವು ಎಲ್ಲರ ಮಾಮಾ ಎಂದು ಹೇಳುತ್ತೀರಿ, ನನ್ನ ಮಾಮಾ ಆಗುವಿರಾ? ನನಗೊಮ್ಮೆ ಬಂದು ಭೇಟಿಯಾಗುವಿರಾ..? ನನ್ನ ಮಾಮನನ್ನು ನೋಡಬಹುದೇ ನಾನು..? ನಿಮ್ಮ ತಂಗಿ ಮಗಳು' ಎಂದು ಬರೆದು ಕಳಿಸಿರುತ್ತಾಳೆ.

ನಿರೂಪಕ ತುಂಬಾ ಸಹೃದಯಿಯಾಗಿರುವುದರಿಂದ ಅವಳಿರುವ ಆಶ್ರಮಕ್ಕೆ ಭೇಟಿ ನೀಡುತ್ತಾನೆ. ಅಲ್ಲಿರುವ ಮೆಟ್ರನ್‌ಳನ್ನು ವಿಚಾರಿಸಿ ಮನುಳನ್ನು ವಿಚಾರಿಸಿದಾಗ ಅವಳ ಕಣ್ಣುಗಳಲ್ಲಿ ನೀರು ಹರಿದು ಬರುತ್ತಿರುತ್ತದೆ. ಮನು ನೋಡಲು ತುಂಬಾ ಮನಮೋಹಕ ಹುಡುಗಿಯಾಗಿರುತ್ತಾಳೆ. ಇವಳು ಉಚ್ಚ ಕುಲದಲ್ಲಿರಬೇಕು. ಇಷ್ಟೊಂದು ಅಂದವಾಗಿರಲು ಎಂದು ನಿರೂಪಕ ಮನದಲ್ಲಿ ಅಂದುಕೊಳ್ಳುತ್ತಾನೆ. ಇವರಿಬ್ಬರಲ್ಲಿ ಸ್ನೇಹಸಂಬಂಧ ಹೂವಾಗಿ ಅರಳುತ್ತಾ ಹೋಗುತ್ತದೆ. ಮನು ಇಷ್ಟು ದಿನ ಒಂಟಿಯಾಗಿ ಕೊರುತ್ತಿದ್ದಳು ಆದರೆ ಈಗ ತುಂಬಾ ಬದಲಾಗಿದ್ದಾಳೆ. ಎಲ್ಲರ ಜೊತೆ ಬೆರೆಯುತ್ತಾಳೆ. ಹೊಸ

ಜೀವನದಲ್ಲಿ ತೇಲುತ್ತಿರುತ್ತಾಳೆ. ಒಂದು ದಿನ ನಿರೂಪಕ ಅವಳನ್ನು ಭೇಟಿಯಾಗಲು ಮತ್ತೊಮ್ಮೆ ಆಶ್ರಮಕ್ಕೆ ಹೋಗುತ್ತಾನೆ.

ಮೆಟ್ರಿನ್‌ಳು ಮನುಳನ್ನು ಯಾರೋ ಒಬ್ಬ ಶ್ರೀಮಂತ ನನಗೆ ಮಕ್ಕಳಿಲ್ಲವೆಂದು ತನ್ನ ಮನೆಗೆ ಕರೆದುಕೊಂಡು ಹೋಗಿದ್ದಾನೆ ಎಂದು ಹೇಳುತ್ತಾಳೆ. ಆದರೆ ಅವಳು ಹೋಗುವಾಗ ನಿಮ್ಮನ್ನೇ ಕೇಳಿದಳು ನೀವು ಅವಳ ಮನೆಗೆ ಭೇಟಿ ನೀಡಬೇಕೆಂದು ಹೇಳಿ ಹೋಗಿದ್ದಾಳೆಂದು ಹೇಳುತ್ತಾಳೆ. ಮೇಟ್ರಿನ್‌ಳು ಕೊಟ್ಟ ವಿಳಾಸವನ್ನು ತೆಗೆದುಕೊಂಡು ಅಲ್ಲಿಗೆ ಹೋದಾಗ ನಿರೂಪಕನಿಗೆ ಆ ಮನೆಯಲ್ಲಿ ಮನು ಸಿಗುವುದಿಲ್ಲ. ಪಕ್ಕದ ಮನೆಯವರು ಅವರು ಕಲ್ಕತ್ತಕ್ಕೆ ಹೋಗಿದ್ದಾರೆ ಎಂದು ಹೇಳುತ್ತಾರೆ. ಕೆಲವು ವರ್ಷಗಳು ಕಳೆದ ನಂತರ ನಾಗಪುರದ ಸ್ನೇಹಸಮ್ಮೇಳನಕ್ಕೆ ಉಪನ್ಯಾಸಕನಾಗಿ ಹೋದಾಗ ಕೊನೆಗೆ ವಂದನಾರ್ಪಣೆಯನ್ನು ಮನು ಮಾಡುತ್ತಿರುತ್ತಾಳೆ. ಅದನ್ನು ಕಂಡ ನಿರೂಪಕ ಸಭೆಯ ಅಧ್ಯಕ್ಷರನ್ನು ಕೇಳುತ್ತಾನೆ. ಇವಳು ಯಾರು ಎಂದು ಅದಕ್ಕೆ ಅವರು ಇವಳ ಹೆಸರು 'ವಿಜಯಾ ದಳವಿ' ಎಂದು ಹೇಳುತ್ತಾರೆ. ಆದರೆ ನಿರೂಪಕ ಆಕೆಯ ಕೆನ್ನೆಯ ಮೇಲಿರುವ ಮಚ್ಚೆಯನ್ನು ನೋಡಿ ಅವಳನ್ನು ಮಾತನಾಡಿಸಿದಾಗ ಅವಳು ಆತನ ಕಾಲಮೇಲೆ ಬಿದ್ದು 'ಮಾಮಾ' ಎಂದು ಅಳುತ್ತಾಳೆ.

ಅವಳನ್ನು ಕರೆದುಕೊಂಡು ಹೋದ ತಂದೆತಾಯಿಗಳು ಅಲ್ಲಿ ಅವಳ ಹೆಸರನ್ನು ಬದಲಾಯಿಸಿರುತ್ತಾರೆ. ಅವಳು ಯಾರಿಗೂ ಅನಾಥೆಯೆಂದು ತಿಳಿಯಬಾರದೆಂದು ಹಾಗೆ ಮಾಡಿರುತ್ತಾರೆ. 'ಮನು' ನಿರೂಪಕರನ್ನು ಕಾರಿನಲ್ಲಿ ತನ್ನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ತಂದೆ ತಾಯಿಯರಿಗೆ ಪರಿಚಯ ಮಾಡಿಸುತ್ತಾಳೆ. ಕೆಲವು ದಿನ ಅಲ್ಲಿ ಇದ್ದು ನಿರೂಪಕರು ಮತ್ತೆ ಮುಂಬೈಗೆ ಬರುತ್ತಾರೆ. ನಂತರ ಮನುಗೆ ಒಬ್ಬ ಶ್ರೀಮಂತ ಮನೆತನದವನ ಜೊತೆ ಮದುವೆ ಆಗುತ್ತದೆ. ಅವಳಿಗೆ ಮದುವೆಯಾದ ತಿಂಗಳೊಳಗೆ ಮನು ತಂದೆತಾಯಿ ತೀರಿಕೊಳ್ಳುತ್ತಾಳೆ. ಅವರು ಮೃತ್ಯುಪತ್ರ ಬರೆಯದೆ ಇರುವುದರಿಂದ ಆಸ್ತಿ ತಮ್ಮನ ಮಗನಿಗೆ ಹೋಗುತ್ತದೆ.

ಕೊನೆಗೆ ಒಂದು ದಿನ ಮನು "ಅತ್ತೆ ಯಾವದೋ ಕಾರಣಕ್ಕಾಗಿ ಮುಂಬೈಗೆ ಹೋದಾಗ, ಅನಾಥಾಶ್ರಮದ ಮೇಟ್ರನ್ನಳು ಭೇಟಿಯಾಗಿದ್ದಳಂತೆ, ಪೂರ್ವದ ಪರಿಚಯ ಆಕೆ ಮನೂಳ ಬಗ್ಗೆ ಎಲ್ಲ ಸಂಗತಿ ಹೇಳಿದಳಂತೆ ಸರಿ. ಮನು ಅನಾಥಾಶ್ರಮದ ಹುಡುಗಿ ಎಂದು ತಿಳಿದ ಕೂಡಲೇ ಅವರೆಲ್ಲರ ಸಿಟ್ಟು ನೆತ್ತಿಗೇರಿತು. ಗಂಡನು ಬೆಂಕಿ ಬೆಂಕಿಯಾದನು. ಅತ್ತೆ ಅದರಂತೆ 'ಯಾವ ಹೊಲಿ–ಮಾದಿಗರ ಹುಡುಗೇನೂ ಯಾರಿಗೆ ಗೊತ್ತು.....! ಹಿಂದೂ ಕೂಡ ಇರಲಿಕ್ಕಿಲ್ಲ......! ಮುಸಲಮಾನ, ಕಿರಿಸ್ತಾನ, ಇಸ್ರಾಯಲ್, ಅಥವಾ ಮತ್ತಾವ ಜಾತಿಯದಾದರೂ ಇರಬಹುದು.....!' 'ಗಂಡನಿಗೂ ಬೇಡಾದ ಮೇಲೆ ನಿರುಪಾಯಳಾಗಿ ಮನೆಯಿಂದ ಹೊರ ಬಿದ್ದು ಇಲ್ಲಿ ಬಂದು ಇದ್ದೇನೆ.' ಹೇಳಿದಳು ಮನು. ಮೊದಲಿನಂತೆಯೇ ಮತ್ತೆ ಅನಾಥಳಾದೆ.."[೧೦] ಜಾತಿ, ಧರ್ಮ, ಪಂಗಡಗಳ ಸುಳಿಯಲ್ಲಿ ಸಿಕ್ಕಿಕೊಂಡ ಮನುಷ್ಯರು ಮನುಷ್ಯತ್ವವನ್ನೇ ಮರೆತುಬಿಟ್ಟಿದ್ದಾರೆ. ಮನುಳನ್ನು ಒಂದು

ಜಾತಿ ಧರ್ಮದ ನೆಲೆಯಲ್ಲಿ ನೋಡಿದರೆ ಹೊರತು ಅವಳೊಬ್ಬ ಮನುಷ್ಯಳೆಂದು ನೋಡಲಿಲ್ಲ. ಪುರೋಹಿತಶಾಹಿಗಳು ಸೃಷ್ಟಿಸಿದ ಈ ವರ್ಣವ್ಯವಸ್ಥೆ ಇಂದು ಯಾವ ರೀತಿಯಾಗಿ ಅಸಹಾಯಕರನ್ನು ಬಲಿ ತೆಗೆದುಕೊಂಡು ಬದುಕಿನ ಜೊತೆ ಆಟವಾಡುತ್ತಿದೆ.

ಮನುಷ್ಯನಿಂದ ಈ ಜಾತಿ, ಧರ್ಮ, ಪಂಗಡಗಳೇ ಹೆಚ್ಚಾ.....! ಎಂಬ ಪ್ರಶ್ನೆಯೊಂದಿಗೆ ಲೇಖಕರು ತಮ್ಮ ಹತಾಶಯದ ಅಭಿವ್ಯಕ್ತಿಯನ್ನು ತೋರಿಸಿದ್ದಾರೆ. ತಂದೆ ತಾಯಿಗಳು ಇಲ್ಲದಿರುವಾಗ ನಾನೊಬ್ಬ ಅನಾಥೆಯೆಂದೆನಿಸಲಿಲ್ಲ. ಅನಾಥಾಶ್ರಮದಲ್ಲಿ ಒಂಟಿಯಾಗಿದ್ದರೂ ಸುಖವಾಗಿಯೇ ಇದ್ದೆನು. ಆದರೆ ನನಗೆ ನನ್ನದೇ ಆದ ಜಾತಿ, ಮತ, ಧರ್ಮಗಳು ಇಲ್ಲದಿರುವಾಗ ನನಗೆಲ್ಲ ಸುಖಗಳು ಒದಗಿ ಬಂದಿದ್ದರೂ, ಅನಾಥೆಯಾಗಿರುವ ಈ ದುಸ್ಥಿತಿಯನ್ನು ಕಂಡು ಮನು ಮಾನಸಿಕವಾಗಿ ನೊಂದುಕೊಂಡು ಬೀದಿಯಲ್ಲಿ ಅನಾಥೆಯಾಗಿ ನಿಲ್ಲುವಂತ, ಈ ಕಥೆಯಲ್ಲಿ ವಾಸ್ತವ ಸಮಾಜದ ಆಚಾರ ವಿಚಾರಗಳನ್ನು ಪರಿಶೀಲನೆಗೆ ಒಳಪಡಿಸಿದಾಗ ಮನುಷ್ಯರಿಗಿಂತ, ಈ ಜಾತಿ, ಮತ, ಧರ್ಮ, ಪಂಗಡಗಳೇ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಇದನ್ನೇ ಈ ಕಥೆಯಲ್ಲಿ ಕಥೆಗಾರರು ಪುರೋಹಿತಶಾಹಿಗಳು ಸೃಷ್ಟಿಸಿ ಹೋದ ಸಂಪ್ರದಾಯಗಳಿಂದ ಮನುಷ್ಯರನ್ನು ಮನುಷ್ಯರಂತೆ ಕಾಣುತ್ತಿಲ್ಲ.

ಜಾತಿ, ಮತ, ಧರ್ಮ, ಪಂಗಡಗಳ ಹೆಸರಿನಲ್ಲಿ ಮನುಷ್ಯರಿಂದ ಮನುಷ್ಯನನ್ನು ಹೇಗೆ ದೂರ ನಿಲ್ಲಿಸಿದ್ದಾನೆ ಎಂಬುದನ್ನು 'ಮನು' ಅವಳ ಪಾತ್ರ ಚಿತ್ರಣದೊಂದಿಗೆ ತೋರಿಸಿಕೊಟ್ಟಿದ್ದಾರೆ. ಜಾತಿ ವ್ಯವಸ್ಥೆಯಿಂದ ಇವರು ಶ್ರೇಷ್ಠರು ಮತ್ತೊಬ್ಬರು ಕನಿಷ್ಠರೆಂದು ಹೊಲೆ ಮಾದಿಗರನ್ನು ದೂರ ಸರಿಸಿ ಸಮಾಜದಿಂದ ಕೀಳಾಗಿ ಕಾಣುತ್ತಿರುವದು ಅದು ಜಾತಿ ವ್ಯವಸ್ಥೆಯು ಸೃಷ್ಟಿಸಿದ ಭೇದವನ್ನು ತೋರಿಸಿಕೊಡುತ್ತದೆ. ಅದರಂತೆ ಧರ್ಮದ ಹೆಸರಿನಲ್ಲಿ ಹಿಂದೂ, ಮುಸಲ್ಮಾನ್, ಕ್ರಿಶ್ಚಿಯನ್, ಇತ್ಯಾದಿ ಧರ್ಮಗಳ ಹೆಸರಿನಲ್ಲಿ ಮನುಷ್ಯತ್ವವನ್ನು ಕಳೆದುಕೊಂಡು ಮನುಷ್ಯ ಮನುಷ್ಯನನ್ನೇ ಅಮಾನವೀಯತೆಯಿಂದ ಪರಸ್ಪರರು ನೋಡುತ್ತಿದ್ದಾರೆ. ಇವೆಲ್ಲವುಗಳ ಪ್ರತಿಫಲವಾಗಿ ಸಮಾಜದ ವ್ಯವಸ್ಥೆಯಲ್ಲಿ ಅಸಮಾನತೆ ಉಂಟಾಗಿರುತ್ತದೆ. ಇದರಿಂದ ಬೆಂದ ಮಹಿಳೆಯರು ಸಾಮಾಜಿಕ ಸ್ಥಾನಮಾನಗಳನ್ನು ಕಳೆದುಕೊಂಡು ಒಬ್ಬೊಂಟಿಯಾಗಿ ಬದುಕುತ್ತಿದ್ದಾರೆ. ಇದನ್ನೇ ಮನು ಅವಳ ಪಾತ್ರ ಅಭಿವ್ಯಕ್ತಿಸುತ್ತದೆ.

ಅನಾಥೆಯಾಗಿ ಹುಟ್ಟಿ ಈ ಜಾತಿ ಧರ್ಮದ ಹೆಸರಿನಿಂದ ಮತ್ತೆ ಅನಾಥೆಯಾಗಿ ಬದುಕುವ ದುರಂತದ ಸ್ಥಿತಿ ಮನು ಅವಳದ್ದಾಗಿದೆ. ಇದು ಪುರೋಹಿತಶಾಹಿಗಳು ಸಾಮಾಜಿಕ ವ್ಯವಸ್ಥೆಗೆ ಮಾಡುತ್ತಿರುವ ಅಸಮಾನತೆಯ ಪ್ರತಿಬಿಂಬದಂತೆ ಕಂಡುಬರುತ್ತದೆ. ಮನು ಅವಳಲ್ಲಿ ಹಣ ಸಂಪತ್ತು ಇರುವಾಗ ಯಾವ ಜಾತಿ, ಧರ್ಮಗಳೂ ಅವಳು ಯಾರೆಂದು ಪ್ರಶ್ನಿಸಲಿಲ್ಲ. ಅವೆಲ್ಲವನ್ನೂ ಕಳೆದುಕೊಂಡ ಮೇಲೆ ಎಲ್ಲ ಜಾತಿ ಧರ್ಮಗಳು ಅವಳನ್ನು ಪ್ರಶ್ನಿಸತೊಡಗಿದವು. ಒಂದು ಮನೆಯಲ್ಲಿ ನಡೆಯುತ್ತಿರುವ ಆರ್ಥಿಕ ಶೋಷಣೆಗೆ ಇದು ಉದಾಹರಣೆಯಾಗಿರುತ್ತದೆ. ಒಂದು ಹೆಣ್ಣು ತನ್ನ ಜೀವನದಲ್ಲಿ ಶಿಕ್ಷಣವನ್ನು ಪಡೆದುಕೊಂಡು ಯಾವುದೇ ಹುದ್ದೆಯನ್ನು ಪಡೆದುಕೊಂಡರೂ

ಜಾತಿ, ಧರ್ಮಗಳು ಮಾತ್ರ ಅವಳನ್ನು ಬದುಕಲು ಬಿಡುವುದಿಲ್ಲ. ಅನಾಥೆಯಾದ ಮನುಗೆ ತಾನು ಯಾರೆಂದು ತಿಳಿದಿಲ್ಲ. ಆದರೆ ಅವಳೊಬ್ಬ ಎಲ್ಲರಂತೆ ಮನುಷ್ಯಳೆಂದು ತಿಳಿದಿದ್ದರೆ ಸಾಕು. ಎಲ್ಲ ಧರ್ಮಗಳು ಪ್ರತಿಯೊಬ್ಬರನ್ನು ಮನುಷ್ಯರಂತೆ ಕಾಣಬೇಕೆಂದು ಪ್ರತಿಪಾದಿಸುತ್ತವೆ.

ಧರ್ಮದ ಹೆಸರಿನಲ್ಲಿ ಒಂದು ಹೆಣ್ಣಿನ ಮೇಲೆ ಶೋಷಣೆ ನಡೆಯುತ್ತಿರುವುದನ್ನು ಕಥೆಗಾರರು ಈ ಕಥೆಯಲ್ಲಿ ಖಂಡಿಸಿದ್ದಾರೆ. ಅದರಂತೆ ಈ ಜಾತಿ, ಧರ್ಮ, ಮತಗಳಿಂದ ಸಮಾಜವು ಸುಸ್ಥಿತಿಯಿಂದ ಇರದೆ ಎಂತಹ ದುಷ್ಪರಿಣಾಮಗಳಿಂದ ಅಸಮಾನತೆಯಲ್ಲಿ ತೇಲಾಡುತ್ತಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಈ ಜಾತಿ, ಧರ್ಮ, ಪಂಗಡ, ಮತಗಳ ಪ್ರಭಾವದಿಂದ ತಮ್ಮನ್ನು ಮರೆತುಕೊಂಡು ಪರಸ್ಪರರು ದ್ವೇಷದಿಂದ ವರ್ತಿಸುತ್ತ ಅಶಾಂತಿಯನ್ನು ಸಮಾಜದಲ್ಲಿ ಉಂಟು ಮಾಡಿದ್ದಾರೆ. ಪುರೋಹಿತಶಾಹಿಗಳ ಈ ಕುತಂತ್ರ ನೀತಿ ಸಂಪ್ರದಾಯಗಳಿಂದ ಇಂದು ಅದೆಷ್ಟೋ ಮನು ಅವಳಂತ ಬಡ ಅನಾಥೆಯರು ಕಣ್ಣೀರಿನಲ್ಲಿ ಬದುಕುತ್ತಿದ್ದಾರೆ. ಎಂಬುವುದನ್ನು ಈ ಕಥೆಯು ತನ್ನ ಸ್ತ್ರೀ ಸಂವೇದನೆಯ ಅಂಬೇಡ್ಕರವಾದದ ನೆಲೆಯಲ್ಲಿ ಸಮಾಜದ ಸ್ತ್ರೀ ಶೋಷಣೆಯ ಗುರುತುಗಳನ್ನು ತೋರಿಸಿಕೊಡುತ್ತದೆ.

ವೆಂ. ಗೋಪಾಲಕೃಷ್ಣರವರು ಕನ್ನಡಿಸಿದ 'ಕಂದರ' ಎಂಬ ಆಯ್ದ ಮಲಿಯಾಳಂ ಕಥಾ ಸಂಕಲನದಲ್ಲಿ ಪುನತ್ತಿಲ್ ಕುಂಞಬ್ದುಲ್ ರವರು ಬರೆದ 'ಒಂದೇ ಪ್ರಪಂಚ' ಎಂಬ ಕಥೆಯಲ್ಲಿ ಸ್ತ್ರೀ ಕೇಂದ್ರಿತ ಕಥೆಯಾಗಿದ್ದು ಒಂದು ಹೆಣ್ಣಿನ ಮೇಲೆ ನಡೆಯುವ ಅತ್ಯಾಚಾರ, ಅದರಿಂದಾಗ ಮಾನಸಿಕ ವ್ಯಥೆಯನ್ನು 'ಪಾಂಚಾಲಿ' ಎಂಬ ಪಾತ್ರದ ಮೂಲಕ ಕಟ್ಟಿಕೊಟ್ಟಿದೆ. ಅವಳು ಮೈನೆರೆದರೆ ಸಾಕು, ಸುತ್ತ ಮುತ್ತಲಿನ ಪುರುಷ ಕೇಂದ್ರಿತಸಮಾಜ ಅವಳನ್ನು ನೋಡುವ ನೋಟವೇ ಬೇರೆಯಾಗಿರುತ್ತದೆ. ಅಂತಹ ಒಂದು ಹೆಣ್ಣು ಶಾಲಾಶಿಕ್ಷಣ ವ್ಯವಸ್ಥೆಯಲ್ಲಿಯೇ ಹೇಗೆ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಶಿಕ್ಷಣವೆಂದರೆ ಕೇವಲ ಅದು ಬೋಧನೆ ಅಲ್ಲ ಅದೊಂದು ಆದರ್ಶ. ಅಲ್ಲಿಂದಲೇ ಅವಳು ಮಾನಸಿಕವಾಗಿ ಸದೃಢವಾಗಬೇಕು. ಅವಳಿಗೆ ಸಿಗಬೇಕಾದ ತತ್ವಾದರ್ಶಗಳು ಕಲಿಕೆಯಿಂದ ಮೈಗೂಡಿಸಿಕೊಳ್ಳುವ ವಾತಾವರಣ ಶಾಲಾಮಂದಿರಗಳಾಗಿರಬೇಕು. ಬೆಳೆಯುವ ಸಿರಿ ಮೊಳಕೆಯಲ್ಲಿಯೇ ಇರುವಾಗ ಮೊಳಕೆಯನ್ನು ಬೆಳಸಿ, ಜ್ಞಾನದ ನೀರು ಗೊಬ್ಬರ ಹಾಕಿ ಹೆಮ್ಮರ ಮಾಡಬೇಕಾದದ್ದು ಶಿಕ್ಷಣದ ವ್ಯವಸ್ಥೆ.

ವ್ಯಕ್ತಿತ್ವದಲ್ಲಿ ಬದಲಾವಣೆಗಳನ್ನು ತಂದು ಸಮಾಜಕ್ಕೆ ಮಾದರಿಯಾಗಿ ನಿಲ್ಲಿಸಬಲ್ಲ ಕಟ್ಟಡಗಳು ಶಾಲೆಗಳಾಗಿರಬೇಕು.ಕೇವಲ ಇಟ್ಟಿಗೆ, ಕಲ್ಲಿನಿಂದ ಕಟ್ಟಿದ ಕಟ್ಟಡಗಳಾಗಬಾರದು. ಒಂದು ಹೆಣ್ಣಿಗೆ ತತ್ವಾದರ್ಶಗಳನ್ನು ಶಿಕ್ಷಣ ವ್ಯವಸ್ಥೆ ಕಲಿಕೆಯಲ್ಲಿ ನೀಡಿದರೆ ಅದು ಅವಳ ಕುಟುಂಬವನ್ನು ಅಷ್ಟೇ ಅಲ್ಲದೆ ಒಂದು ಸಮಾಜವನ್ನು ಸುವ್ಯವಸ್ಥಿತ ರೀತಿಯಲ್ಲಿ ಕಟ್ಟಲು ಸಾಧ್ಯವಾಗುತ್ತದೆ. ಇದನ್ನರಿಯದ ಶಿಕ್ಷಣ ವ್ಯವಸ್ಥೆಯಲ್ಲಿ ಮಾರ್ಗದರ್ಶಕರೆಂದು ಕರೆಸಿಕೊಳ್ಳುವ ಶಿಕ್ಷಕರು ತಮ್ಮ ಶಿಕ್ಷಕಾದರ್ಶಗಳನ್ನೇ ಬದಿಗೊತ್ತಿ ಹೆಣ್ಣಿನ ಮೇಲೆ ಮುಗ್ಧ ಮನಸ್ಸಿನ ಹದಿನಾಲ್ಕುವರ್ಷಗಳು ತುಂಬದ ಪಾಂಚಾಲಿಯ

ಮೇಲೆ ಅತ್ಯಾಚಾರ ಮಾಡುವ ಈ ಒಂದೇ ಪ್ರಪಂಚದ ಈ ಕಥೆಯು ಇಡೀ ಪುರುಷ ಸಮುದಾಯವನ್ನೇ ದೂಷಿಸುತ್ತ, ಒಂದು ಹೆಣ್ಣಿನ ನಿರಂತರ ಕಲಿಕೆಯಲ್ಲಾಗುವ ಬದಲಾವಣೆಗಳಲ್ಲಿ ಆಗುವ ಮಾನಸಿಕ ಸ್ಥಿತಿಯ ಒತ್ತಡಕ್ಕೆ ಕಾರಣವಾದ ಶಿಕ್ಷಣ ಸಂಸ್ಥೆಗಳನ್ನು, ಇಡೀ ಪುರುಷ ಸಮುದಾಯವನ್ನೇ ದಿಕ್ಕರಿಸುವ ಪಾಂಚಾಲಿಯ ಕಥೆ ವ್ಯಥೆಯಿಂದ ತುಂಬಿಕೊಂಡಿದೆ.

ಪಾಂಚಾಲಿಯ ವಯಸ್ಸು ಹದಿನಾಲ್ಕು ಆಗುವವರೆಗೂ ತಂದೆ, ತಾಯಿ, ಅಣ್ಣ, ತಂಗಿ, ತಮ್ಮನ ಜೊತೆ ಆಡಿಕೊಂಡು ತುಂಬಾ ಸಂತೋಷದಿಂದ ದಿಗಳನ್ನು ಕಳೆಯುತ್ತಿದ್ದಳು. ಅವಳಿಗೆ ಪ್ರಾಯ ಪೂರ್ತಿಯಾಯಿತು. ಈ ವಿಷಯ ಸುತ್ತ ಮುತ್ತಲಿನವರೆಗೂ ತಿಳಿಯಿತು. ಅವಳಿಗೇನೋ ತನ್ನಲ್ಲಿ ವ್ಯತ್ಯಾಸ ಕಾಣಲಿಲ್ಲ. ಆದರೆ ಸ್ನಾನವನ್ನು ಮುಗಿಸಿಕೊಂಡು ಕಲಿಯುವುದಕ್ಕಾಗಿ ಶಾಲೆಗೆ ಹೋದಾಗ ಅಲ್ಲಿಂದಲೇ ಅವಳ ಮಾನಸಿಕ ವ್ಯಥೆಯ ಜೀವನ ಪ್ರಾರಂಭವಾಗುತ್ತದೆ. ಶಾಲೆಯಿಂದ ಮನೆಗೆ ಬಂದ ಪಾಂಚಾಲಿ ತನ್ನ ಶಾಲಾ ಚೀಲವನ್ನು ಬಿಸಾಕಿ ಕದವನ್ನು ಹಾಕಿಕೊಂಡು ತನ್ನ ಕೋಣೆಯಲ್ಲಿ ಮಲಗಿದಳು. ಅವಳ ತಾಯಿ ಕದನೂಕಿ ಒಳಗೆ ಹೋಗಿ ನಿನಗೆ ಏನಾಗಿದೆ ಎಂದು ಕೇಳಿದರೆ ಪಾಂಚಾಲಿ ಮಾತನಾಡುವುದೇ ಇಲ್ಲ. ಅವಳ ಬಿಳಿಯ ಬ್ಲೌಜಿನ ಮೇಲೆ ಕೈ ಸವರಿದಾಗ ತಾಯಿ.... ಪಾಂಚಾಲಿ.... ಇಷ್ಟು.... ಬೇಗನೆ....? ಅಯ್ಯೋ ದೇವರೇ ಎಂದು ಎದೆ ಬಡಿದುಕೊಳ್ಳುತ್ತಾಳೆ. ಆ ಅರಚುವುದನ್ನು ಕೇಳಿದ ಸುತ್ತಮುತ್ತಲಿನ ಜನ ಬಂದು ಸೇರುತ್ತಾರೆ. ಏನಾಗಿದೆ ನಿಮ್ಮ ಮಗಳಿಗೆ....? ಎಲ್ಲರೂ ಸೇರಿ ಎಷ್ಟೇ ಕೇಳಿದರೂ 'ಪಾಂಚಾಲಿ' ತನಗಾಗಿರುವ ನೋವನ್ನು ಹೇಳುವುದಿಲ್ಲ.

ಅವಳೇಳುವುದು ಒಂದೇ ಮಾತು 'ನಾನು ಗಂಡಸರಿರುವ ಶಾಲೆಗೆ ಹೋಗುವುದಿಲ್ಲ.' ತಾಯಿ.. ನನ್ನ ಮಗಳಿನ ನೋವಿಗೆ ಕಾರಣರಾದವರು ಯಾರು ಎಂದು ಎಷ್ಟೇ ಕೇಳಿದರೂ ಪಾಂಚಾಲಿ ಹೇಳುವುದಿಲ್ಲ. ಅವಳದ್ದು ಅದೊಂದೇ ಮಾತು ಸಂಜೆಯಾಗುತ್ತದೆ. ಪಾಂಚಾಲಿಯ ತಂದೆ, ಅಣ್ಣ, ತಮ್ಮ, ತಂಗಿ ಮನೆಗೆ ಬರುತ್ತಾರೆ. ಪಾಂಚಾಲಿಯ ತಾಯಿ ಗಂಡನಿಗೆ ನಡೆದ ಎಲ್ಲಾ ವಿಷಯವನ್ನು ಹೇಳುತ್ತಾಳೆ. ತಂದೆ ಮಗಳೆ ನಿನಗೆ ಏನಾಗಿದೆ ಶಾಲೆಯಲ್ಲಿ ಯಾರಾದರೂ ಏನಾದರೂ ಮಾಡಿದರೇ ಎಂದು ಕೇಳಿದರೆ ಅಪ್ಪ ನಾನು ಗಂಡಸರಿರುವ ಶಾಲೆಗೆ ಹೊಗುವುದಿಲ್ಲ ಅಷ್ಟೇ ಎಂದು ಹೇಳುತ್ತಾಳೆ. ಊರಿನ ಜನ ವಯಸ್ಸಿನವರು ಇರುವ ಶಾಲಾ ಶಿಕ್ಷಕರು ಯಾರು ಎನು ಮಾಡಿದರೋ ಎಂದು ಆಡಿಕೊಳ್ಳುತ್ತಿರುತ್ತಾರೆ. ತಂದೆ ಸರಿ ಮಗಳೆ ನಿನಗೆ ನೋವಾಗುವುದಾದರೆ ನಿನ್ನನ್ನು ಹೆಂಗಸರಿರುವ ಶಾಲೆಗೆ ಕಳಿಸುತ್ತೇನೆ ಎಂದು ಹೇಳಿ ಅವಳಿಚ್ಛೆಯಂತೆ ಹೆಂಗಸರಿರುವ ಶಾಲಾ ಶಿಕ್ಷಣ ಸಂಸ್ಥೆಗಳಲ್ಲಿ ಅವಳನ್ನು ಅಭ್ಯಾಸ ಮಾಡಿಸುತ್ತಾರೆ.

ಪಾಂಚಾಲಿ ಯಾವ ಗಂಡಸರ ಸಂಪರ್ಕವಿಲ್ಲದೆ ಬಿ.ಎ ಪಾಸಾಗುತ್ತಾಳೆ. ಮನೆಯಲ್ಲಿ ಬಂದು ಇರುವಾಗ ತಂದೆ, ಅಣ್ಣ, ತಮ್ಮ, ಇವರ್ಯಾರೂ ಇವಳ ಹತ್ತಿರ ಸುಳಿಯುವುದಿಲ್ಲ. ಅಷ್ಟೊಂದು ಪುರುಷ ವಿರೋಧಿಯಾಗಿರುತ್ತಾಳೆ. ಹಾಸ್ಟೆಲ್‌ನಲ್ಲಿ ಕಾಲ ಕಳೆದಿದ್ದ ಪಾಂಚಾಲಿಗೆ ಹೆಚ್ಚು ಹೊತ್ತು

ಗಂಡಸರಿರುವ ಮನೆಯಲ್ಲಿ ಇರುವುದು ಸಾಧ್ಯವಾಗುವುದಿಲ್ಲ. ಮನೆಯಲ್ಲಿ ಅವಳಿಗೆ ಉಸಿರುಗಟ್ಟಿದಂತಾಗಿ ಯಾವುದಾದರೊಂದು ಕೆಲಸ ಮಾಡಬೇಕೆಂದು ಎಂಪ್ಲಾಯ್‌ಮೆಂಟ್ ಆಫೀಸಿನ ಮುಂದೆ ಬಹಳ ಹೊತ್ತು ಉದ್ದನೆಯ ಸರದಿಯಲ್ಲಿ ಕಾಯುತ್ತ ನಿಲ್ಲುತ್ತಾಳೆ. ಅವಳ ಸರದಿ ಬಂತು. ಆಫೀಸರ್ ಕೇಳಿದರು ಏನಮ್ಮ ನಿನಗೆ ಯಾವ ಕೆಲಸ ಬೇಕು. ಆಗ ಪಾಂಚಾಲಿ ಯಾವುದಾದರೂ ಸರಿ ಮಾಡುತ್ತೇನೆ ಎನ್ನುತ್ತಾಳೆ. ಆಫೀಸರ್ ನಿನ್ನದೇ ಆದ ಇಷ್ಟವಾದ ಕೆಲಸವಿರುತ್ತದೆ ಅದನ್ನು ಹೇಳು ಎನ್ನುತ್ತಾರೆ. ಆಗ ಪಾಂಚಾಲಿ 'ಯಾವ ಕೆಲಸವಾದರೂ ಪರವಾಗಿಲ್ಲ ಸಾರ್ ಗಂಡಸರಿಲ್ಲದ ಒಂದು ಸಂಸ್ಥೆಯಾದರೆ ಸಾಕು.'ಎಂದು ಹೇಳುತ್ತಾಳೆ.

ಪಾಂಚಾಲಿಯ ಜೀವನ ಅಷ್ಟೊಂದು ಕಠೋರವಾಗಿದೆ. ಇಂತಹ ಮನಸ್ಥಿತಿಗೆ ಕಾರಣ ಪುರುಷನಿರಬೇಕಲ್ಲವೇ? ತಂದೆ, ಅಣ್ಣ, ತಮ್ಮ ಅವಳು ಸುಖವಾಗಿರಲೆಂದು ಮನೆಯನ್ನೇ ಬಿಟ್ಟು ಹೋಗಿದ್ದಾರೆ.ಅಮ್ಮ, ಅಜ್ಜಿ, ಹಸು, ಕೋಳಿ ಮಾತ್ರವೇ ಅವಳ ಜೊತೆಯಲ್ಲಿ ಬದುಕುತ್ತಿದ್ದಾರೆ. "ಗಂಡಸರಿಲ್ಲದ ಲೋಕದಲ್ಲಿ ಪಾಂಚಾಲಿ ಜೀವನವನ್ನು ಪ್ರಾರಂಭಿಸಿದಳು. ಗಂಡಸರನ್ನು ಕಾಣದೆ, ಗಂಡಸರ ಶಬ್ದ ಕೇಳದೆ, ಗಂಡಸರ ಉಸಿರು ಸೋಕದೆ ಸುಮಾರು ದಿನಗಳನ್ನು ತಳ್ಳಿದಳು ಪಾಂಚಾಲಿ. ಪೂರ್ಣ ಏಕಾಂತ ಜೀವನ ಅವಳದು. ಆದರೇನು ಪ್ರಯೋಜನ ಪುರುಷರನ್ನು ಇಷ್ಟೊಂದು ದ್ವೇಷಿಸಿದರೂ ಪಾಂಚಾಲಿಗೆ ಹೀಗಾಯಿತಲ್ಲ ಎಂದು ತಾಯಿ ಸಂಕಟಪಡುತ್ತ ಎದೆ ಹೊಡೆದುಕೊಂಡು ಕೂಗಿಕೊಂಡಳು. ಪಾಂಚಾಲಿ ಆಗ ಹುಣಸೆ ಮರದ ಮೇಲೆ ಕುಳಿತು ವಾಕರಿಸುತ್ತಿದ್ದಳು. ಆಗಲೂ ಅವಳು ಶಪಿಸಿದಳು ಒಬ್ಬ ಗಂಡಸನ್ನಲ್ಲ ಅವಳು ಶಪಿಸಿದ್ದು ಇಡೀ ಗಂಡಸರ ಸಮೂಹವನ್ನು."[೧೧] ಪಾಂಚಾಲಿಯ ಇಂತಹ ದುಸ್ಥಿತಿಗೆ ಗಂಡಸರೇ ಕಾರಣವಾಗಿದ್ದಾರೆ.

ಯಾರಿಗೂ ಹೇಳಿಕೊಳ್ಳಲಾರದ ಚಿಂತನಾ ಲೋಕದಲ್ಲಿ ಮುಳುಗಿದ್ದಾಳೆ. ಇಂದು ಅಧಿಕಾರಕೇಂದ್ರಿತ ಪುರುಷ ಸಮಾಜವು ಒಂದು ಹೆಣ್ಣನ್ನು ನೋಡುವ, ಅವಳನ್ನು ಬಳಸಿಕೊಂಡು ಅತ್ಯಾಚಾರ ಮಾಡುವ ಘಟನಾವಳಿಗಳನ್ನು ಒಂದೇ ಪ್ರಪಂಚ ಕಥೆಯು ಪ್ರಸ್ತುತಪಡಿಸುತ್ತಿದೆ. ಇದೊಂದು ಹೆಣ್ಣಿನ ಮೇಲೆ ಎಸಗುತ್ತಿರುವ ದೌರ್ಜನ್ಯ, ಅತ್ಯಾಚಾರಗಳ ಸಂಕೇತವಾಗಿ ಈ ಕಥೆ ನಿರೂಪಿಸಲ್ಪಟ್ಟಿರುತ್ತದೆ. ಹಾಗೆಯೇ ಹೆಣ್ಣಿನ ಒಳ ಸಂವೇದನೆಗಳನ್ನು ಕೆದಕಿ ಹೊರಹಾಕುತ್ತಿದೆ. ಒಂದೇ ಪ್ರಪಂಚದಲ್ಲಿ ಪುರುಷರೆಲ್ಲರೂ ಒಂದೇ ಆಗಿದ್ದಾರೆಂದು 'ಪಾಂಚಾಲಿ' ತನ್ನ ಜೀವನದಲ್ಲಿ ಗಂಡಸರನ್ನೇ ದೂಷಿಸುವುದಕ್ಕೆ ಕಾರಣ ಅವಳು ಬಾಲಕಿಯಾಗಿದ್ದಾಗ ಶಾಲಾ ವ್ಯವಸ್ಥೆಯಲ್ಲಿದ್ದ ಪುರುಷವೆಂಬ ಶಿಕ್ಷಕರಿಂದಲೇ ಅತ್ಯಾಚಾರವನ್ನು ಅನುಭವಿಸುತ್ತಾಳೆ. ನಂಬಿಕೊಂಡು ಶಿಕ್ಷಕರಲ್ಲಿ ಅಕ್ಷರದ ಜ್ಞಾನವನ್ನು ಕಲಿಯಲೆಂದು ಹೋದ ಸಮಯದಲ್ಲಿ ಅವಳ ಮೇಲೆ ನಡೆದಿರಬಹುದಾದ ಅತ್ಯಾಚಾರದಿಂದ ತಾನು ಇನ್ನುಮುಂದೆ ಪುರುಷರಿರುವ ಶಾಲೆಯನ್ನು ತಿರಸ್ಕರಿಸುತ್ತಾಳೆ.

ಅದರಂತೆ ಕಂಪನಿಯೊಂದರಲ್ಲಿ ಪುರುಷರಿಲ್ಲದ ಕಂಪನಿಯಲ್ಲಿ ಕೆಲಸ ಬೇಕೆಂದು ಕೇಳುವುದರಲ್ಲಿ ಅಲ್ಲಿಯೂ ಅವಳ ಮೇಲೆ ಎಸಗಿರಬಹುದಾದ ಅತ್ಯಾಚಾರವನ್ನು ಸೂಚಿಸುತ್ತದೆ. ಕೊನೆಗೆ ತನ್ನ

ತಂದೆ, ಅಣ್ಣ, ತಮ್ಮಂದಿರಿಂದಲೇ ದೂರ ಇರುವುದಕ್ಕೆ ಅವಳು ಅಲ್ಲಿಯೂ ನಂಬಿಕೆಯನ್ನು ಕಳೆದುಕೊಂಡಿರುವುದು ಕಂಡುಬರುತ್ತದೆ. ಒಂಟಿತನದಲ್ಲಿ ತನ್ನ ಜೀವನ ನಡೆಸಬೇಕೆಂಬ ಅವಳ ಮನದಾಸೆಯಲ್ಲಿ ಇಡೀ ಪುರುಷಕೇಂದ್ರಿತ ವ್ಯವಸ್ಥೆಯನ್ನೇ ಧಿಕ್ಕರಿಸುತ್ತಿದ್ದಾಳೆ. ಅದಕ್ಕೆ ಕಾರಣ ಪುರುಷರಿಂದ ಅವಳಿಗಾಗಿರುವ ಅತ್ಯಾಚಾರದ ಅನ್ಯಾಯವನ್ನು ಆದೇಶದ ಮೂಲಕ ಹೊರಹಾಕುತ್ತದೆ. ಇಷ್ಟೆಲ್ಲ ಪುರುಷರನ್ನು ದ್ವೇಷಿಸಿದಅವಳು ಯಾವ ಪುರುಷರ ಸ್ನೇಹವಿಲ್ಲದಿದ್ದರೂ ತಾನು ಗರ್ಭಿಣಿಯಾಗಿ ಮರದ ಮೇಲೆ ಕುಳಿತುಕೊಂಡು ಹುಣಸೇ ಹಣ್ಣು ತಿನ್ನುತ್ತ ಪುರುಷ ಸಮಾಜವನ್ನೇ ದ್ವೇಷಿಸುತ್ತಿರುವುದಕ್ಕೆ ಪಾಂಚಾಲಿಯಂತ ಒಂದು ಹೆಣ್ಣು ತಾನು ಬೆಳೆದು ದೊಡ್ಡವಳಾಗಿ ತನ್ನ ಜೀವನವನ್ನು ಕಟ್ಟಿಕೊಳ್ಳುತ್ತಾಳೆ.

ಸ್ವತಂತ್ರದಿಂದ ಬದುಕುವ ಶಕ್ತಿಯನ್ನು ಪಡೆದುಕೊಂಡು, ಸ್ವತಂತ್ರದ ಆಲೋಚನಾ ಶಕ್ತಿಯನ್ನು ಗಳಿಸಿಕೊಳ್ಳುವದರೊಳಗಾಗಿ ಅವಳ ಮೇಲೆ ಹಂತ ಹಂತವಾಗಿ ನಡೆಯುತ್ತಿರುವ ಅತ್ಯಾಚಾರಗಳ ಸೂಚಕವಾಗಿ ಈ ಕಥೆಯಲ್ಲಿ ಕಥೆಗಾರರು ಹೆಣ್ಣಿನ ಮನೋವ್ಯಥೆಯ ಚಿತ್ರಣವನ್ನು ತೋರಿಸಿಕೊಟ್ಟಿದ್ದಾರೆ. ಒಂದು ಹೆಣ್ಣು ನಿರ್ಭೀತಿಯಿಂದ ಸ್ವತಂತ್ರವಾಗಿ ಏನನ್ನಾದರೂ ಸಾಧಿಸಬೇಕು. ನಾನು ಪುರುಷರಂತೆ ಸಮಾನವಾಗಿ ಬಾಳಬೇಕು. ನಾನು ಎಲ್ಲವನ್ನೂ ಕಲಿಯಬಲ್ಲೆ, ಎಲ್ಲವನ್ನೂ ಮಾಡಬಲ್ಲೆ, ನನಗೂ ನನ್ನದೇ ಆದ ಕನಸುಗಳಿವೆ ಅವುಗಳನ್ನು ಸಾಧಿಸುವ ಹಂಬಲ, ಛಲ ಎರಡೂ ನನ್ನಲ್ಲಿವೆ. ಆದರೆ ನಾನು ಹೆಣ್ಣು ಎನ್ನುವ ಕಾರಣಕ್ಕಾಗಿ ಈ ಬಲಿಷ್ಠ ಪುರುಷ ಸಮಾಜವು ನಾನು ಎಲ್ಲಿಯೇ ಹೋದರೂ ಕಾಮದ ದೃಷ್ಟಿಯಲ್ಲಿ ನನ್ನನ್ನು ನೋಡುತ್ತದೆ. ನನ್ನನ್ನು ದೈಹಿಕವಾಗಿ ಶೋಷಣೆಯನ್ನು ಮಾಡುತ್ತಿದ್ದಾರೆ. ಇದರಿಂದಾಗಿ ನಾನು ಪುರುಷಸಮಾಜವನ್ನು ದ್ವೇಷಿಸುತ್ತೇನೆ ಎಂಬ ಮನೋಭಾವದಿಂದ ಪಾಂಚಾಲಿ ಈ ಕಥೆಯಲ್ಲಿ ತಾನು ಯಾರಿಗೂ ಹೇಳಲಾರದಂತಹ ಒಳನೋವುಗಳಲ್ಲಿ ಬದುಕುತ್ತಿದ್ದಾಳೆ.

ಬಹಿರಂಗವಾಗಿ ಪುರುಷರು ಮಾಡುವ ಅತ್ಯಾಚಾರಗಳನ್ನು ಸ್ತ್ರೀಯರ ಮೇಲೆ ಅವರಿಗಿರುವ ವರ್ತನೆಗಳನ್ನು ತನ್ನಲ್ಲಿಯೇ ಮರೆಮಾಚಿಕೊಂಡು ಅವರಿಂದ ಅತ್ಯಾಚಾರಕ್ಕೆ ಒಳಗಾಗಿ, ಗರ್ಭಿಣಿಯಾಗಿ ಮರದಲ್ಲಿ ಕುಳಿತುಕೊಂಡಿದ್ದಾಳೆ. ಇಂತಹ ಘಟನೆಗಳನ್ನು ವಾಸ್ತವದ ನೆಲೆಯಲ್ಲಿ ಕಂಡ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಹೆಣ್ಣಿನ ನೋವುಗಳನ್ನು ಗ್ರಹಿಸಿಕೊಂಡು ಈ ಒಂದೇ ಪ್ರಪಂಚ ಕಥೆಯಲ್ಲಿ ಒಂದೇ ಪುರುಷರ ದುರ್ವರ್ತನೆಗಳನ್ನು ಪಾಂಚಾಲಿ ಪಾತ್ರದ ಮೂಲಕ ತೋರಿಸಿಕೊಟ್ಟದ್ದಾರೆ. ಹೆಣ್ಣಿನ ಒಳ ಸಂವೇದನೆಗಳನ್ನು ಅವರ ಸಾಮಾಜಿಕ ಸ್ಥಾನಮಾನಗಳನ್ನು ಹೇಗೆ ಪುರುಷ ಸಮಾಜ ಶೋಷಣೆಗೆ ಒಳಪಡಿಸಿದೆ ಎಂಬುದನ್ನು ದಲಿತ ಸ್ತ್ರೀ ಸಂವೇದನೆಗಳ ಮೂಲಕ ಅಂಬೇಡ್ಕರವಾದದ ನೆಲೆಯಲ್ಲಿ ಈ ಕಥೆಯು ತನ್ನ ಸ್ತ್ರೀ ಪರ ಕಾಳಜಿಯನ್ನು ಪ್ರತಿಪಾದಿಸುತ್ತದೆ.

### ೪.೪. ಮಹಿಳಾ ಶೋಷಣೆ ಮತ್ತು ದಲಿತ ಮಹಿಳಾ ಬದುಕಿನ ಚಿತ್ರಣ

ಗುರುಮೂರ್ತಿ ಪೆಂಡಕೂರುರವರು ಅನುವಾದ ಮಾಡಿದ 'ಅನುವಾದ ಕಥಾಂಜಲಿ' ಎಂಬ ತೆಲುಗು ಕಥಾ ಸಂಕಲನದಲ್ಲಿರುವ 'ಮಸಿ ಬಟ್ಟೆ' ಎಂಬ ಕಥೆಯನ್ನು ಕುಪ್ಪಲಿ ಪದ್ಮರವರು ಬರೆದಿದ್ದಾರೆ. ಈ ಕಥೆಯು ಒಂದು ಮನೆಯ ಹೆಣ್ಣು ಮತ್ತು ಅಡುಗೆ ಮನೆಯಲ್ಲಿರುವ 'ಮಸಿ ಬಟ್ಟೆ'

ಅವೆಷ್ಟು ಅತ್ಯವಶ್ಯಕವಾಗಿದ್ದರೂ ಅವುಗಳನ್ನು ಕಡೆಗಣಿಸಿ, ಅವುಗಳ ಮಹತ್ವವನ್ನು ಅರಿಯದೆ ಶೋಷಣೆಗೊಳಪಡಿಸುವ ಪುರುಷಕೇಂದ್ರಿತ ಸಮಾಜಕ್ಕೆ ಕನ್ನಡಿ ಹಿಡಿದಂತೆ ಈ ಕಥೆಯು ಅನಾವರಣಗೊಂಡಿದೆ. ಮನೆಯಲ್ಲಿ ಎಷ್ಟೆಲ್ಲಾ ವಸ್ತುಗಳಿದ್ದರೂ ಅಡುಗೆ ಕೋಣೆಯಲ್ಲಿ ಮಸಿಬಟ್ಟೆಯಿರದಿದ್ದರೆ ಅಡುಗೆಯನ್ನು ಮಾಡಲು ಅದೆಷ್ಟು ಕಷ್ಟವಾಗುತ್ತದೆ. ಆದರೆ ಅದೇ ಮಸಿ ಬಟ್ಟೆಯು ನಿರುಪಯೋಗವೆಂದು ಮನೆಯಲ್ಲಿ ತಿಳಿದಿರುತ್ತಾರೆ. ಅಡುಗೆ ಮಾಡುವ ಸರಿಯಾದ ಸಮಯಕ್ಕೆ ಮಸಿಬಟ್ಟೆ ಕೈಗೆ ಸಿಗದೆ ಹೋದರೆ ಅಂದಿನ ಅಡುಗೆಯ ರುಚಿಯೇ ಬದಲಾಗಿರುತ್ತದೆ.

ಅನ್ನ ಬಸಿಯುವಾಗ, ಬಿಸಿಯಿಟ್ಟ ಸಾರಿನ ಪಾತ್ರೆಯನ್ನು ಕೆಳಗಿಳಿಸುತ್ತಿರುವಾಗ, ಪಲ್ಯವನ್ನು ಕಲಸುತ್ತಾ ಪಾತ್ರೆ ಕದಲದಂತೆ ಹಿಡಿಯುವಾಗ, ಆಗಲಿ.. ಒಲೆಯ ಮೇಲಿನ ಪಾತ್ರೆಯನ್ನು ಇಳಿಸುವಾಗ ಆಗಲಿ, ಕೈ ಒರೆಸಿಕೊಳ್ಳುವಾಗ ಆಗಲಿ... ಮಸಿಬಟ್ಟೆ ಬೇಕೇ ಬೇಕು. ಆದರೂ ಅದನ್ನು ನೋಡುವ ದೃಷ್ಟಿಕೋನ ಬೇರೆಯೇ ಆಗಿರುತ್ತದೆ. ಯಾವುದು ಇಲ್ಲದಿದ್ದರೆ ನಡೆಯುವುದಿಲ್ಲವೋ ಅದೇ ಜನರ ಕಣ್ಣಲ್ಲಿ ಕಟ್ಟ ಕಡೆಯದಾಗಿ ಕಾಣುತ್ತಿರುತ್ತದೆ. ಅದರಂತೆ ಒಂದು ಮನೆಯಲ್ಲಿ ಹೆಣ್ಣು ಆ ಮನೆಗೆ ಮೂಲಾಧಾರ. ಅವಳಿಲ್ಲದಿದ್ದರೆ ಮನೆಯಲ್ಲಿ ಏನೂ ನಡೆಯಲಾರದು. ದಿನನಿತ್ಯದ ಸಂಸಾರದಲ್ಲಿ ಹೆಣ್ಣು ಬೇಕೇ ಬೇಕು. ಜೀವ ನೀಡಿ, ಜೀವ ತೇಯ್ಯುವ ಆ ಜೀವವನ್ನು ಅದು ಕೇವಲ ಹೆಣ್ಣೇ ಎಂದು ಜರಿಯುವ ಪುರುಷಪ್ರಧಾನ ಸಮಾಜವೂ ಮನೆಯ ನಂದಾದೀಪವಾದ ಹೆಣ್ಣನ್ನು ಮಸಿಬಟ್ಟೆಯಂತೆ ಕಾಣುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ ಎಂದು ಈ ಕಥೆಯಲ್ಲಿ ನಿರೂಪಿತವಾಗಿದೆ. ತಾನು ಹೆತ್ತು ಬೆಳೆಸಿದ ಮಕ್ಕಳು ಅವಳನ್ನು ಗಮನಿಸುವುದಿಲ್ಲ. ಅವಳ ಮಾತನ್ನು ಕೇಳುವುದಿಲ್ಲ.

ತನ್ನ ಮುಂದೆ ಆಡಿ ಓಡಾಡಿ, ಓದಿದ ಮಕ್ಕಳು, ಬೆಳೆದುದೊಡ್ಡವರಾದಾಗ ನಂತರ ನಿನಗೇನು ಗೊತ್ತಿದೆ ಎಂದಾಗ ಹಡೆದ ಜೀವಕ್ಕೆ ಆಗುವ ನೋವು, ಮಕ್ಕಳು ತಾಯಿಯನ್ನು ಅಲಕ್ಷ್ಯ ಮಾಡಿದಾಗ ಅವಳ ಮನಸಿಗೆ ಆಗುವ ವೇದನೆ, ಸಂಕಟ ಯಾರಿಗೆ ಹೇಳಬೇಕು. ಆದರೆ ಅವಳು ಎಲ್ಲರಿಗೂ ಬೇಕೇ ಬೇಕು. ಅವಳನ್ನು ಉಪಯೋಗಿಸುವುದಕ್ಕಾಗಿ ಅವಳು ಬೇಕು.ಅವಳಿಗೂ ಅವಳದೇ ಆದ ಮನಸ್ಸು ಇದೆ, ಹೃದಯದ ಸಂವೇದನೆಗಳಿವೆ ಎಂದು ಯಾರು ಗುರುತಿಸುವದಿಲ್ಲ. ಅವಳನ್ನು ಮಸಿಬಟ್ಟೆಯಂತೆಯೇ ನೋಡುತ್ತಿದ್ದಾರೆ.ಇದು ಸ್ತ್ರೀ ಕುಲದ ಸಮಾಜಕ್ಕೆ ಪುರುಷ ಕೇಂದ್ರಿತ ಸಮಾಜವು ಮಾಡುತ್ತಿರುವ ಶೋಷಣೆಯೇ ಆಗಿದೆ. ಕಥಾ ನಾಯಕಿ ಜಾನಕಿ ತನ್ನ ಮನೆಯಲ್ಲಿ ತನ್ನನ್ನು ಮಸಿಬಟ್ಟೆಯಂತೆ ಕಾಣುತ್ತಿರುವ ಮನೆಯವರನ್ನು ಕಂಡು ಯಾರಿಗೂ ಹೇಳಿಕೊಳ್ಳಲಾಗದೆ ತನ್ನ ಅಂತರಂಗದಲ್ಲಿಯೇ ತನ್ನೆಲ್ಲಾ ನೋವುಗಳನ್ನು ಅನುಭವಿಸುತ್ತಿದ್ದಾಳೆ.

ಇದನ್ನು ಸೂಕ್ಷ್ಮ ಸಂವೇದನೆಯ ಮೂಲಕ ಅರಿತ ಲೇಖಕರು "ಮಸಿಬಟ್ಟೆಯನ್ನು ಯಾರೇ ಆಗಲಿ, ಎಂದೇ ಆಗಲಿ, ಅದೊಂದು ಮಹತ್ವದ ವಸ್ತುವೆಂದು ಹೇಳಿದ್ದಾರಾ..? ಇಡೀವಾರ ಅಡುಗೆ ಮನೆಯಲ್ಲಿ ತನ್ನ ಬಣ್ಣ, ರೂಪಗಳನ್ನು ಸಂಪೂರ್ಣ ಕಳೆದುಕೊಂಡ ಈ ನನ್ನಮ್ಮನ ಮಸಿಬಟ್ಟೆ

ಅಮ್ಮನ ನೆನಪು ಮಾಡುತ್ತದೆ. ಕಾಲ ಬದಲಾಗಿ ಎಷ್ಟೇ ಗೃಹೋಪಯೋಗಿ ವಸ್ತುಗಳು ಮನೆಗೆ ಬಂದರೂ ಅಡುಗೆ ಮನೆಯಿಂದ ಮಾಯವಾಗದ ಮಸಿಬಟ್ಟೆಯಂತೆ, ಎಷ್ಟೋ ನಾಗರಿಕ ಪ್ರಪಂಚವು ಪ್ರಗತಿಗೊಂಡರೂ ಅಮ್ಮನ ಕಷ್ಟಗಳು ಅಮ್ಮನವೇ....!"[೨] ಎಂದು ಸ್ತ್ರೀ ಸಂವೇದನೆಗಳನ್ನು ಮಸಿಬಟ್ಟೆಯ ಕಥೆಯ ಮೂಲಕ ತಿಳಿಸಿಕೊಟ್ಟಿದ್ದಾರೆ. ಸ್ತ್ರೀಯಾದವಳು ಮನೆಯ ಕೆಲಸಕ್ಕೆ ಮಾತ್ರ ಸೀಮಿತವಲ್ಲ. ಆ ಕೆಲಸದಲ್ಲಿ ಅವಳದೇ ಆದ ದಯಾಪರತೆಯ ಹೃದಯವಿದೆ. ತ್ಯಾಗಮಯಿಯಾದ ಹೆಣ್ಣು ತನ್ನ ಜೀವವನ್ನು ತನ್ನ ಕುಟುಂಬಕ್ಕಾಗಿ ಸವೆಸುತ್ತಿದ್ದಾಳೆ. ಪ್ರತಿನಿತ್ಯ ಅವಳಲ್ಲಿರುವ ಅಂತರಂಗದ ನೋವುಗಳನ್ನು ಯಾರಲ್ಲೂ ತೆರೆದಿಡದೆ ತಾನೇ ನುಂಗಿಕೊಂಡು ಮನೆಗೆ ಶಾಂತಿಯನ್ನು ತರಲು ತನ್ನನ್ನೇ ತಾನು ಗಂಧದಂತೆ ತೇಯ್ದುಕೊಳ್ಳುತ್ತಾಳೆ.

ಶ್ರಮಗಂಧದ ಪರಿಮಳ ಇಡೀ ಮನೆಯನ್ನು ಆನಂದವಾಗಿರಲು ಕಾರಣವಾಗಿದೆ. ಅಂತಹ ಸಹನಾಮೂರ್ತಿಯನ್ನು ಗೌರವಿಸದೆ ಅವಳನ್ನು ಹೆಣ್ಣೆಂದು ಕೀಳಾಗಿ ಕಾಣುತ್ತಿರುವುದು ದೌರ್ಜನ್ಯದ ಪ್ರತೀಕವಾಗಿದೆ. ಈ ಕಥೆಯ ಅತೀ ಮುಖ್ಯವಾದ ಇನ್ನೊಂದು ಮುಖವೆಂದರೆ ಒಂದು ಮನೆಯ ಕಟ್ಟಕಡೆಯ ವಸ್ತು ಮಸಿಬಟ್ಟೆಯಾಗಿದೆ. ಹಾಗೆಯೇ ಒಂದು ಸಮಾಜದ ಕಟ್ಟಕಡೆಯ ವ್ಯಕ್ತಿಗಳು ಎಂದರೆ ದಲಿತರು. ಮನೆಯಲ್ಲಿ ಮಸಿಬಟ್ಟೆಯನ್ನು ಬಳಸಿಕೊಂಡು ಅದನ್ನೇ ಕಡೆಗಣಿಸಿದಂತೆ ಕಟ್ಟಕಡೆಯ ವ್ಯಕ್ತಿಗಳಾದ ದಲಿತರನ್ನು 'ಮಸಿಬಟ್ಟೆ'ಯಂತೆ ಉಪಯೋಗಿಸಿಕೊಂಡು ಅವರನ್ನು ಪುರೋಹಿತಶಾಹಿಗಳು ಕಡೆಗಣಿಸುತ್ತಿರುವ ಸೂಕ್ಷ್ಮ ವಿಚಾರವನ್ನು ಈ 'ಮಸಿಬಟ್ಟೆ' ಕಥೆಯು ಒಳಗೊಂಡಿರುತ್ತದೆ. ಉಪಯೋಗಿಸಿಕೊಳ್ಳುವುದಕ್ಕಾಗಿ ದಲಿತ ಸ್ತ್ರೀಯರು ಬೇಕು. ಆದರೆ ದಲಿತರಾಗಿ ಸ್ತ್ರೀಯರು ಇವರಿಗೆ ಬೇಕಾಗಿಲ್ಲ. ಇದು ದಲಿತರ ಮೇಲೆ ಬಂಡವಾಳಶಾಹಿಗಳು ಮಾಡುವ ಸ್ತ್ರೀ ಶೋಷಣೆಯಾಗಿದೆ. ಮಸಿಬಟ್ಟೆಯಂತಿರುವ ದಲಿತ ಸ್ತ್ರೀ ಕುಲ ಸಮಾಜದ ಹಿತಕ್ಕಾಗಿ ತನ್ನನ್ನೇ ತಾನು ಅರ್ಪಣೆ ಮಾಡಿಕೊಂಡು ನಿತ್ಯ ಶ್ರಮಜೀವಿಯಾಗಿ ದೇಹದಂಡಿಸಿ ತನ್ನ ಋಣವನ್ನು ಸಮಾಜಕ್ಕಾಗಿ ನೀಡಿದರೂ ಯಾವತ್ತೂ ಅವಳನ್ನು ತಮ್ಮ ಮನೆಯವರಂತೆ ತನ್ನಂತೆ ನೋಡುವ ಬಲಿಷ್ಠರ ಸಮಾಜ ಇನ್ನೂ ನಿರ್ಮಾಣವಾಗಬೇಕಾಗಿದೆ.

ಹೆಣ್ಣು ಮನೆಯ ಕಣ್ಣು ಇದು ಕೇವಲ ಹೇಳಿಕೆಯಾಗದೆ ಅವಳ ಕಣ್ಣುಗಳಲ್ಲಿರುವ ಸೂಕ್ಷ್ಮಸಂವೇದನೆಗಳನ್ನು ಪುರುಷಕೇಂದ್ರಿತ ಸಮಾಜ ಅರಿಯಬೇಕಾಗಿದೆ. 'ಮಸಿಬಟ್ಟೆ' ಇದು ಇಲ್ಲಿನ ಇಂದಿನ ಕಥೆಯಷ್ಟೇ ಅಲ್ಲ ಇದೊಂದು ಅಂದಿನಿಂದ ಇಂದಿನವರೆಗೂ, ಮುಂದಿನವರೆಗೂ ಅರಿಯಬೇಕಾಗಿರುವ ಸ್ತ್ರೀ ಸಂವೇದನೆಗಳನ್ನು ಒಳಗೊಂಡಿರುವ ಅವರ ಸೂಕ್ಷ್ಮ ಸಂವೇದನೆಗಳನ್ನು ಗುರುತಿಸಿ ಕೊಡುವ ಇಲ್ಲಿನ ಜಾನಕಿಯ ಕಥೆಯು ಎಲ್ಲಾ ಸ್ತ್ರೀ ಕುಲದ ಕಥೆಯೇ ಆಗಿದೆ. ಉಪಯೋಗಿಸಿಕೊಳ್ಳುವವರು, ಉಪಯೋಗಕ್ಕೆ ಒಳಪಡುವವರು ಇವರಿಬ್ಬರೂ ಪರಸ್ಪರ ಒಬ್ಬರ ಮಹತ್ವವನ್ನು ಮತ್ತೊಬ್ಬರು ಅರಿತುಕೊಂಡು ಮನುಷ್ಯತ್ವದಿಂದ ಯಾವ ಮೋಸ, ವಂಚನೆಗಳನ್ನು ಮಾಡದೆ, ಮತ್ತೊಬ್ಬರನ್ನು ಗುಲಾಮರಂತೆ ಕಾಣದೇ ಇದ್ದರೆ ಸಮಾಜದಲ್ಲಿ ಸಮಾನತೆ ತಾನಾಗಿಯೇ

ಏರ್ಪಡುತ್ತದೆ. ಆದರೆ ಉಪಯೋಗಿಸಿಕೊಂಡವರು ಉಪಯೋಗಕ್ಕೆ ಒಳಪಟ್ಟವರನ್ನೇ ಶೋಷಣೆ ಮಾಡಿದರೆ ಅದೇ ಅಸಮಾನತೆಯ ಸಮಾಜ.

ಇದರಿಂದ ಪರಸ್ಪರರು ದ್ವೇಷದ ಭಾವನೆಯಿಂದ ರಾಷ್ಟ್ರದ ಏಕತೆಯನ್ನು ಸಾಧಿಸಲು ವಿಫಲರಾಗುತ್ತಾರೆ. ಇದರಿಂದ ಒಂದು ಸಮುದಾಯವೇ ತುಳಿತಕ್ಕೆ ಒಳಪಟ್ಟು ಆರ್ಥಿಕತೆಯಲ್ಲಿ ಸಬಲರಾಗದೆ ಬಡತನದ ನೋವಿನಿಂದ ನರಳಾಡುವಂತೆ ಅವರ ಬಾಳು ಗೋಳಾಗಿ ಕೂಡಿಕೊಳ್ಳುತ್ತದೆ. ಅಂತವರೇ ದಲಿತರೆಂದು ಕರೆಯಲಾಗಿದೆ. ದಲಿತರನ್ನು ಮಸಿಬಟ್ಟೆಯಂತೆ ಉಪಯೋಸಿಕೊಂಡಂತ ಬಂಡವಾಳಶಾಹಿಗಳು ಮಸಿಬಟ್ಟೆಯಂತೆ ಸಮಾಜದ ಮೂಲೆಯಲ್ಲಿ ದಲಿತರನ್ನು ಬಿಸಾಕಿದ್ದಾರೆ. ಇದನ್ನೇ ಕಥೆಗಾರರು ಈ ಕಥೆಯ ಜಾನಕಿಯ ಪಾತ್ರ ಚಿತ್ರಣದ ಮೂಲಕ ದಲಿತಹೆಣ್ಣುಮಕ್ಕಳ ಸಾಮಾಜಿಕ ಪರಿಸ್ಥಿತಿಯನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಮಸಿಬಟ್ಟೆಯಿದ್ದರೆ ಮಾತ್ರ ಮನೆಯಲ್ಲಿ ಒಳ್ಳೆಯ ರೀತಿಯಲ್ಲಿ ಅಡುಗೆ ಮಾಡಲು ಸಾಧ್ಯವಾಗುತ್ತದೆ. ಅಡುಗೆಯ ಪ್ರತಿಯೊಂದು ಕೆಲಸಕ್ಕೂ ಮಸಿಬಟ್ಟೆ ಬೇಕು. ಮಸಿಬಟ್ಟೆ ಇಲ್ಲದೆ ಅಡುಗೆ ಮಾಡಲು ಸಾಧ್ಯವೇ ಇಲ್ಲ. ಅದರಂತೆ ಬಂಡವಾಳಶಾಹಿಗಳ ಪ್ರತಿಯೊಂದು ಕೆಲಸಕ್ಕೂ ದಲಿತರು ಬೇಕು. ಅವರ ಮನೆಯಲ್ಲಿ ದನ ಕರುಗಳನ್ನು ನೋಡಲು, ಮನೆಯ ಅಂಗಳವನ್ನು ಸ್ವಚ್ಛಗೊಳಿಸಲು, ಅವರ ಹೊಲ ಗದ್ದೆಗಳಲ್ಲಿ ಅವರ ಬೆವರಿನ ಶ್ರಮದಿಂದ ಬೆಳೆಯನ್ನು ಬೆಳೆಯಲು, ಬೆಳೆದ ದವಸ ಧಾನ್ಯಗಳನ್ನು ಮನೆಗೆ ತಂದು ಹಾಕಲು, ಅವರು ಮೆಟ್ಟುವ ಚಪ್ಪಲಿಯನ್ನು ಮಾಡುವುದಕ್ಕೆ ಅಷ್ಟೇ ಅಲ್ಲ, ದಲಿತೇತರರು ಸತ್ತರೆ ಸುಡುಗಾಡಿನಲ್ಲಿ ಮಣ್ಣು ತೆಗೆದು ಮುಚ್ಚಲು ದಲಿತರು ಬೇಕು. ಒಟ್ಟಾರೆ ಬಂಡವಾಳಶಾಹಿಗಳ ಪ್ರತಿಯೊಂದು ಕೆಲಸಕ್ಕೂ ದಲಿತರು ಬೇಕು. ಅವರ ಶ್ರಮವನ್ನು ಬಳಕೆ ಮಾಡಿಕೊಂಡು ತಾವು ಶ್ರೀಮಂತರಾಗಿ ಕೊನೆಗೆ ದಲಿತರನ್ನೇ ಮಸಿಬಟ್ಟೆಯಂತೆ ಕೀಳಾಗಿ ಕಾಣುತ್ತಾರೆ. ಇದು ವಾಸ್ತವ ಸಾಮಾಜಿಕ ಜೀವನವಾಗಿರುತ್ತದೆ. ದಲಿತರು ದಲಿತೇತರರಿಂದ ವಂಚನೆಗೆ ಒಳಪಟ್ಟು ಅವರ ಶ್ರಮವನ್ನೇ ಅವರ ಏಳ್ಗೆಗಾಗಿ ಸುರಿಸಿ ತಾವು ಮಾತ್ರ ಬಡತನದ ಹೀನಾಯ ಸ್ಥಿತಿಯಿಂದ ಬದುಕುತ್ತಾರೆ.

ಇದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದಲಿತರ ಮೇಲೆ ಮಾಡುವ ಆರ್ಥಿಕ ಶೋಷಣೆಯನ್ನು ತಿಳಿಸಿಕೊಡುತ್ತದೆ. ಇದನ್ನೇ ಇಲ್ಲಿ ಕಥೆಗಾರರು ಈ ಕಥೆಯಲ್ಲಿ ಒಂದು ಕುಟುಂಬದಲ್ಲಿ ಜಾನಕಿಯಂತ ತಾಯಿಯ ಸೇವೆಯನ್ನು ಪಡೆದುಕೊಂಡು ಮತ್ತು ಮಸಿ ಬಟ್ಟೆಯಂತೆ ಕಾಣುತ್ತಿರುವ ಕುಟುಂಬದ ರೂಪಕವಾಗಿ ಬಳಸಿದ್ದಾರೆ. ಬಂಡವಾಳಶಾಹಿಗಳು ದಲಿತ ಸ್ತ್ರೀಯರನ್ನು ದೈಹಿಕವಾಗಿ ಉಪಯೋಗಿಸಿಕೊಂಡು ಮತ್ತೆ ಬೀದಿಯಲ್ಲಿ ನಿರಾಶ್ರಿತರಾಗಿ ನಿಲ್ಲಿಸುವಂತ ಸನ್ನಿವೇಶದ ವಾಸ್ತವ ಘಟನೆಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ಗ್ರಹಿಸಿದ್ದಾರೆ. ಅದರಂತೆ ದಲಿತ ಬಡ ಹೆಣ್ಣುಮಕ್ಕಳನ್ನು ಹೀನಾಯವಾಗಿ ಕಾಣುತ್ತಿರುವ ಸಾಮಾಜಿಕ ವ್ಯವಸ್ಥೆಯನ್ನು ಖಂಡಿಸುತ್ತ ಸ್ತ್ರೀವಾದದ ನೆಲೆಯಿಂದ ಸ್ತ್ರೀ ಸಂವೇದನೆಗಳನ್ನು ಅಭಿವ್ಯಕ್ತಿಸಿದ್ದಾರೆ.

ಡಾ. ಪ್ರಧಾನ ಗುರುದತ್ತರವರು ಸಂಪಾದನೆ ಮಾಡಿರುವ 'ಅಶೋಕ್ ಮಿತ್ರನ್ ಅವರ ಕಥೆಗಳು' ಎಂಬ ತೆಲುಗು ಕಥಾ ಸಂಕಲನವನ್ನು ಡಾ. ತಮಿಳ್ ಸೆಲ್ವಿಯವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಅಶೋಕ್ ಮಿತ್ರನ್ ಅವರು ಬರೆದ 'ಸಹಿ' ಎಂಬ ಕತೆಯು ಒಂದು ಹೆಣ್ಣು ಅಕ್ಷರವನ್ನು ಕಲಿಯದೆ ಇರುವದಕ್ಕಾಗಿ ಬಡತನದಲ್ಲಿ ತೊಳಲಾಡುವ ಪರಿಯನ್ನು ಈ ಕಥೆಯು ಒಳಗೊಂಡಿರುತ್ತದೆ. ಆರ್ಥಿಕವಾಗಿ ಹಿಂದುಳಿದುಕೊಂಡಿರುವ ದಲಿತರ ಜೀವನದಲ್ಲಿ ಉಂಟಾಗುವ ಕಷ್ಟ ಕಾರ್ಪಣ್ಯಗಳನ್ನು ವಾಸ್ತವದ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಮಧ್ಯಮ ಅಥವಾ ಕೆಳವರ್ಗದ ಸ್ತ್ರೀಯರ ಬದುಕು ಎಂತಹ ಸಂಕಟಗಳಲ್ಲಿ ಒಳಗೊಂಡಿರುತ್ತದೆ ಎಂಬುದನ್ನು ಸ್ಪಷ್ಟೀಕರಿಸುತ್ತ, ಅವರ ಅಸಹಾಯಕತನದ ಬದುಕಿನ ಹೋರಾಟವನ್ನು ಕಣ್ಣ ಮುಂದೆ ತೆರೆದಿಡುತ್ತಾರೆ. ಅಶೋಕ ಮಿತ್ರನ್ ಅವರು ಈ ಕಥೆಯಲ್ಲಿ ಸಹಜವಾಗಿಯೇ ಬಡತನಕ್ಕಿರುವ ಸಂಕಷ್ಟಗಳನ್ನು ಯಥಾರ್ಥವಾಗಿ ತೋರಿಸಿಕೊಟ್ಟಿದ್ದಾರೆ. ದಲಿತ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗಿ ಬೌದ್ಧಿಕವಾಗಿ ಬಲವಂತರಾಗದೆ ಬೇಡಿಕೊಂಡು ದೀನವಾಗಿ ಬದುಕುತ್ತಿದ್ದಾರೆ.

ಅವರ ಯಾತನೆಯ ಸ್ಥಿತಿಯನ್ನು ಹೃದಯಸ್ಪರ್ಶಿಯಾಗಿ, ಸಾಮಾಜಿಕವಾಗಿ ದಲಿತ ಹೆಣ್ಣಿಗೆ ಆಗಿರುವ ಶೋಷಣೆಯನ್ನು ಅರ್ಥೈಸಿದ್ದಾರೆ. ದಲಿತರು ಅಕ್ಷರವಂತರಾಗದಿದ್ದರೆ ಅವರು ಬದುಕಿನುದ್ದಕ್ಕೂ ಗುಲಾಮಗಿರಿಯಲ್ಲಿ ಬದುಕಬೇಕಾಗುತ್ತದೆ. ಅಕ್ಷರದ ಬೆಳಕಿನಿಂದ ಮಾತ್ರ ತಮ್ಮ ಬದುಕನ್ನು ಬದಲಾಯಿಸಿಕೊಳ್ಳಲು ಸಾಧ್ಯವೆಂಬ ಸತ್ಯವಾದ ಸಂಗತಿಯನ್ನು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಅಕ್ಷರ ಜ್ಞಾನವಿಲ್ಲದಿದ್ದರೆ ಉಳ್ಳವರಿಂದ ದಲಿತರಿಗಾಗುವ ಅನ್ಯಾಯಗಳನ್ನು ತೋರಿಸುತ್ತ ಕಣ್ಣಿದ್ದರೂ ಅಕ್ಷರ ಜ್ಞಾನವಿಲ್ಲದಿದ್ದರೆ ಕುರುಡರಂತೆ ಅವರ ಜೀವನ ಕತ್ತಲೆಯಿಂದ ತುಂಬಿರುತ್ತದೆ.ಹೀಗಾಗಿಯೇ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರು ತಮ್ಮ ತ್ರಿವಳಿ ಸೂತ್ರಗಳಲ್ಲಿ ಶಿಕ್ಷಣಕ್ಕೆ ಮೊದಲ ಆದ್ಯತೆಯನ್ನು ನೀಡಿದ್ದಾರೆ. ಅದಕ್ಕಾಗಿಯೇ ಸಂವಿಧಾನದಲ್ಲಿ ಕಡ್ಡಾಯ ಶಿಕ್ಷಣ ಕ್ರಮವನ್ನು ಜಾರಿಗೆ ತರಲಾಗಿದೆ.ಆದರೆ ಇದರ ಉಪಯೋಗ ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಸರಿಯಾಗಿ ಉಪಯೋಗಿಸಿಕೊಳ್ಳಲಾರದಕ್ಕಾಗಿ ಶಿಕ್ಷಣದ ಅರಿವಿನಿಂದ ವಂಚಿತರಾಗಿ ದಲಿತರು ಇನ್ನೂ ತಮ್ಮ ಬದುಕನ್ನು ಕತ್ತಲೆಯಲ್ಲಿ ಕಳೆಯುತ್ತ ಉಳ್ಳವರ ಗುಲಾಮಗಿರಿಯಲ್ಲಿ ತಮ್ಮ ಬದುಕನ್ನು ಸಾಗಿಸಿಕೊಳ್ಳುತ್ತಿದ್ದಾರೆ.

ಆದ್ದರಿಂದಲೇ ಅಶೋಕ ಮಿತ್ರನ್‌ರವರು ಈ 'ಸಹಿ' ಕಥೆಯಲ್ಲಿ ಶಿಕ್ಷಣದರಿವಿನ ಮಹತ್ವ ತಿಳಿಸಿಕೊಡುತ್ತ ಆ ಶಿಕ್ಷಣದಿಂದ ವಂಚಿತರಾದ ದಲಿತ ಹೆಣ್ಣುಮಕ್ಕಳ ಶೋಷಣೆಯ ಸ್ಥಿತಿಗಳನ್ನು, ಅವರು ಪಡುತ್ತಿರುವ ಯಾತನೆಗಳನ್ನು ಈ ಕಥೆಯ ಮೂಲಕವಾಗಿ ಹೆಣ್ಣಿನ ಒಳ ಸಂವೇದನೆಗಳನ್ನು ಹಂಚಿಕೊಂಡಿದ್ದಾರೆ. ಸೆಂಜಮ್ಮ ಎಂಬುವವಳು ಕಂಪನಿಯೊಂದರಲ್ಲಿ ಕಸಗುಡಿಸುವ ಕೆಲಸದಾಳು (ಸ್ವೀಪರ್) ಅವಳ ತಂದೆಯ ಹೆಸರು ಮಲ್ಲಯ್ಯ. ಈತನಿಗೆ ಹೆಚ್ಚು ಹೆಣ್ಣುಮಕ್ಕಳಿದ್ದಾರೆ. ಅವರೆಲ್ಲ ಅತೀ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿಕೊಂಡು ಗಂಡನ ಮನೆಯಲ್ಲಿ ಬದುಕುತ್ತಿದ್ದಾರೆ. ಆದರೆ ಸೆಂಜಮ್ಮನ ಗಂಡ ಅವಳನ್ನು ತನ್ನ ಮನೆಯಿಂದ ಹೊರಗೆ ಹಾಕಿದ್ದಕ್ಕಾಗಿ, ತನ್ನ ತಂದೆಯಾದ

ಮಲ್ಲಯ್ಯನ ಕೆಲಸವನ್ನೇ ಕಂಪನಿಯಲ್ಲಿ ಮಾಡುತ್ತಾ ತನ್ನ ಜೀವನವನ್ನು ತಂದೆಯ ಮನೆಯಲ್ಲಿ ಕಳೆಯುತ್ತಿದ್ದಾಳೆ. ಆದರೆ ಮಲ್ಲಯ್ಯನ ಕುಟುಂಬ ಅವಿಭಕ್ತ ಕುಟುಂಬವಾಗಿತ್ತು. ಮನೆ ತುಂಬಾ ಸಂಬಂಧಿಕರು ಸೇರಿಕೊಂಡಿದ್ದಾರೆ.

ಮಕ್ಕಳು, ಮೊಮ್ಮಕ್ಕಳು, ಆಗಾಗೆ ಇಲ್ಲಗೆ ಬರುವುದು, ಹೋಗುವುದು ಒಟ್ಟಾರೆ ಹಸಿವಿನಿಂದ ತುಂಬಿದ್ದರೂ ತುಂಬಿದ ಮನೆಯಲ್ಲಿ ಅವರ ಜೀವನ ನಡೆದಿರುತ್ತದೆ. ಹೀಗಾಗಿ ಮಲ್ಲಯ್ಯ ಕಂಪನಿಯ ತನ್ನ ಕೆಲಸವನ್ನು ಮಾಡದೆ, ಕಂಪನಿಯ ತೋಟದಲ್ಲಿ ಯಾವಾಗಲೂ ಬೀಡಿಸೇದುತ್ತಾ ಆರಾಮದಿಂದ ಮಲಗಿಕೊಂಡಿರುತ್ತಾನೆ. ಆತನ ಕೆಲಸವನ್ನು ಮಾತ್ರ ತಂದೆಯ ಹೆಸರಿನಲ್ಲಿ ಮಗಳಾದ ಸೆಂಜಮ್ಮ ಮಾಡುತ್ತಿರುತ್ತಾಳೆ. ಸೆಂಜಮ್ಮ ಬಾಲ್ಯದಿಂದಲೇ ಆ ಕಂಪನಿಯ ಮುಂದೆಯೇ ಬೆಳೆದಿರುವುದರಿಂದ ಮಲ್ಲಯ್ಯನ ಮಕ್ಕಳೆಲ್ಲ ಕಂಪನಿಯ ಕೆಲಸಗಾರರಿಗೆ ತುಂಬ ಹತ್ತಿರದವರಾಗಿ ಪರಿಚಯದಿಂದ ಇರುತ್ತಾರೆ. ಸೆಂಜಮ್ಮಳನ್ನು ಕಂಪನಿಯ ಎಲ್ಲಾ ಕೆಲಸಗಾರರು ಅವಳ ಅಸಹಾಯಕ ಬಡತನದ ಜೀವನ ಕಂಡು ಮರುಕಪಡುತ್ತಿರುತ್ತಾರೆ.

ಒಂದು ದಿನ ಕಂಪನಿಯ ಆಫೀಸಿನ ಕೊಠಡಿಯ ಬಾಗಿಲ ಬಳಿ ಸೆಂಜಮ್ಮ ನಿಂತಿರುವುದನ್ನು ಅದೇ ಕೊಠಡಿಯಲ್ಲಿ ಕೆಲಸ ಮಾಡುತ್ತಿದ್ದ ದಾಸ್ ಮತ್ತು ರಾಮನ್ ನಾಯರ್ ಅವರು ನೋಡುತ್ತಾರೆ. ಆಗ ಆಫೀಸಿನ ಗುಮಾಸ್ತ, ಅವಳು ಬಂದಿರುವುದಕ್ಕೆ ಕಾರಣವನ್ನು ಕೇಳಿದಾಗ ಸೆಂಜಮ್ಮ ಒಳಬಂದು ಯಾವ ಮುನ್ಸೂಚನೆಯೂ ಇಲ್ಲದೆ ಏಕಾಏಕಿ ಅಳತೊಡಗುತ್ತಾಳೆ. ಆಗ ಅವರು ಅಯ್ಯಯ್ಯೋ ಯಾಕಮ್ಮ ಅಳುತ್ತಿದ್ದಿ ಆಫೀಸಿನಲ್ಲಿ ಹೀಗೆಲ್ಲ ಅಳಬಾರದು. ನಿನಗೆ ಏನಾಗಬೇಕು ಹೇಳು ಎಂದು ಕೇಳಿದಾಗ, ತಕ್ಷಣ ಅವಳು ತನ್ನ ಅಳುವದನ್ನು ನಿಲ್ಲಿಸಿ ಒಂದು ಕಾಗದ ಬರೀಬೇಕು, ನನಗೆ ಐವತ್ತು ರೂಪಾಯಿ ಲೋನ್ ಬೇಕಾಗಿದೆ ಅದಕ್ಕಾಗಿ ನನಗೆ ದಯಮಾಡಿ ಬರೆದು ಕೊಡಿ ಎಂದು ಕೇಳುತ್ತಾಳೆ. ಆಗ ಅವರು ನನಗೆ ತುಂಬಾ ಕೆಲಸವಿದೆ, ನಾನು ಬೇರೆ ಯಾರ ಹತ್ತಿರವಾದರೂ ಬರೆಸಿಕೊಳ್ಳು ಎಂದು ಹೇಳುತ್ತಾರೆ. ಅವಳು ಮತ್ತೆ ತನ್ನ ಅಳುವನ್ನು ಮುಂದುವರೆಸುತ್ತಾಳೆ. ಆಗ ಅವರು ನಾನೊಬ್ಬನೇ ಈ ಆಫೀಸಿನಲ್ಲಿ ಇರುವುದು ಎಂದು ಕೇಳಿದಾಗ ಅವಳು ಸರ್ ನೀವೇ ತಾನೇ ಎಲ್ಲರಗೂ ಈ ಲೋನ್ ಕಾಗದ ಬರೆದುಕೊಡುವುದು ನನಗೂ ಬರೆದು ಕೊಡಿ ಎಂದು ಕೇಳುತ್ತಾಳೆ. ಸರಿ ನಿನಗ್ಯಾಕೆ ಐವತ್ತು ರೂಪಾಯಿ ಎಂದಾಗ ನನ್ನ ಗಂಡನ ಮನೆಗೆ ಹೋಗಿ ಅವನನ್ನು ನೋಡಿಕೊಂಡು ಬರಬೇಕು ಅನ್ನುತ್ತಾಳೆ.

ಅದಕ್ಕಾಗಿ ಅಷ್ಟು ಹಣ ಯಾಕೆ, ನಾನೇ ಎರಡು ರೂಪಾಯಿ ಕೊಡುತ್ತೇನೆ ಹೋಗಿ ಬಾ ಎಂದು ಹೇಳುತ್ತಾರೆ. ಆಗ ಅವಳು ಇಲ್ಲಾ ಸರ್ ಅವನಿಗೆ ಅದಕ್ಕೂ ಇದಕ್ಕೂ ಅಂತ ನಲವತ್ತು ರೂಪಾಯಿ ಕೊಡಬೇಕು, ಉಳಿದಿದ್ದು ನನಗೆ ಮತ್ತು ನನ್ನ ಮಕ್ಕಳಿಗೆ ಬೇಕಾಗುತ್ತೆ ಸರ್ ದಯಮಾಡಿ ಬರೆದುಕೊಡಿ ಎಂದು ಕೇಳಿಕೊಳ್ಳುತ್ತಾಳೆ. ಸರಿಯಮ್ಮ ನೀನು ನಿನ್ನ ತಂದೆಯಾದ ಮಲ್ಲಯ್ಯನನ್ನು ಕರೆದುಕೊಂಡು ಬಾ. ಆಗ ನಾನು ಕಾಗದ ಬರೆದುಕೊಡುತ್ತೇನೆ ಎಂದು ಹೇಳುತ್ತಾರೆ. "ಅವಳು

ಮತ್ತೆ ಅಳತೊಡಗಿದಳು. ನನಗೆ ಅವಳ ಅಳು ಮತ್ತು ಅವಳು ಸುತ್ತಿ ಗಂಟುಕಟ್ಟಿಕೊಂಡಿದ್ದ ತಲೆಗೂದಲಿನಿಂದ ಬರುತ್ತಿದ್ದ ಎಣ್ಣೆಯವಾಸನೆ, ಎರಡನ್ನೂ ಸಹಿಸಿಕೊಳ್ಳಲಾಗಲಿಲ್ಲ. ಚಿಕ್ಕ ಮಗುವಾಗಿದ್ದಾಗ ಬೋಡು ತಲೆಯಲ್ಲಿ ಓಡಾಡುತ್ತಿದ್ದ ದಿನಗಳಿಂದಲೂ ಅವಳನ್ನು ನೋಡುತ್ತಿದ್ದೇನೆ. ಈಗಲೂ ಅವಳಿಗೆ ಇಪ್ಪತ್ತು ವರ್ಷ ತುಂಬಿರಲಾರದು, ಅಷ್ಟರೊಳಗೆ ಎರಡು–ಮೂರು ಮಕ್ಕಳು ಸಾಲದಕ್ಕೆ ಬಿಟ್ಟು ಓಡಿ ಹೋಗಿರುವ ಗಂಡ."[೧೩] ಆಗ ಆ ಕಂಪನಿಯ ಕೆಲಸಗಾರ ಸೆಂಜಮ್ಮ ನಾನು ನಿನಗೆ ಅಪ್ಲಿಕೇಷನ್ ಬರ್ಕೊಟ್ರೂ ಕೂಡ ನಿನಗೆ ನಿಮ್ಮ ತಂದೆಯ ಸಹಿ ಇಲ್ಲದೆ ಹಣ ಕೊಡುವುದಿಲ್ಲ.

ಯಾಕೆಂದರೆ ಇಲ್ಲಿ ನೀನು ಕೆಲಸ ಮಾಡಿದರೂ ಕೆಲಸ ನಿಮ್ಮ ಅಪ್ಪನ ಹೆಸರಿನಲ್ಲಿದೆ. ಅದಕ್ಕಾಗಿ ನಿನ್ನ ತಂದೆಯ 'ಸಹಿ' ಇದಕ್ಕೆ ಅವಶ್ಯವಾಗಿ ಬೇಕಾಗುತ್ತದೆ ಎಂದು ಹೇಳುತ್ತಾರೆ. ಆಗ ಅವಳು ತಂದೆ ಇಲ್ಲಿ ಕೆಲಸನೂ ಮಾಡುವುದಿಲ್ಲ, ನಾನು ಹೋಗಿ ಕೇಳಿದರೆ ಆತ ಸಹಿಯನ್ನು ಮಾಡುವುದಿಲ್ಲವೆಂದು ನೊಂದುಕೊಳ್ಳುತ್ತಾಳೆ. ಯಾಕೆಂದರೆ ಆತನೊಬ್ಬ ಮಾನಸಿಕ ಅಸ್ವಸ್ಥನಾಗಿರುತ್ತಾನೆ. ಹೀಗೆ ಸೆಂಜಮ್ಮಳು 'ಸಹಿ' ಮಾಡಲುಬರದೆ ಇದ್ದುದ್ದಕ್ಕಾಗಿ ತನ್ನ ಸಮಸ್ಯೆಯನ್ನು ತನ್ನಲ್ಲಿಯೇ ಇರಿಸಿಕೊಂಡು ಸಮಸ್ಯೆ ತುಂಬಿದ ಹೆಣ್ಣಾಗಿ ಉಳಿಯುತ್ತಾಳೆ.

ಇಲ್ಲಿ ಅತೀ ಮುಖ್ಯವಾದ ಅಂಶ ಅಕ್ಷರ ಜ್ಞಾನವಿಲ್ಲದೆ ಮತ್ತೊಬ್ಬರಲ್ಲಿ ಹೋಗಿ ಪತ್ರವನ್ನು ಬರೆದುಕೊಡುವುದಕ್ಕಾಗಿ ಕಣೀರು ಹಾಕುವ ಸ್ಥಿತಿ ಅದೊಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಒಂದು ಹೆಣ್ಣಿನ ಮೇಲೆ ಆದ ಅಕ್ಷರ ಜ್ಞಾನದ ಶೋಷಣೆಯಾಗಿದೆ. ದಲಿತರಿಗೆ ಇಂತಹ ಸ್ಥಿತಿಗೆ ಕಾರಣವಾಗಿರುವ ಆಳುವ ಅಧಿಕಾರಿಶಾಹಿವರ್ಗವು ದಲಿತರಿಗೆ ಶಿಕ್ಷಣದರಿವಿನ ವಂಚನೆಯನ್ನು ಮಾಡುತ್ತಿದ್ದಾರೆ. ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು, ಸರ್ವರಿಗೂ ಕಡ್ಡಾಯ ಶಿಕ್ಷಣ ನೀತಿಯಾಗಿರುವಾಗ ಕೊಳಚೆ ಪ್ರದೇಶದಲ್ಲಿ ವಾಸಿಸುವ, ಗ್ರಾಮೀಣ ಪ್ರದೇಶಗಳಲ್ಲಿನ ಈ ಬಡ ದಲಿತ ಹೆಣ್ಣುಮಕ್ಕಳು ಶಿಕ್ಷಣದಿಂದ ವಂಚಿತರಾಗುವುದು ರಾಜಕೀಯ ವ್ಯವಸ್ಥೆಯು ಮಾಡುತ್ತಿರುವ ದಲಿತ ಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುವ ಅಕಾಳಜಿಯ, ದುರ್ವರ್ತನೆಯಿಂದ ನಡೆಸುತ್ತಿರುವ ಶೋಷಣೆಯ ಕ್ರಮವಾಗಿದೆಂದು ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ಈ 'ಸಹಿ' ಕಥೆಯು ಅನಕ್ಷರಸ್ಥರ ಹೆಣ್ಣಿನ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಸಮಾಜದಲ್ಲಿ ಶಿಕ್ಷಣವ್ಯವಸ್ಥೆ ಜಾರಿ ಇರುವುದರಿಂದ ಏನನ್ನು ಪಡೆದುಕೊಳ್ಳಬೇಕಾದರೆ 'ಸಹಿ' ಎಂಬುದು ಬೇಕೇ ಬೇಕು. ಸಹಿ ಶಿಕ್ಷಣದ ಸಂಕೇತ. ಅದರಿಂದ ಸಾಮಾಜಿಕ ಆಡಳಿತ ವ್ಯವಸ್ಥೆ ಸುಗಮವಾಗಿ ನಡೆಯಲು ಕಾರಣವಾಗುತ್ತದೆ.

ಶಿಕ್ಷಣದ ಮಾರ್ಗದರ್ಶನದಿಂದ ಒಳಿತು ಕೆಡುಕುಗಳ ಅರಿವಿನಿಂದ ಸಹಿ ಮಾಡಿ ವ್ಯವಹಾರ ನಡೆಸಬೇಕಾಗುತ್ತದೆ. ಆದರೆ ದಲಿತರು ಆರ್ಥಿಕ ಶೋಷಣೆಯಿಂದ ಸರಿಯಾದ ಶಿಕ್ಷಣವನ್ನು ಪಡೆದುಕೊಳ್ಳಲು ಅಸಾಧ್ಯವಾಗಿರುತ್ತದೆ. ಇದರಿಂದ ಅವರು ಅನಕ್ಷರತೆಯ ಬದುಕು ನಡೆಸುತ್ತಿದ್ದಾರೆ. ಈ ಶಿಕ್ಷಣದ ಅಭಾವದಿಂದ ದಲಿತರು ತಮ್ಮಲ್ಲಿದ್ದ ಮೂಲ ಸಂಪತ್ತುಗಳನ್ನು ಕಳೆದುಕೊಂಡು, ಇಂದು ನಿರಾಶ್ರಿತರಾಗಿ ಭೂಮಿಗಳಿಲ್ಲದಂತೆ, ಯಾವ ಆರ್ಥಿಕ ಲಾಭದ ಮೂಲಗಳು ಉಳಿಯದಂತೆ

ಬಡತನದಿಂದ ಬದುಕುತ್ತಿದ್ದಾರೆ. ಅಂದು ದಲಿತರಿಗೆ ಸರಿಯಾದ ಶಿಕ್ಷಣ ಸಿಕ್ಕಿದ್ದರೆ ಇವತ್ತು ಇಂತಹ ಆರ್ಥಿಕ ಶೋಷಣೆಯಿಂದ ಬದುಕಲು ಸಾಧ್ಯವಾಗುತ್ತಿರಲಿಲ್ಲ. ದಲಿತೇತರರಂತೆ ಆರ್ಥಿಕ ಸದೃಢತೆಯಿಂದ ಸ್ವಾಭಿಮಾನವನ್ನು ಹೊತ್ತುಕೊಂಡು ತಲೆಯೆತ್ತಿಕೊಂಡು ಬಾಳುತ್ತಿದ್ದರು. ದಲಿತರಲ್ಲಿರುವ ಶಿಕ್ಷಣದ ಮೌಢ್ಯತೆಯನ್ನು ಬಂಡವಾಳಶಾಹಿಗಳು ತಮ್ಮ ಬಂಡವಾಳದ ಲಾಭಕ್ಕಾಗಿ ಉಪಯೋಗಿಸಿಕೊಂಡು ದಲಿತರನ್ನು ಮೋಸ ವಂಚನೆಗಳಿಂದ ಸಮಾಜದಲ್ಲಿ ಸದೃಡತೆಯ ಸಂಪತ್ತನ್ನು ಪಡೆದುಕೊಂಡರು.

ಹೀಗಾಗಿ ಶಿಕ್ಷಣದ 'ಸಹಿ' ಅತ್ಯಂತ ಮುಖ್ಯವಾದ ಅಂಶವಾಗಿರುತ್ತದೆ. ಈ ಕಥೆಯಲ್ಲಿ ಸಹಿಯ ಮಹತ್ವವನ್ನು ಕುರಿತು ಕಥೆಗಾರರು ಇಲ್ಲಿ ಪ್ರತಿಪಾದಿಸುತ್ತಿದ್ದಾರೆ. ಸೆಂಜಮ್ಮ ಎಂಬ ದಲಿತ ಹೆಣ್ಣು ತನ್ನ ಅಕ್ಷರ ಜ್ಞಾನ ಇಲ್ಲದರ ಫಲವಾಗಿ ಹೇಗೆ ಮಾನಸಿಕ ವ್ಯಥೆಯಿಂದ ಮತ್ತೊಬ್ಬರಲ್ಲಿ ಕೈ ಮುಗಿದು ನಿಂತುಕೊಂಡು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಿದ್ದಾಳೆ ಎಂಬುದನ್ನು ಸೆಂಜಮ್ಮನ ಪಾತ್ರ ಚಿತ್ರಣದ ಮೂಲಕ ತೋರಿಸಿಕೊಟ್ಟಿದ್ದಾರೆ. ತಾನು ಮಾಡಿದ ಕಸಗುಡಿಸುವ ಕೆಲಸಕ್ಕಾಗಿ ಕಂಪನಿಯಿಂದ ಲೋನನ್ನು ಪಡೆದುಕೊಳ್ಳಲು ತನಗೆ ಸಹಿ ಮಾಡಲು ಬಾರದೆ ಇರುವುದರಿಂದ ಅವಳಿಗಿರುವ ಆರ್ಥಿಕ ಸಂಕಷ್ಟಕ್ಕೆ ಪರಿಹಾರ ಸಿಗದೆ ಅದೇ ಸಂಕಷ್ಟದಿಂದ ಮತ್ತೆ ನರಳಾಡುವುದಕ್ಕೆ ಅವಳಲ್ಲಿರುವ ಅನಕ್ಷರತೆಯೇ ಕಾರಣವಾಗಿರುತ್ತದೆ.

ಮೈಬೆವರ ಸುರಿಸಿ ದುಡಿದರೂ ತನ್ನ ಕುಟುಂಬದ ನಿರ್ವಹಣೆಗೆ ಸರಿಯಾದ ಸಮಯಕ್ಕೆ ಹಣವನ್ನು ಪಡೆದುಕೊಳ್ಳಲು ಕಂಪನಿಯಿಂದ ವಂಚಿತಳಾಗುತ್ತಾಳೆ. ಬಂಡವಾಳಶಾಹಿಗಳು ದಲಿತರನ್ನು ಶಿಕ್ಷಣದ ವ್ಯವಸ್ಥೆಯಲ್ಲಿ ಅಕ್ಷರ ಜ್ಞಾನ ಸಿಗದಿರುವಂತೆ ಮಾಡಿರುವುದೇ ಕಾರಣವಾಗಿರುತ್ತದೆ.ಅವರ ಬದುಕಿನ ಗಂಭೀರ ಸ್ಥಿತಿಯಿಂದ ಶಾಲೆಯಿಂದ ಹೊರಗುಳಿದು ಕೂಲಿಕೆಲಸಕ್ಕೆ ಮಕ್ಕಳಿರುವಾಗಲೇ ದುಡಿಯಬೇಕಾದ ಅನಿವಾರ್ಯತೆ ಇರುವಾಗ ಶಿಕ್ಷಣವನ್ನು ದಲಿತ ಮಹಿಳೆಯರು ಹೇಗೆ ಪಡೆದುಕೊಳ್ಳಲು ಸಾಧ್ಯ. ದಲಿತರ ಮಕ್ಕಳನ್ನು ಶಾಲೆಯಲ್ಲಿ ಕಾಣುವ ಅಸ್ಪೃಶ್ಯತೆಯ ಮನೋಭಾವದಿಂದ, ದಲಿತೇತರ ಮಕ್ಕಳಿಂದ ಅವಮಾನಗೊಂಡು ಶಿಕ್ಷಣವನ್ನು ಪಡೆದುಕೊಳ್ಳದೆ ಬಂಡವಾಳಶಾಹಿಗಳ ಮನೆಯಲ್ಲಿ ಹೆಣ್ಣುಮಕ್ಕಳು ಕೂಲಿಗಾಗಿ ದುಡಿಯುತ್ತಿದ್ದಾರೆ. ಇದನ್ನೇ ಈ ಕಥೆಯಲ್ಲಿ ಕಥೆಗಾರರು ದಲಿತ ಸ್ತ್ರೀಯರು ಶಿಕ್ಷಣ ವ್ಯವಸ್ಥೆಯಿಂದ ದೂರ ಉಳಿದುದರ ಫಲದಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಣೆಗೆ ಒಳಗಾಗುವುದಕ್ಕೆ ಕಾರಣವಾಗಿದೆ. ಸರಕಾರದ ಕಡ್ಡಾಯ ಶಿಕ್ಷಣದ ವ್ಯವಸ್ಥೆಯಲ್ಲಿ ಎಲ್ಲಾ ದಲತ ಸ್ತ್ರೀಯರು ಶಿಕ್ಷಣವನ್ನು ಪಡೆದುಕೊಳ್ಳುವಂತಾಗಬೇಕು ಎಂಬ ದಲಿತ ಹೆಣ್ಣುಮಕ್ಕಳ ನೋವನ್ನು ಅಂಬೇಡ್ಕರವಾದದ ನೆಲೆಯಿಂದ ಈ ಕಥೆಯು ಅಭಿವ್ಯಕ್ತಿಸುತ್ತದೆ.

ಮರಾಠಿ ದಲಿತ ಸಾಹಿತ್ಯದ ಮೇರುಕೃತಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ 'ನಾನು ಜಾತಿ ಕದ್ದಾಗ' ಎಂಬ ಕಥಾ ಸಂಕಲನವನ್ನು ಮರಾಠಿಯಲ್ಲಿ ಬಾಬುರಾವ್ ಬಾಗೂಲರವರು ಬರೆದಿದ್ದಾರೆ. ಇದನ್ನು ಚಂದ್ರಕಾಂತ್ ಪೋಕಳೆಯವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಹಾದಿಯವಳು' ಎಂಬ ಕಥೆಯು ಒಬ್ಬ ದಲಿತ ಮಹಿಳೆಯಲ್ಲಿರುವ ಬಡತನದ ತೀವ್ರತೆಯನ್ನು

ತಿಳಿಸುತ್ತದೆ. ತನ್ನ ಬಡತನದ ಹಸಿವನ್ನು ಇಂಗಿಸಿಕೊಳ್ಳುವುದಕ್ಕಾಗಿ ಹಾದಿಯಲ್ಲಿ ಇಳಿದು, ಹಾದಿ ಹಾದಿ ಸುತ್ತುತ್ತ ಹಾದರತನದಿಂದ ಬದುಕನ್ನು ನಡೆಸಲೇಬೇಕಾಗಿರುವ ಸ್ಥಿತಿಯಲ್ಲಿ ಬಂದು, ತನ್ನ ದೇಹವನ್ನು ಮತ್ತೊಬ್ಬರ ಜೊತೆ ವ್ಯಾಪಾರ ಮಾಡಿಕೊಂಡು ದೈಹಿಕ ಹಿಂಸೆಯನ್ನು ಅನುಭವಿಸುವುದರ ಜೊತೆಗೆ ಅವಳ ಮನಸ್ಸಿನಲ್ಲಿ ಅಡಗಿಕೊಂಡು ಕೊರೆಯುತ್ತಿರುವ ಸಂಕಟ, ಅಭಾವದ ಸ್ಥಿತಿ ಅದು ಯಾರಿಗೂ ತಿಳಿದಿರುವುದಿಲ್ಲ.

ಇಂತಹ ಚಿತ್ರಣವನ್ನು ಇಟ್ಟುಕೊಂಡು ಈ ಕಥೆಯಲ್ಲಿ ಕಥೆಗಾರರು ಒಬ್ಬ ದಲಿತ ಮಹಿಳೆಯ ಮನೋವೇದನೆಯನ್ನು ಅಭಿವ್ಯಕ್ತಪಡಿಸಿದ್ದಾರೆ. ಹಾದಿಯಲ್ಲಿ ನಿಂತಿರುವ ಹೆಣ್ಣು ನೋಡುಗರಿಗೆ ಅವಳ ಮೈಮಾಟ ಮಾತ್ರ ಕಾಣಿಸುತ್ತಿರುತ್ತದೆ. ಅದರ ಕೆಳಗಿರುವ ಹಸಿದ ಹೊಟ್ಟೆಯಲ್ಲಿ ತುಂಬಿಕೊಂಡಿರುವ ದುಃಖ ಕಣ್ಣಿನಲ್ಲಿರುವ ಕಣ್ಣೀರನ್ನು ಹಿಂಗಿಸುತ್ತಿರುತ್ತದೆ. ಅದು ಯಾರಿಗೂ ತಿಳಿಯದಂತೆ ತೋರ್ಪಡಿಸದೆ ಇರುವ ಸತ್ಯಾಂಶದ ವಾಸ್ತವ ದಲಿತ ಮಹಿಳೆಯರ ವೇದನೆಯ ಲೋಕವನ್ನು 'ಗಿರಿಜ' ಎಂಬ ಪಾತ್ರ ಚಿತ್ರಣದೊಂದಿಗೆ ಕಥೆಗಾರರು ನಿರೂಪಿಸಿದ್ದಾರೆ. ಹಾದರದವಳ ಜೀವನದ ಹಿಂದಿರುವ ಕಹಿಘಟನೆಗಳನ್ನು, ದಲಿತ ಮಹಿಳೆಯರ ಸ್ಥಿತಿ ಗತಿಗಳನ್ನು ಈ ಕಥೆಯು ತೋರಿಸಿ ಕೊಡುತ್ತದೆ. ಗಿರಿಜಾ ಹಾಜಿ ಮಲಂಗಿಗೆ ಹೋಗಿ ಪೂಜೆಯನ್ನು ಮಾಡಿಕೊಂಡು ಬಂದು ತನ್ನ ಜೋಪಡಿಯ ಪಕ್ಕದವರನ್ನು ಕರೆದು ಪ್ರಸಾದವನ್ನು ಹಂಚುತ್ತಾಳೆ. ಬಾಬಾನನ್ನು ಭಕ್ತಿಯಿಂದ ಬೇಡಿಕೊಳ್ಳುತ್ತಿದ್ದಳು.

ತಾನು ಮಾಡುತ್ತಿರುವ ದಂಧೆಯಿಂದ ಒಳ್ಳೆಯದಾಗಲಿ, ನನ್ನ ಬಡತನ ದೂರವಾಗಲೆಂದು ಅದೆಷ್ಟೋ ಫಕೀರರ ಆಶಿರ್ವಾದವನ್ನು ಪಡೆದುಕೊಳ್ಳುತ್ತಿದ್ದಳು. ಫಕೀರರು ಮನೆಗೆ ಬಂದರೆ ಮನೆಯಲ್ಲಿಟ್ಟುಕೊಂಡು ಊಟವನ್ನು ಹಾಕುತ್ತಿದ್ದಳು. ತನ್ನ ಸಂಪಾದನೆಯಿಂದ ದಾನ ಧರ್ಮವನ್ನು ಮಾಡುತ್ತಿದ್ದಳು. ದೇವರು ಅವಳಿಗೆ ಬಡತನದಿಂದ ತನ್ನ ಮೈಯ್ಯನ್ನು ಮಾರಿಕೊಂಡು ಬದುಕುವ ಪರಿಸ್ಥಿತಿಯನ್ನು ತಂದಿದ್ದರೂ ಆಕೆ ದೇವರನ್ನು ಶಪಿಸುತ್ತಿರಲಿಲ್ಲ. ತನ್ನ ಬಡತನಕ್ಕೆ ಕಾರಣ ದೇವರಲ್ಲ, ಈ ಸಮಾಜಲ್ಲಿರುವ ಮನುಷ್ಯರೆಂಬ ಸತ್ಯ ಅವಳಿಗೆ ತಿಳಿದಿರಬೇಕು. ಪ್ರತೀದಿನ ಸಾಯಂಕಾಲ ತನ್ನ ಸ್ನಾನವನ್ನು ಮುಗಿಸಿಕೊಂಡು ಅಲಂಕಾರದಿಂದ ಶೋಭಿಸುತ್ತ, ಬಾಯಲ್ಲಿ ತಾಂಬೂಲ ಮೆಲ್ಲುತ್ತ ತನ್ನ ದಂಧೆಗಾಗಿ ಹೋಗುತ್ತಿದ್ದಳು. ಅವಳ ಉತ್ಸಾಹ ತುಂಬಿರುತ್ತಿತ್ತು. ಗಿರಿಜೆಯು ಒಂದು ಹೋಟಲ್‌ನಲ್ಲಿ ತನ್ನ ಹಸಿವನ್ನು ತುಂಬಿಸಿಕೊಳ್ಳುತ್ತಿದ್ದಳು. ತನ್ನಲ್ಲಿ ದುಡ್ಡಿರುವಾಗ ಕೊಡುತ್ತಿದ್ದಳು. ದುಡ್ಡು ಇಲ್ಲದಿರುವಾಗ ಮಾಲೀಕನಿಗೆ ಲೆಕ್ಕವನ್ನು ಬರೆದುಕೊ ಎಂದು ಹೇಳುತ್ತಿದ್ದಳು. ತಾನು ಯಾವತ್ತೂ ಮಾಲೀಕನಿಗೆ ಸುಳ್ಳು ಹೇಳುತ್ತಿರಲಿಲ್ಲ. ಹಾಗಾಗಿ ಮಾಲೀಕನು ಗಿರಿಜಾಳನ್ನು ನಂಬಿಕೆಯಿಂದ ಅವಳು ಬಂದಾಗ ಊಟವನ್ನು ಹಾಕುತ್ತಿದ್ದನು.

ತನ್ನ ದಂಧೆಯಿಂದ ದುಡಿಮೆಯಾದ ದಿನವೇ ಎಲ್ಲಾ ಲೆಕ್ಕವನ್ನು ಮಾಡಿಸಿ ಮಾಲೀಕನಿಗೆ ದುಡ್ಡನ್ನು ಕೊಡುತ್ತಿದ್ದಳು. ದಿನಗಳು ಕಳೆದಂತೆ ಅವಳ ದಂಧೆ ಅಷ್ಟೊಂದು ಚೆನ್ನಾಗಿ ನಡೆಯುತ್ತಿರಲಿಲ್ಲ. ಇವಳಂತೆ ನೂರಾರು ಮಹಿಳೆಯರು ಗಿರಿಜಾಳಿಗೆ ಪ್ರತಿಸ್ಪರ್ಧಿಗಳಾಗಿ ನಗರದಲ್ಲಿ. ಹಾದಿಯಲ್ಲಿ

ಅಲೆಯುತ್ತಿದ್ದರು. ಇದರಿಂದಾಗಿ ಹೋಟಲ್ ಮಾಲೀಕನಿಗೆ ಹಣವನ್ನು ಕೊಡಲು ಸಾಧ್ಯವಾಗಲಿಲ್ಲ. ಒಂದು ದಿನ ಮಾಲೀಕನು ಗಿರಿಜಾಳನ್ನು ಕರೆದು ನಿನಗೆ ಪತ್ರ ಒಂದು ಬಂದಿದೆ ಎಂದು ಹೇಳುತ್ತಾನೆ.ಅವಳ ಸಂಪರ್ಕಕ್ಕೆಂದು ಮಾಲೀಕನ ವಿಳಾಸವನ್ನೇ ತನ್ನನ್ನು ನಂಬಿದವರಿಗೆ ನೀಡಿರುತ್ತಾಳೆ. ಆ ಹೋಟಲ್‌ನ ಮಾಲೀಕ ತನ್ನ ವಿಳಾಸವನ್ನು ಆಸರೆಯಾಗಿ ನೀಡಿದ್ದನು. ಗಿರಿಜಾಗೆ ಆ ಪತ್ರದಲ್ಲಿರುವ ಸಂದೇಶವನ್ನು ಮರಾಠಿಯಲ್ಲಿ ಶಾಂತವಾಗಿ ವಿವರಿಸಿ ಹೇಳುತ್ತಾನೆ. ಅದನ್ನು ಕೇಳಿದ ಗಿರಿಜ ಬಿದ್ದು ಬಿದ್ದು ಅಳತೊಡಗುತ್ತಾಳೆ. ಹೋಟಲ್ ಮಾಲೀಕನಿಗೆ ಕೈ ಕಾಲು ಬಿದ್ದು ಊರಿಗೆ ಹೋಗಲು ಹಣ ಕೊಡುವಂತೆ ಬೇಡಿಕೊಳ್ಳುತ್ತಾಳೆ.

ಅವಳ ದುಃಖಕ್ಕೆ ಮಾಲೀಕನ ಮನಸ್ಸು ಕರಗುವುದಿಲ್ಲ. ನನ್ನ ಹೋಟಲ್‌ನಲ್ಲಿ ಊಟ ಮಾಡಿದ ಹಣವನ್ನೇ ಇನ್ನೂ ನೀನು ಕೊಟ್ಟಿಲ್ಲ. ನಾನು ನಿನಗೆ ಹಣ ಕೊಡಲು ಸಾಧ್ಯವಿಲ್ಲ. ಇಲ್ಲಿಂದ ಬೇಗನೇ ನೀನು ನಿಮ್ಮ ಊರಿಗೆ ಹೋಗು. ಇನ್ನೊಮ್ಮೆ ನಮ್ಮ ಹೋಟಲ್‌ಕಡೆ ಬರಬೇಡವೆಂದು ಹೇಳಿ ಕಳಿಸುವುದರಲ್ಲಿ ಬಂಡವಾಳಶಾಹಿಗಳು ದಲಿತಮಹಿಳೆರಿಂದ ಉಪಯೋಗವಾಗುತ್ತಿರುವಾಗ ಮಾತ್ರ ಇಟ್ಟುಕೊಂಡು ನಂತರ ಬೀದಿಯಲ್ಲಿ ನಿಲ್ಲಿಸುವುದಕ್ಕೆ ಈ ಘಟನೆಯು ನಿದರ್ಶನವಾಗಿರುತ್ತದೆ. ಗಿರಿಜೆಯ ದಂಧೆ ನಡೆಯುತ್ತಿದ್ದಾಗ ಎಲ್ಲಾ ಸರಿಯಾಗಿ ನಡೆದುಕೊಂಡ ಮಾಲೀಕ ಅವಳ ದಂಧೆ ನಿಂತಾಗ ದೂರತಳ್ಳುತ್ತಾನೆ. ಇದು ಬಂಡವಾಳಶಾಹಿಗಳ ವ್ಯವಹಾರಿಕ ಬುದ್ಧಿಯನ್ನು ತೋರಿಸುತ್ತದೆ.ಗಿರಿಜಾ ತನ್ನ ದುಃಖವನ್ನು ಹೊತ್ತುಕೊಂಡು ಗುಡಿಸಲಿಗೆ ಬಂದಳು.

ಸಾಬೂನಿನಿಂದ ತನ್ನ ಮುಖವನ್ನು ತಿಕ್ಕಿತಿಕ್ಕಿ ತೊಳೆದುಕೊಂಡು ಮಲೀನ ರವಿಕೆಯಿಂದ ವರೆಸಿಕೊಂಡಳು. ಕನ್ನಡಿಯನ್ನು ತನ್ನ ಮುಖಕ್ಕೆ ಹಿಡಿದುಕೊಂಡಾಗ ಅವಳ ಕಣ್ಣಿನಲ್ಲಿ ತುಂಬಿಕೊಂಡಿರುವ ದುಃಖ ಕಾಣಿಸುತ್ತದೆ. ಆಗ ಅವಳ ಕೈ ನಡುಗುತ್ತ ಕನ್ನಡಿ ಕೆಳಗೆ ಜಾರಿಬಿತ್ತು. ಅವಳು ತನ್ನ ಊರಿಗೆ ಹೋಗುವ ತಯಾರಿಯನ್ನು ನಡೆಸುತ್ತಿದ್ದಳು. ಆದರೆ ದುಃಖವನ್ನು ತಡೆದುಕೊಳ್ಳದೆ ಒಬ್ಬಳೇ ಮನಸ್ಸಿಗೆ ಸಮಾಧಾನ ಆಗುವವರೆಗೆ ಅತ್ತಳು. ನಂತರ ಈ ಅಳುವಿನಿಂದ ನಾನು ಊರಿಗೆ ಹೋಗಲು ಸಾಧ್ಯವಿಲ್ಲವೆಂದುಕೊಂಡು ಮತ್ತೆ ಅಲಂಕಾರ ಮಾಡಿಕೊಳ್ಳುತ್ತಾಳೆ. ತಲೆಗೆ ಎಣ್ಣೆಯನ್ನು ಹಾಕಿಕೊಂಡು ಬೈತಲೆ ತೆಗೆದುಕೊಳ್ಳುತ್ತಾಳೆ. ತಾನು ಆಕರ್ಷಕವಾಗಿ ಕಾಣಲು ಕೂದಲನ್ನು ಗುಂಗುರು ಮಾಡಿಕೊಂಡು, ತುರುಬನ್ನು ಸಡಿಲಾಗಿ ಕಟ್ಟಿಕೊಳ್ಳುತ್ತಾಳೆ, ಎಲ್ಲರಿಗೂ ಕಾಣುವಂತೆ ಕುಂಕುಮದ ಟಿಕಲಿಯನ್ನು ಮೆತ್ತಿಕೊಂಡು, ರವಿಕೆಯನ್ನು ಸ್ವಲ್ಪ ಕೆಳಗೆಳೆದು ತನ್ನ ಎದೆ ಕಾಣುವಂತೆ ಮಾಡಿಕೊಂಡು, ಸೀರೆಯನ್ನು ಮತ್ತೊಮ್ಮೆ ಆಕರ್ಷಕವಾಗಿ ಉಟ್ಟುಕೊಂಡು, ತುದಿಗಾಲಲ್ಲಿ ನಡೆಯುವ ಪ್ರಯತ್ನ ಮಾಡುತ್ತ ತನ್ನ ಜೋಪಡಿಯಿಂದ ಹೊರಗಡೆ ಬರುತ್ತಾಳೆ.

ಅವಳು ಅಷ್ಟೆಲ್ಲಾ ಮಾಡಿಕೊಳ್ಳುವುದರ ಹಿಂದೆ ತನ್ನ ದೇಹವನ್ನು ಯಾರಾದರೂ ಗಿರಾಕಿಗಳು ನೋಡಿ ನನಗಿರುವ ಹಸಿವನ್ನು ಪರಿಹರಿಸುತ್ತಾರೆಂದು ನಂಬಿಕೊಂಡು ನನಗೀಗ ನನ್ನ ಊರಿಗೆ ಹೋಗಲು ಒಂದಿಷ್ಟು ದುಡ್ಡು ಸಿಕ್ಕರೆಸಾಕೆಂದು ಹೋಗುತ್ತಾಳೆ. ತನ್ನಲ್ಲಿರುವ ದುಃಖವನ್ನು ಯಾರಿಗಾದರು

ತೋರಿಸಿದರೆ ನನ್ನ ಹತ್ತಿರ ಗಿರಾಕಿಗಳು ಬರುವುದಿಲ್ಲ. ಆಗ ನಾನು ನನ್ನ ಊರನ್ನು ತಲುಪಲು ಆಗಲ್ಲವೆಂದು ತನ್ನಲ್ಲಿರುವ ದುಃಖವನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲದಿದ್ದರೂ ನುಂಗಿಕೊಂಡು ರಸ್ತೆಯ ಬೀದಿಯಲ್ಲಿ ಗಿರಾಕಿಗಳನ್ನು ಹುಡುಕಿಕೊಂಡು ಹೋಗುತ್ತಾಳೆ. ಪ್ರತಿದಿನ ಹೋಗುತ್ತಿದ್ದಾಗ ಇರುತ್ತಿದ್ದ ಉತ್ಸಾಹ ಅವಳಲ್ಲಿ ಈಗ ಇರುವುದಿಲ್ಲ. ಪಾನ್ ಅಂಗಡಿಯಲ್ಲಿ ಉದ್ರಿ ಪಡೆದು ಒಂದು ಪಾನ್‌ನನ್ನು ಕಟ್ಟಿಸಿಕೊಂಡು ತನ್ನ ತುಟಿ ಕೆಂಪಾಗಿ ಕಾಣಲು ಮತ್ತೆಮತ್ತೆ ಜಗಿದಳು. ಆದರೆ ಅವಳ ಎದೆಯಲ್ಲಿ ನೋವು ತುಂಬಿರುವುದರಿಂದ ತುಟಿ ಮಾತ್ರ ಕೆಂಪಾಗಲಿಲ್ಲ. ಅವಳ ದುಃಖ ಎದೆಯಲ್ಲಿ ಪ್ರತೀಕ್ಷಣವೂ ಕುದಿಯಲಾರಂಭಿಸಿತು.

ಕಡಿಮೆ ಮಾಡಿಕೊಳ್ಳಬೇಕೆಂದು ಎಷ್ಟೇ ಪ್ರಯತ್ನಸಿದರೂಅದು ಮತ್ತಷ್ಟು ಹೆಚ್ಚಾಗತೊಡಗಿತ್ತು. ಪತ್ರದಲ್ಲಿದ್ದ ಸುದ್ದಿಯನ್ನು ಕೇಳಿದಾಗಿನಿಂದ ಗಿರಿಜಾಳ ಕದಡಿದ ಮನಸ್ಸನ್ನು ತನ್ನ ಹತೋಟಿಗೆ ತರುವುದು ಸಾಧ್ಯವಾಗಲಿಲ್ಲ. ಈ ಕಾರಣಕ್ಕಾಗಿ ಅವಳು ತನ್ನ ಊರಿಗೆ ಹೋಗಬೇಕಾಗಿದೆ. ಅವಳಬಳಿ ಹಣವಿಲ್ಲದಿರುವುದರಿಂದ ಯಾರಾದರೂ ಗಿರಾಕಿ ಬಂದರೆ ಸಾಕು ತನ್ನ ದೇಹವನ್ನು ಅವರಿಗೆ ನೀಡಿ ಅದರಿಂದ ಬಂದ ಹಣವನ್ನು ತೆಗೆದುಕೊಂಡು ತನ್ನ ಊರಿಗೆ ಹೋಗಬೇಕು. ಸಾಯಂಕಾಲವಾಗುತ್ತಾ ಬಂದಿದೆ, ಹೆಚ್ಚು ಸಮಯವಿಲ್ಲವೆಂದುಕೊಂಡು ಗಿರಾಕಿಗಳಿಗಾಗಿ ಅಲೆಯುತ್ತಿದ್ದಾಳೆ. ತನ್ನ ದುಃಖ ಯಾರಿಗೂ ಕಾಣದಂತೆ ಗಾರ್ಡನ್ ಬಳಿ ಬಂದು ಅವಳು ನಿಂತುಕೊಳ್ಳುತ್ತಾಳೆ. ಕಳೆದ ಕೆಲವು ವರ್ಷಗಳಿಂದ ಅವಳು ಅಲ್ಲಿಯೇ ತನ್ನ ದಂಧೆಯನ್ನು ಮಾಡುತ್ತಿರುವುದು ತುಂಬಾ ಸಮಯದವರೆಗೆ ಕಾಯುತ್ತಾ ನಿಂತಳು.

ಪರಿಚಯದ ಯಾವ ಗಿರಾಕಿಗಳೂ ಬರಲಿಲ್ಲ. ತನ್ನ ಜಡವಾದ ಮನಸ್ಸಿನಿಂದ ಪಾನ್‌ನ್ನು ತಿನ್ನುತ್ತಿದ್ದಳು. ಅವಳಲ್ಲಿರುವ ದುಃಖ ಕಾಣಬಾರದೆಂದು ಆಗಾಗ ಮುಖವನ್ನು ನೀರಿನಿಂದ ತೊಳೆದುಕೊಳ್ಳುತ್ತಿದ್ದಳು. ಆದರೆ ಅವತ್ತು ಮಾತ್ರ ಗಂಡಸರ ಮನಸ್ಸು ಅವಳ ಕಡೆ ಹರಿಯುತ್ತಿರಲಿಲ್ಲ. ಆಗ ಅವಳಿಗೆ ಅಳಬೇಕೆನಿಸುತ್ತಿದ್ದರೂ ಅನಿವಾರ್ಯತೆ ಆ ಅಳುವನ್ನುನುಂಗಿಸುತ್ತಿತ್ತು. ದಾರಿಯಲ್ಲಿ ಹೋಗುತ್ತಿರುವ ಪುರುಷರನ್ನು ಕಂಡು ಅವಳು ನಗುತ್ತಿದ್ದಳು. ತನ್ನ ಕಡೆ ಆಕರ್ಷಿಸಲು ಪ್ರಯತ್ನಿಸಲು ತನ್ನ ಮೈಯನ್ನು ಪ್ರದರ್ಶಿಸುತ್ತಿದ್ದಳು. ಯಾರೂ ಅವಳ ಬಳಿಗೆ ಬರದೆ ಅವಳ ಬೆಲೆಯನ್ನು ಕೇಳದೆ ಹೋಗುತ್ತಿದ್ದರು. ಸಮಯ ಮತ್ತು ಮನುಷ್ಯರಿಗೆ ಅವಳ ದುಃಖವು ಕಾಣುತ್ತಿರಲಿಲ್ಲ. ಕೆಳಗಿನ ಹೊಟ್ಟೆ ಖಾಲಿಯಿಂದ ಹಸಿದು ಚರ್ರನೆ ಸುಡುತ್ತಿತ್ತು. ಆಗ ಒಬ್ಬ ವ್ಯಕ್ತಿಯು ಕಾಣಿಸಿಕೊಂಡು ಅವಳಿಗೆ ನೆನಪಿಗೆ ಬಂತು. ಆತ ಅನೇಕ ಸಾರಿ ಅನೇಕ ಬಲಾತ್ಕಾರದಿಂದ ತನ್ನನ್ನು ಹಿಂಸಿಸಿ ಅತ್ಯಾಚಾರ ಮಾಡಿದ್ದನ್ನು ಅಯ್ಯೊ ಅವನ ಕೈಗೆ ಸಿಕ್ಕಿಕೊಂಡರೆ ನನ್ನನ್ನು ಬಿಡುವುದಿಲ್ಲ. ಅವನ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಏನು ಮಾಡಬೇಕೆಂದು ಅವಳಿಗೆ ತಿಳಿಯಲಿಲ್ಲ. ಆದರೆ ಅವನು ಅವಳನ್ನು ದಾಟಿಕೊಂಡು ಕಾಣದಂತೆ ಮುಂದೆ ಹೋಗುತ್ತಾನೆ.

ಅವನು ಹೋದ ಮೇಲೆ ಗಿರಿಜ ಅವನು ಸಿಕ್ಕಿದ್ದರೆ ಅವನ ಹಿಂಸೆಯಿಂದಾದರೂ ಒಂದಷ್ಟು ಹಣ ಸಿಗುತ್ತಿತ್ತು ಎಂದು ನೊಂದುಕೊಂಡಳು. ಮತ್ತೆ ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡು ಗಿರಾಕಿಗಳಿಗಾಗಿ ಕಾಯುತ್ತಾ ಮರದ ಕೆಳಗೆ ಸೋತು ಕುಸಿದಳು. ಆ ಮರದ ನೆರಳೂ ಕೂಡ ಗಿರಿಜಾಳನ್ನು ದೂರ ತಳ್ಳುತ್ತಿತ್ತು. ಅವಳು ನೆಲವನ್ನು ಬಿಡದೆ ಮರದ ಕೆಳಗೆ ಬಿದ್ದುಕೊಂಡಳು. ಅವಳ ಹೊಟ್ಟೆಯಲ್ಲಿ ದುಃಖ, ಹಸಿವು ಎರಡೂ ತುಂಬಿಕೊಂಡು ಯಾರಿಗೂ ಏನನ್ನೂ ಹೇಳದ ನೆರಳಿನಂತೆ ಮೂಕವಾಗಿ ಅವಳ ಮನಮುದುಡಿಕೊಂಡಿತ್ತು. ಆಗ ದೂರದಲ್ಲಿ ಒಬ್ಬ ತನ್ನ ಗಿರಾಕಿ ನಾರಾಯಣಶೆಟ್ಟಿಯನ್ನು ಕಾಣುತ್ತಾಳೆ. ಆಗ ಅವಳ ಮನಸ್ಸು ಸ್ವಲ್ಪ ಭರವಸೆಯನ್ನು ಮೂಡಿಸಿತು. ಈ ಅವಕಾಶವನ್ನು ಬಿಟ್ಟುಕೊಡಬಾರದೆಂದು ತೀರ್ಮಾನಿಸಿದಳು. ತನಗಿರುವ ವಾಸ್ತವ ಸಂಕಟಗಳನ್ನು ಅವನ ಬಳಿ ಹೇಳಿಕೊಳ್ಳಬೇಕೆಂದು ಆಲೋಚಿಸಿದಳು.

ಆದರೆ ಹಾಗೆ ಮಾಡಿದರೆ ನನ್ನಿಂದ ಗಿರಾಕಿಗಳು ಕೈ ತಪ್ಪುವ ಅಪಾಯಗಳುಂಟು ಆತನು ಮೂರ್‍ನಾಲ್ಕು ಗಿರಾಕಿಗಳನ್ನು ತರುತ್ತಾನೆ. ನನ್ನ ಸಂಕಟವನ್ನು ನನ್ನಲ್ಲಿಟ್ಟುಕೊಂಡು ಆತನನ್ನು ಒಲಿಸಿಕೊಳ್ಳಲೆಂದು ಪ್ರಯತ್ನಿಸಿದಳು. ಆಗ ನಾರಾಯಣ ಶೆಟ್ಟಿ ಅವಳ ಬೆಲೆಯನ್ನು ಕೇಳುತ್ತಾನೆ. ಅವನ ಉದ್ರೇಕವನ್ನು ಕಂಡು ಐದು ರೂಪಾಯಿ ಎಂದು ಹೇಳುತ್ತಾಳೆ. ಐದು ರೂಪಾಯಿಗಳಾದರೆ ಕೆಲ ಗಿರಾಕಿಗಳಿಂದ ಇಂದೇ ನಾನು ಊರಿಗೆ ಹೋಗಬಹುದೆಂದು ಆಲೋಚಿಸಿದಳು. ಅವನ ಮುಂದೆ ತನ್ನ ವೈಯ್ಯಾರವನ್ನು ತೋರಿಸಿದಳು. ನೀನೇ ಮೊದಲ ಗಿರಾಕಿ, ಮೊದಲನೇ ದಿನವೆ ಎಂದು ಸಮರ್ಪಣೆಯ ಭಾವನೆಯನ್ನು ತೋರ್ಪಡಿಸುತ್ತ ಅವನ ದೇಹದ ಮೇಲೆ ವಾಲಿದಳು. ಅವನು ಅವಳನ್ನು ತಬ್ಬಿಹಿಡಿದು ಅವಳ ಜೊತೆ ಹಾಗೇ ಕೈಚಟಗಳನ್ನು ತೀರಿಸಿಕೊಂಡು ಬಿಟ್ಟು ಹೋಗುತ್ತಾನೆ. ಆಗ ಅವಳು ತನ್ನ ವೃತ್ತಿಯನ್ನು ಶಪಿಸುತ್ತಾಳೆ. ಎಲ್ಲೆಂದರಲ್ಲಿ ಗಿರಾಕಿಗಳಿಗಾಗಿ ಅಲೆಯುತ್ತ ತನ್ನ ಸಂಕಟವನ್ನು ನುಂಗಿಕೊಂಡಳು.

ಸಿಕ್ಕ ದರಕ್ಕೆ ಮೈ ಮಾರಿ ದಂಧೆ ಮಾಡಬೇಕೆಂದು ನಿರ್ಧರಿಸಿಕೊಳ್ಳುತ್ತಾಳೆ. ಅವಳಿಗೆ ಇನ್ನೂ ಹೆಚ್ಚು ಸಮಯ ಇಳಿದಿರುವುದಿಲ್ಲ, ಹನ್ನೆರಡರ ಒಳಗೆ ತನ್ನ ಕೆಲಸವನ್ನು ಮುಗಿಸಿಕೊಳ್ಳಬೇಕು. ಬೆಳಿಗ್ಗೆ ತನ್ನ ಊರಿಗೆ ಹೋಗಲೇಬೇಕು. ಸಾಕಷ್ಟು ಸುತ್ತಾಡಿದರೂ ಯಾರೂ ಸಿಗಲಿಲ್ಲ. ಅವಳನ್ನು ಯಾರೂ ಲಕ್ಷಿಸಲೇ ಇಲ್ಲ. ಗಿರಿಜಾಳಿಗೆ ದುಃಖವೂ ಕೆರಳಿಸಿತು. ದಣಿದು ಹಸಿವಿನಿಂದ ಚಡಪಡಿಸುತ್ತ ತಲೆ ಕೆಟ್ಟಂತಾಗಿ ಒಬ್ಬ ಕನ್ನಡಕಧಾರಿ ಮನುಷ್ಯನನ್ನು ಸನ್ನೆ ಮಾಡಿ ಕರೆದಳು. ಆಗ ಅವನು ಅವಳ ಬಳಿಗೆ ಬರುತ್ತಾನೆ. ಇಬ್ಬರೂ ಮಾತು ಕಥೆಯಲ್ಲಿ ದರವನ್ನು ನಿರ್ಧರಿಸಿಕೊಳ್ಳುತ್ತಾರೆ. ಐದು ರುಪಾಯಿ ಎಂದು ಹೇಳಿದಾಗ ಎರಡು ರೂಪಾಯಿ ಎಂದು ನಿರ್ಧರಿಸಿದನು. ನೀನು ಬರುತ್ತಿಯೇ ಇಲ್ಲವೆಂದು ಕೇಳಿದನು. ಬೇರೆ ದಾರಿಯೇ ಇಲ್ಲದೆ ಸಮ್ಮತಿಸಲು ಅವನು ನೀನು ನೀಡುವ ಸುಖದಂತೆ ನಿನಗೆ ಬೆಲೆಯನ್ನು ನೀಡುತ್ತೇನೆ ಬಾ, ಬಾ ಎಂದು ಕರೆದುಕೊಂಡು ಹೋಗುತ್ತಾನೆ. ಅವಳಿಗೆ ಹಸಿದ ಹೊಟ್ಟೆಯಿಂದ ಎದ್ದು ನಿಲ್ಲಲು ಆಗುವುದಿಲ್ಲ. ಅದನ್ನು ಅವನು ನಾಚಿಕೆಯೆಂದು ತಿಳಿದುಕೊಂಡು

ಕೋಣೆಯ ಬಾಗಿಲು ಹಾಕುತ್ತಾನೆ. ಅವಳ ಕೈಯಲ್ಲಿ ಎರಡು ರೂಪಾಯಿ ಕೊಟ್ಟು, ತಾನೇ ಅವಳನ್ನು ಮೇಲೆತ್ತುಕೊಳ್ಳುತ್ತಾನೆ.

ಅವಳು ತೊಟ್ಟಿರುವ ಒಂದೊಂದು ಬಟ್ಟೆಯನ್ನು ಬಿಚ್ಚುವಾಗ ಅವಳ ಕೈಯಲ್ಲಿ ಎರಡೆರಡು ರೂಪಾಯಿ ಕೊಡುತ್ತ ಸಂಪೂರ್ಣ ಬೆತ್ತಲೆಯಾಗಿ ಮಾಡುತ್ತಾನೆ. ಅವಳ ಕೈಯಲ್ಲಿ ನೋಟುಗಳು ತುಂಬಿಕೊಳ್ಳುತ್ತವೆ. ಅವಳು ತನ್ನ ಊರಿಗೆ ಹೋಗುವಷ್ಟು ಔಷದೋಪಚಾರಕ್ಕೆ ಸಾಲುವಷ್ಟು ಹಣ ಸಂಗ್ರಹವಾಯಿತೆಂದು ಅವನು ಕೊಡುವ ಎಲ್ಲಾ ದೈಹಿಕ ಹಿಂಸೆಯನ್ನು ತಡೆದುಕೊಂಡು ಕೆಳಗಡೆ ಮಲಗಿಕೊಂಡಿದ್ದಳು. ಕೊನೆಗೆ ಅವನ ವಿಕೃತಕಾಮ ತೃಪ್ತಿ ತೀರಿಕೊಂಡಾಗ, ತಾನು ದೈಹಿಕವಾಗಿ ದಣಿದುಕೊಂಡು ಕೆಲ ನಿಮಿಷಗಳಲ್ಲಿ ತನ್ನ ಕೈ ನೋಡಿಕೊಂಡಾಗ ಕೈಯಲ್ಲಿ ಹಣವಿರುವುದಿಲ್ಲ. ಕೈ ಖಾಲಿಯಾಗಿತ್ತು. ಅವಳು ಚಡಪಡಿಸುತ್ತ ಮೇಲೆದ್ದಳು. ಅವನ ಕೆಟ್ಟತನ ಅವಳರಿವಿಗೆ ಬರುತ್ತದೆ. "ಮರುಕ್ಷಣವೇ ಅನಂತ ಯಾತನೆ ಸಹಿಸುವ ಸೊನ್ನೆಯ ಗಡಿದಾಟಿದ ಅವಳ ಸಹನಾಶೀಲತೆಯುಸಿಟ್ಟಿನಿಂದ ಪರಿವರ್ತನೆಗೊಂಡಿತ್ತು.

ಅದು ಅವಳ ದಣಿದ ದೇಹದೊಳಗೆ ವಿದ್ಯುತ್ತಾಗಿ ಸಂಚರಿಸಿತು. ಅವಳ ಕಣ್ಣಿನ ಸ್ನಾಯುವಿನ ಶಕ್ತಿಯು ಸಂಘಟಿತಗೊಳ್ಳಲಾರಂಭಿಸಿತು. ಉತ್ತೇಜಿತವಾಗತೊಡಗಿತು. ಅವಳ ಕಂಗಳಲ್ಲಿ ಸರ್ಪದ ಸಿಟ್ಟು ಗೋಚರಿಸಿತು. ಸಿಟ್ಟಿನಿಂದ ಚಹರೆ ಕೆಂಪಾಯಿತು. ಆವಡುಗಚ್ಚಿ ಸೀರೆಯನ್ನು ಹಾಗೂ ಹೀಗೂ ಸುತ್ತಿಕೊಂಡಳು. ಅವಳು ಜ್ವಾಲೆಯಂತೆ ಸಿಡಿದೆದ್ದಳು. ಏ ಭಾಡಕೋ ಎಲ್ಲಿ ಓಡುತ್ತೀಯಾ.....? ದುಡ್ಡು ಚೆಲ್ಲು....!"[೧೪] ಎಂದು ಗಿರಿಜಾ ತನ್ನ ವೇದನೆಯ ಸಿಟ್ಟಿನಿಂದ ಗರ್ಜಿಸುತ್ತಾಳೆ. ಆದರೆ ಅವನು ಯಾವ ಹಣವನ್ನೂ ಕೊಡದೆ, ದೂರ ತಳ್ಳಿ ಅಲ್ಲಿಂದ ಪರಾರಿಯಾಗುತ್ತಾನೆ. ಮಾಲೀಕನು ಪತ್ರದಲ್ಲಿ ಅವಳ ಮಗನಿಗೆ ಆರೋಗ್ಯ ಸರಿಯಿಲ್ಲವೆಂದು ಮಾತ್ರ ಹೇಳಿರುತ್ತಾನೆ. ಆದರೆ ನಿಜವಾಗಿಯೂ ಮಗನು ಸತ್ತು ಹೋಗಿರುತ್ತಾನೆ.

ತನ್ನ ಮಗನ ಮುಖವನ್ನು ನೋಡುವುದಕ್ಕಾಗಿ ಒಬ್ಬ ದಲಿತ ತಾಯಿ ಅದೆಷ್ಟು ಸಂಕಟಗಳನ್ನು ಪಡುತ್ತಾಳೆ ಎಂಬುದನ್ನು ಈ ಕಥೆಯು ತೋರಿಸಿಕೊಟ್ಟಿದೆ. ದಲಿತ ಮಹಿಳಾ ಸಂವೇದನೆಗಳೇ ತುಂಬಿರುವ ಈ ಕಥೆಯಲ್ಲಿ ಗಿರಿಜಾಳ ಅಸಹಾಯಕ ಸ್ಥಿತಿಗೆ ಅವಳು ಹಾದಿಯವಳಾಗಿ ಬದುಕುತ್ತಿರುವುದನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದಲಿತ ಮಹಿಳೆಯರಿಗೆ ಸಂವಿಧಾನಿಕ ಮೂಲಭೂತ ಹಕ್ಕುಗಳು ಸಿಗದಂತೆ ಮಾಡಿರುವ ಬಂಡವಾಳಶಾಹಿಗಳು ಮತ್ತು ಅಧಿಕಾರಿಶಾಹಿಗಳು ದಲಿತ ಹೆಣ್ಣುಮಕ್ಕಳ ಮೇಲೆ ನಿರಂತರವಾಗಿ ಮಾಡುತ್ತಿರುವ ಸಾಮಾಜಿಕ ಮತ್ತು ಆರ್ಥಿಕ ಶೋಷಣೆಗಳಾಗಿರುತ್ತವೆ. ಈ ಶೋಷಣೆಗೆ ಒಳಪಟ್ಟಿರುವ ದಲಿತ ಮಹಿಳೆಯರು ಹಾದಿಯಲ್ಲಿ ಬಡತನದಿಂದ ನರಳಾಡುತ್ತ ತಮ್ಮ ದೇಹವನ್ನು ಬಂಡವಾಳಶಾಹಿಗಳಿಗೆ ಅರ್ಪಿಸಿಕೊಂಡು, ತಮ್ಮ ಜೀವನವನ್ನೇ ಸರ್ವನಾಶ ಮಾಡಿಕೊಳ್ಳುತ್ತಾರೆ ಎಂಬುದನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ಗ್ರಹಿಸಿಕೊಂಡು ದಲಿತ ಮಹಿಳೆಯರು ಪಡುತ್ತಿರುವ ಬದುಕಿನ ಸವಾಲು ಮತ್ತು ಸಮಸ್ಯೆಗಳನ್ನು ಈ ಕಥೆಯ

ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ದಲಿತ ಮಹಿಳಾ ಸಂವೇದನೆಯ ನೆಲೆಯಲ್ಲಿ ವಾಸ್ತವದ ಸ್ಥಿಗತಿಗಳನ್ನು ಹೆಣ್ಣಿನ ಅಂತರಂಗದ ನೋವುಗಳನ್ನು ಈ ಕಥೆಯು ಸ್ತ್ರೀವಾದದ ನೆಲೆಯಿಂದ ಪ್ರತಿಪಾದಿಸುತ್ತದೆ.

"ಮ. ರಂಗನಾಥನ್ ಕಥೆಗಳು" ಎಂಬ ತಮಿಳು ಕಥಾ ಸಂಕಲನವನ್ನು ಡಾ. ತಮಿಳ್ ಸೆಲ್ವಿಯವರು ಕನ್ನಡನುವಾದ ಮಾಡಿರುತ್ತಾರೆ. ಈ ಕಥಾ ಸಂಕಲನದಲ್ಲಿರುವ 'ಮನದ ಕಣ್ಣು' ಎಂಬ ಕಥೆಯು ವರ್ಣವ್ಯವಸ್ಥೆಯನ್ನಾಧರಿಸಿ ತಿರಸ್ಕರಿಸಲ್ಪಟ್ಟು, ಮನೋವ್ಯಥೆಯಲ್ಲಿರುವ ಶೂದ್ರರೆಂಬ ಹರಿಜನ ಜಾತಿಯನ್ನು ನಿಂದನೆಗೊಳಪಡಿಸಿದ, ಪುರೋಹಿತಶಾಹಿಗಳಿಂದ ಜಾತಿನಿಂದನೆಯನ್ನು ತಾಳಲಾಗದವನ ಒಂದು ಮನಸ್ಥಿತಿಯನ್ನು ಈ 'ಮನದ ಕಣ್ಣು' ಕಥೆಯು ತೆರೆದುನೋಡುತ್ತದೆ. ಒಳಗಣ್ಣಿನಿಂದ ದಲಿತ ದಮನಿತರ ನೋವು ಇಂತಹ ಸಾಮಾಜಿಕ ವ್ಯವಸ್ಥೆಯನ್ನು ಸೃಷ್ಟಿಸಿದ ಬ್ರಾಹ್ಮಣವಾದಿಗಳು ಮಾಡಿರುವ ಈ ಉಚ್ಚ ನೀಚವೆಂಬ ಪದ್ಧತಿಗಳಿಂದ ಒಂದು ಕೆಳವರ್ಗದ ಸಮುದಾಯವು ಹೇಗೆ ಮಾನಸಿಕವಾಗಿ ನೊಂದು, ಬೆಂದುಕೊಂಡ ತನ್ನ ಬದುಕನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ, ಇತ್ತ ಇರಲು ಆಗದೆ, ಅತ್ತ ಸಾಯಲು ಆಗದೆ ಬರೀ ನೋವನ್ನು ಉಂಡು ನೋವಿನಲ್ಲಿಯೇ ಮಲಗಿರುವವರ ಕುರಿತಾಗಿದೆ.

ಈ ಕಥೆಯು ತನ್ನ ಚಿಂತನೆಗಳ ಮೂಲಕ ದಲಿತರ ಜಾತಿಯತೆಯಿಂದ ಹೇಗೆ ಅವರು ಮಾನಸಿಕ ರೋಗಕ್ಕೆ ತುತ್ತಾಗಿದ್ದಾರೆ ಎಂಬುವುದನ್ನು ಅನಾವಣಗೊಳಿಸುತ್ತದೆ. ಮನುಷ್ಯನಿಗೆ ಬದುಕಲು ಬೇಕಾಗಿರುವುದು ಆತ್ಮಗೌರವ. ಅದನ್ನೇ ಕಸಿದುಕೊಂಡ ಮೇಲೆ ದಲಿತರು ಬದುಕು ಹೇಗೆ ನಡೆಸಬೇಕು. ಸ್ವತಂತ್ರವಿಲ್ಲದ ಸಮಾನತೆಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದಲಿತರಿಗೆ ಅವರದೇ ಆದ ಆತ್ಮಗೌರವ ಇರುವುದಿಲ್ಲ, ಇದನ್ನು ಸೃಷ್ಟಿಸಿದ ಪುರೋಹಿತಶಾಹಿಗಳ ಕುತಂತ್ರಕ್ಕೆ ಬಲಿಯಾಗಿ, ಈ ವರ್ಣವ್ಯವಸ್ಥೆಯ ಮೂಢ ಪದ್ಧತಿಯಿಂದ ಒಬ್ಬ ಮನುಷ್ಯನನ್ನು ಮನುಷ್ಯನಂತೆ ನೋಡಲು ಸಾಧ್ಯವಾಗದಿರುವ ಈ ವ್ಯವಸ್ಥೆಗೆ ದಲಿತ ದಮನಿತರು ಧಿಕ್ಕಾರವನ್ನು ಹಾಕುತ್ತಿದ್ದಾರೆ ಎಂಬುದು ಈ ಕಥೆಯಲ್ಲಿ ಮೂಲಕವಾಗಿ ತಿಳಿದುಬರುತ್ತದೆ. ಜಾತಿನಿಂದನೆಯಿಂದ ಒಬ್ಬ ವ್ಯಕ್ತಿಯನ್ನು ಅವಮಾನಿಸುವುದು ಅದು ಆತನ ಆತ್ಮಗೌರವಕ್ಕೆ ಮಾಡಿದ ಅನ್ಯಾಯವಾಗಿರುತ್ತದೆ.

ತನ್ನ ಜಾತಿಯು ತನಗೆ ನೋವನ್ನು ತರುತ್ತಿದೆ ಎಂದರೆ ಅದರಿಂದಾಗಿರುವ ತಿರಸ್ಕಾರದ ಅಪಮಾನಗಳು ಅಧಿಕವಾಗಿರುತ್ತವೆ. ಜಾತಿವ್ಯವಸ್ಥೆಯು ತಾನು ಮಾಡುವ ಕಾಯಕವನ್ನು ಗುರುತಿಸುವುದಕ್ಕಾಗಿ ನಿರ್ಮಾಣ ಮಾಡಿರುವಂತದ್ದು, ಅದನ್ನು ಮನುಷ್ಯ ಮನುಷ್ಯರ ನಡುವೆ ಅಂತರವನ್ನು ಸೃಷ್ಟಿಸಲು ಮಾಡಿರುವುದಿಲ್ಲ. ಇಂತಹ ಧೋರಣೆಯನ್ನು ಹೊಂದಿರುವ 'ಮನದ ಕಣ್ಣು' ಕಥೆಯು ಒಂದು ಸುಂದರವಾದ ಉದ್ಯಾನವನದಿಂದ ಪ್ರಾರಂಭವಾಗುತ್ತದೆ. ಸಂಜೆ ಸಮಯದಲ್ಲಿ, ಹಕ್ಕಿಗಳ ನಾದದಲ್ಲಿ, ಹೂವಿನ ಪರಿಮಳದಲ್ಲಿ, ತಂಪಾದ ತಂಗಾಳಿಯಲ್ಲಿ ಮನಸ್ಸಿನ ದಣಿವನ್ನು ನೀಗಿಸಿಕೊಳ್ಳಲು ಹಾಗೂ ದೇಹವನ್ನು ಆರೋಗ್ಯದಿಂದ ಕಾಪಾಡಿಕೊಳ್ಳಲು ದಂಡಿಸುವುದಕ್ಕಾಗಿ ಬಂದವರು ಅಲ್ಲಿ ಇಲ್ಲಿ ಅವರದೇ ಆದ ಮನಸ್ಸಿನ ಲೋಕದಲ್ಲಿ ತಮ್ಮ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಆ ಉದ್ಯಾನವನದಲ್ಲಿ ಯಾವ ಲಿಂಗ ಬೇಧವೂ ಇಲ್ಲದೆ ಹೆಂಗಸರು, ಗಂಡಸರು ಸೇರಿದ್ದರು. ಒಂದು

ಬೆಂಚಿನ ಮೇಲೆ ಒಬ್ಬ ವ್ಯಕ್ತಿ ದಿನಪತ್ರಿಕೆಯನ್ನು ಓದುತ್ತಾ ಕುಳಿತುಕೊಂಡಿದ್ದನು. ಅದು ಇಂಗ್ಲೀಷ್ ದಿನಪತ್ರಿಕೆಯಾಗಿತ್ತು.

ಅದನ್ನು ಪಕ್ಕದಲ್ಲಿ ಕುಳಿತಿದ್ದ ಒಬ್ಬ ಹೆಂಗಸು ಗಮನಿಸಿದಳು. ಆತನನ್ನು ದಿನಪತ್ರಿಕೆಯನ್ನು ಓದಲು ಇಂಗ್ಲೀಷ್‌ನಲ್ಲಿಯೇ ಕೇಳಿದಳು. ಆಗ ಆತನು ಇವಳು ತುಂಬಾ ಓದಿಕೊಂಡಿರುವಳೆಂದು ಅವಳಾಡಿದ ಮಾತಿನಿಂದಲೇ ತಿಳಿದುಕೊಂಡನು. ನಂತರ ಅವಳು ಓದು ಮುಗಿಸಿ ಧನ್ಯವಾದ ಹೇಳುತ್ತಾ ಈ ಸುದ್ದಿಪತ್ರಿಕೆಯನ್ನು ಓದುವುದಕ್ಕಿಂತಲೂ ಇಲ್ಲಿ ನಡೆಯುತ್ತಿರುವುದನ್ನು ನೋಡುವುದೇ ಮೇಲು. ನೋಡುವುದು ಕಣ್ಣೇ ಆಗಿದ್ದರೂ ಕಾಣುವ ನೋಟ ಮನಸ್ಸಿಗೆ ಸಂಬಂಧಿಸಿದ್ದು.'ಭಾವ ಉಂಟಾದರೆ ತಾನೇ ಮನಸ್ಸು' 'ಒಳ್ಳೆಯ ಮನದ ಕಣ್ಣೇ ನಿರ್ಮಲ'ವೆಂದು ಅವಳು ತಾತ್ವಿಕತೆಯಲ್ಲಿ ಅವನ ಜೊತೆ ತನ್ನ ಮಾತುಗಳನ್ನು ಮುಂದುವರೆಸುತ್ತಾ 'ನನಗೇನೂ ಗೊತ್ತಿಲ್ಲ ಎಂಬುದಷ್ಟೇ ನನಗೆ ಗೊತ್ತು' ಎಂದು ಗ್ರೀಕ್ ದೇಶದ ಮುದುಕ ಹೇಳಿದ್ದಾನಲ್ಲ ಎಷ್ಟು ಸತ್ಯ. ಆಗ ಅವನು ಹೌದು ನಿಜ ಗ್ರೀಕ್ ದೇಶದಲ್ಲಿ ಹುಟ್ಟಿದವರೆಲ್ಲ ಸಾಕ್ರಟೀಸ್ ಆಗಲು ಸಾಧ್ಯವಿಲ್ಲ. ಆದರೆ ಮನುಷ್ಯನ ಚಿಂತನೆಗಳು ಸಾಮೂಹಿಕವಾದ ಪ್ರಯತ್ನವಾಗಿರಬೇಕು.

ಹಾಗೆ ನೋಡಿದರೆ ಇಲ್ಲಿ 'ನಮಗಿಂತ ದೊಡ್ಡವನೂ ಇಲ್ಲ, ನಮಗಿಂತ ಚಿಕ್ಕವನೂ ಇಲ್ಲ' ಅಲ್ವಾ ಎಂದು ಕೇಳುತ್ತಾನೆ. ಆಗ ಅವಳಿಗೆ ಸಂತೋಷ ಉಕ್ಕಿ ಬಂದು ಅವಳು ಅವನ ಬಗೆಗಿದ್ದ ತನ್ನ ಭಾವನೆಗಳನ್ನು ಬದಲಾಯಿಸಿಕೊಂಡು ಇವನೂ ಒಬ್ಬ ವಿಚಾರವಾದಿಯೆಂದು ತಿಳಿದುಕೊಳ್ಳುತ್ತಾಳೆ. ಹೀಗೆ ಅವರಿಬ್ಬರ ಮಾತು ಸಂಶೋಧನಾತ್ಮಕವಾಗಿ ಮುಂದುವರೆಯುತ್ತಾ ನೀವು ಒಂದು ಮಾತು ಹೇಳಿದ್ರಲ್ಲಾ .... ನನಗಿಂತ ದೊಡ್ಡವನೂ ಇಲ್ಲ, ನನಗಿಂತ ಚಿಕ್ಕವನೂ ಇಲ್ಲ..! ಅಂತ ಅದನ್ನು ಹೇಳಿದ್ದು ಯಾರು ಮಾರ್ಕ್ಸ್ ಎಂದು ಕೇಳುತ್ತಾಳೆ. ಆಗ ಅವನು ನಿಮಗೆ ಕಾರ್ಲಮಾರ್ಕ್ಸ್ ತುಂಬಾ ಹಿಡಿಸ್ತಾರೇ....? ಇರಬೇಕು ಅಂತ ನನಗೆ ಅನಿಸುತ್ತದೆ ಎಂದು ಹೇಳುತ್ತಾನೆ. ಹೌದು ಹಿಡಿಸುತ್ತಾನೆ ಅವನ ಈ ಮಾತು 'ನಿರ್ದಿಷ್ಟವಾಗಿ ಒಬ್ಬ ಗಂಡಸು ಒಬ್ಬ ಹೆಂಗಸು ಅವರಿಬ್ಬರಿಗೆ ಸಂಬಂಧಿಸಿದ ಖಾಸಗಿ ವಿಷಯವಷ್ಟೇ ಸೆಕ್ಸ್' ಇದು ನನಗಿಷ್ಟವಾದದ್ದೇ ಎಂದು ಹೇಳುತ್ತಾಳೆ. ಆಗ ಅವನು ಇದನ್ನೇ ಜಯಕೃಷ್ಣ ಮೂರ್ತಿ ಇನ್ನೊಂದು ರೀತಿಯಲ್ಲಿ ಹೇಳಿದ್ದಾರೆ.

ಆದರೆ ಅವರಿಬ್ಬರ ಆ ಎರಡು ಮಾತುಗಳ ಸಾರ ಒಂದೇ ಆಗಿದೆ ಎಂದು ಅವನು ಹೇಳುತ್ತಾನೆ. ಆಗ ಅವಳು ನೀವು ಜಿಕೆ ಅವರನ್ನು ನೋಡಿದ್ದೀರಾ ಎಂದು ಕೇಳುತ್ತಾಳೆ. ಅವನು ಹೌದು ಅವರ ಈ ಮಾತು 'ನೀವು ನನ್ನ ಬಗ್ಗೆ ಹಲವು ವಿಷಯಗಳನ್ನು ತಿಳಿದುಕೊಂಡಿರಬಹುದು. ಅವು ನಮ್ಮಿಬ್ಬರ ಅಂತರಂಗಕ್ಕೆ ಸಂಬಂಧಿಸಿದ್ದು' ಎಂದು ಜಿಕೆಯವರು ಹೇಳುವ ಮಾತು ನನಗಿಷ್ಟವೆಂದು ಹೇಳುತ್ತಾನೆ. ಆಗ ಅವಳು ನಿಮಗೆ ಪುಸ್ತಕ ಓದುವ ಹವ್ಯಾಸವಿದೆ ಎಂದಾಯಿತು ಎನ್ನುತ್ತಾಳೆ. ಜಿಕೆಯವರ ಪುಸ್ತಕವನ್ನು ಕೊಂಡುಕೊಳ್ಳುತ್ತೇನೆ ಎಂದು ಹೇಳುತ್ತಾನೆ. ನಂತರ ಉದ್ಯಾನವನದ ಕಾವಲುಗಾರ ಬರುತ್ತಾನೆ. ಇದು ರಾತ್ರಿ ಎಂಟು ಗಂಟೆಗೆ ಮುಚ್ಚುತ್ತೆಂದು ಅವಳನ್ನು ಹೇಳಿ

ತಾನಿರುವ ಹೋಟಲಿನ ರೂಂಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಅವಳಿಗೆ ಜಿಕೆಯವರ ಪುಸ್ತಕ ಕೊಟ್ಟು ಜಿಕೆಯವರ ಮಾತನ್ನು ನೆನಪು ಮಾಡುತ್ತಾನೆ. ಒಳ್ಳೆಯ ಪ್ರಶ್ನೆ ತನ್ನೊಳಗೆ ಉತ್ತರವನ್ನು ಒಳಗೊಂಡಿರುತ್ತದೆ ಎನ್ನುತ್ತಾರೆ ಜಿಕೆ.

ಆಗ ಅವರಿಬ್ಬರ ತಾತ್ವಿಕತೆಯ ಮಾತಿನಲ್ಲಿ ಆ ಪುಸ್ತಕದ ಮೇಲೆ ಒಂದು ಪೇಪರ್ ಇರುತ್ತದೆ. ಅದರಲ್ಲಿರುವ ಭಾವಚಿತ್ರವನ್ನು ಕಂಡು ಇವರು ನಿಮ್ಮ ತಂದೆ ತಾನೆ ಎಂದು ಕೇಳುತ್ತಾಳೆ. ಆಗ ಅವನುಹೌದು ಹರಿಜನ ಸಂಘದ ಮುಖಂಡ ಎಂದು....ನನ್ನ ತಂದೆಯೇ....! ಹಲವು ವರ್ಷಗಳ ಹಿಂದೆ ಪೇಪರಿನಲ್ಲಿ ಬಂದ ಚಿತ್ರ. ಅವರು ಎನು ಹೇಳಿದ್ರು ಆದರೆ ಆ ಹೆಸರಿನಿಂದ ಗುರುತಿಸಿಕೊಳ್ಳುವುದು ಇನ್ನೂ ಅವಮಾನ.... ಎಂದು ನಮ್ಮನ್ನು ಹಾಗೆ ಕರೆಯುವ ಹಕ್ಕು ಯಾರಿಗೂ ಇಲ್ಲ ಎನ್ನುತ್ತಿದ್ದರು. ಎಂದು ಅವನು ಹೇಳುತ್ತಾ ಆ ಹರಿಜನ ಹೆಸರು ನನ್ನೊಳಗಿನ ಮಲಿನತೆಯನ್ನು ಹೋಗಿಲ್ಲವೆಂಬುವುದನ್ನು ನಿರೂಪಿಸಿದೆ ಎಂದು ಹೇಳುತ್ತಾನೆ. ಆಗ ಅವಳು ಧರ್ಮವನ್ನು, ದೇವರನ್ನು ಕೆಲವರು ತಮ್ಮ ಹೊಟ್ಟೆಪಾಡಿಗಾಗಿ ಸೃಷ್ಟಿಸಿಕೊಟ್ಟಿದ್ದಾರೆ. ನನಗೆ ಜಿಕೆ ಮಾರ್ಕ್ಸರನ್ನು ಓದುವ ಅರ್ಹತೆಯಿಲ್ಲವೆಂದು ಅರ್ಥವಾಗುತ್ತಿದೆ. ನನಗೆ ನಾನು ಕತ್ತಲಿನಿಂದ ಹೊರಹೋಗಬೇಕು.

"ಯಾವುದೇ ಚಡಪಡಿಕೆಯು ಇಲ್ಲದೆ ನಾನು ಪರಿಹಾರ ಮಾಡಿಕೊಳ್ಳಬೇಕು. ನದಿಯಲ್ಲಿ ಸ್ನಾನ ಮಾಡಿ ಅಲ್ಲ, ನಡೆಯಬೇಕು ಮರಗಳನ್ನು, ಬೆಟ್ಟಗಳನ್ನು ನೋಡಬೇಕು. ಮಲಿನತೆಯಿಲ್ಲದೆ ಯಾವ ಪೂರ್ವ ನಿರ್ಧಾರವು ಇಲ್ಲದೆ ಎಲ್ಲವನ್ನೂ ನೋಡುವ ಸ್ಥಿತಿಯಲ್ಲಿ ನಾನು"[೧೫] ಎಂದು ಹೇಳುತ್ತಾಳೆ. ಅವರಿಬ್ಬರು ಅಷ್ಟೊಂದು ತಾತ್ವಿಕವಾದ ಜ್ಞಾನವನ್ನು ಪಡೆದುಕೊಂಡಿದ್ದರೂ ಸಮಾಜದಲ್ಲಿ ಸೃಷ್ಟಿ ಮಾಡಿದ ಆ ಪುರೋಹಿತಶಾಹಿಗಳ ಜಾತಿವ್ಯವಸ್ಥೆಯು ಅವರಿಬ್ಬರಲ್ಲೂ ಎಂತಹ ವೇದನೆಯನ್ನು ಸೃಷ್ಟಿಮಾಡುವುದಕ್ಕೆ ಕಾರಣವಾಗಿದೆ ಎಂಬುದು ಅವರಿಬ್ಬರ ಕೊನೆಯ ಮಾತುಗಳೇ ಸಾಕ್ಷಿಯಾಗಿವೆ. ಹೀಗೆ ಮನುಷ್ಯನ ಮೇಲೆ ಜಾತಿ ಎಂಬ ವಿಷ ಬೀಜದಿಂದ ಸಮಾಜದಲ್ಲಿ ಬದುಕುವುದಕ್ಕೆ ದಲಿತ ಸ್ತ್ರೀ ಹೆಣ್ಣು ಮಕ್ಕಳಿಗೆ ಜಾತಿನಿಂದನೆಯಿಂದ ಆತ್ಮಗೌರವ ಸಿಗದಂತಾಗಿ, ಸಮಾನತೆಯ ಸಮಾಜದಿಂದ ವಂಚಿತರಾಗಿ ಶೋಷಣೆಯನ್ನು ಅನುಭವಿಸುತ್ತಿದ್ದಾಳೆ.

ಜಾತಿವ್ಯವಸ್ಥೆಯು ಒಂದು ಹೆಣ್ಣಿನ ಮನಸ್ಸಿನ ಮೇಲೆ ಎಂಥಹ ಪರಿಣಾಮವನ್ನು ಬೀರುತ್ತದೆಯೆಂಬುವುದನ್ನು ಈ ಕಥೆಯು ನಿರೂಪಿಸುತ್ತದೆ. ಸಾಕ್ರಟೀಸ್, ಕಾರ್ಲಮಾರ್ಕ್ಸ್, ಜಯಕೃಷ್ಣಮೂರ್ತಿಯಂತವರ ವಿಚಾರಧಾರೆಗಳ ಕುರಿತು ಚಿಂತನೆಯನ್ನು ಮಾಡಿದ 'ಒಬ್ಬ ಮಹಿಳೆ' ಈ ಕಥೆಯಲ್ಲಿ ಜಾತಿಯಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ಕಂಡು ಈ ಸಮಾಜದಿಂದಲೇ ನಾನು ದೂರ ಸರಿಯಬೇಕು. ನನ್ನದೇ ಏಕಾಂತ ವಾತಾವರಣದಲ್ಲಿ ಬದುಕಬೇಕು. ಮನುಷ್ಯನ ಸೃಷ್ಟಿ ಮಾಡಿಕೊಂಡ ಅನಿಷ್ಠ ಮೂಢ ಪದ್ಧತಿಗಳಿಂದಾಗಿ ಈ ಭೂಮಿಯ ಮೇಲೆ ಮಾನವ ಪ್ರೇಮವೇ ಇಲ್ಲದಂತಾಗಿರುತ್ತದೆ. ನಾವು ಶ್ರೇಷ್ಠರು ನಮಗೆ ಮಾತ್ರ ದೇವರನ್ನು ಕಾಣುವ ಶಕ್ತಿಯಿದೆ.ಎಲ್ಲದಕ್ಕೂ

ನಾವು ಯೋಗ್ಯರೆಂದುಕೊಂಡು ಬದುಕುತ್ತಿರುವ ಪುರೋಹಿತಶಾಹಿಗಳ ಚಿಂತನೆಯಲ್ಲಿ ಬರೀ ಭ್ರಾಂತಿ ತುಂಬಿಕೊಂಡಿದೆ. ದಲಿತರೆಂಬುವವರು ಕನಿಷ್ಠರು ಅವರನ್ನು ಸ್ಪರ್ಶಿಸಬಾರದು.

ದೇವಾಲಯಗಳಲ್ಲಿ ಪ್ರವೇಶವನ್ನು ನೀಡಬಾರದು, ಸಾಮಾಜಿಕ ಸ್ಥಾನಮಾನಗಳನ್ನು ನೀಡಬಾರದು, ಅವರು ಹೊಲಸನ್ನು ಹೋರುವುದಕ್ಕೆ ಮಾತ್ರ ಯೋಗ್ಯರು, ಅವರಲ್ಲಿ ಜ್ಞಾನ ಇಲ್ಲ ಇತ್ಯಾದಿ ಅಂಶಗಳಿಂದ ಮನುಷ್ಯರೇ ಆದ ದಲಿತರನ್ನು ಸಮಾಜದಿಂದ ಪ್ರತ್ಯೇಕಿಸಿ ನೋಡುತ್ತಿರುವುದು ಒಬ್ಬ ಮನುಷ್ಯ ಮತ್ತೊಬ್ಬ ಮನುಷ್ಯನಿಗೆ ತಿಳಿದೋ ತಿಳಿಯದೆ ಮಾಡುತ್ತಿರುವ ಸಾಮಾಜಿಕ ಶೋಷಣೆಯಾಗಿರುತ್ತದೆ. ಸಮಾಜದಲ್ಲಿ ಮಹಿಳೆಯರಿಗೆ ಗೌರವವಿರಬೇಕು 'ಎಲ್ಲಿ ಹೆಣ್ಣುಮಕ್ಕಳನ್ನು ಗೌರವದಿಂದ ಕಾಣುತ್ತಾರೋ ಅಲ್ಲಿ ದೇವತೆಗಳು ನೆಲೆಸಿರುತ್ತಾರೆ' ಎಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಆ ಶಾಸ್ತ್ರ ಓದಿದ ಪಾಂಡಿತ್ಯವಂತರೇ ಹೆಣ್ಣನ್ನು ಹೀನವಾಗಿ ಕಂಡು, ಕೇವಲ ಒಂದು ಭೋಗ ವಸ್ತುವೆಂದು ದಲಿತ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡುತ್ತಿರುವುದು ಹೆಣ್ಣಿನ ಮೇಲಿನ ಸಾಮಾಜಿಕ ಶೋಷಣೆಗಳನ್ನು ಕಂಡು ಆ ಮಹಿಳೆಯು ಇಂತಹ ಅಸಮಾನತೆಯ ಸಮಾಜದಿಂದ ನಾನು ಬಿಡುಗಡೆ ಹೊಂದಬೇಕು.

ಮನುಷ್ಯರು ತಮ್ಮ ಮನಸ್ಸಿನ ಮಲಿನತೆಯನ್ನು ಕಳೆದುಕೊಳ್ಳಬೇಕು. ಅದು ನದಿಯ ನೀರಿನಿಂದಲ್ಲ, ಅರಿವಿನ ಮೂಲಕ ಸಮಾನತೆಯಲ್ಲಿ ಬದುಕುವುದರ ಮೂಲಕವೆಂದು ತಿಳಿಸಿಕೊಡುತ್ತಾಳೆ. ನಾನು ಮರಗಳನ್ನು ಬೆಟ್ಟಗಳನ್ನು ನೋಡಬೇಕು. ಈ ಸಮಾಜವನ್ನು ನೋಡಲಾಗದು, ಮರ ಬೆಟ್ಟಗಳಂತೆ ಸಮಾಜವಾಗಬೇಕೆಂಬ ಕನಸನ್ನು ಕಾಣುತ್ತಾಳೆ. ಮರಗಳಿಗೆ ಯಾವ ಜಾತಿ ಬೇಧ ಇಲ್ಲದಂತೆ ತನ್ನ ನೆರಳನ್ನು ನೀಡುತ್ತದೆ. ಬೆಟ್ಟವು ಎಲ್ಲವನ್ನೂ ಒಳಗೊಂಡು ಶಾಂತವಾಗಿರುತ್ತದೆ. ಹೀಗಾಗಿ ಆ ಮಹಿಳೆಯು ಈ ಸಮಾಜದ ಅಸಮಾನತೆಯನ್ನು ಕಂಡು ಪುರೋಹಿತಶಾಹಿಗಳ ಶಾಸ್ತ್ರ ಪದ್ಧತಿಯನ್ನು ತಿರಸ್ಕರಿಸಿದ್ದಾಳೆ. ಮಹಿಳೆಯರು ಸಮಾನತೆಯಿಂದ, ಸ್ವಾತಂತ್ರತೆಯಿಂದ, ನಿರ್ಭೀತರಾಗಿ ಬದುಕನ್ನು ನಡೆಸಬೇಕು. ಯಾರೂ ಮೇಲಲ್ಲ, ಯಾರೂ ಕೀಳಲ್ಲ ಎಲ್ಲರೂ ಮನುಷ್ಯರು ಎಲ್ಲರಿಗೂ ಅವರದೇ ಆದ ಆತ್ಮಗೌರವದೊಂದಿಗೆ ಬದುಕುವ ಹಕ್ಕು ಇದೆ. ಅದಕ್ಕೆ ಯಾರೂ ಧಕ್ಕೆ ತರಬಾರದು. ಸ್ವತಂತ್ರ ಭಾರತದ ಪ್ರಜೆಗಳಾದ ನಾವೆಲ್ಲರೂ ಒಂದೇ ಎಂದು ಬಾಳಬೇಕು.

ದಲಿತ ಹೆಣ್ಣುಮಕ್ಕಳ ಕಣ್ಣೀರು ಕೊನೆಯಾಗಬೇಕು ಎಂಬ ಆಸೆಯನ್ನು ಹಾಗೂ ದಲಿತ ಸ್ತ್ರೀಯರು ಪಡುತ್ತಿರುವ ಮಾನಸಿಕ ವೇದನೆಯ ಆ ಮಹಿಳೆಯ ಮಾತಿನ ಮೂಲಕ ಕಥೆಗಾರರು ಈ ಕಥೆಯಲ್ಲಿ ತುಂಬಾ ತಾತ್ವಿಕವಾಗಿ ಚರ್ಚಿಸಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಸ್ತ್ರೀಯರು ಪಡುತ್ತಿರುವ ಮಾನಸಿಕ ಸ್ಥಿತಿಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ವಿಚಾರಗಳ ಮೂಲಕವಾಗಿ ಸಮಾಜ ಬದಲಾಗಬೇಕು. ಸಂಪ್ರದಾಯ ಆಚರಣೆಗಳಿಂದ ಮತ್ತೊಬ್ಬರು ಶೋಷಣೆಗೆ ಒಳಪಡಬಾರದೆಂಬ ಆಶಯವನ್ನು ಈ ಕಥೆಯು ಅಂಬೇಡ್ಕರವಾದದ ನೆಲೆಯಿಂದ ತಿಳಿಸುತ್ತದೆ.

## ೪.೫. ಮಹಿಳಾ ಅಸಹಾಯಕತೆ ಮತ್ತು ಬಂಡವಾಳಶಾಹಿಗಳ ದುರುಪಯೋಗ

'ಕೌದಿ ಮತ್ತು ಇತರ ಅನುವಾದಿತ ಕಥೆಗಳು' ಎಂಬ ಕಥಾಸಂಕಲನವನ್ನು ವಿ. ಸುಬ್ರಮಣ್ಯ ನವರು ಕನ್ನಡನುವಾದ ಮಾಡಿದ್ದಾರೆ. ಇದರಲ್ಲಿರುವ 'ಶಿಕ್ಷೆ' ಎಂಬ ಕಥೆಯನ್ನು ಮಲಿಯಾಳಂ ಲೇಖಕಿ ಕಮಲಾದಾಸ್‌ರವರು ಬರೆದಿದ್ದಾರೆ. ಈ ಕಥೆ ಒಂದು ಹೆಣ್ಣಿನ ಮನಸ್ಸಿನ ತೊಳಲಾಟಗಳನ್ನು ಬಿತ್ತರಿಸುತ್ತದೆ. ಮದುವೆ ಒಂದು ಮಾನಸಿಕ ಒತ್ತಡವಾಗಬಾರದು. ಅದು ಕೇವಲ ದೈಹಿಕ ಸಂಬಂಧಕ್ಕೆ ಸಂಬಂಧಿಸಿದ್ದಲ್ಲ. ಪ್ರತಿಯೊಂದು ಹೆಣ್ಣಿಗೂ ಅವಳದೇ ಆದ ಕನಸುಗಳಿರುತ್ತವೆ. ಅವಳಿಗೆ ಒಂದು ನಿರ್ದಿಷ್ಟವಾದ ಗುರಿ ಇರುತ್ತದೆ. ಮದುವೆ ಒಂದು ಬಲಾತ್ಕಾರದಿಂದ ಏರ್ಪಟ್ಟರೆ ಅದುವೇ ಶಿಕ್ಷೆಯಾಗುತ್ತದೆ ಎಂಬುದನ್ನು ಪ್ರತಿಬಿಂಬಿಸುವುಸುವುದೇ ಈ 'ಶಿಕ್ಷೆ' ಕಥೆಯು ಒಳಗೊಂಡಿರುತ್ತದೆ. ಲೇಖಕಿಯವರಾದ ಕಮಲಾದಾಸರು ಹೆಣ್ಣಿನ ದೈಹಿಕ ಮತ್ತು ಮಾನಸಿಕ ಸೂಕ್ಷ್ಮ ಸಂವೇದನೆಗಳನ್ನು ಕಥೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ. ಕುಟುಂಬಕ್ಕೆ ಬೆಳಕಿನ ಕಣ್ಣಾಗಿರುವ ಒಂದು ಹೆಣ್ಣು, ಅದನ್ನೇ ಹುಣ್ಣು ಎಂದು ಭಾವಿಸಿ ಅವಳು ತವರು ಮನೆಯಿಂದ ಗಂಡನ ಮನೆಗೆ ಹೋದರೆ ಸಾಕಪ್ಪ ಸಾಕು ಅಂತ ಮದುವೆಯ ಬಂಧನದಲ್ಲಿ ಅವಳ ಮನಸ್ಸಿನಾಳದ ಸ್ಥಿತಿಯನ್ನು ಕೇಳದೆ ಹೇಳದೆ ಸಿಕ್ಕಿಸುವುದು ಆ ಹೆಣ್ಣಿಗೆ ತವರುಮನೆಯು ಕೊಡುವ ಒಂದು ನಿರ್ಧರಿತ ಮನೋಶಿಕ್ಷೆಯಾಗಿದೆ.

ಗಂಡು ಹೆಣ್ಣಿನ ಸಂಗಮಕ್ಕೆ ಮದುವೆಯೊಂದು ಸಾಕ್ಷಿಯಾಗಬಾರದು. ಬಹುದಿನಗಳವರೆಗೆ ಕೂಡಿ ಬಾಳುವ ಪಯಣದಲ್ಲಿ ಮದುವೆ ಹರ್ಷವನ್ನು ತರಬೇಕು. ಕನಸ್ಸಿನ ಮದುವೆಯಲ್ಲಿ ಬರೀ ಚಿತ್ರಗಳೇ ತುಂಬಿರುತ್ತವೆ. ಆದರೆ ವಾಸ್ತವದ ಬದುಕಿನಲ್ಲಿ ಜೀವವೇ ಧ್ವನಿಸುತ್ತಿರುತ್ತದೆ. ಹೀಗಾಗಿ ಮದುವೆ ಜೀವನಕ್ಕೆ ಆಸರೆಯಾಗಬೇಕು. ಅವಸಾನದವರೆಗೂ ತಿಳಿಯಾಗಿ ತಿಳಿದು ಬದುಕುತ್ತಿರಬೇಕು. ಆಗ ಮದುವೆ ಸಾರ್ಥಕತೆಯನ್ನು ಪಡೆದುಕೊಳ್ಳುತ್ತದೆ. ಇಲ್ಲದಿದ್ದರೆ ಬಾಳಿನ ಕೊರಳಿಗೆ ಮದುವೆ ಶಿಕ್ಷೆಯಾಗಿರುತ್ತದೆ. ಇಂತಹ ಅತ್ಯಮೂಲ್ಯವಾದ ಸಂಗತಿಗಳನ್ನು ಕಮಲಾದಾಸರು ತಮ್ಮ 'ಶಿಕ್ಷೆ' ಎನ್ನುವ ಕಥೆಯ ಮೂಲಕ ಹೆಣ್ಣಿನ ಸಂವೇದನೆಗಳನ್ನು ಹೊರ ಹಾಕಿದ್ದಾರೆ. ಇದೊಂದು ಹೆಣ್ಣಿನ ಕಥೆಯಾಗಿರದೆ, ಕತೆಯಲ್ಲಿರುವ ಜೀವವೇ ಹೆಣ್ಣಾಗಿ ಅವಳ ಸೂಕ್ಷ್ಮ ಸಂವೇದನೆಗಳನ್ನು ಕಥಾ ನಿರೂಪಣೆಯ ಹಂದರದಲ್ಲಿ ತುಂಬಿಕೊಂಡಿರುತ್ತದೆ. 'ಅಮ್ಮು' ಹದಿನೈದು ವರ್ಷದ ಹುಡುಗಿ.

ಶಾಲಾ ಕಾಲೇಜಿನಲ್ಲಿ ಗೆಳತಿಯರ ಜೊತೆ ಆಟ ಆಡಿಕೊಂಡು, ಪಾಠ ಕೇಳಿಕೊಂಡು, ತನ್ನದೇ ಆದ ಕನಸುಗಳಿಗೆ ನೀರೆರೆದುಕೊಂಡು, ಬೆಳೆಯಬೇಕಾಗಿರುವ ಅಪ್ರಾಪ್ತ ಬಾಲಕಿಗೆ, ಬದುಕಿನ ಬಣ್ಣಗಳಿಗೆ ಅರ್ಥವೇ ಗೊತ್ತಿಲ್ಲದವಳಿಗೆ ಕುಟುಂಬದವರು ಹೆಣ್ಣೆಂದರೆ ಅದು ನಮ್ಮ ಮನೆಗೆ ಹೊರೆ ಅದನ್ನು ಕಳಿಸಿಬಿಟ್ಟರೆ ಸಾಕು. ನಮ್ಮ ಭಾರವೇ ಕಳೆದು ಹೋಗುತ್ತದೆಂದು ಮದುವೆ ಮಾಡಿದ್ದಾರೆ. ಸಂಸಾರವೆಂದರೇನು ಹೇಗೆ ತಂದೆ ತಾಯಿಯರ ಮನೆಬಿಟ್ಟು ಅಪರಿಚಿತರ ಮನೆಯಲ್ಲಿ, ಇನ್ನು ದೈಹಿಕವಾಗಿ ಬೆಳವಣಿಗೆ ಇಲ್ಲದ ಸ್ಥಿತಿಯಲ್ಲಿ, ಗಂಡನ ಜೊತೆ ರಾತ್ರಿ ಮಲಗಬೇಕೆಂದರೆ ಅವಳಲ್ಲಿರುವ

ಮನಸ್ಸಿನ ಭಾವನೆಗಳು ಯಾರಿಗೂ ತಿಳಿಯುವುದಿಲ್ಲ. ಗಂಡನಾದವನಿಗೆ ಹೆಂಡತಿಯ ದೇಹಬೇಕು, ದೇಹದೊಳಗಿನ ಮನಸ್ಸು ಬೇಕಿಲ್ಲ. ಬೇಕಿದ್ದರೆ ಅವಳಿಗಾಗುವ ದೈಹಿಕ ಹಿಂಸೆಯನ್ನು ನಿಲ್ಲಿಸುತ್ತಿದ್ದ.

ಮಧ್ಯರಾತ್ರಿಯಲ್ಲಿ ಅವನ ಹಿಂಸೆ ತಾಳಲಾರದೆ 'ಅಮ್ಮು' ಎದ್ದು ಬಂದು ತನ್ನ ಅಜ್ಜಿಯ ಹಾಸಿಗೆಯ ತುದಿಯಲ್ಲಿ ಮುದುಡಿಕೊಂಡು ಮಲಗಿದ್ದಾಳೆ. ಅವಳ ವೇದನೆಯನ್ನು ಅರ್ಥ ಮಾಡಿಕೊಳ್ಳಲಾಗದೆ, ಅಮ್ಮು ನೀನು ಇಲ್ಲಿ ಏಕೆ ಮಲಗಿದ್ದೀಯಾ.....? ಹೋಗು ನಿನ್ನ ಗಂಡನ ಪಕ್ಕ ಮಲಗಿಕೊ ಇಲ್ಲಿ ಮಲಗಿದರೆ ಅವನು ಏನು ಅಂದುಕೊಳ್ಳಲಾರ.....? ನಿನ್ನ ಅಜ್ಜಿಯೊಂದಿಗೆ ಸದಾ ಮಲಗಲು ಸಾಧ್ಯವೇ....? ಹೋಗು ಕೋಣೆಯೊಳಗೆ ಹೋಗು ಎಂದು ಆದೇಶಿಸಿದರೂ ಅಜ್ಜಿಯ ಮನಸ್ಸು ಅಮ್ಮುನನ್ನು ನೋಡಿ ಮಮ್ಮಲ ಮರುಗಿತು. ಆದರೂ ಅಜ್ಜಿ ಅಮ್ಮುನನ್ನು ಗಂಡನ ಜೊತೆ ಮಲಗಲು ಹೊತ್ತಾಯಿಸಿದಾಗ, 'ಅರ್ಧ ರಾತ್ರಿಯವರೆಗೂ ಅಲ್ಲಿರಲಿಲ್ಲವೇ.....? ಈಗಲಾದರೂ ನಾನು ಮಲಗಬಾರದೇ......? ಮದುವೆ ಎಂದರೆ ನಿದ್ರೆಯಿಲ್ಲದಂತಿರುವದೇ...? ಎಂದು ಪ್ರಶ್ನಿಸುವ ಅಮ್ಮುವಿನ ಹೃದಯಾಂತರಾಳದಲ್ಲಿರುವ ವೇದನೆಯನ್ನು ತಿಳಿಸುತ್ತದೆ. ಮನಸ್ಸಿಗೂ, ಮದುವೆಗೂ ಸಂಬಂಧವಿಲ್ಲದ ಮೇಲೆ ಗಂಡ ಹೆಂಡತಿಯರಿಗೆ ಸಂಬಂಧ ಕಟ್ಟಿಸುವ ಈ ಸಮಾಜ ಸಂಪ್ರದಾಯಗಳಿಗೆ ಅಮ್ಮುವಿನ ಹೃದಯ ಧಿಕ್ಕಾರವನ್ನು ಹಾಕುತ್ತಿದೆ.

ಹೆಣ್ಣಿನ ಬದುಕಿನ ಕ್ರಮಕ್ಕೆ ಸ್ವತಂತ್ರವೇ ಇಲ್ಲವೆಂದರೆ ಇದು ಪುರುಷಕೇಂದ್ರಿತ ಶೋಷಕಸಮಾಜ ಒಂದು ಹೆಣ್ಣಿಗೆ ಸಂಕಟವನ್ನು ನೀಡುವುದರ ಮೂಲಕ ಹೆಣ್ಣಿನ ಕುಲಕ್ಕೆ ವಂಚನೆಯನ್ನು ಮಾಡುತ್ತಿದೆ. ಕೇವಲ ಭೋಗದ ವಸ್ತುವೆಂದು ಭಾವಿಸಿಕೊಂಡು ಸ್ವತಂತ್ರತೆಯನ್ನು ನೀಡದೆ ಅವಳನ್ನು ಯಾತನೆಯ ಬದುಕಿನಲ್ಲಿ ಸಿಲುಕಿಸಿದೆ. ಹೆಣ್ಣು ಮಕ್ಕಳನ್ನು ತುಂಬಾ ಓದಿಸಿದರೆ ಏನು ಪ್ರಯೋಜನ ಅವಳು ನಮ್ಮ ಮನೆಗೆ ನೆರವಾಗುತ್ತಾಳೆಯೇ.....? ಅವಳಿಗೆ ಅಷ್ಟೊಂದು ಖರ್ಚು ಮಾಡಿ ಶಿಕ್ಷಣ ಕೊಡಿಸಿದರೆ ಕೊನೆಗೆ ನಮಗಾಗುವ ಪ್ರಯೋಜನವೇನು.....? ಎಂಬ ಉದಾಸೀನ ಮನೋಭಾವದಲ್ಲಿ ಪುರುಷ ಕೇಂದ್ರಿತ ಸಮಾಜ ಯೋಚಿಸುತ್ತದೆ.ಇದರಿಂದಾಗಿ ಮನೆಗೆ ಜ್ಞಾನದ ಬೆಳಕಾಗಬೇಕಾಗಿರುವ ಅವಳನ್ನು ಅಂಧಕಾರದಲ್ಲಿರಿಸಿ ತಮ್ಮ ಮನ ಬಂದಂತೆ ಉಪಯೋಗಿಸಿಕೊಳ್ಳುತ್ತಿದೆ. ಆ ರಾತ್ರಿಯ ನೋವನ್ನು ತಾಳಲಾರದೆ, ನಾನು ಸರಿಯಾಗಿ ಅಭ್ಯಾಸ ಮಾಡಿ "ಉತ್ತೀರ್ಣಳಾಗಿದ್ದರೆ ಮದುವೆಯ ಪ್ರಶ್ನೆಯೇ ಇರುತ್ತಿರಲಿಲ್ಲ. ನಾನು ಮತ್ತಷ್ಟು ಕಷ್ಟಪಟ್ಟು ಓದಬೇಕಾಗಿತ್ತು.

ಎಂದು ಪರಿತಪಿಸುತ್ತಲೇ ಇದ್ದ ಅಮ್ಮು, ಎದ್ದು ನಿಂತು ತನ್ನ ಕೊರಳು ಮತ್ತು ಕಿವಿಯಲ್ಲಿದ್ದ ಬಂಗಾರದ ಒಡವೆಗಳನ್ನು ಕಳಚಿ ಅವುಗಳನ್ನು ಕಪಾಟಿನಲ್ಲಿ ಇಟ್ಟು, ತನ್ನ ಲಂಗ ದಾವಣಿಯನ್ನು ಕೂಡ ಬಿಚ್ಚಿ ಮಂಚದ ಮೇಲೆ ಎಸೆದಳು.....! ಅವಳ ಎಳೆಯ ದೇಹವನ್ನು ನೋಡಿ ಅಜ್ಜಿಗೆ ನೋವಾಯಿತು. ಆದರೂ ಆತ ನಿನಗೆ ಕಾಯುತ್ತಿರುತ್ತಾನೆ ನೀನಿಲ್ಲಿ ಮಲಗಿದರೆ ಏನಂದುಕೊಳ್ಳಬಹುದು.....? ಎಂದು ಅಜ್ಜಿ ಮತ್ತೆ ಹೇಳಿದಳು. ಅಮ್ಮು ತನ್ನ ಕೈಗಳಲ್ಲಿ ಮುಖ ಮುಚ್ಚಿಕೊಂಡು ಹಾಸಿಗೆಯ ಮೇಲೆ ಕುಳಿತಿದ್ದಳು...."[೨೦] ಅವಳ ವೇದನೆಗೆ ಸ್ಪಂದಿಸುವವರಿಲ್ಲದೆ ಅಜ್ಜಿ

ಮಾನಸಿಕವಾಗಿ ಹಿಂಸಿಸಿದರೆ, ಅಲ್ಲಿ ಗಂಡ ದೈಹಿಕವಾಗಿ ಹಿಂಸಿಸುತ್ತಾನೆ. ಹೆಣ್ಣಿಗೆ ಮದುವೆ ಎಂದರೆ ಹಿಂಸೆ ಕೊಡುವ ಶಿಕ್ಷೆಯಾಗಿದೆ. ಅಮ್ಮು ನೊಂದು, ಬೆಂದು ಅಳುತ್ತಾ ಹಾಸಿಗೆಯ ಮೇಲೆ ಕುಳಿತಿರುವ ಬಗೆಯಲ್ಲಿ ಸ್ತ್ರೀ ಶೋಷಣೆಯ ಮೂಲವನ್ನು ತಿಳಿಸುತ್ತದೆ. ಅನಾಗರಿಕ ಸಮಾಜ ಹೆಣ್ಣಿನ ಸಂವೇದನೆಗಳನ್ನು ಅರ್ಥಮಾಡಿಕೊಳ್ಳದೆ ಅವಳ ದೈಹಿಕ ದೌರ್ಬಲ್ಯವನ್ನು, ಅಸಹಾಯಕತೆಯನ್ನು ಉಪಯೋಗಿಸಿಕೊಳ್ಳುತ್ತ ಶಿಕ್ಷೆಯನ್ನು ನೀಡುತ್ತಿದೆ.

'ಅಮ್ಮು' ಪಡುತ್ತಿರುವ ಶಿಕ್ಷೆ ಕೊನೆಯಾಗಲಿ. ಅವಳಿಗೂ ಬದುಕಿನಲ್ಲಿ ಸ್ವತಂತ್ರ ಸಿಗಬೇಕು. ಲಿಂಗಭೇದ ಮರೆತು ಹೆಣ್ಣು ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸಬೇಕು. ಇಲ್ಲದಿದ್ದರೆ ಹೆಣ್ಣಿನ ಜೀವನವೇ ಶಿಕ್ಷೆಯ ರೂಪದಲ್ಲಿ ಕಳೆಯಬೇಕಾಗುತ್ತೆಂದು ಈ 'ಶಿಕ್ಷೆ' ಕಥೆಯು ಹೆಣ್ಣಿನ ಸಂವೇದನೆಯನ್ನು ತಿಳಿಸುತ್ತದೆ. ಬಡತನದಿಂದ ಬದುಕುತ್ತಿರುವ ದಲಿತ ಕುಟುಂಬದವರಿಗೆ ತಮ್ಮ ಮಕ್ಕಳನ್ನು ಉನ್ನತವಾದ ಶಿಕ್ಷಣದವರೆಗೆ ಓದಿಸಲು ಸಾಧ್ಯವಾಗುವುದಿಲ್ಲ. ಅದೆಷ್ಟೋ ದಲಿತರ ಮಕ್ಕಳು ತಮ್ಮ ಬಡತನದಿಂದಾಗಿ ಶಾಲೆಯ ಮೆಟ್ಟಿಲುಗಳನ್ನು ಹತ್ತಿರುವುದಿಲ್ಲ. ಇಂತಹ ಕಠಿಣ ಪರಿಸ್ಥಿತಿಯಲ್ಲಿ ಬದುಕನ್ನು ನಡೆಸುತ್ತಿರುವ ಅವರು ಒಂದು ಹೆಣ್ಣು ಮಗುವನ್ನು ಹೆಚ್ಚಿನ ವಿದ್ಯಾಭ್ಯಾಸದಲ್ಲಿ ಪಾಲ್ಗೊಳ್ಳುವಂತೆ ಮಾಡಲು ವಿಫಲರಾಗುತ್ತಾರೆ. ಅವಳು ಮೈನೆರೆದು ಸಮಾಜದಲ್ಲಿ ಕಾಣಿಸಿಕೊಂಡರೆ ಸಾಕು, ಅವಳನ್ನು ಮದುವೆ ಮಾಡಿ ಮನೆಯಿಂದ ಕಳಿಸಿಕೊಡುತ್ತಾರೆ. ಮಗಳಿಗೆ ಶಿಕ್ಷಣವನ್ನು ಕೊಡಿಸುವುದಕ್ಕಿಂತ ಮದುವೆ ಮಾಡುವುದೇ ಅವರ ಸಾಹಸವಾಗಿರುತ್ತದೆ.

ಮಗಳು ಮನೆಯಿಂದ ಹೋದರೆ ಸಾಕು ನಮಗೆ ಮಾನ ಮರ್ಯಾದೆ ಸಿಗುತ್ತದೆಂಬ ಭಾವ ಅವರಲ್ಲಿರುತ್ತದೆ. ಮದುವೆ ಮಾಡಬೇಕಾದರೆ ಮಗಳ ವಯಸ್ಸನ್ನು ನೋಡುವುದಿಲ್ಲ. ಅವಳ ಗಂಡನಾಗುವವ ಅವಳಿಗಿಂತ ಅದೆಷ್ಟೋ ವಯಸ್ಸು ದೊಡ್ಡದಾಗಿರುತ್ತದೆ. ಒಂದೊಂದು ಸಲ ಅಪ್ರಾಪ್ತ ಬಾಲಕಿಯನ್ನೇ ಮದುವೆಯಾಗಿ ಹೆಂಡತಿ ಸತ್ತವನಿಗೆ ಕಟ್ಟಿ ಕಳಿಸುತ್ತಾರೆ. ಹೀಗಾಗಿ ಗಂಡ ಹೆಂಡತಿಯ ವಯಸ್ಸನ್ನು ಲೆಕ್ಕಿಸದೆ ಮದುವೆ ಮಾಡಿ ಬಿಡುತ್ತಾರೆ. ಮಾಡುವಾಗ ತಂದೆ ತಾಯಿಗಳು ಮಗಳ ಮನಸ್ಸನ್ನು ತಿಳಿದುಕೊಳ್ಳುವುದಿಲ್ಲ. ಅವಳಿಗೆ ಮದುವೆಯ ಅವಶ್ಯಕತೆ ಇದೆಯೇ, ಅವಳು ಇನ್ನು ಶಿಕ್ಷಣವನ್ನು ಮುಂದುವರೆಸುತ್ತಾಳೆಯೇ ಇವು ಯಾವುದನ್ನೂ ನೋಡದೆ ತಮ್ಮ ಕರ್ತವ್ಯ ಮದುವೆ ಮಾಡುವುದೆಂದು ಮಾಡಿಬಿಡುತ್ತಾರೆ. ದಲಿತರಿಗೆ ಇದು ಅನಿವಾರ್ಯವೂ ಆಗಿರುತ್ತದೆ. ಏಕೆಂದರೆ ತುಂಬಿದ ಕುಟುಂಬದಲ್ಲಿ ನಾಲ್ಕೈದುಜನ ಇರುತ್ತಾರೆ. ಒಬ್ಬೊಬ್ಬರಿಗೂ ಮದುವೆ ಮಾಡಬೇಕು.

ಆಗ ಅವರಿಗಾಗುವ ಆರ್ಥಿಕ ಸಂಕಟದಿಂದ ಸಿಕ್ಕ ಅವಕಾಶವನ್ನೇ ಒಳ್ಳೆಯದೆಂದು ಹಿಂದು ಮುಂದು ವಿಚಾರಿಸದೆ ಮಗಳಿಗೆ ಮದುವೆ ಮಾಡುತ್ತಾರೆ. ಇಂತಹ ಸ್ಥಿತಿಯನ್ನೇ ಹೊಂದಿರುವ ಈ ಕಥೆಯಲ್ಲಿ 'ಅಮ್ಮು' ತನ್ನ ಹದಿನೈದನೆಯ ವರ್ಷಕ್ಕೆ ಶಿಕ್ಷಣವನ್ನು ನಿಲ್ಲಿಸಿ ಮದುವೆಯಾಗುತ್ತಾಳೆ. ಆ ರಾತ್ರಿ ತನ್ನ ಗಂಡನ ಪಕ್ಕದಲ್ಲಿ ಮಲಗಿಕೊಳ್ಳಲು ಕುಟುಂಬದವರು ಕಳಿಸುತ್ತಾರೆ. ಅದೇನು ಅಂದರೆ ಅರಿಯದ ಆ ಮಗು ಗಂಡನು ಕೊಡುವ ದೈಹಿಕ ಹಿಂಸೆಗಳನ್ನು ತಡೆದುಕೊಳ್ಳಲಾಗದೆ ಅವಳ

ಅಜ್ಜಿಯ ಪಕ್ಕದಲ್ಲಿ ಕಾಲುಮುದುರಿಸಿಕೊಂಡು ಕಣ್ಣೀರಿಡುತ್ತ ಮಲಗಿಕೊಳ್ಳುತ್ತಾಳೆ. ಅವಳ ಅಜ್ಜಿ ಪುನಃ ಅಮ್ಮುವನ್ನು ಗಂಡನ ಪಕ್ಕದಲ್ಲಿ ಮಲಗಿಕೊಳ್ಳುವುದಕ್ಕೆ ಒತ್ತಾಯ ಮಾಡುತ್ತಾಳೆ. ಅವಳು ಕಣ್ಣೀರಿಡುತ್ತ ಬೇಡಿಕೊಂಡರೂ ಯಾರೂ ಅವಳ ಮನಸ್ಸನ್ನು ಅರಿತುಕೊಳ್ಳದಿರುವಂತ ಸ್ಥಿತಿಗೆ ದಲಿತ ಹೆಣ್ಣುಮಕ್ಕಳಿಗೆ ಸಿಗದಿರುವ ಆರ್ಥಿಕ ಸಬಲತೆಯೇ ಕಾರಣವಾಗಿರುತ್ತದೆ. ಬಂಡವಾಳಶಾಹಿಗಳು ಮಾಡಿದಂತ ಆರ್ಥಿಕ ಶೋಷಣೆಯಿಂದ ಅವರಲ್ಲಿ ಬಡತನ ತಾಂಡವಾಡುತ್ತಿದೆ.

ಇದರ ಪರಿಣಾಮವಾಗಿ ತಮ್ಮ ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಕೊಡಿಸಲು ಸಾಧ್ಯವಾಗುವುದಿಲ್ಲ. ಇದರಿಂದಾಗಿ ಆ ಮಕ್ಕಳು ಶಿಕ್ಷಣ ಕ್ಷೇತ್ರದಿಂದ ವಂಚಿತರಾಗಿ ಆರ್ಥಿಕ ಅಸಮಾನತೆಯಿಂದ ಬಡತನದ ನೋವನ್ನು ಅನುಭವಿಸುತ್ತ ಯಾರನ್ನೋ ಯಾವದೋ ಕಾರಣಕ್ಕೆ ಅನಿವಾರ್ಯವಾಗಿ ಮದುವೆಯಾಗುತ್ತಾರೆ. ಅದರಿಂದ ಮಾನಸಿಕ ಹಾಗೂ ದೈಹಿಕ ಹಿಂಸೆಗಳನ್ನು ಅನುಭವಿಸಿಕೊಂಡು ತಮ್ಮ ಇಡೀ ಜೀವನವನ್ನು ಭೋಗದ ವಸ್ತುವಿನಂತೆ ಕಳೆಯುತ್ತಾರೆ. ಇದು ದಲಿತ ಹೆಣ್ಣು ಮಕ್ಕಳ ದುರಂತ ಜೀವನದ ವಾಸ್ತವ ಸಂಗತಿಯಾಗಿರುತ್ತದೆ. ಇದಕ್ಕೆ ಕಥೆಗಾರರು ತಮ್ಮ ಈ ಕಥೆಯಲ್ಲಿ ಒಂದು ದಲಿತ ಹೆಣ್ಣಿನ ಜೀವನವೇ ಶಿಕ್ಷೆಯಿಂದ ಕೂಡಿಕೊಂಡಿದೆ ಎಂದು ಪ್ರತಿಪಾದಿಸುತ್ತಾರೆ. ಅದರಂತೆ ಬಂಡವಾಳಶಾಹಿಗಳ ಆರ್ಥಿಕ ಶೋಷಣೆಗೆ ಒಳಗಾಗಿರುವ ದಲಿತ ಮಹಿಳೆಯರು ತಮ್ಮ ಆರ್ಥಿಕ ಸಬಲತೆಗಾಗಿ ಶಿಕ್ಷಣವನ್ನು ಪಡೆದುಕೊಂಡು ಸ್ವತಂತ್ರ ಜೀವನ ಕಾಣಬೇಕು ಎಂಬ ಆಶಯವನ್ನು ವ್ಯಕ್ತಪಡಿಸಿ ದಲಿತ ಸ್ತ್ರೀ ಸಂವೇದನೆಯನ್ನು ಅಂಬೇಡ್ಕರವಾದ ಮತ್ತು ಸ್ತ್ರೀವಾದದ ನೆಲೆಯಲ್ಲಿ ಹೆಣ್ಣು ಮಕ್ಕಳ ಮನಸ್ಸಿನ ನೋವುಗಳನ್ನು ಅಭಿವ್ಯಕ್ತಪಡಿಸಿದ್ದಾರೆ.

'ಸ್ವರ್ಣ ಕಮಲಗಳು' ಎಂಬ ತೆಲುಗು ಕಥಾ ಸಂಕಲನವನ್ನು 'ಇಲ್ಲಿಂದಲ ಸರಸ್ವತಿ ದೇವಿ'ಯವರು ಬರೆದಿದ್ದಾರೆ. ಇದನ್ನು ಪಿ.ವೇಣುಗೋಪಾಲರವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಚೌಕಳಿ ಲುಂಗಿ' ಎಂಬ ಈ ಕಥೆಯು ಒಂದು ಹೆಣ್ಣಿನ ಬಡತನದ ಅಸಹಾಯಕ ಸ್ಥಿತಿಯ ತನ್ನ ವಿವೇಚನೆಯನ್ನು ದಲಿತ ಬಡಹೆಣ್ಣು ಜೀವಗಳ ಸಂಕಷ್ಟಗಳನ್ನು ವಾಸ್ತವದ ನೆಲೆಯಲ್ಲಿ, ನೊಂದವರ ಮನಸ್ಸಿನ್ನಾಳದ ವೇದನೆಯನ್ನು ಕುರಿತು ಬಡತನದ ಚಿತ್ರಣವನ್ನು ಬಿಂಬಿಸುತ್ತದೆ. ಅಷ್ಟೇ ಅಲ್ಲದೆ ಆ ಬಡತನವನ್ನು ಹಾಗೂ ಅವರ ಬಡತನದ ಅಸಹಾಯಕಥೆಯನ್ನೇ ತಮ್ಮ ಬಂಡವಾಳವನ್ನಾಗಿಸಿಕೊಳ್ಳುವವರು ದಲಿತರ ಮೇಲೆ ಎಂತಹ ದೌರ್ಜನ್ಯವನ್ನು ಎಸಗುತ್ತಾರೆ ಎಂಬುವುದನ್ನು ಸ್ಪಷ್ಟೀಕರಿಸುತ್ತದೆ. ಹಣವು ಮನುಷ್ಯನಲ್ಲಿರುವ ಮನುಷ್ಯತ್ವವನ್ನೇ ಮರೆಸಿ ಮತ್ತೊಬ್ಬ ಬಡಜೀವಿಗಳನ್ನು ಹೇಗೆ ಶೋಷಣೆಯಲ್ಲಿ ಮುಳುಗಿಸುತ್ತದೆ ಎಂಬುವುದರ ಹಿನ್ನೆಲೆಯಲ್ಲಿ ಈ ಕಥೆಯು ರೂಪಗೊಂಡಿರುತ್ತದೆ.

ಬಡವರು ತಮಗೆ ಬಂದಿರುವ ಕಷ್ಟಗಳಿಗೆ ಹಣವಿರುವವರ ಜೊತೆ ಹೀನಾಯವಾದ ಮುಖವನ್ನು ಹೊತ್ತುಕೊಂಡು ನಿಂತಾಗ ಅದನ್ನೇ ಒಂದು ಅದೃಷ್ಟವೆಂಬಂತೆ ಆ ಸಂದರ್ಭವನ್ನು ಬಳಸಿಕೊಂಡು ಆ ಹಣವಾದಿಗಳು ಸಾಲವನ್ನು ನೀಡಿ. ಅದಕ್ಕೆ ಬಡ್ಡಿಯನ್ನು ಹಾಕಿ ಇಡೀ ದಲಿತರ

ಬದುಕನ್ನೇ ಕಣ್ಣೀರಿನಲ್ಲಿ ಮುಳುಗಿಸುವಂತೆ ಮಾಡುತ್ತಾರೆ. ಅಂತಹ ದಲಿತರ ಅಸಹಾಯಕ ಜೀವನವನ್ನು ಸೃಷ್ಟಿ ಮಾಡಿದವರು ಬಂಡವಾಳಶಾಹಿಗಳು. ದಲಿತರ ದುರಂತದ ಬದುಕಿನ ಜೊತೆ ಸದಾ ತಮ್ಮ ಸ್ವಾರ್ಥಕ್ಕಾಗಿ ಆಟವನ್ನು ಆಡುತ್ತಿರುವವರು ಅವರೇ. ಹೀಗಿರುವಾಗ ಬಡವರು ಸದಾ ಬಡವರಾಗಿಯೇ ಉಳಿಯುವುದಕ್ಕೆ ಕಾರಣವಾಗಿರುತ್ತದೆ. ಅವರು ಸಾಲ ಕೊಟ್ಟು ಶೂಲ ಹಾಕುತ್ತಾರೆ. ಆರ್ಥಿಕ ಪರಿಸ್ಥಿತಿಯಲ್ಲಿ ತುಂಬಾ ಹಿಕ್ಕಟ್ಟಿನ ಸ್ಥಿತಿಯಲ್ಲಿರುವ ಬಡವರ ಆಸ್ತಿ ಪಾಸ್ತಿಗಳನ್ನು ಈ ಬಂಡವಾಳಶಾಹಿಗಳು ತಮ್ಮ ಕುತಂತ್ರಗಾರಿಕೆಯಿಂದ ಎಲ್ಲವನ್ನೂ ತಮ್ಮದಾಗಿಸಿಕೊಂಡಿದ್ದಾರೆ.

ಈಗ ಅವರಲ್ಲಿ ಏನೂ ಉಳಿದಿರುವುದಿಲ್ಲ. ದಲಿತರ ಭೂಮಿಗಳನ್ನು ಕಬಳಿಸಿರುತ್ತಾರೆ. ಅವರನ್ನು ಭೂರಹಿತರನ್ನಾಗಿಸಿ ನಿರ್ಗತಿಕರನ್ನಾಗಿ ಮಾಡಿದ್ದಾರೆ. ದಲಿತರು ತಮ್ಮ ಮುಗ್ಧ ಮಂದಮತಿಯಿಂದಾಗಿ ಬಂಡವಾಳಶಾಹಿಗಳಿಗೆ ಗುಲಾಮಗಿರಿಯಲ್ಲಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಇಂತಹ ಕಥಾ ವಸ್ತುವನ್ನು 'ಚೌಕಳಿ ಲುಂಗಿ' ಕಥೆಯು ಒಳಗೊಂಡಿರುತ್ತದೆ.ಬಡತನಕ್ಕೆ ಒದಗಿರುವ ಸಮಸ್ಯೆಗಳನ್ನು ತೀರಿಸಿಕೊಳ್ಳಲಾಗದ ಸ್ಥಿತಿಯಿಂದ ಸಾಲವನ್ನು ಪಡೆದುಕೊಂಡು ಅದಕ್ಕೆ ಬಡ್ಡಿಯನ್ನು ಕಟ್ಟಲಾಗದೆ ಹೇಗೆ ದಲಿತ ಸ್ತ್ರೀಯು ಹತಳಾಗುತ್ತಾಳೆ ಎಂಬುವುದನ್ನು ಈ ಕಥೆ ತಿಳಿಸುತ್ತದೆ. ರಂಗಣ್ಣ ಮತ್ತು ಶಾಯಿಯು ಇಬ್ಬರೂ ಗಂಡ ಹೆಂಡತಿಯರು, ಇವರಿಗೆ ಮುದ್ದಾದ ಮಂಗಳವೆಂಬ ಮಗುವಿದೆ. ತಮ್ಮ ಬಡತನದ ಜೀವನವನ್ನು ತಮ್ಮ ಹುಟ್ಟೂರಿನ ಗ್ರಾಮೀಣ ಪ್ರದೇಶದಲ್ಲಿ ನಿರ್ವಹಿಸಿಕೊಳ್ಳಲಾಗದೆ ನಗರ ಪ್ರದೇಶಕ್ಕೆ ಬಂದು ತಮ್ಮ ಬಡತನದ ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲು ಬಂದಿರುತ್ತಾರೆ. ರಂಗಣ್ಣ ನಗರದಲ್ಲಿ ಕೆಲಸಕ್ಕಾಗಿ ಅಲೆದಾಡುತ್ತಾನೆ. ಕೊನೆಗೆ ರಿಕ್ಷಾ ಓಡಿಸುತ್ತ ತನ್ನ ಜೀವನವನ್ನು ಸಾಗಿಸುತ್ತಿರುತ್ತಾನೆ.

ಆಗ ಹೆಂಡತಿ ಶಾಯಿಯು ಸಹ ಅಕ್ಕ-ಪಕ್ಕದವರ ಮನೆಯಲ್ಲಿ ಕಸ ಮುಸುರೆಯನ್ನು ಮಾಡಿಕೊಂಡು ಉಪವಾಸದಿಂದ ಪಾರಾಗಿ ಸಂತೋಷದಿಂದ ಕಾಲವನ್ನು ಕಳೆಯುತ್ತಿದ್ದರು. ರಂಗಣ್ಣ ಪ್ರತಿದಿನ ಮೂರು, ನಾಲ್ಕು ರೂಪಾಯಿಗಳನ್ನು ಸಂಪಾದಿಸುತ್ತಿದ್ದನು. ಶಾಯಿ ವಾರದಲ್ಲಿ ಎರಡು, ಮೂರು ರೂಪಾಯಿ ಮನೆಯಲ್ಲಿದ್ದ ಮುರುಕು ಪೆಟ್ಟಿಗೆಯಲ್ಲಿ ಸೀರೆಯ ಮಡುಕೆಗಳಲ್ಲಿ ಕೂಡಿಡುತ್ತಿದ್ದಳು.ಈ ಬೆಳವಣಿಗೆಯ ಖುಷಿಯಲ್ಲಿ ತಮ್ಮ ಜೀವನವನ್ನು ಗುಡಿಸಲಿನ ಅರಮನೆಯಲ್ಲಿ ಬದುಕುತ್ತಿರುತ್ತಾರೆ. ಅವರಿರುವ ಇಂತಹ ಜೀವನಕ್ಕೆ ಶುಕ್ಲಪಕ್ಷ ಮುಗಿಯಿತೆಂಬಂತೆ ಒಂದು ದಿನ ರಂಗಣ್ಣನಿಗೆ ತೀವ್ರವಾದ ಜ್ವರ ಕಾಣಿಸಿಕೊಂಡು ತುಂಬಾ ಉಪಚಾರ ನಡೆಯಿತು. ಅದರಿಂದಾಗಿ ಚಿಕಿತ್ಸೆಗಾಗಿ ಇದ್ದಿದ್ದೆಲ್ಲ ಹಣ ಖರ್ಚಾಗುತ್ತದೆ. ಆದರೂ ಆತನ ದುರಾದೃಷ್ಟಕ್ಕೆ ರಂಗಣ್ಣನ ಎರಡೂ ಕಾಲುಗಳು ಬಿದ್ದು ಹೋಗುತ್ತವೆ. ಅಂದಿನಿಂದಲೇ ಅವರಬದುಕಿನಲ್ಲಿ ಕೃಷ್ಣಪಕ್ಷ ಆರಂಭವಾಗುತ್ತದೆ. ಶಾಯಿಯ ಮೇಲೆ ಮನೆಯ ಎಲ್ಲಾ ಹೊಣೆಗಾರಿಕೆ ಬೀಳುತ್ತದೆ.

ಇದರಿಂದಾಗಿ ಅವರಿವರ ಮನೆಯಲ್ಲಿ ಕಸ ಮುಸುರೆ ಕೆಲಸ ಮಾಡಿ ಇಪ್ಪತ್ತು ರೂಪಾಯಿಗಳನ್ನು ತಿಂಗಳಿಗೆ ಸಂಪಾದನೆ ಮಾಡುತ್ತಿರುತ್ತಾಳೆ. ಅದರಲ್ಲಿ ಐದು ರೂಪಾಯಿ ಸಾಲಕ್ಕಾಗಿ ಹೋಗುತ್ತಿತ್ತು.

ಆದರಿಂದಲೇ ರಂಗಣ್ಣನ ಗುಡಿಸಲಿನಲ್ಲಿ ಊಟಕ್ಕೆ ಕೊರತೆಯಾಗುತ್ತದೆ. ಇದ್ದ ಹಣದಲ್ಲಿ ಊಟಕ್ಕೆ ಖರ್ಚು ಮಾಡಿದರೆ ಉಡುವುದಕ್ಕೆ ಬಟ್ಟೆಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ಉಣಲಿದ್ದರೆ ಉಡಲಿಲ್ಲದ, ಉಡುವುದಕ್ಕಿದ್ದರೆ ಉಣಲು ಏನೂ ಇಲ್ಲದ ಗಂಭೀರ ಸ್ಥಿತಿಯಲ್ಲಿ ರಂಗಣ್ಣನ ಕುಟುಂಬ ಕಣ್ಣೀರಿನಿಂದ ತುಂಬಿತ್ತು. ರಂಗಣ್ಣನನ್ನು ನೋಡಿಕೊಂಡು ಹೋಗಲು ಬಂದಿದ್ದ ಅವಳ ಅಜ್ಜಿ ಎರಡು ದಿನ ಇದ್ದು ಮೂರನೆಯ ದಿನ ಇದ್ದಕ್ಕಿದ್ದಂತೆ ಅಸುನೀಗಿದಳು. ಇದರ ಖರ್ಚಿನ ಹೊರೆ ಇಂತಹ ಪರಿಸ್ಥಿತಿಯಲ್ಲಿ ರಂಗಣ್ಣ ಮತ್ತು ಶಾಯಿಯ ಕುಟುಂಬದ ಮೇಲೆ ಬೀಳುತ್ತದೆ. ಹತ್ತನೆಯ ದಿನಕ್ಕೆ ತಮ್ಮ ಕುಲಬಾಂಧವರನ್ನು ಕರೆದು ಊಟ ಹಾಕುವುದಕ್ಕಾಗಿ ಕನಿಷ್ಠ ಇಪ್ಪತ್ತೈದು ರೂಪಾಯಿಗಳಾದರೂ ಬೇಕು.

ಏನು ಮಾಡುವುದೆಂದು ಇವರು ಗಂಡ ಹೆಂಡತಿ ರಾತ್ರಿಯೆಲ್ಲ ಕಣ್ಣೀರು ಹಾಕುತ್ತಿರುತ್ತಾರೆ. ಊಟ ಮಾಡುವುದಕ್ಕೆ ಅನ್ನವಿಲ್ಲ ನಮ್ಮಂತವರಿಗೆ ಇಪ್ಪತ್ತೈದು ರೂಪಾಯಿ ನಮಗೆ ಯಾರು ಸಾಲವನ್ನು ನೀಡುತ್ತಾರೆಂದು ಶಾಯಿಯು ಚಿಂತೆಯನ್ನು ಮಾಡುತ್ತಾಳೆ. ಇರುವ ಒಂದು ರೊಟ್ಟಿಯಲ್ಲಿ ಮೂರು ಭಾಗ ಮಾಡಿಕೊಂಡು ತಿಂದು ಮಲಗಿಕೊಳ್ಳುತ್ತಾರೆ. ನಾಳೆ ದೇವರಿದ್ದಾನೆಂದು ಶಾಯಿ ಬೆಳಗ್ಗೆ ಆರು ಗಂಟೆಗೆ ಎದ್ದು ಕಸಗುಡಿಸಿ, ನೀರು ತಂದು ಹಾಕಿದಳು. ರೊಟ್ಟಿ ಮಾಡಿಟ್ಟು ಕೆಲಸಕ್ಕೆ ಹೋಗಬೇಕೆಂದರೆ ಸೌದೆ, ಹಿಟ್ಟು ಎರಡೂ ಇರುವುದಿಲ್ಲ. ಒಂದು ಇಡಿಕಾಳು ಇಲ್ಲದೆ ನೊಂದುಕೊಂಡು ಅನಿವಾರ್ಯವಾಗಿ ಅಕ್ಕ ಪಕ್ಕದವರ ಮುಂದೆ ತನ್ನ ಸಮಸ್ಯೆಯನ್ನು ಹೇಳಿಕೊಂಡಳು ಅದರಲ್ಲಿ 'ವೀರಿ' ಎನ್ನುವವಳು ಚೌಕಳಿ ಲುಂಗಿಯವ ಸಾಲ ಕೊಡುತ್ತಿದ್ದಾನೆ. ರೂಪಾಯಿಗೆ ನಾಲ್ಕಾಣೆ ಬಡ್ಡಿಯನ್ನು ತೆಗೆದುಕೊಳ್ಳುತ್ತಾನೆ. ಪ್ರತಿ ತಿಂಗಳ ಬಡ್ಡಿಯನ್ನು ತಪ್ಪದೇ ಕಟ್ಟಬೇಕು. ನಿನಗೆ ಬೇಕಾದರೆ ಅವನು ನನ್ನ ಮನೆಕಡೆ ಬಂದಾಗ ನಿನ್ನ ಗುಡಿಸಲಕಡೆ ಅವನನ್ನು ಕಳಿಸುತ್ತೇನೆಂದು ಹೇಳಿದಳು.

ಅದಕ್ಕೆ ಅನಿವಾರ್ಯತೆಯಿಂದ ಶಾಯಿಯು ಸಮ್ಮತಿಯನ್ನು ನೀಡಿದಳು. ಈ ವಿಷಯವನ್ನು ತನ್ನ ಗಂಡ ರಂಗಣ್ಣನಲ್ಲಿಗೆ ಬಂದು ಹೇಳುತ್ತಾಳೆ. ಆಗ ಅವನು ಅವನ ಹತ್ತಿರ ಸಾಲ ತೆಗೆದುಕೊಳ್ಳಬೇಡ ಅವನು ತುಂಬಾ ಕ್ರೂರಿ, ಭಯಂಕರ ವ್ಯಕ್ತಿಯೆಂದು ಹೇಳಿದರೂ ಶಾಯಿಗೆ ಬೇರೆ ದಿಕ್ಕಿಲ್ಲದೆ ಆ ಚೌಕಳಿ ಲುಂಗಿಯವನಿಂದ ಇಪ್ಪತ್ತೈದು ರೂಪಾಯಿಗಳನ್ನು ಸಾಲವನ್ನಾಗಿ ತೆಗೆದುಕೊಳ್ಳುತ್ತಾಳೆ.ಆಗ ಅವನು ಇಪ್ಪತ್ತೈದು ರೂಪಾಯಿಗಳಲ್ಲಿ ಆ ತಿಂಗಳ ಬಡ್ಡಿಯನ್ನು ಆರು ತಿಂಗಳ ಬಡ್ಡಿಯನ್ನು ಆರುಕಾಲು ರೂಪಾಯಿ ಮುರಿದುಕೊಂಡು ಉಳಿದದ್ದನ್ನು ಶಾಯಿಗೆ ಕೊಟ್ಟು ಪ್ರತಿತಿಂಗಳ ಬಡ್ಡಿಯನ್ನು ತಪ್ಪಿಸಬಾರದೆಂಬ ಎಚ್ಚರಿಕೆಯನ್ನು ನೀಡಿ ಹೋಗಿರುತ್ತಾನೆ. ಈ ಸಾಲವನ್ನು ತೀರಿಸಬೇಕೆಂದು ಕಾರ್ಖಾನೆಯಲ್ಲಿ ಹೆಚ್ಚಿನ ಕೂಲಿ ಸಿಗುತ್ತೆಂದು ದುಡಿಯಲು ಶಾಯಿ ಹೋಗುತ್ತಾಳೆ. ಅಲ್ಲಿ ಅವಳನ್ನು ಎಲ್ಲರೂ ಕಾಮದ ದೃಷ್ಟಿಯಿಂದ ನೋಡುವುದನ್ನು ಕಂಡು ಕೆಲಸ ಬಿಟ್ಟು ಮನೆಗೆ ಬರುತ್ತಾಳೆ. ಗಂಡ ರಂಗಣ್ಣನಿಗೆ ಮತ್ತೇ ಆರೋಗ್ಯದ ಸ್ಥಿತಿ ಹದಗೆಡುತ್ತದೆ.

ಶಾಯಿಯು ಆತನನ್ನು ಆಸ್ಪತ್ರೆಯಲ್ಲಿ ಸೇರಿಸುತ್ತಾಳೆ. ಆಗ ಡಾಕ್ಟರರು ಈತನಿಗೆ ಮೂರು ಇಂಜಕ್ಷನ್ ಕೊಟ್ಟರೆ ಮೊದಲಿನಂತೆ ಆಗುತ್ತಾನೆಂದು ಹೇಳುತ್ತಾರೆ. ಆಗ ಶಾಯಿಯಲ್ಲಿ ಒಂದು ಬಿಡಿಗಾಸೂ ಇರುವುದಿಲ್ಲ. ಇತ್ತ ಚೌಕಳಿ ಲುಂಗಿಯವ ಬಡ್ಡಿ ಕೇಳಲು ಬರುತ್ತಾನೆ. ಆಗ.. "ನಿನ್ನ ಕಾಲಿಗೆ ಬೀಳ್ತಿನಿ ದೊರೆ ನಿನಗೆಂತ ತೆಗೆದಿಟ್ಟ ಬಡ್ಡಿಹಣ ಮಂಗಳಳ ತಂದೆಯ ಔಷಧಕ್ಕೆ ಖರ್ಚಾಯಿತು.ಈ ಒಂದು ತಿಂಗಳು ಕ್ಷಮಿಸಿಬಿಡು, ನಿನ್ನ ಪಾದದಾಣೆ ಬರುವ ತಿಂಗಳು ಖಂಡಿತ ಎಲ್ಲಾ ತೀರಿಸಿ ಬಿಡ್ತೀನಿ ದೇವರು ಎಂದು ಅವನ ಕಾಲು ಹಿಡಿದು ಬೇಡಿದಳು"[೧೭] ಆದರೆ ಅವನು ಶಾಯಿ ಎಷ್ಟು ಬೇಡಿಕೊಂಡರೂ ಕೇಳಲಿಲ್ಲ. ಅವಳ ಸೆರಗು ಹಿಡಿದು ಎಳೆಯುತ್ತಾನೆ. ಬೀದಿಯಲ್ಲಿ ಶಾಯಿ ರೋಷಗೊಂಡು ದೂಡಿ.. ಅರಚಿದಾಗ ಆಕೆಯ ಬೆನ್ನಿಗೆ ಚೂರಿಯಿಂದ ತಿವಿದು ಓಡಿ ಹೋಗುತ್ತಾನೆ. ಶಾಯಿ ರಕ್ತದ ಮಡುವಿನಲ್ಲಿ ವಿಲವಿಲನೆ ಒದ್ದಾಡುತ್ತಿದ್ದಳು. ಇದು ದಲಿತ ಹೆಣ್ಣುಮಕ್ಕಳ ಮೇಲೆ ಬಂಡವಾಳಶಾಹಿಗಳು ಮಾಡುತ್ತಿರುವ ದೌರ್ಜನ್ಯದ ಪ್ರತ್ಯಕ್ಷ ಸಾಕ್ಷಿಯಾಗಿ, ಬಡವರ ಕಣ್ಣೀರಿನ ಒಳಧ್ವನಿಯನ್ನು ದಲಿತ ಸ್ತ್ರೀ ಅಬಲೆಯರು ಪಡುತ್ತಿರುವ ಕಷ್ಟ ಕಾರ್ಪಣ್ಯಗಳನ್ನು ಎತ್ತಿತೋರಿಸುತ್ತದೆ.

ದಲಿತರ ಈ ಎಲ್ಲ ಸಂಕಷ್ಟಗಳಿಗೆ ಬಂಡವಾಳಶಾಹಿಗಳು ನಡೆಸುತ್ತಿರುವ ನಿರಂತರ ಆರ್ಥಿಕ ಶೋಷಣೆಯಾಗಿದೆ ಎಂದು ಈ ಕಥೆಯು ಪ್ರತಿಪಾದಿಸುತ್ತದೆ. ಬಂಡವಾಳಶಾಹಿಗಳು ಬಡತನದ ಅಸಹಾಯಕತೆಯನ್ನು ಉಪಯೋಗಿಸಿಕೊಂಡು ಅವರನ್ನು ಸಂಕಷ್ಟದಲ್ಲಿ ಸಿಲುಕಿಸಿ ನಂತರ ಅದನ್ನು ತಾವೇ ಪರಿಹರಿಸುವ ರೀತಿಯಲ್ಲಿ ಸಾಲವನ್ನು ಕೊಟ್ಟು, ಅದಕ್ಕೆ ಬಡ್ಡಿಯನ್ನು ಹಾಕಿ ಬಡವರನ್ನು ಶೂಲಕ್ಕೇರಿಸುತ್ತಾರೆ. ಮತ್ತೆ ಬಡವರು ಬಡ್ಡಿ ಹಣವನ್ನು ತೀರಿಸುವುದಕ್ಕೆ ಅವರ ಬಳಿ ಜೀತದಿಂದ ದುಡಿಯುತ್ತಿದ್ದರೂ ಬಡ್ಡಿ ಯಾವತ್ತೂ ತೀರುವುದಿಲ್ಲ. ಸಾಲ ಮಕ್ಕಳಾಗಿ ಅವರು ಹೇಳಿದ ಕೆಲಸವನ್ನು ಮಾಡಿಕೊಂಡು ಗುಲಾಮರಂತೆ ಜೀವನವನ್ನು ನಡೆಸಬೇಕಾಗುತ್ತದೆ. ಬಡ್ಡಿಗೆ ಚಕ್ರಬಡ್ಡಿಯನ್ನು ಸೇರಿಸಿ ಬಡವರನ್ನು ಇನ್ನೂ ಬಡತನದಿಂದ ನರಳಾಡುವಂತೆ ಮಾಡುತ್ತಾರೆ. ಒಂದು ವೇಳೆ ಸಾಲವನ್ನು ಕೊಡದಿದ್ದರೆ ಅವರ ಭೂಮಿಯನ್ನು ತಮ್ಮ ಹೆಸರಿಗೆ ಬರೆಸಿಕೊಳ್ಳುತ್ತಾರೆ. ಬಂಡವಾಳಶಾಹಿಗಳು ಸಾಲವನ್ನು ನೀಡಿ ದಲಿತರಿಗೆ ಆರ್ಥಿಕ ಹೊರೆಯಾಗುವಂತೆ ಮಾಡಿಬದುಕನ್ನು ನಡೆಸಲು ಸಾಧ್ಯವಾಗದಂತಹ ಪರಿಸ್ಥಿತಿಯಲ್ಲಿ ಸಿಲುಕಿಸುತ್ತಾರೆ.

ಇಂತಹ ವಾಸ್ತವ ಸಂಗತಿಯನ್ನು ಕಥೆಗಾರರು ಇಲ್ಲಿ ತಮ್ಮ ಕಥೆಯ ಮೂಲಕ ದಲಿತ ಬಡಕುಟುಂಬದ ಹೆಣ್ಣು ಸಾಲವನ್ನು ತೆಗೆದುಕೊಂಡು ಕೊನೆಗೆ ಬಡ್ಡಿಯನ್ನು ಕಟ್ಟಲಾಗದೇ ಸಾವನ್ನು ತಂದುಕೊಳ್ಳುವ ದುರಂತವನ್ನು ತಿಳಿಸಿಕೊಡುತ್ತದೆ. ರಂಗಣ್ಣ ಅನಾರೋಗ್ಯದಿಂದ ಹೆಂಡತಿ ಶಾಯಿಯು ಚೌಕಳಿ ಲುಂಗಿಯವನಲ್ಲಿ ಇಪ್ಪತ್ತೈದು ರೂಪಾಯಿಗಳನ್ನು ಸಾಲದ ರೂಪದಲ್ಲಿ ಪಡೆದುಕೊಳ್ಳುತ್ತಾಳೆ. ನಾಲ್ಕಾಣೆ ಬಡ್ಡಿಯನ್ನು ಕೊಡಬೇಕಾಗುತ್ತದೆ. ಅದನ್ನು ತೀರಿಸುವುದಕ್ಕಾಗಿ ಶಾಯಿಯು ಕಂಪನಿಯೊಂದರಲ್ಲಿ ಕೆಲಸಕ್ಕೆ ಹೋದಾಗ ಅಲ್ಲಿ ಮಾಲೀಕನು ಅವಳನ್ನು ಕಾಮುಕ ದೃಷ್ಟಿಯಿಂದ ನೋಡುವುದು

ಬಂಡವಾಳಶಾಹಿಗಳು ದಲಿತ ಹೆಣ್ಣುಮಕ್ಕಳನ್ನು ಕೆಲಸಕೊಡುವ ನೆಪದಲ್ಲಿ ದೈಹಿಕವಾಗಿ ಬಯಸುತ್ತಿರುವ ವಾಸ್ತವದ ಪ್ರತಿಬಿಂಬವಾಗಿ ಈ ಸನ್ನಿವೇಶವನ್ನು ಕಥೆಗಾರರು ಇಲ್ಲಿ ನಿದರ್ಶನವಾಗಿ ತೋರಿಸಿಕೊಟ್ಟಿದ್ದಾರೆ.

ಶಾಯಿಗೆ ಚೌಕಳಿ ಲುಂಗಿಯವನಿಂದ ತೆಗೆದುಕೊಂಡ ಸಾಲವನ್ನು ಅದರ ಬಡ್ಡಿಯನ್ನು ಒಂದು ತಿಂಗಳ ತಪ್ಪಿಸಿ ಅದಕ್ಕಾಗಿ ಚೌಕಳಿ ಲುಂಗಿಯ ಅವಳನ್ನು ನಡುರಸ್ತೆಯಲ್ಲಿ ಸೆರಗನ್ನು ಹಿಡಿದು ಎಳೆಯುತ್ತಾನೆ. ಇದು ಬಂಡವಾಳಶಾಹಿಗಳು ದಲಿತ ಬಡಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುವ ಅತ್ಯಾಚಾರದ ದೌರ್ಜನ್ಯಕ್ಕೆ ಸಾಕ್ಷಿಯಾಗಿರುತ್ತದೆ. ಕೊನೆಯಲ್ಲಿ ಚೌಕಳಿ ಲುಂಗಿಯವ ಶಾಯಿಯ ಬೆನ್ನಿಗೆ ಚೂರಿ ಹಿರಿದು ಓಡಿ ಹೋಗುವುದು, ಶಾಯಿ ನರಳಾಡುತ್ತಾ ರಸ್ತೆಯಲ್ಲಿ ಬೀಳುವುದು ಬಂಡವಾಳಶಾಹಿಗಳಿಂದ ದಲಿತ ಹೆಣ್ಣುಮಕ್ಕಳಿಗೆ ಆಗುತ್ತಿರುವ ದೌರ್ಜನ್ಯದ ಹೆಣ್ಣಿನ ಶೋಷಣೆಯನ್ನು ತೋರಿಸಿಕೊಡುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಒಂದು ಹೆಣ್ಣಿಗೆ ಸಾಮಾಜಿಕವಾಗಿ ತನ್ನದೇ ಆದ ಸ್ಥಾನಮಾನಗಳಿವೆ. ಮಹಿಳೆಯರ ಮೇಲೆ ನಡೆಸುತ್ತಿರುವ ದೌರ್ಜನ್ಯವು ಸಂವಿಧಾನಾತ್ಮಕವಾಗಿ ಅಪರಾಧವಾಗಿರುತ್ತದೆ. ಇದು ದಲಿತ ಮಹಿಳಾ ಶೋಷಣೆಗೆ ಸಾಕ್ಷಿಯಾಗಿದೆ.ಆದ್ದರಿಂದ ಕಥೆಗಾರರು ಇಲ್ಲಿ ದಲಿತ ಹೆಣ್ಣುಮಕ್ಕಳು ಬಂಡವಾಳಶಾಹಿಗಳಿಂದ ಸಾಮಾಜಿಕವಾಗಿ, ಆರ್ಥಿಕವಾಗಿ ವಂಚಿತರಾಗುತ್ತಿರುವುದರ ಕುರಿತು ಮತ್ತು ದಲಿತ ಸ್ತ್ರೀಯರ ಮೇಲಿನ ದೌರ್ಜನ್ಯದ ಅತ್ಯಾಚಾರಗಳನ್ನು ಪರಿಗಣಿಸಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಶಾಯಿಯ ಪಾತ್ರ ಚಿತ್ರಣದೊಂದಿಗೆ ಪ್ರತಿಬಿಂಬಿಸಿದ್ದಾರೆ. ದಲಿತ ಸ್ತ್ರೀಯರು ತಮ್ಮ ಬಡತನದಿಂದ ಪಡುತ್ತಿರುವ ಆರ್ಥಿಕ ತೊಂದರೆಗಳನ್ನು ಅದರಿಂದ ಅವರು ಅನುಭವಿಸುತ್ತಿರುವ ಸ್ತ್ರೀ ಯಾತನೆಗಳನ್ನುಈ ಕಥೆಯಲ್ಲಿ ಅಂಬೇಡ್ಕರವಾದ ಮತ್ತು ಸ್ತ್ರೀವಾದಗಳ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

'ಮಲಿಯಾಳದ ಮಹಿಳಾ ಕಥನ' ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ. ಐತಾಳರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿ ಸಿತಾರ ಎಸ್.ರವರು ಬರೆದ 'ಅಗ್ನಿ' ಎಂಬ ಕಥೆಯು ಒಂದು ಒಂಟಿ ಹೆಣ್ಣಿನ ಮೇಲೆ ಗುಂಪೊಂದು ಅತ್ಯಾಚಾರ ಮಾಡಿ, ತಮಗೆ ಬೇಕಾದಂತೆ ದೇಹವನ್ನು ಹಿಂಸಿಸಿ, ನಡುಬೀದಿಯಲ್ಲಿ ಬಿಟ್ಟುಹೋಗುವುದು, ಸ್ವತಂತ್ರವನ್ನು ಘೋಷಿಸಿಕೊಂಡು ಸಂವಿಧಾನದಡಿಯಲ್ಲಿ, ಸುವ್ಯವಸ್ಥೆಯಿಂದ ಕೂಡಿರುವ ರಾಷ್ಟ್ರದಲ್ಲಿ ಒಂದು ಹೆಣ್ಣು ಒಂಟಿಯಾಗಿ, ಅಭಯಳಾಗಿ ರಸ್ತೆಯಲ್ಲಿ ನಡೆದಾಡಲು ಸಾಧ್ಯವಾಗದಿರುವ ಸ್ಥಿತಿ ನಿರ್ಮಾಣದಿಂದಿರುವ ರಾಜಕೀಯ ಅಧಿಕಾರಿಶಾಹಿಗಳು ಹೆಣ್ಣಿಗೆ ನಿರ್ಭಯಳಾಗಿ ಬದುಕುವ ಸ್ವತಂತ್ರ ನೀಡಲು ವಿಫಲವಾಗಿರುವ ಗಂಭೀರ ಚಿಂತನೆಯನ್ನು ಒಂದು ಅತ್ಯಾಚಾರಕ್ಕೆ ಒಳಪಟ್ಟ ಹೆಣ್ಣಿನ ಮಾನಸಿಕ ಸಂವೇದನೆಗಳ ಮೂಲಕವಾಗಿದೆ.ಈ 'ಅಗ್ನಿ' ಕಥೆಯಲ್ಲಿ ಹೆಣ್ಣಿನ ಒಳ-ಹೊರ ವಿವೇಚನೆಗಳನ್ನು ಹೊರ ಹಾಕುತ್ತ ಹೆಣ್ಣು ಎಷ್ಟೊಂದು ಅಭದ್ರಳಾಗಿ, ಪುರುಷಪ್ರಧಾನ ವ್ಯವಸ್ಥೆಯಲ್ಲಿ ಗಂಡಿಗೆ ಅಧೀನವಾಗಿ ಬದುಕುವ ಶೋಚನಿಯ ಸ್ಥಿತಿಯನ್ನು ಪ್ರಿಯಾಳ ಮೂಲಕ ಕಥೆಗಾರರು ತೋರಿಸಿಕೊಟ್ಟಿದ್ದಾರೆ. ಒಂದು ಹೆಣ್ಣು ನಿರ್ಭಯಳಾಗಿ, ಸ್ವತಂತ್ರಳಾಗಿ, ನಡುಬೀದಿಯಲ್ಲಿ ಮಧ್ಯರಾತ್ರಿ ತಿರುಗಾಡುವ ಮನಸ್ಥಿತಿ ಉಂಟಾದಾಗ

ಮಾತ್ರ ದೇಶಕ್ಕೆ ನಿಜವಾದ ಸ್ವತಂತ್ರ ಸಿಕ್ಕಂತೆ ಎಂಬ ಗಾಂಧೀಜಿಯವರ ಆಶಯ. ಸ್ವತಂತ್ರ ಸಿಕ್ಕು ಇಷ್ಟು ವರ್ಷ ಕಳೆದರೂ ದಲಿತ ಸ್ತ್ರೀಯರು ಇನ್ನೂ ಭಯದ ಸಂಕೋಲೆಯಿಂದ ಬದುಕುತ್ತಿರುವುದು ಪ್ರಧಾನ ಪುರುಷವರ್ಗವು ಮಾಡುತ್ತಿರುವ ಹೆಣ್ಣಿನ ಶೋಷಣೆಯಾಗಿರುತ್ತದೆ.

ಆಳುವ ಕಾನೂನುಗಳು ಕಾಯ್ದೆ ಪುಸ್ತಕದಲ್ಲಿದ್ದುಕೊಂಡಿವೆ. ಅವು ಸಮರ್ಪಕವಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಜಾರಿಗೊಳಿಸದೆ ಇರುವುದಕ್ಕೆ ಬಂಡವಾಳಶಾಹಿಗಳ ರಾಜತಂತ್ರವು ಅದರಲ್ಲಿ ಅಡಕವಾಗಿದೆ. ಅವರಿಗೆ ಅಧಿಕಾರಿವರ್ಗವು ಗುಲಾಮರಂತೆ ತಮ್ಮ ಸ್ವಾರ್ಥ ಆಲೋಚನೆಯಿಂದ, ದಲಿತರ ಹೆಣ್ಣುಮಕ್ಕಳ ಮಾನಸಿಕ ನೋವನ್ನು ಕೇಳದೆ, ಅವರಿಗೆ ಸೂಕ್ತವಾದ ಶಿಕ್ಷಣವನ್ನು ನೀಡದೆ ದಿನನಿತ್ಯ ಒಂದಾದರೂ ರಾಷ್ಟ್ರದಲ್ಲಿ ಹೆಣ್ಣಿನ ಮೇಲೆ ಅತ್ಯಾಚಾರ ನಡೆಯುತ್ತಲೇ ಇರುತ್ತದೆ. ಅದಕ್ಕೆ ಬಲಿಷ್ಟ ವರ್ಗದವರಿಂದ ಬಲಿಯಾಗಿ ಯಾತನೆಯನ್ನು ಅನುಭವಿಸುತ್ತಿರುವದು ದೀನ ದಲಿತರ ಸಮುದಾಯದ ಹೆಣ್ಣುಮಕ್ಕಳೇ ಆಗಿರುತ್ತಾರೆ.ಅಂಬೇಡ್ಕರ್‌ರವರು ಸ್ತ್ರೀಯರಿಗೆ ನೀಡಿರುವ ಸ್ವತಂತ್ರ ಸಿಗದೆ ಅವರು ಅರೆಬೆತ್ತಲೆಯ ಬದುಕಿನಲ್ಲಿ ಉಳ್ಳವರ ಅಧೀನದಲ್ಲಿ ಸಿಕ್ಕಿ ನರಳಾಡುವುದನ್ನು ಈ ಕಥೆ ವಿವರಿಸುತ್ತದೆ. 'ಪ್ರಿಯಾ' ಎಂಬುವವಳು ಒಂದು ಆಫೀಸಿನಲ್ಲಿ ಕೆಲಸವನ್ನು ಮಾಡುತ್ತಿದ್ದಳು. ಅವಳು ತುಂಬಾ ಸರಳ ಜೀವಿಯಾಗಿದ್ದಳು. ಅಷ್ಟೇ ಶಿಸ್ತಿನ ಸಿಪಾಯಿಯಾಗಿ ತನ್ನೆಲ್ಲ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಳು.

ಅವಳಿಗೆ ಸೈಕಲ್ ಸವಾರಿ ತುಂಬಾ ಇಷ್ಟವಾಗಿತ್ತು. ಒಂದು ವೇಳೆ ಆಫೀಸಿನಿಂದ ಮನೆಗೆ ಹೋಗಲು ಸ್ವಲ್ಪ ತಡವಾದರೆ ಮನೆ ಸೇರಲು ಸೈಕಲ್ ಇರುವುದು ಒಳ್ಳೆಯದೆಂದು ಸೈಕಲ್ಲನ್ನು ನಿತ್ಯ ಆಫೀಸಿಗೆ ತೆಗೆದುಕೊಂಡು ಬರುತ್ತಿದ್ದಳು. ಒಂದು ದಿನ ಆಫೀಸಿನಲ್ಲಿ ಟೈಫ್ ಮಾಡಿ ಕೆಲವೊಂದು ಆಫೀಸಿನ ಕಾಗದ ಪತ್ರಗಳನ್ನು ತೆಗೆದಿಟ್ಟು ಮನೆಗೆ ಹೋಗಲು ತಡವಾಗುತ್ತದೆ. ಟಿ.ಪಿ. ನಾಯರ್ ರಸ್ತೆಯಿಂದ ಹೋಗುವಾಗ ಜನರ ಗಲಾಟೆ ಗಿಜಿ ಗಿಜಿಗಳಿಂದ ತುಂಬಿರುವ ರಸ್ತೆಯಾಗಿದ್ದ ಅಲ್ಲಿ ಅವಳಿಗೆ ಏನೂ ತೊಂದರೆಯಾಗುವುದಿಲ್ಲ. ಅಂತಹ ವಾತಾವರಣವು ಪ್ರಿಯಾಳಿಗೆ ಇಷ್ಟವೂ ಆಗಿತ್ತು. ಅಲ್ಲಿಂದ ಮುಂದಕ್ಕೆ ಹೋಗುವ ರಸ್ತೆಯನ್ನು ಸೇರಲು ಇಕ್ಕೆಲಗಳಲ್ಲಿ ಗಿಡ ಗಂಟೆಗಳಿಂದ ಕೂಡಿರುವ ಒಂದು ಚಿಕ್ಕ ರಸ್ತೆ ಅದು ಅಲ್ಲಿಂದ ಹತ್ತುನಿಮಿಷ ಅವಳು ಸೈಕಲ್ ತುಳಿಯಬೇಕು. ಅವಳಿಗೆ ಸಮಸ್ಯೆ ಇರುವುದೇ ಈ ನಿರ್ಜನವಾದ ರಸ್ತೆಯಲ್ಲಿ. ಅಲ್ಲಿ ಅಪರೂಪಕ್ಕೆ ಎದುರಾಗುವ ಮನುಷ್ಯರನ್ನು ಸಂದೇಹದಿಂದ, ಸೂಕ್ಷ್ಮವಾಗಿ ನೋಡುತ್ತಿರುತ್ತಾಳೆ.

ಆದರೂ ಪ್ರಿಯಾ ಧೈರ್ಯವನ್ನು ತಂದುಕೊಂಡು ಆ ಚಿಕ್ಕ ರಸ್ತೆಯಲ್ಲಿ ತನ್ನ ಸೈಕಲ್ ತುಳಿಯುತ್ತ ಮುಂದಕ್ಕೆ ಸಾಗುತ್ತಿದ್ದಳು. ಸುತ್ತಲೂ ದಟ್ಟವಾಗಿ ಬೆಳೆದ ಮರಗಳು, ಕೆಸರು ಮಿಶ್ರಿತ ಮರಳು, ಬೆಳೆದುನಿಂತ ಮರಗಳಿಂದ ಕತ್ತಲು ಆವರಿಸಿದ ವಾತಾವರಣ ಇಂತಹದರಲ್ಲಿ ಹೋಗುತ್ತಿರುವ ಪ್ರಿಯಾಳ ಸೈಕಲ್‌ಗೆ ದಾರಿಗಡ್ಡವಾಗಿ ಮೂರು ಮಂದಿ ನಿಂತುಕೊಂಡಿದ್ದರು. ಪ್ರಿಯಾಳಿಗೆ ಭಯ ಪ್ರಾರಂಭವಾಯಿತು. ಅವರ ಮುಖ ಅವಳಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಅದರಲ್ಲಿ ಒಬ್ಬನು ಟೆಲಿಫೋನ್ ಭೂತ್ ನಡೆಸುವ 'ಸಂಜೀವ', ಇನ್ನೊಬ್ಬ ಪ್ರಿಯಾಳ ಹಿಂದೆ ಆಗಾಗ ಸುತ್ತುತ್ತ ಅವಳನ್ನು ಕಾಮ

ದೃಷ್ಟಿಯಿಂದ ನೋಡುತ್ತಿದ್ದ 'ರವಿ' ಎಂಬುವವ ಆತನಿಗೆ ಅವಳು ಕಪಾಳಮೋಕ್ಷ ಮಾಡಿದ್ದಳು. ಆ ಕಾರಣಕ್ಕಾಗಿ ಆ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ರವಿ ಅವರನ್ನು ಕರೆದುಕೊಂಡು ಬಂದಿದ್ದನು. ಇನ್ನೊಬ್ಬನು ಅಸ್ಪಷ್ಟವಾಗಿ ಕಾಣುತ್ತಿದ್ದನು. ಈ ಮೂವರು ಪ್ರಿಯಾಳ ಆಫೀಸಿನ ಪಕ್ಕದಲ್ಲಿ ಕೆಲಸ ಮಾಡುವವರಾಗಿದ್ದರು. ಪ್ರಿಯಾಳನ್ನು ತುಂಬಾ ದಿನದಿಂದ ಗಮನಿಸುತ್ತಿದ್ದರು.

ಎಲ್ಲಾ ಅವರ ಪೂರ್ವಾಲೋಚನೆಯಿಂದಲೇ ಅವರು ಅಲ್ಲಿಗೆ ಬಂದಿದ್ದರು. ದಿಗ್ಭ್ರಮೆಗೊಂಡು ಭಯದಿಂದ ನಿಂತಿದ್ದ ಪ್ರಿಯಾಳನ್ನು ಸೈಕಲ್‌ನಿಂದ ಒಬ್ಬ ಬಲಾತ್ಕಾರದಿಂದ ಕೆಳಗೆ ಕೆಡವುತ್ತಾನೆ. ಅವಳು ತುಂಬಾ ಅರಚುತ್ತಿರುವುದರಿಂದ ಬಾಯಿಯನ್ನು ಮುಚ್ಚಿ ಗಟ್ಟಿಯಾಗಿ ಹಿಡಿದುಕೊಂಡರು. ಆ ದುಷ್ಟ ಬಲಿಷ್ಟ ಮೂವರು ಪ್ರಿಯಾಳನ್ನು "ಹತ್ತಿರದ ಕುರುಚಲು ಕಾಡಿನ ಒರಟು ನೆಲದ ಮೇಲೆ ಅವರು ಅವಳನ್ನು ಎಳೆದೊಯ್ದು ಮಲಗಿಸಿದ್ದರು. ಅವರ ಪ್ರತಿಯೊಂದು ಚಲನವಲನಗಳೂ ನಿರ್ದಿಷ್ಟವೂ, ಪೂರ್ವಯೋಜಿತವೂ ಆಗಿದ್ದಂತೆ ಕಂಡವು. ಒಬ್ಬ ಪ್ರಿಯಾಳ ಕೊಸರಾಡುತ್ತಿದ್ದ ಶರೀರವನ್ನು ಬಿಗಿಯಾಗಿ ಹಿಡಿದುಕೊಂಡರೆ, ಇನ್ನೊಬ್ಬ ಅವಳ ಬಾಯಿಯನ್ನು ಒತ್ತಿ ಹಿಡಿದುಕೊಂಡ, ಮೂರನೆಯವನು ಬೇಗ ಬೇಗನೆ ಅವಳ ಬಟ್ಟೆಗಳನ್ನೆಳೆದು ಕಳಚತೊಡಗಿದ. ಯಂತ್ರದಂತಿರುವ ಕೈಗಳು 'ದಯವಿಟ್ಟು ಬಿಟ್ಟುಬಿಡಿ' ಗಟ್ಟಿಯಾಗಿ ಚೀರಿಕೊಳ್ಳಬೇಕೆನಿಸಿತು ಪ್ರಿಯಾಗೆ. ಮೌನವಾಗಿ ರೋಧಿಸುತ್ತಿದ್ದ ಶರೀರದಿಂದ ಒಳಉಡುಪನ್ನು ಹಿಡಿದೆಳೆದ ಕೈಗಳು ಅದರೊಳಗೆ ಒಂದು ಸ್ಯಾನಿಟರಿ ಪ್ಯಾಡನ್ನು ಕಂಡಾಗ ಒಮ್ಮೆಲೆ ನಡುಗಿದವು. ಮರುಕ್ಷಣವೇ ಪ್ರಿಯಾ ಅದನ್ನು ಕೂಡಾ ಕಳೆದುಕೊಂಡಳು."[೧೮]

ಸಂಜೀವ ಮತ್ತು ರವಿ ಮತ್ತೊಬ್ಬ ಸೇರಿ ಪ್ರಿಯಾಳನ್ನು ಅತ್ಯಂತ ಹಿಂಸೆಯನ್ನು ಮಾಡುತ್ತ, ಅಸಹ್ಯವಾದ ಮಾತುಗಳನ್ನಾಡುತ್ತ, ಅವಳ ಮೇಲೆ ಅತ್ಯಾಚಾರ ಮಾಡಿ ನಾವು ಇಷ್ಟು ದಿನ ನಿನಗಾಗಿ ಅದೆಷ್ಟೋ ಅವಮಾನವನ್ನು ನಿನ್ನಿಂದ ಅನುಭವಿಸುತ್ತಿದ್ದೆವು, ಇಂದು ನಮ್ಮ ಆಸೆ ತೀರಿತು. ನಾವು ನಿನ್ನನ್ನು ಕೇಳಿಕೊಂಡರೆ ನಮ್ಮ ಮಾತಿಗೆ ನೀನು ಒಲಿಯಲಿಲ್ಲ. ಅದಕ್ಕಾಗಿ ನಿನ್ನ ಮೇಲೆ ಸೇಡು ತೀರಿಸಿಕೊಂಡಿದ್ದೇವೆ. ನೀನು, ನಾವು ಮಾಡಿದ ಈ ಅತ್ಯಾಚಾರವನ್ನು ಯಾರ ಹತ್ತಿರವಾದರೂ ಬಾಯಿ ಬಿಟ್ಟರೆ ನಿನ್ನನ್ನು, ನಿನ್ನ ಕುಟುಂಬದವರನ್ನು ಮುಗಿಸಿಬಿಡುತ್ತೇವೆ ಎಂದು ದೌರ್ಜನ್ಯ ಮಾಡಿ, ಕೊಲೆ ಬೆದರಿಕೆಯಿಂದ ಅವಳನ್ನು ಬಾಯಿ ಮುಚ್ಚುವಂತೆ ಮಾಡುವ ಇಂತಹ ದುಷ್ಟ ಅತ್ಯಾಚಾರಿಗಳಿಗೆ ಕೇವಲ ಪ್ರಿಯಾಳ ದೇಹವನ್ನು ಆಸೆಪಟ್ಟರು ಆದರೆ ಅವಳಲ್ಲಿರುವ ಮನಸ್ಸಿನ ನೋವನ್ನು ಯಾರೂ ಅರ್ಥ ಮಾಡಿಕೊಳ್ಳಲಿಲ್ಲ.

ಇದು ಬಂಡವಾಳಶಾಹಿಗಳು ಅಸಹಾಯಕ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡಿ, ಮತ್ತೆ ಅವರು ಸಮಾಜದಲ್ಲಿ ಪ್ರತಿಷ್ಠತೆಯಿಂದ ಕಾಣಿಸಿಕೊಳ್ಳುತ್ತಿರುವುದು ನೊಂದ ದಲಿತ ಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುವ ಶೋಷಣೆಯಾಗಿದೆ. ಇಂತವರಿಗೆ ಬಡ ಹೆಣ್ಣುಮಕ್ಕಳೇ ಬೇಕು. ಅವರಲ್ಲಿರುವ ಅಸಹಾಯಕ ಜೀವನವನ್ನೇ ಉಪಯೋಗಿಸಿಕೊಂಡು ಅನ್ಯಾಯ, ಅಕ್ರಮಗಳಿಂದ ಮನುಷ್ಯರೆಂಬುದನ್ನು ಮರೆತು, ಒಂದು ಬಡಹೆಣ್ಣನ್ನು ಹೆಣ್ಣಂತೆ ಕಾಣದೆ, ಸದಾ ಕಾಮುಕ ಕಣ್ಣಿನಿಂದ ನೋಡುತ್ತ ತಮ್ಮ

ದೇಹದಾಸೆಗಾಗಿ ದೈಹಿಕವಾಗಿ ಹಿಂಸೆಯನ್ನು ನೀಡಿ, ಬಡಹೆಣ್ಣುಮಕ್ಕಳ ಜೊತೆ ಮೃಗಗಳಾಗಿ ನಡೆದುಕೊಂಡು, ಅವರ ಮಾನ ಪ್ರಾಣವನ್ನು ತೆಗೆದು ಬಾಳುತ್ತಿರುವ ಇಂತಹ ಸಂಜೀವ, ರವಿ, ಆತನ ಸ್ನೇಹಿತರಿಗೆ ಅತ್ಯಾಚಾರದ ಹಿನ್ನೆಲೆಯ ಮೇಲೆ ಕಾನೂನು ರಿತ್ಯ ಶಿಕ್ಷೆ ನೀಡಬೇಕು. ಅದರಂತೆ ಈ ಕಥೆಯು ಪ್ರಿಯಾಳಂತ ಎಕಾಂಗಿ ಹೆಣ್ಣುಮಕ್ಕಳು ನಿರ್ಭೀತಿಯಿಂದ ಬೀದಿಯಲ್ಲಿ ನಡೆದಾಡುವಂತ ವಾತಾವರಣ ದೇಶದಲ್ಲಿ ನಿರ್ಮಾಣ ಆಗಬೇಕಾಗಿದೆ.

ಪ್ರಿಯಾಳ ಎದೆಯ ಕಿಚ್ಚಿನಲ್ಲಿರುವ ನೊಂದ ಹೆಣ್ಣಿನ ಸಂವೇದನೆಯನ್ನು ಅಭಿವ್ಯಕ್ತಿಸುತ್ತದೆ. ಅಗ್ನಿಯು ತಿಳಿದು ಮುಟ್ಟಿದರೂ ಸುಡುತ್ತದೆ, ತಿಳಿಯದೆ ಮುಟ್ಟಿದರೂ ಸುಡುತ್ತದೆ. ಸುಡುವುದೇ ಅದರ ಧರ್ಮ.ಆ ಅಗ್ನಿಯಿಂದ ಸುಟ್ಟುಕೊಳ್ಳಲೂಬಹುದು, ಅದರಿಂದ ಮನೆಯನ್ನು ಬೆಳಗಿಸಿಕೊಳ್ಳಲೂಬಹುದು. ಅಗ್ನಿಯಲ್ಲಿ ಬದಲಾಗದ ಗುಣಧರ್ಮವಿದೆ. ಎಲ್ಲವನ್ನೂ ತನ್ನಂತೆ ಮಾಡಿಕೊಂಡು ತನ್ನದೇ ಆದ ಆಕಾರವನ್ನು ಕೊಡುತ್ತದೆ. ಅಗ್ನಿ ಪವಿತ್ರದ ಸಂಕೇತವೂ ಹೌದು ಅದಕ್ಕಾಗಿ ಕಥೆಗಾರರು ತಮ್ಮ ಈ ಕಥೆಗೆ ಅಗ್ನಿಯೆಂಬ ಹೆಸರಿಟ್ಟು ಆ ಅಗ್ನಿಯನ್ನು ಒಂದು ಹೆಣ್ಣಿಗೆ ಹೋಲಿಕೆ ಮಾಡುವ ಹೆಣ್ಣಿನ ವಾಸ್ತವ ಜೀವನವನ್ನು ಈ ಕಥೆಯಲ್ಲಿ ತೋರಿಸಿದ್ದಾರೆ. ಒಂದು ಹೆಣ್ಣಿಗೆ ಮಾಡಿದ ಅತ್ಯಾಚಾರವು ತಿಳಿದು ಮಾಡಿದರೂ ಅದು ಕೆಟ್ಟದ್ದು, ತಿಳಿಯದೆ ಮಾಡಿದರೂ ಕೆಟ್ಟದ್ದೇ ಅದರ ಪ್ರತಿಫಲ ಆ ಹೆಣ್ಣಿನ ವೇದನೆಯಿಂದ ಅವರ ಸರ್ವನಾಶವಾಗುತ್ತದೆ. ಆದರೆ ಅದೇ ಹೆಣ್ಣನ್ನು ಸೇಡಿನ ಛಲತನದಿಂದ ಅತ್ಯಾಚಾರ ಮಾಡಿ, ಸುಟ್ಟುಕೊಳ್ಳುವ ಬದಲು ಪ್ರೇಮದ ಸಹಕಾರದಿಂದ, ಸಹನೆಯ ಸಂಪತ್ತಿನಿಂದ, ಅದೇ ಹೆಣ್ಣನ್ನು ಮನೆಯನ್ನು ಬೆಳಗುವ ನಂದಾದೀಪವನ್ನಾಗಿ ಮಾಡಿಕೊಳ್ಳಲುಬಹುದು.

ಅದರಂತೆ ಬಂಡವಾಳಶಾಹಿಗಳು ತಮ್ಮ ಬಂಡವಾಳದ ದರ್ಪದಿಂದ ಹೆಣ್ಣಿನ ಮೇಲೆ ಅತ್ಯಾಚಾರವನ್ನು ಮಾಡಿದರೂ, ಅವಳನ್ನು ದೈಹಿಕವಾಗಿ ಕೆಡಿಸಿ ಅವಮಾನಗೊಳಿಸಿದರೂ, ಅವಳ ಮನಸ್ಸಿನ ನಿರ್ಮಲತೆಯು ಮಾತ್ರ ಎಂದೂ ಬದಲಾಗುವುದಿಲ್ಲ. ಎಲ್ಲವನ್ನೂ ಸಹಿಸಿಕೊಳ್ಳುವ ತಾಳ್ಮೆಯ ದೇವತೆಯೇ ಹೆಣ್ಣಾಗಿದ್ದಾಳೆ. ಇದರಿಂದಾಗಿ ಹೆಣ್ಣು ಎಂದರೆ ಪವಿತ್ರವೆಂದು ಅಗ್ನಿಯಂತೆಂದು ಹೇಳಬಹುದೆಂಬ ವಿಶಾಲವಾದ ಅರ್ಥದಲ್ಲಿ ಈ ಕಥೆಗೆ 'ಅಗ್ನಿ' ಎಂಬ ಹೆಸರಿನಿಂದ ತುಂಬಾ ಅರ್ಥವತ್ತಾದ ಕಥೆಯನ್ನು ನಿರೂಪಿಸಿದ್ದಾರೆ ಕಥೆಗಾರರು. ಪ್ರಿಯಾಳ ಮೇಲೆ ಅತ್ಯಾಚಾರ ಮಾಡುವ ಸಂಜೀವ ಮತ್ತು ರವಿ ಹಾಗೂ ಆತನ ಇನ್ನೊಬ್ಬ ಸ್ನೇಹಿತರು ತಾವು ಮಾಡಿದ ಅತ್ಯಾಚಾರಕ್ಕೆ ಕಾರಣ, ಅವಳಲ್ಲಿರುವ ಅಸಹಾಯಕತೆಯ ಜೀವನವೇ ಆಗಿರುತ್ತದೆ. ಪ್ರಿಯಾಳನ್ನು ಒಲಿಸಿಕೊಳ್ಳುವುದಕ್ಕಾಗಿ ರವಿ ಮಾಡಿದ ಪ್ರಯತ್ನವೆಲ್ಲವೂ ವಿಫಲವಾಗಿ, ಅವಳಿಂದ ತಿರಸ್ಕಾರಕ್ಕೆ ಒಳಪಟ್ಟು, ಅವಳು ನನಗೆ ಒಲಿಯುವುದಿಲ್ಲವೆಂಬ ದ್ವೇಷದ ಕಾರಣದಿಂದ ತನ್ನಿಬ್ಬರು ಸ್ನೇಹಿತರನ್ನು ಕರೆದುಕೊಂಡು. ಯಾರೂ ಇಲ್ಲದ ನಿರ್ಜನ ಪ್ರದೇಶದಲ್ಲಿ ಅವಳ ಮೇಲೆ ಅತ್ಯಾಚಾರ ಮಾಡಿದರು.

ನಾವು ಏನೋ ಸಾಧಿಸಿಬಿಟ್ಟೆವು ಎಂಬ ಮನೋಭಾವದಿಂದ ಅವಳನ್ನು ಅವಮಾನಿಸುವುದು, ಅವಳ ದೇಹವನ್ನು ಹಿಂಸಿಸುವುದು, ಒಂದು ಹೆಣ್ಣಿನ ಮೇಲೆ ಬಂಡವಾಳಶಾಹಿಗಳು ಬಲಾತ್ಕಾರದಿಂದ ಮಾಡುತ್ತಿರುವ ದಲಿತ ಬಡ ಹೆಣ್ಣುಮಕ್ಕಳ ಮೇಲಿನ ಅತ್ಯಾಚಾವನ್ನು ಇದು ಸೂಚಿಸುತ್ತದೆ. ಬಂಡವಾಳಶಾಹಿಗಳಿಗೆ ತಮಗೆ ಬೇಕಾದದ್ದು ಸಿಗದಿದ್ದಾಗ ತಮ್ಮಲ್ಲಿರುವ ಬಂಡವಾಳದ ದೌರ್ಜನ್ಯದಿಂದ ಅತ್ಯಾಚಾರ ಮಾಡುವುದರ ಮೂಲಕ ತಮ್ಮ ತೃಪ್ತಿಯನ್ನು ಪಡೆದುಕೊಳ್ಳುತ್ತಾರೆ. ಇಂದು ದಲಿತ ಹೆಣ್ಣುಮಕ್ಕಳು ಇಂತಹ ಬಲಿಷ್ಟರೊಂದಿಗೆ ಸಿಕ್ಕಿಕೊಂಡು, ತಮ್ಮ ದೇಹದ ಮಾನವನ್ನು ಕಳೆದುಕೊಂಡಿದ್ದಾರೆ.

ಅತ್ಯಾಚಾರಕ್ಕೆ ಒಳಗಾಗಿ ವೇದನೆಯನ್ನು ಅನುಭವಿಸುತ್ತಿರುವ ವಾಸ್ತವ ದಲಿತ ಸ್ತ್ರೀಯರ ವೇದನೆಯನ್ನು ಈ ಕಥೆಯು ಪ್ರಿಯಾಳ ಪಾತ್ರದ ಮೂಲಕ ಅಭಿವ್ಯಕ್ತಪಡಿಸುತ್ತಿದೆ. ಇಂತಹ ಸನ್ನಿವೇಶಗಳನ್ನು ಗ್ರಹಿಸಿಕೊಂಡು ಕಥೆಗಾರರು ವಾಸ್ತವದ ನೆಲೆಯಲ್ಲಿ ದಲಿತ ಹೆಣ್ಣು ಮಕ್ಕಳು ಸಮಾಜದಲ್ಲಿ ಅಸಮಾನತೆಯಿಂದ ಅತ್ಯಾಚಾರಕ್ಕೆ ಒಳಗಾಗಿ ಪಡುತ್ತಿರುವ ಸ್ತ್ರೀ ವೇದನೆಗಳನ್ನು ಈ ಕಥೆಯಲ್ಲಿ ಸ್ತ್ರೀವಾದದ ನೆಲೆಯಿಂದ ಪ್ರತಿಪಾದಿಸಿದ್ದಾರೆ.

'ತಣ್ಣೀರಬಟ್ಟೆಯ ಬಿಸಿ' ಎಂಬ ಆಯ್ದ ತೆಲುಗು ಸಣ್ಣ ಕಥೆಗಳನ್ನು 'ದೇವಕವಿ' ನಾ ಧನಪಾಲರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಜುಜ್ಜುರಿ ವೇಣುರವರು ಬರೆದ ತೆಲುಗಿನ 'ಕಿರಾಯಿ' ಕಥೆಯನ್ನು ಇಲ್ಲಿ 'ಬಾಡಿಗೆ' ಎಂದು ಅನುವಾದಿಸಲಾಗಿರುತ್ತದೆ. ಈ ಬಾಡಿಗೆ ಕಥೆಯು ಒಂದು ಅಸಹಾಯಕ ಹೆಣ್ಣುದುಃಖದ ಮೇಲೆ ದುಃಖವನ್ನು ಸುರಿಸುವ ಕಥೆಯಾಗಿದೆ. ಇದರ ಚಾಲಕ ಆಟೋ ಚಾಲಕನೇ ಆಗಿದ್ದಾನೆ. ಸಮಾಜದ ಸೇವೆಗಾಗಿ ಸಾರ್ವಜನಿಕರ ಹಿತಕ್ಕಾಗಿ ವೃತ್ತಿಗಳು ಇರಬೇಕು. ಅವರ ಜೀವನ ಸಾಗಿಸುವುದರ ಜೊತೆ ಜನರಿಗಾಗಿ ಸೇವೆ ಸಲ್ಲಿಸಬೇಕು. ಜನಸೇವೆ ಪ್ರತಿಯೊಂದು ಸೇವೆಯ ಆದ್ಯ ಕರ್ತವ್ಯವಾಗಿರಬೇಕು. ಜನಸೇವಾವರ್ಗ ಸ್ವಾರ್ಥದಿಂದ ಕೂಡಿದ್ದರೆ ಸಮಾಜದ ಸ್ವಸ್ಥ್ಯಕ್ಕೆ ಹಾನಿಯಾಗುತ್ತದೆ. ಅಂತಃಕರಣದ ಸಾಕ್ಷಿಯಾಗಿ, ಸಾರ್ವಜನಿಕ ಸೇವಾವರ್ಗ ತಮ್ಮ ಸೇವೆ ಸಲ್ಲಿಸದಿದ್ದರೆ ಎಂತಹ ದುಷ್ಪ ಪರಿಣಾಮವಾಗುತ್ತದೆ ಎಂಬುದನ್ನು ಈ 'ಬಾಡಿಗೆ' ಕಥೆಯು ಅರ್ಥೈಸಿಕೊಡುತ್ತದೆ. ಕಥೆಯ ಆರಂಭದಲ್ಲಿಯೇ "ಏನಯ್ಯ ಬಾಡಿಗೆಗೆ ಬರುತ್ತೀಯಾ.....? ತಿರುಗಿ ನೋಡಿದರೆ ಮಧ್ಯ ವಯಸ್ಸಿನ ಹೆಣ್ಣು ಜೀವವಿರದ ಕಂಗಳು, ಶಕ್ತಿಯಿರದ ಶರೀರ ಸಣ್ಣಗೆ ಮೂಳೆಗಳ ಬೊಂಬೆಯಂತಿದ್ದಾಳೆ. ಎಷ್ಟು ಜನ..? ಉತ್ಸಾಹವಾಗಿ ಕೇಳಿದೆ. 'ಹೆಣವನ್ನು ತೆಗೆದುಕೊಂಡು ಹೋಗಬೇಕು' ಎಂದಳು ಬಲಹೀನವಾದ ಧ್ವನಿಯಲ್ಲಿ ಕೇಳಿದಳು"[೨೯] ಅವಳ ಮಗ ವಿದ್ಯುತ್ ಕೇಂದ್ರದ ನಿರ್ವಾಹಕರ ಅಲಕ್ಷತನದಿಂದ ಮೃತಪಟ್ಟಿದ್ದಾನೆ.

ಮಗನ ಶವವನ್ನು ಸರಕಾರಿ ಆಸ್ಪತ್ರೆಯಿಂದ ಮನೆಗೆ ತೆಗೆದುಕೊಂಡು ಹೋಗಬೇಕು. ಒಂದು ಶವ ಆಸ್ಪತ್ರೆಯಿಂದ ಹೊರ ಹೋಗಬೇಕಾದರೆ ದುಡ್ಡಿನ ಮಳೆ ಹೇಗೆ ಸುರಿಯಬೇಕು. ದುಡ್ಡಿಲ್ಲದ ಹೆಣ್ಣಿನ ಸ್ಥಿತಿ ಎಂತಹ ಸಂಕಷ್ಟಕ್ಕೆ ಸಿಲುಕಿಕೊಂಡಿದೆ. ತನ್ನ ಮಗನು ಸತ್ತ ಕರುಳಿನ ದುಃಖ ಒಂದು ಕಡೆಯಾದರೆ, ಮಗನ ಶವವನ್ನು ಮನೆಗೆ ತೆಗೆದುಕೊಂಡು ಹೋಗಲು ಆಗುವ ಅಡೆತಡೆಗಳು

ಪ್ರಸ್ತುತ ಈ ಸಮಾಜದಲ್ಲಿ ಎಂತಹ ಸಾರ್ವಜನಿಕ ಸೇವೆಗಳು ಇವೆಯೆಂಬುದನ್ನು ಈ ಕಥೆ ವಿವರಿಸುತ್ತದೆ. ಮೊದಲಿಗೆ ಶವವನ್ನು ಹೊರಗೆ ತೆಗೆದುಕೊಂಡು ಹೋಗಲು ಆಟೋ ಚಾಲಕ ಶವವಾದ್ದರಿಂದ ಸಾವಿರವಾಗುತ್ತಿತ್ತು,ಆದರೆ ತುಂಬಾ ತಡವಾದ್ದರಿಂದ ಆಟೋ ಬಾಡಿಗೆಯನ್ನು ೬೦೦೦ ರೂಪಾಯಿಗಳಿಗೆ ಏರಿಸುತ್ತಾನೆ. ನನ್ನ ಬಳಿ ಅಷ್ಟೊಂದು ಹಣವಿಲ್ಲವೆಂದು ಹೇಳಿದರೂ ಚಾಲಕ ಕೇಳುವುದಿಲ್ಲ. ನೀ ಇನ್ನೂ ತಡ ಮಾಡಿದಷ್ಟು ಇನ್ನೂ ಬಾಡಿಗೆ ಹೆಚ್ಚಾಗುತ್ತದೆ ಎಂದು ಗದರಿಸುವ ರೀತಿ ಸಾರ್ವಜನಿಕ ಸೇವಾವೃತ್ತಿಯನ್ನೇ ಅಗೌರವಿಸುತ್ತದೆ.

ನಂತರ ಪೊಲೀಸರು ಬಂದು ವೈದ್ಯರ ವರದಿಯನ್ನು ನೀಡಲು ಒಪ್ಪಿಕೊಳ್ಳುವುದಕ್ಕಾಗಿ ಕರುಣೆ ಇಲ್ಲದ ಕಟುಕರಂತೆ ಹತ್ತು ಸಾವಿರ ರೂಪಾಯಿಗಳನ್ನು ಕೇಳುತ್ತಾರೆ. ಮಗನು ಸತ್ತ ದುಃಖಕ್ಕಿಂತ ತನ್ನ ಬಳಿಯಲ್ಲಿ ದುಡ್ಡಿಲ್ಲವೆಂಬ ವೇದನೆಯೇ ಅವಳಿಗೆ ಹೆಚ್ಚಾಗಿ, ಕೊನೆಗೆ ತಾನು ತನ್ನ ತಾಳಿಯನ್ನು ಮಾರಿ ತಂದ ದುಡ್ಡನ್ನು ನೀಡುತ್ತಾಳೆ. ಸರ್ಕಾರದ ಕೆಲಸ ದೇವರ ಕೆಲಸವೆಂದು ಪ್ರಮಾಣ ಮಾಡಿಕೊಂಡು ರಕ್ಷಿಸಬೇಕಾದ ಪೊಲೀಸರೇ ಹೀಗಾದರೆ ಸಾರ್ವಜನಿಕರನ್ನು, ಅಸಹಾಯಕರನ್ನು ರಕ್ಷಿಸುವವರು ಯಾರು.....? ಎಂಬ ಪ್ರಶ್ನೆಯನ್ನು ಅಧಿಕಾರಿವರ್ಗವನ್ನು ಸೂಕ್ಷ್ಮತೆಯಿಂದ ಪ್ರಶ್ನಿಸಿದ್ದಾರೆ. ವೈದ್ಯರು ಶವವನ್ನು ಪರೀಕ್ಷೆ ಮಾಡದೆಯೇ ವರದಿ ನೀಡಲು ದೊಡ್ಡ ಮೊತ್ತ ಕೇಳುತ್ತಾರೆ. ಶವವನ್ನು ಸಾಗಿಸಲು ಇಬ್ಬರು ಸಹಾಯಕರು ತಲಾ ಐದುನೂರು ರೂಪಾಯಿ ಕೇಳುತ್ತಾರೆ. ಇವರೆಲ್ಲರಿಗೂ ತಾಳಿ ಮಾರಿದ ದುಡ್ಡಿನಿಂದ ತನ್ನಲ್ಲಿರುವಷ್ಟೂ ನೀಡಿ ಕೊನೆಗೆ ಮಗನ ಶವವನ್ನು ತನ್ನ ಸೀರೆಯಲ್ಲಿ ಸುತ್ತಿ ಆಟೋದಲ್ಲಿಡುತ್ತಾಳೆ. ತಡಮಾಡಿದ್ದಕ್ಕೆ ಚಾಲಕ ಬಾಡಿಗೆಯನ್ನು ಮತ್ತೇ ಏರಿಸುತ್ತಾನೆ.

ಮದ್ಯಾಹ್ನದಿಂದ ಒಂದು ಗುಟುಗು ನೀರೂ ಕುಡಿದಿಲ್ಲ. ಅವಳ ಹಸಿವು ದುಃಖದ ಮಡುವಲ್ಲಿ ಹಿಂಗಿಹೋಗಿದೆ. ಮಗನ ಶವ ಮನೆ ಮುಟ್ಟಿದರೆ ಸಾಕು ಅದೇ ಅವಳ ವ್ಯಥೆ. ಆಟೋ ಚಾಲಕ ಅವಳಿರುವ ಗುಡಿಸಲಿಗೆ ಶವವನ್ನು ತಂದು ಆಟೋ ನಿಲ್ಲಿಸುತ್ತಾನೆ. ಮಗನ ಶವವನ್ನು ಎತ್ತಿಕೊಂಡು ಒಳಕ್ಕೆ ಹೋಗಿ ಮೂರು ಸಾವಿರ ರೂಪಾಯಿಗಳನ್ನು ಚಾಲಕನಿಗೆ ತಂದು ಕೊಡುತ್ತಾಳೆ. ಆತ ಅವಳ ಮುಖದ ಮೇಲೆ ಆ ನೋಟುಗಳನ್ನು ಬಿಸಾಕಿ ಭಿಕ್ಷೆ ನೀಡುತ್ತೀಯೇನಮ್ಮ ನನಗೆ ಆರು ಸಾವಿರಕ್ಕೆ ಒಂದು ಪೈಸಾ ಕಡಿಮೆ ಕೊಟ್ಟರೂ ನಾನು ತೆಗೆದುಕೊಳ್ಳುವುದಿಲ್ಲ. ಮಕ್ಕಳನ್ನು ಪೋಷಿಸುವ ಸಾಮರ್ಥ್ಯವಿಲ್ಲದಿರುವಾಗ ಹೇರಲೇಬಾರದು ಎನ್ನುತ್ತಾನೆ. ಅವಳು ಆತನ ಕಾಲು ಹಿಡಿದು ಎಷ್ಟು ಬೇಡಿಕೊಂಡರೂ ಅವನು ಕೇಳುವುದಿಲ್ಲ. ಕೊನೆಗೆ ಅವಳಿಗಿರುವ ಗುಂಟೆ ಭೂಮಿಯನ್ನು ಮಾರಿತಂದು ಆಟೋಚಾಲಕನಿಗೆ ನೀಡುತ್ತಾಳೆ. ಚಾಲಕನ ಮನಪರಿವರ್ತನೆಯಾಗಿ ಅವಳ ಗುಡಿಸಲ ಬಳಿಬಂದು ನೋಡಿದಾಗ ಮಗನ ಶವದ ಜೊತೆ ಅವಳೂ ಶವವಾಗಿರುವುದನ್ನು ಕಾಣುತ್ತಾನೆ.

ಈ ಒಟ್ಟು ಕಥೆಯಲ್ಲಿ ಒಂದು ಹೆಣ್ಣಿನ ಮೇಲೆ ನಡೆಯುವ ಮಾನಸಿಕ ತೊಂದರೆಗೆ ಸಾರ್ವಜನಿಕ ಸೇವಾವರ್ಗದವರಾದ ಆಟೋ ಚಾಲಕ, ವೈದ್ಯಾಸ್ಪತ್ರೆಯ ಸಹಾಯಕರು, ಪೇದೆಗಳು ಕಾರಣರಾಗಿದ್ದಾರೆ. ಬಡತನದ ಮೇಲೆ ಅಧಿಕಾರಿಶಾಹಿಗಳು ನಡೆಸುವ ನಿತ್ಯ ನಿರಂತರ ಶೋಷಣೆಯಾಗಿದೆ.

ಹಣವಿದ್ದವರ ಹೆಣವನ್ನು ಆರೈಕೆ ಮಾಡುವವರು, ಹಣವಿಲ್ಲದವರನ್ನು ನೋವಿನಿಂದಲೇ ಹೆಣವನ್ನಾಗಿಸುವ ಇವತ್ತಿನ ಸರ್ಕಾರಿ ಆಸ್ಪತ್ರೆಯ ವ್ಯವಸ್ಥೆ, ಅಧಿಕಾರಿಶಾಹಿಗಳ ನಿರ್ಲಕ್ಷತನದ ಸೇವೆ ಇವೆಲ್ಲವೂ ಬಡವರ ಕಣ್ಣೀರಿನ ಜೊತೆ ತಮ್ಮ ಆಟವನ್ನು ಆಡುವಂತಿವೆ. ಮಗನ ಸಾವಿನ ದುಃಖಕ್ಕಿಂತ ಅವಳಿಗೆ ಹಣವಿಲ್ಲದಿರುವ ದುಃಖವೇ ಹೆಚ್ಚಾಗಿ ಅವಳನ್ನು ಶವ ಮಾಡಿದ ಕಥೆಯು ಬಡತನದಲ್ಲಿರುವ ಹೆಣ್ಣಿನ ಸ್ಥಿತಿ ಇಡೀ ದಲಿತ ಸಮುದಾಯದ ಎಲ್ಲಾ ಹೆಣ್ಣಿನ ಅಂತರಂಗದ ವೇದನೆಯೇ ಆಗಿದೆ.

ಎಂದೂ ಅದಕ್ಕೆ ಕೊನೆಯಿಲ್ಲದ ಬಡತನದ ಒಳವುಗಳನ್ನು ತೋರಿಸುತ್ತದೆ. ಬಡತನದಲ್ಲಿರುವ ದಲಿತ ಹೆಣ್ಣುಮಕ್ಕಳು ಸರ್ಕಾರದ ಸಾರ್ವಜನಿಕ ಸೇವೆಗಳನ್ನು ಪಡೆದುಕೊಳ್ಳಲು ಇಂದಿನ ಸಾಮಾಜಿಕ ವ್ಯವಸ್ಥೆ ಎಂತಹ ಕಠಿಣ ಸವಾಲುಗಳನ್ನು ಹಾಕುತ್ತಿದೆ. ಅದರಿಂದಾಗಿ ದಲಿತ ಮಹಿಳೆಯರು ಅನುಭವಿಸುತ್ತಿರುವ ನೋವುಗಳು ಈ ಕಥೆಯ ಮೂಲಕ ಅಭಿವ್ಯಕ್ತಗೊಂಡಿದೆ. ಸರಕಾರಿ ನೌಕರರು ತಮ್ಮ ಸೇವೆಯನ್ನು ಸ್ವಾರ್ಥಕ್ಕಾಗಿ, ಹಣದಾಸೆಗಾಗಿ ಉಪಯೋಗಿಸಿಕೊಳ್ಳುತ್ತಿರುವುದರಿಂದ ಸಾರ್ವಜನಿಕ ಸೇವೆಗಳನ್ನು ಪಡೆದುಕೊಳ್ಳಲು ದಲಿತ ಮಹಿಳೆಯರು ವಿಫಲರಾಗುತ್ತಿದ್ದಾರೆ. ಸಾರ್ವಜನಿಕ ಸೇವೆಗಳು ಏನನ್ನೂ ಅರಿಯದಿರುವ ಬಡವರನ್ನೇ ಶೋಷಣೆಗೆ ಒಳಪಡಿಸುತ್ತಿವೆ. ಸರ್ಕಾರದ ಆದ್ಯ ಉದ್ದೇಶ ಸಾರ್ವಜನಿಕ ಸೇವೆಗಳು ಬಡವರಿಗಾಗಿ ಉಚಿತವಾಗಿ ಸಿಗಬೇಕು. ಬಡವರ ಸೇವೆಯನ್ನು ಮಾಡಲೆಂದೇ ಸಾರ್ವಜನಿಕ ಸೇವೆಗಳನ್ನು ಅಸ್ಥಿತ್ವಕ್ಕೆ ತರಲಾಗಿದೆ. ಅವುಗಳೇ ಬಡವರಿಂದ ಸುಲಿಗೆಯನ್ನು ಮಾಡುತ್ತಿದ್ದರೆ ಬಡವರ ಬದುಕು ಏನಾಗುತ್ತದೆ. ಎಂಬುದನ್ನು ಈ ಕಥೆಯು ಒಂದು ಹೆಣ್ಣಿನ ಚಿತ್ರಣದ ಜೊತೆ ತೋರಿಸಿಕೊಡುತ್ತದೆ.

ನಗರದಲ್ಲಿ ಶಿಕ್ಷಣವನ್ನು ಪಡೆದುಕೊಂಡ, ಸರ್ಕಾರಿ ಹುದ್ದೆಯನ್ನು ಸಾರ್ವಜನಿಕರ ಸೇವೆಯನ್ನು ಮಾಡಲಿಕ್ಕೆಂದೇ ಪಡೆದುಕೊಂಡಿದ್ದರೂ, ಯಾವ ಸಾರ್ವಜನಿಕ ಸೇವೆಗಳು ದಲಿತ ಬಡ ಹೆಣ್ಣುಮಕ್ಕಳ ಸೇವೆಯನ್ನು ಮಾಡುವುದಿಲ್ಲ.ಸರಕಾರದಿಂದ ಪ್ರತಿತಿಂಗಳು ವೇತನವನ್ನು ಪಡೆದುಕೊಂಡರೂ ಅದು ಸಾಲದೆ ಅದರ ಜೊತೆ ತಮ್ಮಲ್ಲಿ ಸೇವೆಯನ್ನು ಪಡೆದುಕೊಳ್ಳಲು ಬಂದವರಿಂದ ಹಣ ಪಡೆದುಕೊಳ್ಳುತ್ತಾರೆ. ಒಂದುವೇಳೆ ಹಣವನ್ನು ನೀಡಲು ಸಾಧ್ಯವಿಲ್ಲದವರನ್ನು ತಮ್ಮ ಸೇವೆಯನ್ನು ನೀಡಲು ನಿರಾಕರಿಸುತ್ತಾರೆ. ಅದರಿಂದ ಬಡವರು ತಮ್ಮ ಅಸಹಾಯಕ ಸ್ಥಿತಿಯಿಂದ ಏನೆಲ್ಲಾ ಬೇಡಿಕೊಂಡರೂ ಕನಿಕರವನ್ನು ತೋರದೆ ತಮಗೆ ಬೇಕಾಗಿರುವ ಹಣವನ್ನೇ ನೋಡುತ್ತಾರೆ. ಇವರಿಗೆ ಬೇಕಾಗಿರುವದು ಬಡವರಸೇವೆ ಮಾಡುವುದಲ್ಲ. ಬಡವರನ್ನು ಇನ್ನೂ ಬಡತನದಲ್ಲಿ ಬದುಕುವಂತೆ ಮಾಡುತ್ತಾರೆ. ಸಾರ್ವಜನಿಕ ಸೇವೆಯಲ್ಲಿ ಅತ್ಯಂತ ಗೌರವದ, ಮಹತ್ವದ ವೈದ್ಯಕೀಯ ಕ್ಷೇತ್ರದಲ್ಲಿರುವ ವೈದ್ಯರನ್ನು ಬಡವರು ದೇವರೆಂದು ತಿಳಿಯುತ್ತಾರೆ.

ಆದರೆ ಇಂದಿನ ವೈದ್ಯರು ದೇವರಂತೆ ರಕ್ಷಿಸುವುದನ್ನು ಬಿಟ್ಟು ಬಡವರಲ್ಲಿರುವ ಹಣವನ್ನು ಮತ್ತು ಪ್ರಾಣವನ್ನು ತೆಗೆದುಕೊಳ್ಳುತ್ತಾರೆಎಂಬುವುದಕ್ಕೆ ಈ ಕಥೆಯಲ್ಲಿರುವ ಆ ಬಡತನದ ಮಹಿಳೆಯ ಮಗನ ಸಾವು ಅದಕ್ಕೆ ನಿದರ್ಶನವಾಗಿದೆ. ಸತ್ತ ಮಗನಿಗಾಗಿ ಅಳುವುದನ್ನು ಬಿಟ್ಟು ಮಗನ

ಹೆಣವನ್ನು ಆಸ್ಪತ್ರೆಯಿಂದ ಹೊರಗಡೆ ತರಲು ಅವಳು ಪಡುತ್ತಿರುವ ಸಂಕಷ್ಟಗಳು ಅಷ್ಟಿಷ್ಟಲ್ಲ. ಪ್ರತಿಯೊಬ್ಬರೂ ವಸೂಲಿಗೆಂದೇ ಅಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿರುತ್ತಾರೆ. ಸರಕಾರದ ಕೆಲಸ ದೇವರಕೆಲಸವೆಂಬುದನ್ನು ಮರೆತು ವಸೂಲಿಕೆಲಸವನ್ನಾಗಿ ಮಾಡಿಕೊಂಡು ಬಡವರನ್ನು ಕಣ್ಣೀರಿನಿಂದ ಮೈ ತೊಳೆಯುತ್ತಿದ್ದಾರೆ. ಕಾನೂನಿನ ಪರಿಪಾಲಕರಾದ ಪೊಲೀಸ್ ವ್ಯವಸ್ಥೆಯು ತನ್ನ ಅಧಿಕಾರದಿಂದ ಬಡವರ ಮೇಲೆ ದೌರ್ಜನ್ಯವನ್ನು ನಡೆಸಿ, ಬಡವರಿಂದ ಹಣವನ್ನು ವಸೂಲಿ ಮಾಡುತ್ತಿರುವುದಕ್ಕೆ ಈ ಕಥೆಯಲ್ಲಿ ಆ ಮಹಿಳೆಗೆ ಪೊಲೀಸ್ ಪೇದೆ ಮಾಡುವ ಅನ್ಯಾಯವೇ ಸಾಕ್ಷಿಯಾಗಿರುತ್ತದೆ.

ಹೀಗೆ ಸಾರ್ವಜನಿಕ ವಲಯದಲ್ಲಿ ಸೇವೆಗೆಂದು ತೊಡಗಿರುವ ಆಟೋ ಚಾಲಕರು, ವೈದ್ಯರು, ಪೊಲೀಸರು ಒಂದು ಬಡತನದ ಮಹಿಳೆಗೆ ಮಾಡಿದ ಅಪರಾಧದಲ್ಲಿ ಅವರು ಅವರ ಕರ್ತವ್ಯವನ್ನು ಮರೆತು,ನಿರ್ದಯತೆಯಿಂದ ನಡೆದುಕೊಂಡು ಹಣವನ್ನು ಕಿತ್ತುಕೊಂಡಿರುತ್ತಾರೆ. ಅವಳ ಸಾವಿಗೆ ಈ ಅಧಿಕಾರಿಶಾಹಿವರ್ಗದವರು ಕಾರಣರಾಗಿದ್ದಾರೆ. ಇಂತಹ ಮಹತ್ವ ಅಂಶಗಳನ್ನು ವಾಸ್ತವದ ನೆಲೆಯಲ್ಲಿ ನೋಡಿ, ಸಮಾಜದಲ್ಲಿ ನಡೆಯುತ್ತಿರುವ ದಲಿತ ಮಹಿಳೆಯರ ಮೇಲೆ ಸಾರ್ವಜನಿಕ ವಲಯದವರು ಮಾಡುವ ಆರ್ಥಿಕ ಶೋಷಣೆಯನ್ನು ಗ್ರಹಿಸಿದ್ದಾರೆ. ಕಥೆಗಾರರು ಈ ಕಥೆಯ ಮೂಲಕ ದಲಿತ ಬಡ ಹೆಣ್ಣುಮಕ್ಕಳು ಪಡುತ್ತಿರುವ ಸಾಮಾಜಿಕ ಸಂಕಷ್ಟಗಳು, ಅವರು ಅನುಭವಿಸುವ ಮಾನಸಿಕ ನೋವುಗಳನ್ನು ಸೂಕ್ಷ್ಮ ಸಂವೇದನೆಗಳಲ್ಲಿ ಅಂಬೇಡ್ಕರವಾದ ಮತ್ತು ಸ್ತ್ರೀವಾದದ ನೆಲೆಯಿಂದ ಪ್ರತಿಪಾದಿಸಿದ್ದಾರೆ.

ಸಿ.ವಿ. ಶ್ರೀರಾಮನ್ ರವರು ಬರೆದಿರುವ 'ಸಿ.ವಿ. ಶ್ರೀರಾನ್ ಕಥೆಗಳು' ಎಂಬ ಕಥಾ ಸಂಕಲನವನ್ನು ಅಶೋಕಕುಮಾರ್‌ರವರು ಕನ್ನಡಕ್ಕೆ ಅನುವಾದ ಮಾಡಿರುತ್ತಾರೆ. ಈ ಕಥಾಸಂಕಲನದಲ್ಲಿರುವ 'ನಮ್ಮನ್ನು ಮುಟ್ಟಿದರೆ....' ಎಂಬ ಕಥೆಯಲ್ಲಿ ಹೊಲೆಯ ಮಹಾಸಮ್ಮೇಳನದಲ್ಲಿ ಕೆಂಪಾದ ಮುಖವನ್ನು ಮಾಡಿಕೊಂಡು ಕುದಿಯುತ್ತ, ಘೋಷಣೆಗಳನ್ನು ಹಾಕುತ್ತ ಸಾವಿರಾರು ದಲಿತ ಯುವತಿಯರು 'ನಮ್ಮನ್ನು ಮುಟ್ಟಿದರೆ ನಾವು ಕೊಲ್ಲುವೆವು' ಎಂದು ಕೂಗುತ್ತಿರುವುದಕ್ಕೆ ಅವರಿಗಾದ ಅನ್ಯಾಯ, ಅತ್ಯಾಚಾರಗಳೇ ಕಾರಣವಾಗಿವೆ. ಸಾಹುಕಾರ ಜನರು ಅಬಲೆಯರನ್ನು ತಮ್ಮ ಹಣದ ಸೊಕ್ಕಿನಿಂದ ಅತ್ಯಾಚಾರ ಮಾಡಿ, ದಲಿತ ಯುವತಿಯರನ್ನು ಒಂದು ವಸ್ತುವಂತೆ ತಿಳಿದುಕೊಂಡು, ದೌರ್ಜನ್ಯವನ್ನು ಮಾಡುತ್ತಿರುವವರಿಗೆ ನಮ್ಮನ್ನು ಮುಟ್ಟಿದರೆ ನಾವು ಕೊಲ್ಲುವೆವು ಎಂದು ಎಂಬ ಎಚ್ಚರಿಕೆಯನ್ನು ನೀಡುತ್ತಿದ್ದಾರೆ. ಅತ್ಯಾಚಾರ ಮಾಡುವುದಕ್ಕೆ ಈ ಮೇಲ್ವರ್ಗದವರಿಗೆದಲಿತ ಹೆಣ್ಣುಮಕ್ಕಳೇ ಯಾಕೆ ಆಗಬೇಕು..? ಅವರ ಕಾಮದ ಆರ್ಭಟ ಅವರ ಮೇಲೆಯೇ ಯಾಕೆ ನಡೆಯುತ್ತದೆ. ಯಾಕೆಂದರೆ ಅವರು ಆರ್ಥಿಕತೆಯಿಂದ ವಂಚಿತರಾದ ಜನಾಂಗ, ಸಾಮಾಜಿಕ ವ್ಯವಸ್ಥೆಯಲ್ಲಿ ಅಸಹಾಯಕರಾಗಿರುತ್ತಾರೆ.

ಇಂತವರ ಮೇಲೆ ಬಲಿಷ್ಟರು ಏನು ಮಾಡಿದರೂ ಕೇಳುವವರು ಯಾರು....? ಸಂಪತ್ತಿನ ಮದದಲ್ಲಿ ದಲಿತರು ನಮ್ಮಂತೆ ಮನುಷ್ಯರು ಎಂಬುದನ್ನು ಮರೆತು ಅವರು ತಮ್ಮ ಹೊಟ್ಟೆ

ಪಾಡಿಗಾಗಿ ಏಕಾಏಕಿ ಜೀವನ ನಡೆಸುವ ಸಂದರ್ಭವನ್ನು ಉಪಯೋಗಿಸಿಕೊಂಡು ದಬ್ಬಾಳಿಕೆಗಾರರಾದ ಬಂಡವಾಳಶಾಹಿಗಳು ಈ ನಿರ್ಗತಿಕ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಎಸಗುವುದಕ್ಕೆ ಕಾರಣವಾಗಿದೆ.ಇಂತಹ ಕಾರಣವಾದ ಸಂಗತಿಗಳನ್ನು ಈ ಕಥೆಯ ಸಂಗತಿಗಳನ್ನಾಗಿಸಿಕೊಂಡು ಸಿ.ವಿ. ಶ್ರೀರಾಮನ್‌ರವರು ದಲಿತ ಹೆಣ್ಣುಮಕ್ಕಳ ಮೇಲೆ ಸಮಾಜದಲ್ಲಿ ನಡೆಯುತ್ತಿರುವ ಅತ್ಯಾಚಾರಗಳನ್ನು ವಾಸ್ತವದ ನೆಲೆಯಲ್ಲಿ 'ನಮ್ಮನ್ನು ಮುಟ್ಟಿದರೆ..' ಎಂಬ ಕಥೆಯ ಮೂಲಕ ದಲಿತ ಸ್ತ್ರೀ ಸಂವೇದನೆಗಳನ್ನು, ಅವರಲ್ಲಿರುವ ಆತಂಕದ ಸೂಕ್ಷ್ಮ ವಿಚಾರಗಳನ್ನು ಈ ಕಥೆಯಲ್ಲಿ ಕಟ್ಟಿ ಕೊಟ್ಟಿದ್ದಾರೆ. ಬಡತನದ ದೌರ್ಬಲ್ಯಗಳನ್ನು ಅರಿತ ಸಾಹುಕಾರರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ದಲಿತ ಹೆಣ್ಣುಮಕ್ಕಳನ್ನು ಕೆಣಕಿ, ಅವರ ಮೇಲೆ ಬಿದ್ದು ಬಲಾತ್ಕಾರದಿಂದಲೇ ಅತ್ಯಾರಗಳು ನಡೆಯುತ್ತಿವೆ.

ಈ ಸಂಗತಿಗಳು ಪ್ರಜಾ ಪ್ರಭುತ್ವ ವ್ಯವಸ್ಥೆಗೆ ಸಾಕ್ಷಿಯಾಗಿದೆ. ಇಂತವರ ಕೈಯಲ್ಲಿ ಸಿಕ್ಕ ಹೆಣ್ಣುಮಕ್ಕಳು ತಮ್ಮ ಮಾನ ಪ್ರಾಣವನ್ನು ಕಳೆದುಕೊಂಡು ಭಯಭೀತರಾಗಿ ಜೀವನ ನಡೆಸುತ್ತಿರುವುದಕ್ಕೆ ಬಂಡವಾಳಶಾಹಿಗಳ ಪ್ರಾಭಲ್ಯವೇ ಕಾರಣವಾಗಿರುತ್ತದೆ. ಕುರಂಬಿ ಎನ್ನುವವಳು ಈ ಕಥೆಯ ನಾಯಕಿ.ಇವಳ ಕುಟುಂಬವೇ ಕಣ್ಣೀರಿನಿಂದ ತುಂಬಿಕೊಂಡಿದೆ. ಅದಕ್ಕೆ ಕಾರಣ ಆಕೆಯ ಗಂಡನಾದ ಕುಟ್ಟಾಪು ಹಾಸಿಗೆ ಹಿಡಿದು ನಾಲ್ಕು ತಿಂಗಳಾದದ್ದು ಎಂಬ ಭಾವನೆ ಅವಳದು. ಕುಟ್ಟಾಪು ಮಿಲಿಟರಿಯಲ್ಲಿ ಕೆಲಸ ಮಾಡುತ್ತಿದ್ದನು. ಆತ ತುಂಬಾ ಬಲಿಷ್ಠನಾಗಿದ್ದ ಆಗ ನಮ್ಮ ಮನೆಯ ಮೇಲೆ ಯಾರೂ ಕಣ್ಣೆತ್ತಿ ನೋಡುತ್ತಿರಲಿಲ್ಲ. ಈಗ ಅವನು ಅನಾರೋಗ್ಯದಿಂದ ಬಿದ್ದಲ್ಲಿಯೇ ಬಿದ್ದುಕೊಂಡು ಕೆಮ್ಮುತ್ತ ಬಲಹೀನನಾಗಿದ್ದಾನೆ. ಹಾಗಾಗಿ ನನ್ನ ಕುಟುಂಬಕ್ಕೆ ಈಗ ಕಣ್ಣೀರಿನ ಸ್ಥಿತಿ ಕಾರಣವಾಗಿದೆ ಎಂದು ಕುರಂಬಿ ಮರುಗುತ್ತಿದ್ದಳು. ಕುರಂಬಿಯ ಅಳಿಯ ವಿಜಯನ್ ಪೇಟೆಯ ಸಾಹುಕಾರರ ಜೊತೆ ರಾತ್ರಿತನಕ ಸುತ್ತಾಡುವುದು, ಅವರಿಂದ ಸಾಲ ಪಡೆಯುವುದನ್ನು ಮಾಡುತ್ತಿದ್ದನು. ಮತ್ತೆ ಅವರ ಜೊತೆಗೂಡಿ ಒಂದು ವರ್ಕ್‌ಷಾಪ್ ಮಾಡಬೇಕೆಂದು ತಿಳಿಸಿದ.

ಆಗ ಕುರಂಬಿ ಮಗು ಅವರು ಪೇಟಿಮಂದಿ ಸಾಹುಕಾರರು, ಅವರ ಜೊತೆ ಎಚ್ಚರದಿಂದಿರು ಅವರೆಲ್ಲ ವಂಚಕರು. ಅವರ ಜೊತೆ ವರ್ಕ್‌ಷಾಪ್ ಮಾಡಬೇಡವೆಂದು ಉಪದೇಶಿಸಿದಳು.ಆದರೆ ವಿಜಯನ್ ಕೇಳಲಿಲ್ಲ. ಬ್ಯಾಂಕಿನ ಸಾಲ ತೆಗೆದುಕೊಂಡು ವರ್ಕ್‌ಷಾಪ್ ಮಾಡಿದ ಅದರಲ್ಲಿ ಆ ವಂಚಕರಿಂದ ವಂಚಿತನಾದ ಕುರಂಬಿಯ ಮೂವತ್ತು ಸೆಂಟ್‌ಜಾಗವನ್ನು ಸಾಹುಕಾರರು ಹರಾಜು ಕೂಗುತ್ತಾರೆ. ಆಗ ಇಟ್ಟಿಕ್ಕುರು ಸಾಹುಕಾರ ಕುರಂಬಿಯನ್ನು ಹೀನಾಯವಾಗಿ ಕಂಡ ನನ್ನ ಒತ್ತುವರಿ ಜಮೀನಿಗೆ ಜಿಂದಾಬಾದ್ ಕೂಗಿ ಪ್ರವೇಶಿಸಿದ್ದೆಯಲ್ಲ, ಈಗ ಅದೇ ಜಮೀನನ್ನು ನನ್ನ ಕೈಗೆ ಬಂತು ಎಂದು ಅಟ್ಟಹಾಸಗೈದ. ಇದು ದಲಿತರ ಭೂಮಿಯನ್ನು ತಮ್ಮದಾಗಿಸಿಕೊಳ್ಳಲು ಸಾಹುಕಾರರು ತಲೆತಲಾಂತರಗಳಿಂದ ಮಾಡಿಕೊಂಡು ಬಂದ ಕುತಂತ್ರವಾಗಿದೆ. ಕುರಂಬಿಯ ಜಮೀನು ಇಲ್ಲದಂತಾಗಿದೆ. ಮನೆಯನ್ನು ಮಾರಾಟ ಮಾಡುವಂತ ಸಂದರ್ಭವನ್ನು ಸಾಹುಕಾರರು ತಂದಿದ್ದಾರೆ.

ಅವಳಿಗೆ ಜೀವನವೇ ಸಾಕಾಗಿಹೋಗಿದೆ. ಇಂತಹ ಶೋಚನಿಯ ಸ್ಥಿತಿಯಲ್ಲಿ ಇರುವಾಗಲೇ ಮತ್ತೊಂದು ಆಘಾತಕಾರಿ ಸಂಗತಿಯೊಂದು ಕುರಂಬಿಯ ಮನೆಯಲ್ಲಿ ನಡೆದಿರುತ್ತದೆ. ನಡೆದ ಸಂಗತಿ ಊರ ತುಂಬೆಲ್ಲ ಹರಡಿಕೊಂಡಿದೆ. ಕುರಂಬಿ ಮಗಳನ್ನು ಹೊರಗೆ ಕರೆದು ಏನಾಗಿದೆ....? ಯಾಕೆ ಬಿಕ್ಕಿ ಬಿಕ್ಕಿ ಅಳುತ್ತಿದ್ದೀಯಾ.....? ಮಗಳೆ ನಡೆದದ್ದನ್ನೆಲ್ಲ ಹೇಳು.....? ಹೇಳು ಹೆದರಬೇಡ ಹೇಳು ಎಂದು ಕೇಳಿದಳು. ಆಗ ಕುರಂಬಿಯ ಮಗಳು ಕುಂಜುಮೋಳ್ ಏನೋ ಹೇಳಲು ಹವಣಿಸುತ್ತಿದ್ದಳು. ಮಾತುಗಳು ಬಿಕ್ಕುವಿಕೆಯಲ್ಲಿ ಸಿಲುಕಿಕೊಂಡಿದ್ದವು. ಉಕ್ಕಿನ ಆಳು ಕುಟ್ಟಾಪುವಿನ ಮತ್ತು ಕುತಂಬಿಯ ಮಗಳಿಗೆ ಇದು ಸಂಭವಿಸಬಾರದಿತ್ತು ಎಂದು ನೆರೆದಿದ್ದ ಮಂದಿ ಮಾತನಾಡುತ್ತಿದ್ದರು. ಎಲ್ಲರಲ್ಲೂ ಅಚ್ಚರಿಯತೆಯ ಭಾವನೆ ತುಂಬಿ ತುಳುಕುತ್ತಿತ್ತು. ಕುರಂಬಿಯ ಮಗಳು ತನ್ನ ದುಃಖವನ್ನು ಸಹಿಸಿಕೊಳ್ಳಲಾರದೆ, ಅದನ್ನು ಒಳಗಡೆ ಇಟ್ಟುಕೊಳ್ಳಲಾರದೆ ವಿಲವಿಲನೆ ನೋವಿನಲ್ಲಿ ಒದ್ದಾಡುತ್ತಾಳೆ.

ನಂತರ ನಡೆದ ಸಂಗತಿಯನ್ನು ನಿಧಾನವಾಗಿ ಹೇಳತೊಡಗಿದಳು. ಬಿಕ್ಕುವಿಕೆಯು ಅವಳ ಮಾತಿಗೆ ದಾರಿ ಮಾಡಿಕೊಟ್ಟಿತು. "ನಾನು ಬಂಡೆಕೊಳದಿಂದ ಸ್ನಾನಮಾಡಿ ಒದ್ದೆಬಟ್ಟೆ ಉಟ್ಟುಕೊಂಡು ಬರುತ್ತಿದ್ದೆ.ಒಗೆದ ಬಟ್ಟೆಗಳನ್ನು ಹೆಗಲಿಗೆ ಹಾಕಿಕೊಂಡು ಬಂಡೆಕೊಳದಲ್ಲಿ ಆಗಲೂ ಬಹಳಷ್ಟು ಹೆಂಗಸರು ಸ್ನಾನ ಮಾಡುತ್ತಿದ್ದರು. ದೊಡ್ಡ ಮಾವಿನ ಮರ ದಾಟಿ ನಾಲ್ಕೈದು ಹೆಜ್ಜೆ ನಡೆದಿದ್ದೆ ಅಷ್ಟೆ. ಹಿಂದಿನಿಂದ ಬಂದು ನನ್ನನ್ನು ಬಿಗಿಯಾಗಿ ಹಿಡಿದುಕೊಂಡ. ನನ್ನನ್ನು ಎತ್ತಿಕೊಂಡ. ನಾನು ಕೊಸರಿಕೊಂಡೆ ಅವನು ಜೊತೆಗೇ ಬಂದು ನನ್ನ ದೇಹದ ಮೇಲೇರಿದ. ನಾನು ಅತ್ತಾಗ ಬಾಯಿ ಮುಚ್ಚಿ ಹಿಡಿದ. ನಾನು ಬೆರಳನ್ನು ಕಚ್ಚಿದೆ. ಮತ್ತೇ ಜೋರಾಗಿ ಅತ್ತೆ. ಆದರೂ ಅವನು ನನ್ನನ್ನು ಅಪಮಾನಿಸತೊಡಗಿದ. ನನ್ನ ಅಳು ಕೇಳಿ ಸ್ನಾನ ಮಾಡುತ್ತಿದ್ದ ಹೆಂಗಸರು ಓಡಿಹೋದರು."[೨೦] ಈ ಸುದ್ದಿಯನ್ನು ತಿಳಿದ ಕುರಂಬಿಯ ಕುಟುಂಬದವರು ಪೊಲೀಸ್ ಕಂಪ್ಲೆಂಟ್ ನೀಡಲು ಸಿದ್ಧರಾಗುತ್ತಾರೆ.

ಆದರೆ ಅತ್ಯಾಚಾರ ಮಾಡಿದ ಪ್ರಿಯದರ್ಶಿನಿ ಆಟೋ ಗ್ಯಾರೇಜ್ ಸಾಹುಕಾರ ವಾವಣ್ಣ ತನ್ನ ಕಡೆ ಇರುವವರಾದ ಜವಹರ್ ಕೊಡೆಕಂಪೆನಿ ಜೋಸಣ್ಣ ಮುಂತಾದ ಹಲವರನ್ನು ಕಳಿಸಿ ನೀವೇನಾದ್ರೂ ಹಾಗೆ ಮಾಡಿದರೆ ನಿಮ್ಮ ಮಗಳಿಗೆ ತೊಂದರೆಯಾಗುತ್ತದೆ. ನಾಳೆ ಇಲ್ಲಿ ಬದುಕುವುದು ಕಷ್ಟವಾಗುತ್ತದೆ. ಅದಕ್ಕೆ ಪರಿಹಾರವಾಗಿ ಮೂರುಸಾವಿರ ರೂಪಾಯಿಗಳ ಬೆಲೆಯನ್ನು ನೀಡಲು ಮುಂದೆಬರುತ್ತಾರೆ. ಇದರಿಂದ ಕೋಪಿತರಾಗಿ ಕುದಿಯುತ್ತಾ ಕುರಂಬಿ, ಕುಂಜುಮೋಳ್, ತಂಗಂ, ಮುಂತಾದ ದಲಿತ ನೊಂದ ಮಹಿಳೆಯರು ಹೊಲೆಯ ಮಹಾಸಮ್ಮೇಳನದಲ್ಲಿ ಭಾಗವಹಿಸಿ ನಮ್ಮನ್ನು ಮುಟ್ಟಿದರೆ ನಿಮ್ಮನ್ನು ಬಿಡುವುದಿಲ್ಲ. ಎಂಬ ಘೋಷಣೆಗಳನ್ನು ಕೂಗುತ್ತ ಕುರಂಬಿ ಮಕ್ಕಳೇ ಕೈಗೆ ಸಿಗೋದನ್ನೇನಾದರೂ ಹಿಡಿದುಕೊಳ್ಳಿ ಎಂದು ಆಕ್ರೋಶವನ್ನು ವ್ಯಕ್ತಪಡಿಸಿ ಸಾಹುಕಾರರಿಗೆ ಎಚ್ಚರಿಕೆಯನ್ನು ನೀಡುತ್ತಾಳೆ. ಹೆಣ್ಣಿನ ಮಾನವನ್ನು ಬೆಲೆಯ ರೂಪದಲ್ಲಿ ಅಳೆಯುವ ಬಂಡವಾಳಶಾಹಿಗಳು ದಲಿತ ಹೆಣ್ಣುಮಕ್ಕಳನ್ನು ಕೇವಲ ದೇಹದಿಂದ ನೋಡುತ್ತಾರೆ.

ಅವಳಿಗೂ ಅವಳದೆಯಾದ ಮಾನ-ಪ್ರಾಣಗಳಿವೆ ಎನ್ನದೆ ಬಡವರ ಅಸಹಾಯಕತೆಯನ್ನು ಒಂದು ಅಸ್ತ್ರವನ್ನಾಗಿಸಿಕೊಂಡು ಬಂಡವಾಳಶಾಹಿಗಳು ಗ್ರಾಮೀಣ ಪ್ರದೇಶದಲ್ಲಿ ಇಂತಹ ಅತ್ಯಾಚಾರಗಳನ್ನು ದಲಿತ ಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುತ್ತಾರೆ. ಅವುಗಳು ಕಾನೂನಾತ್ಮಕವಾಗಿ ಹೊರಗಡೆ ಬರದೆ ಅವು ಅಲ್ಲಿಯೇ ಮುಚ್ಚಿಕೊಳ್ಳುತ್ತವೆ. ಅಂತಹದಕ್ಕೆ ಬಡವರ ಅಸಹಾಯಕ ಜೀವನವೇ ಕಾರಣವಾಗಿರುತ್ತದೆ.ನಮ್ಮನ್ನು ಮುಟ್ಟಿದರೆ ನಾವು ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ ಎನ್ನುವ ಮಾತಿನಲ್ಲಿ ಸ್ತ್ರೀಯರು ತುಳಿತಕ್ಕೆ ಒಳಪಟ್ಟು ಅತ್ಯಾಚಾರವನ್ನು ಅನುಭವಿಸಿದ ನೋವಿನ ಅನುಭವವು ಅಭಿವ್ಯಕ್ತವಾಗುತ್ತದೆ. ದಲಿತ ಬಡ ಹೆಣ್ಣುಮಕ್ಕಳು ತಮ್ಮ ಅಸಹಾಯಕ ಸ್ಥಿತಿಯಲ್ಲಿದ್ದಾಗ ಬಂಡವಾಳಶಾಹಿಗಳು ಸಮಯ ಸಾಧಿಸಿಕೊಂಡು, ಒಬ್ಬಂಟಿಯಾಗಿ ಸಿಕ್ಕ ಹೆಣ್ಣುಮಕ್ಕಳನ್ನು ಮೃಗದ ವರ್ತನೆಯಲ್ಲಿ ಎತ್ತಿಕೊಂಡುಹೋಗಿ ಅತ್ಯಾಚಾರವನ್ನು ಮಾಡುತ್ತಾರೆ.ಇದರಿಂದಾಗಿ ದಲಿತ ಹೆಣ್ಣುಮಕ್ಕಳೆಲ್ಲರೂ ಸೇರಿಕೊಂಡು ಸಂಘಟಿತರಾಗಿ ಬಂಡವಾಳಶಾಹಿಗಳ ವಿರುದ್ಧ ನಮ್ಮನ್ನು ಮುಟ್ಟಿದರೆ ನಾವು ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ ಎಂದು ಎಚ್ಚರಿಕೆಯನ್ನು ನೀಡುತ್ತಿದ್ದಾರೆ.

ಸಂಘಟನೆಯಿಂದಲೇ ದಲಿತ ಸ್ತ್ರೀಯರಿಗೆ ಆತ್ಮವಿಶ್ವಾಸ ತುಂಬಿ ಬಂದಿದೆ. ಅವರ ಹಕ್ಕುಗಳ ವಿರುದ್ಧ ಹೋರಾಟ ಮಾಡುವ ಧೈರ್ಯ ಬಂದಿದೆ. ಇನ್ನು ನಾವು ಸುಮ್ಮನೆ ಅತ್ಯಾಚಾರಗಳನ್ನು ಸಹಿಸಿಕೊಳ್ಳುವುದಿಲ್ಲ. ಸಂಘಟನೆಯಿಂದ ಕಾನೂನಾತ್ಮಕವಾದ ಹೋರಾಟವನ್ನು ಮಾಡುತ್ತೇವೆ. ಅತ್ಯಾಚಾರಿಗಳಿಗೆ ಶಿಕ್ಷೆಯನ್ನು ನೀಡುತ್ತೇವೆ. ನಮ್ಮ ಸ್ವತಂತ್ರತೆಯನ್ನು ಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ, ಮಹಿಳೆಯರಿಗೂ  ಸಮಾನತೆಯ ಸಂವಿಧಾನಾತ್ಮಕ ಹಕ್ಕುಗಳಿವೆ. ಅವುಗಳ ಮೂಲಕ ನಮ್ಮ ಹಕ್ಕುಗಳನ್ನು ಪಡೆದುಕೊಳ್ಳುತ್ತೇವೆ ಎಂದು ಸ್ತ್ರೀಯರು ಹೊಲೆಯ ಮಹಾಸಮ್ಮೇಳನದಲ್ಲಿ ಭಾಗವಹಿಸಿ ತಮ್ಮ ಹೋರಾಟದ ಧ್ವನಿಯನ್ನು  ವ್ಯಕ್ತಪಡಿಸುವುದಕ್ಕೆ ಕಾರಣ, ಕುರಂಬಿಯ ಮಗಳಾದ ಕುಂಜುಮೋಳ್‌ಳನ್ನು ಬಟ್ಟೆ ತೊಳೆಯಲು ಹೋದಾಗ ಅಲ್ಲಿ ಪ್ರಿಯದರ್ಶಿನಿ ಆಟೋ ಗ್ಯಾರೇಜ್ ಸಾಹುಕಾರ ವಾವಣ್ಣ ಅವಳನ್ನು ಹಿಡಿದುಕೊಂಡು ಅತ್ಯಾಚಾರ ಮಾಡಿದ್ದು. ಇದರಿಂದ ಕೋಪಿತರಾದ ದಲಿತ ಸ್ತ್ರೀ ಹೆಣ್ಣುಮಕ್ಕಳೆಲ್ಲ ಸೇರಿ ಸಾಹುಕಾರನ ವಿರುದ್ಧ ಸಮ್ಮೇಳನದಲ್ಲಿ ಘೋಷಣೆಗಳನ್ನು ಹಾಕುತ್ತಾರೆ.

ಇದು ದಲಿತ ಮಹಿಳಾ ಸಂಘಟನೆಗೆ ಇರುವ ಶಕ್ತಿಯನ್ನು ಪ್ರದರ್ಶಿಸುತ್ತದೆ. ಅತ್ಯಾಚಾರವನ್ನು ಮಾಡಿದವರು ಕುರಂಬಿಗೆ ನೀವೇನಾದ್ರೂ ಪೊಲೀಸ್ ಕಂಪ್ಲೆಂಟ್ ಕೊಟ್ಟರೆ ಊರಿನಲ್ಲಿ ಬದುಕುವುದು ಕಷ್ಟವಾಗುತ್ತದೆಂದುಹೆದರಿಸುತ್ತಾನೆ. ಇದು ಬಂಡವಾಳಶಾಹಿಗಳು ದಲಿತ ಹೆಣ್ಣುಮಕ್ಕಳ ಮೇಲೆ ನಡೆಸುತ್ತಿರುವ ಅತ್ಯಾಚಾರದ ಶೋಷಣೆಯಾಗಿರುತ್ತದೆ. ಹಾಗೆಯೇ ಇಟ್ಟಿಕ್ಕುರು ಸಾಹುಕಾರನ ಕುರಂಬಿಯ ಭೂಮಿಯನ್ನು ವಂಚನೆಯಿಂದ ವಶಪಡಿಸಿಕೊಂಡು ಅವಳನ್ನು ಹೀನಾಯವಾಗಿ ಕಾಣುವುದು, ಅವಮಾನಿಸುವುದು ಬಂಡವಾಳಶಾಹಿಗಳ ದಲಿತರ ಭೂಮಿಯನ್ನು ತಮ್ಮ ಕುತಂತ್ರತನದಿಂದ ವಶಪಡಿಸಿಕೊಂಡು ದಲಿತರನ್ನು ಆರ್ಥಿಕವಾಗಿ ಹಿಂದುಳಿಯುವಂತೆ ಮಾಡಿರುವ ವಾಸ್ತವ ಸತ್ಯವನ್ನು

ಈ ಸನ್ನಿವೇಶವು ಕಥೆಯಲ್ಲಿ ವ್ಯಕ್ತವಾಗುತ್ತದೆ.ಹೀಗೆ ಬಂಡವಾಳಶಾಹಿಗಳು ದಲಿತ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡುವುದು, ಅವರ ವಿರುದ್ಧ ಧ್ವನಿಯೆತ್ತದಂತೆ ನೋಡಿಕೊಳ್ಳುವುದು, ದಲಿತರ ಭೂಮಿಯನ್ನು ವಶಪಡಿಸಿಕೊಂಡು ನಿರ್ಗತಿಕರನ್ನಾಗಿ ಮಾಡಿ, ತಮ್ಮಲ್ಲಿ ಗುಲಾಮರಂತೆ ದುಡಿಸಿಕೊಳ್ಳುವುದು ಈ ಎಲ್ಲಾ ಅಂಶಗಳು ಕಥೆಯಲ್ಲಿ ಪ್ರತಿಪಾದಿಸಲ್ಪಟ್ಟಿವೆ.

ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿ ದಲಿತ ಮಹಿಳೆಯರು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಂವಿಧಾನಿಕ ಹಕ್ಕುಗಳಿಂದ ವಂಚಿತರು ಆಗುತ್ತಿರುವುದನ್ನು ಕಂಡು ಅವರು ಪಡುತ್ತಿರುವ ಮಾನಸಿಕ ವೇದನೆಗಳನ್ನು ಈ ಕಥೆಯಲ್ಲಿ ಕುರಂಬಿ ಪಾತ್ರ ಚಿತ್ರಣದ ಮೂಲಕ ಮಹಿಳೆಯರಿಗೆ ಸಿಗದ ಸಾಮಾಜಿಕ ಸ್ಥಾನ ಮಾನಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಅದರಂತೆ ಬಂಡವಾಳಶಾಹಿಗಳಿಂದ ದಲಿತ ಮಹಿಳೆಯರಿಗೆ ಆಗುತ್ತಿರುವ ನಿರಂತರ ಶೋಷಣೆಯನ್ನು ಖಂಡಿಸುತ್ತ,ಮಹಿಳೆಯರ ಒಳವೇದನೆಗಳನ್ನು ಅಂಬೇಡ್ಕರವಾದ ಮತ್ತು ಸ್ತ್ರೀವಾದದ ನೆಲೆಯಲ್ಲಿ ದಲಿತ ಸ್ತ್ರೀಯರ ಸ್ವತಂತ್ರ ಸಾಮಾಜಿಕ ಹಕ್ಕುಗಳ ಕುರಿತು ಚರ್ಚಿಸಿದ್ದಾರೆ.

ಗಿರೀಶ್ ಜಕಾಪುರೆಯವರು 'ಸದಾ ಪ್ರವಹಿಸುವ ಕಥೆಗಳು' ಎಂಬ ಮರಾಠಿಯ ಪ್ರಸಿದ್ಧ ಕಥೆಗಾರರ ಕಥೆಗಳನ್ನು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿ ಮಾಡಿರುವ 'ಸುಡುಗಾಡು ಸಿದ್ದನ ಸದಾ ಮಲ್ಲಿಗೆ' ಎಂಬ ಕಥೆಯನ್ನು ಗಿರೀಶ್ ಚಂದ್ರಕಾಂತ್ ಜಕಾಪುರೆ ಯವರು ಕನ್ನಡಿಕರಿಸಿದ್ದಾರೆ.ಮೂಲದಲ್ಲಿ ಲಕ್ಷ್ಮಣ ಗಾಯಕವಾಡರವರು ಮರಾಠಿಯಲ್ಲಿ ಮ್ಹಸಾಣ ಜೋಗಿಚಿ ಸದಾಫುಲಿ ಯೆಂಬ ಹೆಸರಿನಿಂದ ಬರೆದಿರುವ ಈ ಕಥೆಯು ಸುಡುಗಾಡು ಸಿದ್ದರ ಅಲೆದಾಟದ ಬದುಕು ಎಷ್ಟೊಂದು ಅತಂತ್ರವಾಗಿರುತ್ತದೆ, ಆ ಅಲೆದಾಟದಿಂದ ಅವರು ಅನುಭವಿಸಬೇಕಾದ ತೊಂದರೆಗಳು, ಆ ಅಲೆದಾಟ ಹೇಗೆ ಅವರಿಗೆ ಮಾರಕವಾಗಿರುತ್ತದೆ,ಅದರಿಂದ ಸುಡುಗಾಡು ಸಿದ್ದರ ಹೆಣ್ಣುಮಕ್ಕಳ ಬದುಕು ಎಷ್ಟೊಂದು ಶೋಷಣೆಯಾಗಿರುತ್ತದೆ, ಅದರಂತೆ ಅವರಲ್ಲಿರುವ ಆಚಾರ, ವಿಚಾರ, ನೀತಿ ನಿಯಮಗಳು ಎಷ್ಟೊಂದು ಇತರರಿಗಿಂತ ಭಿನ್ನವಾಗಿರುತ್ತವೆ ಎಂಬುದನ್ನು ಲಕ್ಷ್ಮಣ ಗಾಯಕವಾಡರವರು ಈ ಕಥೆಯಲ್ಲಿ ತುಂಬಾ ಆಳವಾದ ಅಧ್ಯಯನದ ಕ್ರಮದಿಂದ ಕಟ್ಟಿಕೊಟ್ಟಿದ್ದಾರೆ.

ಇಲ್ಲಿ ಅತೀ ಮುಖ್ಯವಾಗಿ ಇಡೀ ಕಥೆಯು ಅವರ ಜೀವನ ಕ್ರಮವನ್ನು ಶೋಧಿಸುತ್ತ ಸುಡುಗಾಡು ಸಿದ್ದನ ಸದಾಮಲ್ಲಿಗೆ ಎಂಬುವವಳು ತನ್ನ ಅಲೆಮಾರಿ ಬದುಕಿನಲ್ಲಿ ಶ್ರೀಮಂತರ ಪಟೇಲರ ಮಗ ತನ್ನ ಜಮಿನ್ದಾರಿಕೆಯ ಸೊಕ್ಕಿನಿಂದ ಸದಾಮಲ್ಲಿಗೆಯ ಮೇಲೆ ಅತ್ಯಾಚಾರ ಮಾಡುವುತ್ತಾರೆ. ಅನ್ನಕ್ಕಾಗಿ ಊರೂರು ಸುತ್ತುವ ನಿರಾಶ್ರಿತರ ಮೇಲೆ ನಡೆಸಿದ ಅತ್ಯಾಚಾರ ಸುಡುಗಾಡು ಸಿದ್ದನ ಸದಾ ಮಲ್ಲಿಗೆಯ ಬದುಕನ್ನು ಹೇಗೆ ಸರ್ವನಾಶಮಾಡುತ್ತದೆ,ಅದಕ್ಕೆ ಪರಿಹಾರವಿಲ್ಲದೆ ಅತ್ಯಾಚಾರವನ್ನು ಸಹಿಸಿಕೊಂಡು ಇಡೀ ಸುಡುಗಾಡು ಸಿದ್ದರ ಕುಟುಂಬವೇ ಆ ಊರನ್ನು ಬಿಟ್ಟು ಹೋಗುವ ಸಂದರ್ಭವು ಶೋಷಿತರ ಮೇಲೆ ನಡೆಸುವ ಅತ್ಯಾಚಾರಗಳಿಗೆ ಕೊನೆಯಿಲ್ಲ, ಅಂತಹ

ಬಂಡವಾಳಶಾಹಿಗಳು ನಿತ್ಯ ಅಸಹಾಯಕ ದಲಿತ ಕುಟುಂಬದ ಮೇಲೆ ನಡೆಸುತ್ತಿರುವ ಸಾಮಾನ್ಯ ಸಂಗತಿಯಂತೆ ಅವರ ದೌರ್ಜನ್ಯದ ನೋವನ್ನು ತಡೆಯಲಾರದೆ, ಅದನ್ನು ಅವರ ಮುಂದೆ ನಿಂತು ಪ್ರಶ್ನಿಸುವ ಶಕ್ತಿಯಿಲ್ಲದ, ನಪುಂಸಕರಾಗಿಸುವ ಜವಾಬ್ದಾರರ ಅಧಿಕಾರ ಕಾನೂನು ಕಟ್ಟಳೆಗಳನ್ನು ಮೀರಿ ತಮ್ಮ ಕಾಮಂಧಕಾರದಲ್ಲಿ ದಲಿತರ ಹೆಣ್ಣುಮಕ್ಕಳ ಮೇಲೆ ದೈಹಿಕವಾಗಿ, ಮಾನಸಿಕವಾಗಿ ಹಿಂಸಿಸುವ ಮೃಗಗಳಿಂದ ತುತ್ತಾದ ದಲಿತ ಸ್ತ್ರೀ ಸಂವೇದನೆಗಳನ್ನು ಈ ಕಥೆ ಒಳಗೊಂಡಿರುತ್ತದೆ.

ಲಾತೂರು ಜಿಲ್ಲೆಯ ಒಂದು ಮೂಲೆಯಲ್ಲಿ ಮುರುಕಾಗಿ ಹರಡಿಕೊಂಡಿರುವ ಊರು 'ಲಾಂಬಜಣಿ' ಇದು ಯಾವಾಗಲೂ ಜನಸಂದಣಿಯನ್ನು ಹೊಂದಿರುವುದಕ್ಕೆ ಕಾರಣ ಬೇರೆ ಬೇರೆ ಊರಿನಿಂದ ಬಂದ ಯಾತ್ರಿಕರು ಇಲ್ಲಿಯೇ ತಮ್ಮ ತಳವೂರಿ ಹೋಗುತ್ತಿದ್ದರು. ಅದರಂತೆ ಇದೇ ದಾರಿಯಿಂದ ಹಾಯ್ದು ಉಮರ್ಗ ಮತ್ತು ನೀಲಂಗಾದತ್ತ ಹೋಗುವ ಮಹಾರಾಷ್ಟ್ರ ರಾಜ್ಯದ ಬಸ್ಸುಗಳೆಲ್ಲವೂ ಇಲ್ಲಿ ನಿಲ್ಲುತ್ತಿದ್ದವು. ಇಂತಹ ಲಾಂಬಜಣಿ ಊರಿನ ಸ್ಮಶಾನಭೂಮಿಯಲ್ಲಿ ಒಂದುದಿನ ಸುಡುಗಾಡು ಸಿದ್ದರ ಐದಾರು ಕುಟುಂಬಗಳು ಬಂದು ತಳವೂರುತ್ತವೆ. ತಮ್ಮ ಗುಡಾರಗಳನ್ನು ಬಿಚ್ಚಿಕೊಂಡು ಬಿಡಾರ ಕಟ್ಟಿಕೊಳ್ಳುತ್ತಾರೆ. ಈ ಎಲ್ಲಾ ಗುಂಪುಗಳಿಗೆ ಒಬ್ಬ ಮುಖಂಡನಿದ್ದ ಅವನ ಹೆಸರು ಗಂಗಾರಾಮ.

ಈತನೇ ಅವರಲ್ಲಿರುವ ವಾದಗಳ ನಿರ್ಣಯವನ್ನು ಮಾಡಿ ಬಗೆಹರಿಸುತ್ತಿದ್ದನು. ಊರಿನಲ್ಲಿ ಸತ್ತ ಹೆಣವನ್ನು ಸ್ಮಶಾನಕ್ಕೆ ತಂದು ಅವರ ವಿಧಿ ವಿಧಾನಗಳಲ್ಲಿ ಮಾಡಿದ ಅನ್ನ, ವಸ್ತು, ವಸ್ತ್ರಗಳನ್ನು ತಂದು ಗಂಗಾರಾಮನ ಕುಟುಂಬ ಬದುಕುತ್ತಿತ್ತು.ಸುಡುಗಾಡು ಸಿದ್ದರು ಒಂದೇ ಊರಲ್ಲಿ ಹೆಚ್ಚುದಿನ ಅಲ್ಲೇ ಇರುವುದಿಲ್ಲ. ನಾಲ್ಕೈದು ದಿನವಿದ್ದುಕೊಂಡು ಮತ್ತೊಂದು ಊರಿಗೆ ಹೋಗುವ ಅಲೆಮಾರಿ ಜನಾಂಗ ಅದಾಗಿತ್ತು.ಗಂಗಾರಾಮನು ತನ್ನ ಸುಡುಗಾಡು ಸಿದ್ದನ ವೇಷವನ್ನು ಧರಿಸಿಕೊಂಡು, ಪ್ರತಿದಿನ ಬೆಳಗ್ಗೆ ಊರೊಳಕ್ಕೆ ಭಿಕ್ಷೆಯನ್ನು ಬೇಡಿಕೊಂಡು ಬಂದು ಅದರಿಂದ ಇಡೀ ಕುಟುಂಬದ ಮಕ್ಕಳು ಊಟ ಮಾಡುತ್ತಿದ್ದರು. ಆ ಸುಡುಗಾಡು ಸಿದ್ದರಲ್ಲಿ ಅವರದೇ ಆದ ಕೆಲವು ಪ್ರಾಣಿ ಹಾಗೂ ವಸ್ತುಗಳೊಂದಿಗೆ ಸಾಗುವ ಜೀವನ ಕ್ರಮವಾಗಿರುತ್ತದೆ. ಅವರಲ್ಲಿ ಕತ್ತೆ, ಕೋಳಿ, ನಾಯಿ, ಇತ್ಯಾದಿಗಳನ್ನು ಹೊಂದಿದವರಾಗಿದ್ದರು. ಅವರು ಯಾವುದೇ ಊರಲ್ಲಿ ಬಂದು ತಳವೂರಬೇಕಾದರೆ ಪೊಲೀಸರ ಪರವಾನಿಗೆಯನ್ನು ತಂದು ತಮ್ಮಲ್ಲಿರುವ ಎಲ್ಲಾ ಮಾಹಿತಿಯನ್ನು ನೀಡಿರುತ್ತಾರೆ. ಸುಡುಗಾಡಿನಲ್ಲಿಯೇ ಇವರ ಜೀವನ. ಒಂದು ದಿನ ಸುಡುಗಾಡು ಸಿದ್ದರ ಬೀಡಿನ ಕತ್ತೆಗಳು ಮೇಯಲು ಹೋದಾಗ ಬಾಯಾರಿಕೆಯಿಂದ ನೀರನ್ನು ಹುಡುಕಿಕೊಂಡು ಆ ಊರಿನ ಪಟೇಲರ ಹೊಲದ ಕಡೆಗೆ ಹೋಗುತ್ತವೆ. ಹದಿನಾರು ಹದಿನೇಳರ ವಯಸಿನ ಗಂಗಾರಾಮನ ಸೊಸೆ ಸದಾಮಲ್ಲಿಗೆಯು ಕತ್ತೆಗಳು ಹೋದ ಜಾಡವನ್ನು ಹಿಡಿದು ಹೋಗುತ್ತಾಳೆ.

ಅಲ್ಲಿ ಪಟೇಲರ ಮಗ ಅವಳನ್ನು ಕಂಡು ನಿನ್ನ ಕತ್ತೆಗಳು ನಮ್ಮ ಹೊಲವನ್ನು ಹೊಕ್ಕು ಬೆಳೆಯನ್ನೆಲ್ಲ ತಿಂದುಹಾಕಿವೆ. ಆ ನಷ್ಟವನ್ನು ಯಾರು ತುಂಬಿಸಿಕೊಡುತ್ತಾರೆ....? ನೀನೋ

ನಿಮ್ಮಪ್ಪನೋ....? ಎಂದು ಕೇಳಿ ನಿನ್ನ ಕತ್ತೆಗಳು ಗದ್ದೆಯ ತುದಿಯಲ್ಲಿವೆ ಎಂದು ಸುಳ್ಳು ಹೇಳಿ ಕಳಿಸುತ್ತಾನೆ.ಅರಿಯದ ಮುಗ್ದ ಸದಾಮಲ್ಲಿಗೆ ಕತ್ತೆಗಳನ್ನು ಹೊಡದುತರಲೆಂದು ಹುಡುಕುತ್ತ ಕಬ್ಬಿನ ಗದ್ದೆಯ ಕಡೆ ಹೋಗುತ್ತಾಳೆ. ಅವಳನ್ನು ಹಿಂಬಾಲಿಸಿಕೊಂಡು ಕಾಡಿನಲ್ಲಿರುವ, ಯಾರ ಸುಳಿವೂ ಇಲ್ಲದ, ಆ ನಿರ್ಜನ ಪ್ರದೇಶದಲ್ಲಿ ಸಮಯ ಸಾಧಿಸಿಕೊಂಡು ಕಬ್ಬಿನ ಗದ್ದೆಯ ದಟ್ಟ ಕತ್ತಲೆಯ ನಡುವೆ ಸದಾಮಲ್ಲಿಗೆಯನ್ನು ಎಳೆದುಕೊಂಡು ಹೋಗುತ್ತಾನೆ. ಅವಳು ಅರಚುತ್ತಾಳೆ, ಕೈ ಮುಗಿದು ಬೇಡಿಕೊಳ್ಳುತ್ತಾಳೆ. ನಾನು ಮದುವೆಯಾದವಳು ನನ್ನ ಮಾನವನ್ನು ಕೆಡಿಸಬೇಡವೆಂದು ಅಳುತ್ತಿರುವ ಸದಾಮಲ್ಲಿಗೆಯನ್ನು ಕಾಮದ ಅಂಧಕಾರದಲ್ಲಿದ್ದ ಜಮೀನ್ದಾರನ ಮಗ ಕಿರುಬನು ಅವಳನ್ನು ಅತ್ಯಾಚಾರ ಮಾಡುತ್ತಾನೆ.ಉಳ್ಳವರು ಬಡಹೆಣ್ಣುಮಕ್ಕಳ ಮೇಲೆ ಮಾಡುವ ಇಂತಹ ಅಕೃತ್ಯಗಳು ದಲಿತರ ಒಡಲಿಗೆ ಕಿಚ್ಚನ್ನು ಹತ್ತಿಸಿ ಅದರ ಸುಖವನ್ನು ನೋಡಬಯಸುವ ಬಂಡವಾಳಶಾಹಿಗಳ ಇಂತಹ ದೌರ್ಜನ್ಯಕ್ಕೆ ಕೊನೆ ಯಾವುದು....? ಇತ್ತ ಸದಾಮಲ್ಲಿಗೆ ಉಸಿರುಗಟ್ಟಿದಂತಾಗಿ ಬಿದ್ದಿದ್ದ ಅವಳು ಎದ್ದು ಅಳುತ್ತಾ ಬರುವುದನ್ನು ಅವಳ ಅತ್ತೆ ದಾರಿಯಲ್ಲಿ ನೋಡುತ್ತಾಳೆ. ಆಗ "ಸದಾಮಲ್ಲಿಗೆಗೆ ದುಃಖ ಉಕ್ಕಿ ಬಂತು ಅಳುತ್ತ ನರಳುತ್ತ 'ಅತ್ತೆವ್ವಾ ಆ ಜಮಿನ್ದಾರನ ಮಗ ನನ್ನ ಮಾನ ಕಳೆದುಬಿಟ್ಟ ನನ್ನನ್ನು ಕಬ್ಬಿನ ಗದ್ದಿಗ ಎಳ್ಕೊಂಡು ಹೋಗಿ, ನಿನ್ನ ಕತ್ತೆಗೊಳು ನನ್ನ ಬೆಳಿಯೆಲ್ಲ ಹಾಳ ಮಾಡ್ಯಾವ ಅದರ ದಂಡ ಕೊಡು ಅಂತ ನನ್ನ ಮೈಮ್ಯಾಲ ಬಿದ್ದ ಅತ್ತೆವ್ವಾ ನಾನೇನು ಮಾಡ್ಲಿ....?' ಈಗ ನನ್ನ ಗತಿಯೇನು....? ಎಂದು ಕೊರಳಿಗೆ ಬಿದ್ದು ಅಳತೊಡಗಿದಳು."[೨೧]

ಆಗ ಸುಡುಗಾಡು ಸಿದ್ದರು ನಮ್ಮ ಹೆಣ್ಣುಮಗುವಿನ ಮೇಲೆ ಮಾಡಿರುವ ಈ ಅನ್ಯಾಯವನ್ನು ಕುರಿತು ಪೋಲೀಸರಿಗೆ ದೂರು ನೀಡಿದರೆ ತೆಗೆದುಕೊಳ್ಳುವುದಿಲ್ಲ. ಅವರು ಶ್ರೀಮಂತರ ಪರ ಇದ್ದಾರೆ. ನಾವು ಪಟೇಲರನ್ನು ಈ ವಿಷಯವಾಗಿ ಎದುರು ಹಾಕಿಕೊಂಡು ಈ ಊರು ಬಿಟ್ಟು ಸಹ ಹೋಗುವುದಕ್ಕೆ ಸಾಧ್ಯವಿಲ್ಲವೆಂದು ನಿರ್ಣಯಿಸಿಕೊಂಡು, ಯಾರಿಗೂ ಹೇಳದೆ ಆ ಸುಡುಗಾಡು ಸಿದ್ದರ ಬಳಗವೇ ಆ ಊರನ್ನು ಬಿಟ್ಟು ಹೋಗುವ ಈ ಕಥೆಯಲ್ಲಿ ಬಡವರ ನೋವಿಗೆ ಕೊನೆಯಿಲ್ಲ. ಶ್ರೀಮಂತರು ಮಾಡುವ ಅತ್ಯಾಚಾರಗಳನ್ನು ಎದುರಿಸಲು ಬಲಿಷ್ಟವಾದ ಆರ್ಥಿಕ ಶಕ್ತಿಯಿಲ್ಲ. ಈ ಎಲ್ಲಾ ವಂಚನೆಗಳನ್ನು ದಲಿತರ ಮೇಲೆ ಸೃಷ್ಟಿಮಾಡಿ ಆಳುವ ಜಮಿನ್ದಾರರು ಇಂತಹ ಅತ್ಯಾಚಾರಗಳನ್ನು ಮಾಡುತ್ತಿರುವುದಕ್ಕೆ, ಅಂತಹದ್ದನ್ನು ಸಹಿಸಿಕೊಂಡು ದೀನವಾಗಿ ಬದುಕುವುದಕ್ಕೆ ಆರ್ಥಿಕ ಬಲವೇ ಕಾರಣವಾಗಿರುತ್ತದೆ.ಸಮಾನತೆಯ ಧ್ವನಿಯೊಂದಿಗೆ ಅತ್ಯಾಚಾರಕ್ಕೆ ಬಲಿಯಾದ ಸದಾಮಲ್ಲಿಗೆಯ ಮನದಲ್ಲಿ ಆರದ ಕಿಚ್ಚೊಂದಿರುತ್ತದೆ.

ಬಡತನದ ಹೊಟ್ಟೆಪಾಡಿಗಾಗಿ ಊರೂರು ಸುತ್ತಿಕೊಂಡು ಬದುಕುವ ಸುಡುಗಾಡು ಸಿದ್ದರ ಕುಟುಂಬ ಯಾವುದೇ ಅನ್ಯಾಯಗಳನ್ನು ಮಾಡದೆ, ತಾವು ವಾಸವಿರುವ ಊರಿನಲ್ಲಿ ಕಳ್ಳತನವನ್ನು ಮಾಡದೆ, ತುಂಬ ಸಂಜಿಕೆಯಿಂದ ಊರಿನ ಆಚೆಯೇ ಇದ್ದುಕೊಂಡು, ನಾಲ್ಕೈದುದಿನ ಇದ್ದು

ಹೋಗುವವರ ಮೇಲೆ ನಡೆಯುವಂತಹ ಅತ್ಯಾಚಾರವು ಬಂಡವಾಳಶಾಹಿಗಳು ಸಾಮಾನ್ಯ ಜನರ ಮೇಲೆ ಮಾಡುವ ದೌರ್ಜನ್ಯವನ್ನು ತಿಳಿಸುತ್ತದೆ. ಪಟೇಲರ ಮಗ ಕಿರುಬನು ಸುಡುಗಾಡುಸಿದ್ದರ ಗಂಗಾರಾಮನ ಸೊಸೆಯಾದ ಸದಾಮಲ್ಲಿಗೆಯನ್ನು ತನ್ನ ಕಬ್ಬಿನ ಗದ್ದೆಯಲ್ಲಿ ಹೊತ್ತುಕೊಂಡು ಹೋಗಿ ಅತ್ಯಾಚಾರ ಮಾಡಿದರೂ ಅವರ ವಿರುದ್ಧ ಧ್ವನಿಯನ್ನು ಎತ್ತದೆ, ಅವರು ಅಸಹಾಯಕತೆಯಿಂದ ಆ ಊರನ್ನೇ ಬಿಟ್ಟು ಹೋಗುವುದಕ್ಕೆ ಅವರಿಗಿರುವ ಆರ್ಥಿಕ ಅಸಮಾನತೆಯೇ ಕಾರಣವಾಗಿದೆ. ಗಂಗಾರಾಮನು ತನ್ನ ಸೊಸೆಯ ಅತ್ಯಾಚಾರವನ್ನು ಕುರಿತು ಪೊಲೀಸರಿಗೆ ದೂರು ಕೊಡಲು ನಿರಾಕರಿಸಿದ್ದು, ನಮ್ಮಂತ ಬಡವರನ್ನು ಪೊಲೀಸರು ರಕ್ಷಣೆ ಮಾಡಲು ಸಾಧ್ಯವಿಲ್ಲ. ಅವರು ಹಣವಂತರಾದ ಪಟೇಲರು ಹೇಳಿದಂತೆ ಮಾಡುತ್ತಾರೆ.

ಆದ್ದರಿಂದ ನಾವು ಬಡವರು ನಮ್ಮ ಮೇಲೆ ನಡೆದ ಅತ್ಯಾಚಾರವನ್ನು ಪಟೇಲರಿಗೆ ಹೇಳಿದರೂ ನಮ್ಮನ್ನು ಈ ಊರಿನಿಂದ ಹೋಗಲು ಸಹ ಬಿಡುವುದಿಲ್ಲವೆಂದು ನಿರ್ಧರಿಸಿಕೊಳ್ಳುವ ಸುಡುಗಾಡುಸಿದ್ದರಂತಹ ಬಡ ಕುಟುಂಬಗಳಿಗೆ ಈ ಸಮಾಜದಲ್ಲಿ ಬಂಡವಾಳಶಾಹಿಗಳು ಮಾಡಿದ ಅನ್ಯಾಯದ ಆರ್ಥಿಕ ಶೋಷಣೆಯೇ ಕಾರಣವಾಗಿರುತ್ತದೆ. ಕಾನೂನುಗಳು ಉಳ್ಳವರ ಪರವಾಗಿವೆ. ಅವು ಬಡವರಿಗೆ ರಕ್ಷಣೆಯನ್ನು ನೀಡುವುದಿಲ್ಲವೆಂಬ ಸತ್ಯಾಂಶವು ದಲಿತರನ್ನು ಶೋಷಣೆಯಲ್ಲಿ ಬಾಳುವಂತೆ ಮಾಡಿರುವ ಈ ಸಾಮಾಜಿಕ ವ್ಯವಸ್ಥೆಯೇ ಸಾಕ್ಷಿಯಾಗಿದೆ. ಬಂಡವಾಳಶಾಹಿಗಳು ದಲಿತರನ್ನು ಆರ್ಥಿಕವಾಗಿ ಶೋಷಣೆಗೆ ಒಳಪಡಿಸಿದಂತೆ ದೈಹಿಕವಾಗಿ, ಮಾನಸಿಕವಾಗಿ ಶೋಷಣೆಗೆ ಒಳಪಡಿಸಿದ್ದಾರೆ. ತಮ್ಮಲ್ಲಿರುವ ಅಧಿಕಾರ ಮತ್ತು ಬಂಡವಾಳದ ಪ್ರಬಲಶಕ್ತಿಯಿಂದ ದಲಿತರನ್ನು ತಮ್ಮ ಮನಸ್ಸಿಗೆ ಬಂದಂತೆ ಅತ್ಯಾಚಾರಗಳನ್ನು ಮಾಡುತ್ತಾರೆ.

ಬಡ ಹೆಣ್ಣುಗಳನ್ನು ಕೇವಲ ದೈಹಿಕ ವಸ್ತುವೆಂದು ತಿಳಿದುಕೊಂಡು ಅವರ ಮೇಲೆ ಅತ್ಯಾಚಾರಗಳನ್ನು ನಡೆಸುತ್ತಾರೆ. ಕಾನೂನಿನ ವ್ಯವಸ್ಥೆಯಲ್ಲಿ ಬದುಕುತ್ತಿರುವ ವ್ಯವಸ್ಥೆಯಲ್ಲಿಯೇ ಇಂತಹ ಅತ್ಯಾಚಾರಗಳು ನಡೆಯುತ್ತಿವೆ ಎಂದರೆ ದಲಿತರಿಗೆ ಇನ್ನೂ ಸ್ವತಂತ್ರ ಸಿಕ್ಕಿರುವುದಿಲ್ಲವೆಂದು ಹೇಳಬಹುದು.ಬ್ರಿಟೀಷರು ಅಂದು ಭಾರತೀಯರನ್ನು ಶೋಷಣೆಯಲ್ಲಿ ಮುಳುಗಿಸಿದಂತೆ ಇಂದು ಸ್ವತಂತ್ರ ಭಾರತ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಉಳ್ಳವರು ದಲಿತ ಸ್ತ್ರೀಯರ ಮೇಲೆ ಅತ್ಯಾಚಾರಗಳನ್ನು ನಡೆಸುತ್ತಿದ್ದಾರೆ. ಅವರ ವಿರುದ್ಧ ಈ ಸುಡುಗಾಡುಸಿದ್ದರ ಕುಟುಂಬದಂತೆ ಧ್ವನಿಯೆತ್ತಲು ಸಾಧ್ಯವಿಲ್ಲದಂತೆ ಬಂಡವಾಳಶಾಹಿಗಳು ಮಾಡಿದ್ದಾರೆ.

ಅಂದ ಮೇಲೆ ದಲಿತರ ಬದುಕು ಕೇವಲ ಅವಮಾನ, ಅತ್ಯಾಚಾರಗಳಿಂದ ಕೂಡಿರುವಾಗ, ಅಸಮಾನತೆಯಲ್ಲಿ ಬಳಲುತ್ತಿರುವಾಗ ದಲಿತರು ಸ್ವತಂತ್ರ ಭಾರತವೆಂದು ಹೇಗೆ ಕರೆಯಲು ಸಾಧ್ಯ.....? ಎಂಬ ಪ್ರಶ್ನೆಯನ್ನು ಕಥೆಗಾರರು ಈ ಕಥೆಯಿಂದ ಮೂಡಿಸಿದ್ದಾರೆ. ಈ ಎಲ್ಲಾ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಕಥೆಗಾರರು ಈ

ಸದಾಮಲ್ಲಿಗೆಗೆ ಆದ ಅತ್ಯಾಚಾರವನ್ನು ಇಡೀ ದಲಿತ ಸಮುದಾಯದ ಹೆಣ್ಣುಮಕ್ಕಳ ಮೇಲೆ ಇಂತಹ ಅತ್ಯಾಚಾರಗಳು ಪ್ರಸ್ತುತವಾಗಿ ವಾಸ್ತವದಲ್ಲಿ ನಡೆಯುತ್ತಿವೆ ಎಂಬುದನ್ನು ನಿದರ್ಶನವನ್ನಾಗಿ ನೀಡುತ್ತ ದಲಿತ ಹೆಣ್ಣುಮಕ್ಕಳು ಪಡುತ್ತಿರುವ ಅತ್ಯಾಚಾರದ ನೋವುಗಳನ್ನು, ಅವಮಾನಗಳನ್ನು ಅವರ ಅಸಹಾಯಕತೆಯ ಸ್ಥಿತಿಗತಿಗಳನ್ನು ಈ ಕಥೆಯಲ್ಲಿ ದಲಿತ ಸ್ತ್ರೀ ಸಂವೇದನೆಗಳನ್ನು ಸ್ತ್ರೀವಾದದ ನೆಲೆಯಲ್ಲಿ ಚಿತ್ರಿಸಿದ್ದಾರೆ.

## ಅಡಿಟಿಪ್ಪಣಿಗಳು

೧. ಕಮಲಾದಾಸ್ (ಮೂ)/ ಕೆ.ಕೆ. ಗಂಗಾಧರನ್(ಅ)– ಕಮಲಾದಾಸ್ ಕಥೆಗಳು– ಪು.ಸಂ–೪೬

೨. ಓಲ್ಗಾ (ಮೂ) / ಜಿ. ವೀರಭದ್ರಗೌಡ (ಅ) – ರಾಜಕೀಯ ಕಥೆಗಳು –ಪು.ಸಂ–೫೭

೩. ಕಮಲಾದಾಸ್ (ಮೂ) / ಪಾರ್ವತಿ ಜಿ.ಐತಾಳ್ (ಅ) – ನನ್ನ ಚಿರಾಳಜ್ಜನ ಕಡುಗತ್ತಿ ಮತ್ತು ಇತರ ಮಲಿಯಾಳಿ ಕಥೆಗಳು – ಪು.ಸಂ–೮೯

೪. ರಾಜಾಜಿ (ಮೂ) / ಶೇಷನಾರಾಯಣ್ (ಅ) – ಕಥಾ ಭಾರತಿ ತಮಿಳು ಕಥೆಗಳು – ಪು.ಸಂ–೦೬

೫. ಮಹಾದೇವ ಮೋರೆ (ಮೂ) / ಚಂದ್ರಕಾಂತ್ ಪೋಕಳೆ (ಅ) – ಆಧುನಿಕ ಮರಾಠಿ ಕಥೆಗಳು – ಪು.ಸಂ–೫೩

೬. ಪಲಮನೇರು ಬಾಲಾಜಿ (ಮೂ)/ಮಾಸ್ತಿ ಕೃಷ್ಣಪ್ಪ (ಅ)–ಮೊರಸುನಾಡು ಕಥೆಗಳು – ಪು.ಸಂ–೩೬೯ ಮತ್ತು ೩೭೦

೭ ಸಿತಾರ ಎಸ್.(ಮೂ) / ಪಾರ್ವತಿ ಜಿ.ಐತಾಳ್(ಅ)– ಮಲಿಯಾಳದ ಪ್ರಸಿದ್ಧ ಪೆಣ್ ಕಥೆಗಳು ಪು.ಸಂ–೯೩

೮. ಶರಣಕುಮಾರ್ ಲಿಂಬಾಳೆ (ಮೂ) / ಪ್ರಮೀಳಾ ಮಾಧವ್ (ಅ) – ಅಸ್ಪೃಶ್ಯ (ಕಥಾ ಸಂಕಲನ) –ಪು.ಸಂ–೧೫೭

೯. ಥಾಸು(ಮೂ) / ಸೊಂದಲಗೆರೆ ಲಕ್ಷ್ಮೀಪತಿ (ಅ) – ಶ್ರೇಷ್ಠಅನುವಾದಿತ ಕಥೆಗಳು –ಪು.ಸಂ–೧೦೭

೧೦. ಮಾಮಾ ವರೇರಕರ (ಮೂ)/ಲ.ಜಿ. ಬೇಂದ್ರೆ (ಅ)–ಮರಾಠಿ ಸಣ್ಣ ಕಥೆಗಳ ಕಣಜ–ಪು.ಸಂ–೧೨೭

೧೧. ಪುನತ್ತಿಲ್ ಕುಂಞಬ್ದುಲ್ (ಮೂ) / ವೆಂ. ಗೋಪಾಲಕೃಷ್ಣ (ಅ) – ಕಂದರ (ಆಯ್ದ ಮಲಿಯಾಳಂ ಕಥೆಗಳು) – ಪು.ಸಂ–೪೨ ಮತ್ತು ೪೩

೧೨. ಕುಪ್ಪಲಿ ಪದ್ಮ (ಮೂ) / ಗುರುಮೂರ್ತಿ ಪೆಂಡಕೂರು (ಅ)– ಅನುವಾದ ಕಥಾಂಜಲಿ–ಪು.ಸಂ.೬೦.

೧೩. ಅಶೋಕ ಮಿತ್ರನ್(ಮೂ)/ತಮಿಳ್‌ಸೆಲ್ವಿ(ಅ)–ಅಶೋಕ್‌ಮಿತ್ರನ್ ಅವರ ಕಥೆಗಳು–ಪು.ಸಂ–೧೩೧

೧೪. ಬಾಬುರಾವ್ ಬಾಗೂಲ (ಮೂ) / ಚಂದ್ರಕಾಂತ್ ಪೋಕಳೆ (ಅ)– ನಾನು ಜಾತಿ ಕದ್ದಾಗ – ಪು.ಸಂ–೭೮

೧೫. ಮ. ರಂಗನಾಥನ್ (ಮೂ) / ಡಾ. ತಮಿಳ್ ಸೆಲ್ವಿ(ಅ)– ಮ.ರಂಗನಾಥನ್ ಕಥೆಗಳು–ಪು.ಸಂ.೧೫೯

೧೬. ಕಮಲಾದಾಸ್ (ಮೂ) / ಸುಬ್ರಮಣ್ಯ (ಅ) – ಕೌದಿ ಮತ್ತು ಇತರೆ ಅನುವಾದಿತ ಕಥೆಗಳು ಪು.ಸಂ–೧೩೪

೧೭. ಇಲ್ಲಿಂದಲ ಸರಸ್ವತಿ ದೇವಿ (ಮೂ) / ವೇಣುಗೋಪಾಲ (ಅ) – ಸ್ವರ್ಣ ಕಮಲಗಳು– ಪು.ಸಂ.೨೪೯

೧೮. ಸಿತಾರ ಎಸ್. (ಮೂ) / ಪಾರ್ವತಿ ಜಿ. ಐತಾಳ್ (ಅ) – ಮಲಿಯಾಳದ ಮಹಿಳಾ ಕಥನ ಪು.ಸಂ–೨೦೪

೧೯. ಜುಜ್ಜುರಿ ವೇಣು (ಮೂ) / ದೇವಕವಿ 'ನಾ' ಧನಪಾಲ (ಅ) – ತಣ್ಣೀರ ಬಟ್ಟೆಯ ಬಿಸಿ (ಆಯ್ದ ತೆಲುಗು ಸಣ್ಣ ಕಥೆಗಳು) – ಪು.ಸಂ–೭೪

೨೦. ಸಿ.ವಿ ಶ್ರೀರಾಮನ್ (ಮೂ) / ಅಶೋಕ ಕುಮಾರ (ಅ) – ಸಿ.ವಿ. ಶ್ರೀರಾಮನ್ ಕಥೆಗಳು– ಪು.ಸಂ.–೪೮೫೨೧. ಲಕ್ಷ್ಮಣ ಗಾಯಕವಾಡ್ (ಮೂ) / ಗಿರೀಶ ಚಂದ್ರಕಾಂತ ಜಕಾಪುರೆ (ಅ) – ಸದಾ ಪ್ರವಹಿಸುವ ಕಥೆಗಳು –ಪು.ಸಂ–೧೨೬

ಅಧ್ಯಾಯ : ಐದು

# ಕನ್ನಡ ಕಥೆಗಳು ಮತ್ತು ಅನುವಾದಿತ ಕಥೆಗಳು : ದಲಿತ ಸಂವೇದನೆಯ ಸ್ವರೂಪ, ತಾತ್ವಿಕತೆಯ ತೌಲನಿಕ ನೋಟ

೫.೧. ಪ್ರವೇಶ

೫.೨. ಜಾತಿ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರು

೫.೩. ಬಂಡವಾಳಶಾಹಿಗಳು ಮತ್ತು ಹಸಿದ ಹೊಟ್ಟೆಗಳ ಬದುಕು

೫.೪. ಜೀತ ಪದ್ಧತಿ ಮತ್ತು ಜಮೀನ್ದಾರರ ಒಡೆತನ

೫.೫. ದೇವದಾಸಿ ಪದ್ಧತಿ ಮತ್ತು ಜಾತಿ–ಭೇದದ ಸಂಘರ್ಷ

ಅಧ್ಯಾಯ : ಐದು

# ಕನ್ನಡ ಕಥೆಗಳು ಮತ್ತು ಅನುವಾದಿತ ಕಥೆಗಳು : ದಲಿತ ಸಂವೇದನೆಯ ಸ್ವರೂಪ, ತಾತ್ವಿಕತೆಯ ತೌಲನಿಕ ನೋಟ

## ೫.೧. ಪ್ರವೇಶ

ಪ್ರಕೃತಿಯನ್ನು ಪ್ರೇಮಿಸಿದಾಗ ಕೃತಿಕೃಷಿ ತಾನಾಗಿಯೇ ಹುಟ್ಟುತ್ತದೆ. ನಾವು ಕಥೆ ಬರೆಯುವ ಬದಲು ನಮ್ಮ ಜೀವನವೇ ಕಥೆ ಬರೆಸಬೇಕು. ಆಗ ಮಾತ್ರ ನಮ್ಮಲ್ಲಿರುವ ಅನುಭವದಿಂದ ವಾಸ್ತವತೆಯನ್ನು ತೆರೆದುತೋರಿಸಲು ಸಾಧ್ಯವಾಗುತ್ತದೆ. ನಮ್ಮೊಳಗಿರುವ ಸಂಕಟವನ್ನೆ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡು, ಬದುಕಿನ ಅಸಹಾಯಕತೆಯ ಬಿಸಿಲಿನ ಶಕ್ತಿಯಿಂದ, ನಮ್ಮನ್ನು ತೀವ್ರವಾಗಿ ಕಾಡುತ್ತಿರುವ ಅಂತರಂಗದ ಕಿಚ್ಚುಗಳು ಲೇಖನಿಯ ಮೂಲಕ ನೊಂದವರ ಪರ ಕಥೆಗಳಾಗಿ ಮೂಡಿಬರಬೇಕು. ಅಂತಹ ಕಥೆಗಳು ಸಮಾಜದ ಕನ್ನಡಿಗೆ ಅಂಟಿರುವ ಜಾತಿ, ಮತ, ಧರ್ಮ, ಪಂಗಡಗಳ ತಾರತಮ್ಯದ ಹಾಳು ಸಂಪ್ರದಾಯದಾಚರಣೆಯ ಕಟ್ಟುಪಾಡುಗಳನ್ನು ಒರೆಸಲು ಸಾಧ್ಯವಾಗುತ್ತದೆ. ಅಂತಹ ಕಥೆಗಳು ಎಲ್ಲಾ ಜನಾಂಗ, ದೇಶ, ಭಾಷೆ, ಕಾಲವನ್ನು ಮೀರಿ ಸಮಾಜದ ಹೃದಯದಲ್ಲಿ ನಿಲ್ಲುತ್ತವೆ. ಅಂತಹ ಕಥೆಗಳಿಗೆ ಅಳಿವೆಂಬುವುದು ಇರುವುದಿಲ್ಲ.

ಅದರ ಸಾರದಿಂದ ಸಮಾಜದ ಮನಸ್ಥಿತಿಯ ಬದಲಾವಣೆಯ ಬೆಳೆಯನ್ನು ಬೆಳೆಸಿಕೊಂಡು ಸಾಗುತ್ತವೆ. ಅವುಗಳೇ ಸಮಾಜಕ್ಕೆ ಸತ್ಯಾಸತ್ಯತೆಯನ್ನು ಗೋಚರಿಸುವಂತೆ ಮಾಡುತ್ತವೆ. ಸಾಹಿತ್ಯವೆಂಬುವುದು ಸರ್ವರ ಹಿತವನ್ನು ಕಾಪಾಡುವಂತದ್ದು, ಸರ್ವಕಾಲಿಕವಾಗಿ ಸತ್ಯವನ್ನು ಸಂಸ್ಕರಿಸಿ ಪದೇ ಪದೇ ಸಮಾಜದ ಅರಿವಿಗೆ ಮುಟ್ಟಿಸುವಂತಹದ್ದು. ಸಾಹಿತ್ಯ ಸೃಷ್ಟಿಯಾಗುವುದೇ ಸತ್ಯವಂತರ ಕಣ್ಣಿನಿಂದ. ಅದು ಯಾವಾಗಲೂ ಸಮಾಜದ ಹಿತಪರವಾಗಿ ತನ್ನ ವ್ಯವಸಾಯವನ್ನು ಮಾಡುತ್ತದೆ. ಯಾವುದನ್ನು ಅಂಟಿಸಿಕೊಳ್ಳದೆ ಸೃಷ್ಟಿಯಾಗಬೇಕು ಸಾಹಿತ್ಯ.ಆಗ ಮಾತ್ರ ಸಮಾಜದಲ್ಲಿ ಸಾಹಿತ್ಯ ತನ್ನ ಉದ್ದೇಶವನ್ನು ಸಾಧಿಸಿಕೊಳ್ಳಲು ಸಾಧ್ಯವಾಗುತ್ತದೆ. ಬದುಕನ್ನು ಖಚಿತವಾಗಿ ವಾಸ್ತವದ ನೆಲೆಯಲ್ಲಿ ನಿಂತು ಅವಲೋಕನ ಮಾಡಬೇಕು. ಅವರ ಸಂವೇದನೆಗಳಿಂದ ಸಾಹಿತ್ಯ ಹೊರಹೊಮ್ಮಿ ತನ್ನಂತರಂಗದ ಭಾವನೆಗಳನ್ನು, ನೋವುಗಳನ್ನು ಅಭಿವ್ಯಕ್ತಗೊಳಿಸಬೇಕು. ಅಂತಹ ನೊಂದವರ ಸತ್ಯ ಕಥೆಗಳನ್ನು ಕನ್ನಡ ಸಾಹಿತ್ಯದ ಸಾರಸ್ವತ ಲೋಕಕ್ಕೆ ತಮ್ಮ ಅನುಭವಗಳ ಮೂಲಕ ದಲಿತ ಸಂವೇದನೆಗಳನ್ನು ತಮ್ಮೊಳಗಿನ

ಮಾತುಗಳ ಸಂಕಲನದಿಂದ ಕಥೆಗಳನ್ನಾಗಿ ನೀಡಿರುವ ಕನ್ನಡದ ಶ್ರೇಷ್ಠ ದಲಿತ ಸಾಹಿತಿಗಳಾದ ದೇವನೂರು ಮಹಾದೇವ, ಡಾ.ಮೊಗಳ್ಳಿ ಗಣೇಶ್, ಅರವಿಂದ ಮಾಲಗತ್ತಿ, ಕುಂ.ವೀರಭದ್ರಪ್ಪ, ಡಾ. ಚೆನ್ನಣ್ಣ ವಾಲಿಕಾರ್, ನಿರಂಜನ್, ಪಿ.ಲಂಕೇಶ್, ಈಶ್ವರಚಂದ್ರ, ಹೆಚ್.ಎಸ್. ಬೇನಾಳ, ಹನುಮಂತ ಹಾಲಗೇರಿ, ಮಂಜು ಕೋಡಿಉಗನೆ, ಹಳೇಮನಿ ರಾಜಶೇಖರ್.

ಜಡೇಕುಂಟಿ ಮಂಜುನಾಥ, ಜಿ.ಪಿ. ಬಸವರಾಜು, ಬೆಸಗರಹಳ್ಳಿ ರಾಮಣ್ಣ, ಎಸ್.ಆರ್. ಗುರುನಾಥ್ ರವರು ಬರೆದಿರುವ ದಲಿತ ಕಥೆಗಳನ್ನು ಮತ್ತು ತೆಲುಗು, ತಮಿಳು, ಮಲಿಯಾಳಂ ಮತ್ತು ಮರಾಠಿ ಸಾಹಿತ್ಯದ ಕಥೆಗಾರರಾದ ಕಮಲಾದಾಸ್, ತಮಿಳವನ್, ಪಾಲಗುಮ್ಮಿ, ಪದ್ಮರಾಜು, ರಾವೂರಿ, ಭರಧ್ವಾಜ, ಸಿ.ಎಸ್.ರಾವು, ಶರಣಕುಮಾರ ಲಿಂಬೋಳಿ, ಜಯಕಾಂತನ್, ಓಲ್ಗಾ, ರಾಸಾನಿ, ದೇವಿ ಭಾರತಿ, ಅನಿಲ ಪದ್ಮನಾಭನ್, ಡಾ. ಬಾಬುರಾವ್ ಗಾಯಕವಾಡ, ಶ್ರೀ ಪವಣ್ಣನ್, ಜಯಕಾಂತನ್, ಡಿ.ಅಶೋಕ ಮಿತ್ರನ್, ಚೆರಿಯನ್ ಚೆರಿಯನ್, ಬಾಬುರಾವ್ ಬಾಗೂಲರವರು ಬರೆದಿರುವ ದಲಿತ ಕಥೆಗಳನ್ನು ಆಯ್ದುಕೊಂಡು ಈ ಅಧ್ಯಾಯದಲ್ಲಿ ಕನ್ನಡ ದಲಿತ ಕಥೆಗಳಲ್ಲಿರುವ ದಲಿತ ಸಮುದಾಯದ ಸಂವೇದನೆಯ ನೆಲೆಗಳಿಗೂ, ಇತರೆ ಭಾಷೆಗಳಿಂದ ಬಂದತಹ ದಲಿತ ಸಂವೇದನೆಗಳಿಗೆ ಇರುವ ಸಂವೇದನೆಯ ಸ್ವರೂಪವನ್ನು ಅಧ್ಯಯನ ಮಾಡಿ ಮತ್ತು ಅವರ ತಾತ್ವಿಕತೆಯನ್ನು ಸಂವೇದನೆಯ ನೆಲೆಯಿಂದ ತೌಲನಿಕವಾಗಿ ರಚಿಸಿಕೊಳ್ಳಲಾಗಿದೆ. ದಲಿತ ಕಥೆಗಾರರು ತಾವು ಕಂಡುಂಡ ನೋವುಗಳು, ಅವರ ಸಾಮಾಜಿಕ ಪರ ಕಾಳಜಿ, ರಾಷ್ಟ್ರದಲ್ಲಿರುವ ಅಸಮಾನತೆ, ಬೆಂದವರ ಬದುಕು, ಶೋಷಣೆಯ ಮೂಲ ಎಲ್ಲರನ್ನೂ ತಮ್ಮ ಕಥೆಗಳ ಮೂಲಕ ತಮ್ಮ ಅಂತರಂಗದ ಅರಿವಿನ ಆಳದಲ್ಲಿ ತೋರಿಸಿಕೊಟ್ಟಿದ್ದಾರೆ.

### ೫.೨. ಜಾತಿ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ದಲಿತರು

ದೇವನೂರ ಮಹದೇವರವರು ಬರೆದಿರುವ "ಎಲ್ಲ ಕಥೆ ಕಾದಂಬರಿಗಳು" ಎಂಬ ಕೃತಿಯಲ್ಲಿರುವ 'ಡಾಂಬರು ಬಂದುದು' ಎಂಬ ಕಥೆಯು ಒಂದು ಹಳ್ಳಿಯ ವಾತಾವರಣವನ್ನು ಡಾಂಬರು ನೆಪಮಾಡಿಕೊಂಡು ಹಳ್ಳಿಯ ಕಥೆಯನ್ನು ಬಿಚ್ಚಿಕೊಡುತ್ತದೆ. ಹಳ್ಳಿ ಎಂದ ಕೂಡಲೇ ದ್ವೇಷ, ಅಸೂಯೆ, ಬೇಡದ ಉಪದ್ರವ, ಜಾತೀಯತೆ, ಬಡವ, ಶ್ರೀಮಂತ, ಭೇದ ಪ್ರಜ್ಞೆಯಿರುತ್ತದೆ. ಈ ಕಾರಣಕ್ಕಾಗಿಯೇ ಹುಟ್ಟಿಕೊಳ್ಳುವ ಕಥೆ ಇದಾಗಿರುತ್ತದೆ. ದಲಿತ ಸಂವೇದನೆಯ ಸಂದರ್ಭದಲ್ಲಿ ಸಾಹಿತಿಯಾಗಿ ಕೇಳಿಬರುವ ಪ್ರಮುಖ ಹೆಸರೆಂದರೆ ಅದು ದೇವನೂರ ಮಹದೇವನವರು. ಭಾರತದ ವಿಶಿಷ್ಟ ಚಿಂತಕರು, ಅತ್ಯುತ್ತಮ ಕಥೆಗಾರರು. ನೊಂದವರ ನೋವನ್ನು ಸುಲಭವಾಗಿ ಗ್ರಹಿಸಬಲ್ಲವರು. ತುಳಿತಕ್ಕೆ ಒಳಗಾದವರ ಜೀವನದ ನೋವಿಗೆ ದನಿಯಾದವರು. ಬಂಡಾಯ ಮತ್ತು ನವ್ಯ ಸಾಹಿತ್ಯದ ಎರಡು ಕಾಲಘಟ್ಟಕ್ಕೆ ಸಲ್ಲುವ ಶ್ರೇಷ್ಠ ಸಾಹಿತ್ಯವನ್ನು ಕೊಟ್ಟಿದ್ದಾರೆ.

ಮೌನಕ್ಕೆ ಸಮಾಜದಲ್ಲಿ ಬೆಲೆ ತಂದವರೆಂದರೆ ಅದು ಇವರೆ ಎಂದು ಹೇಳಬಹುದು. ದಲಿತರ ಮೌನವನ್ನು ಮಾತಾಗಿಸಿ, ಅವರ ಬರವಣಿಗೆಯ ಮೂಲಕ ತಮ್ಮ ವಿಚಾರಧಾರೆಗಳಿಂದಲೇ

ಭಾರತದ ಮೂಲೆ ಮೂಲೆಯಲ್ಲಿ ದಲಿತರ ಸಂವೇದನೆಯನ್ನು ಕೇಳಿಸಿದರು. ಅನುಭವದ ಅಭಿವ್ಯಕ್ತಿಯಲ್ಲಿ ಪೂರ್ಣತೆಯನ್ನು ಸಾಧಿಸಿಕೊಂಡ ಕಥೆಗಾರರಿವರು. ಇವರ ಸಾಹಿತ್ಯವನ್ನೊಟ್ಟು ಓದಿ ಅರ್ಥೈಸಿಕೊಳ್ಳುವುದು ಕಷ್ಟಸಾಧ್ಯ. ಅವರು ತಾವು ಕಂಡ ಅನುಭವಿಸಿದ ತಮ್ಮೊಳಗಿನ ನೋವುಗಳನ್ನೇ ಸಾಹಿತ್ಯವನ್ನಾಗಿಸಿದರು. ಪ್ರಸ್ತುತ ಅವರು ಬರೆದಿರುವ ಈ ಕಥೆಯು ಒಂದು ಹಳ್ಳಿಯಲ್ಲಿ ನಡೆಯುವ ಚಿತ್ರಣವನ್ನು ಕಣ್ಣುಮುಂದೆ ತರುತ್ತದೆ.

ಸರಿಯಾದ ವ್ಯವಸ್ಥೆಯಿಲ್ಲದ ರಸ್ತೆಗಳು, ಅಕ್ಕ- ಪಕ್ಕದಲ್ಲಿರುವ ಗಿಡ ಗಂಟೆಗಳು ಯಾವಾಗಲೂ ರಣ ರಣ ಹೊಡೆಯುತ್ತಿರುವ ಬಿಸಿಲು, ಜನಸಂದಣಿ ಕಡಿಮೆಯಿಂದ ಕೂಡಿದ್ದ, ಹೆಚ್ಚು ಶಿಕ್ಷಣವನ್ನು ಪಡೆದುಕೊಳ್ಳದೆ ತಾವಿರುವಲ್ಲಿಯೇ ತಮ್ಮ ಜೀವನವನ್ನು ಸಾಗಿಸಿತ್ತಿರುವವರು. ಪ್ರಪಂಚದ ಜ್ಞಾನವೇ ಇಲ್ಲದೆ ಕೂಲಿ ನಾಲಿ ಮಾಡಿಕೊಂಡು ಬದುಕುತ್ತಿರುವ ಕೆಳಗೇರಿಯ, ನೊಂದ ದಲಿತ ಕುಟುಂಬದವರು ಹಳ್ಳಿಯೆಂದರೆ ಅದು ಕೆಲ ಮೇಲ್ವರ್ಗದವರ ಹಿಡಿತದಲ್ಲಿ ಅಂದರೆ ಇಲ್ಲಿ ಪಟೇಲರ ಹಿಡಿತದಲ್ಲಿರುವ ಒಡೆತನವನ್ನು ಇತ್ಯಾದಿಗಳ ಚಿತ್ರಣವನ್ನು ತಂದುಕೊಡುತ್ತದೆ. ಭಾರತದ ಭಾಗಶಃ ಹಳ್ಳಿಗಳು ಇರುವ ಸ್ಥಿತಿಯನ್ನು ಕಥೆಗಾರರು ಇಲ್ಲಿ ತಮ್ಮ ಅನುಭವಗಳ ಮೂಲಕ ಅಲ್ಲಿರುವ ಸ್ಥಿತಿಗಳನ್ನು ಮತ್ತು ಜನರ ಮನಸ್ಥಿತಿಯನ್ನು ತಿಳಿಸುತ್ತಾರೆ. ಅಷ್ಟೇ ಅಲ್ಲದೆ ದಲಿತರಿಗಿರುವ ಸ್ಥಾನಮಾನಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ತೋರಿಸಿಕೊಡುತ್ತಾರೆ. ೧೯೭೭ರಲ್ಲಿ ಈ ಕಥೆಯನ್ನು ಬರೆದಿದ್ದಾರೆ.

ಆ ಕಾಲಘಟ್ಟದಲ್ಲಿರುವ ಹಳ್ಳಿಗಳ ಸಂವೇದನೆಗಳನ್ನು ಈ ಕಥೆಯು ಬಿತ್ತರಿಸುತ್ತದೆ. ಸರಿಯಾಗಿ ನಡೆದಾಡಲು ಸಾಧ್ಯವಿಲ್ಲದ ರಸ್ತೆಯಿರುವ ಈ ಹಳ್ಳಿಗೆ ಪಟೇಲರು ಒಮ್ಮೆ ಸರಕಾರದ ಸಚಿವರು ಬಂದಾಗ ಅವರಿಗೆ ಸನ್ಮಾನ ಮಾಡಿ ಗೌರವಿಸಿ, ಹೂವಿನ ಹಾರ ಹಾಕಿ ಅವರಲ್ಲಿ ಊರಿನ ಮನವಿಯನ್ನು ಮಾಡಿಕೊಂಡಿದ್ದರು. ನಮ್ಮ ಊರು, ಊರು ಅನ್ನಿಸಿಕೊಳ್ಳಬೇಕಾದರೆ ಒಂದು ರಸ್ತೆ ಉತ್ತಮವಾದದ್ದು ಇರಬೇಕು. ಅದಕ್ಕಾಗಿ ನೀವು ನಮ್ಮ ಹಳ್ಳಿ ರಸ್ತೆಗಳಿಗೆ ಹಾಕಿಸಿ ಕೊಡಬೇಕೆಂದು ಕೇಳಿಕೊಂಡಿರುವುದರ ಪ್ರತಿಫಲವಾಗಿ ಆ ಹಳ್ಳಿಗೆ ಡಾಂಬರು ರಸ್ತೆ ಮಾಡಲು ಸರಕಾರ ಹಣವನ್ನು ಬಿಡುಗಡೆ ಮಾಡುತ್ತದೆ. ಇದನ್ನು ತಿಳಿದ ಹಳ್ಳಿಯ ಜನರು ಡಾಂಬರು ಎಂದರೆ ಏನೆಂದು ನೋಡೇ ಇರದ ಮುಗ್ಧ ಜೀವಿಗಳವರು. ಇದುವರೆಗೂ ಅವರು ಡಾಂಬರು ನೋಡಿಯೇ ಇರಲಿಲ್ಲ. ಅದರ ಸರಿಯಾದ ಉಪಯೋಗವು ಅವರಿಗೆ ಸರಿಯಾಗಿ ತಿಳಿದಿರುವುದಿಲ್ಲ.

ಮನೆಯ ಮಡಿಕೆ, ಪಾತ್ರೆಗಳು ರಂಧ್ರವಾದರೆ ಡಾಂಬರಿನಿಂದ ಮುಚ್ಚಬಹುದು ಎನ್ನುವಷ್ಟು ಮುಗ್ಧರಿದ್ದರು. ಪಟೇಲರು ಡಾಂಬರ್ ರಸ್ತೆಯ ಕಂಟ್ರಾಕ್ಟರೆಂದು ಅವರೇ ಅದನ್ನು ಸರಕಾರದ ದುಡ್ಡಿನಲ್ಲಿ ಮುಗಿಸಿಕೊಟ್ಟು, ಉಳಿದ ದುಡ್ಡಿನಲ್ಲಿ ಒಂದು ದೇವಾಲಯವನ್ನು ಊರಿಗಾಗಿ ಕಟ್ಟಿಸಿಕೊಡುತ್ತೇನೆಂದು ಆ ಊರಿನವರನ್ನು ಕರೆಯಿಸಿ ಹೇಳುತ್ತಾರೆ.ಇನ್ನುಮುಂದೆ ಈ ಹಳ್ಳಿಯ ಜನರೆಲ್ಲ ಈ ರಸ್ತೆ ಮುಗಿಯುವವರೆಗೂ ಎಲ್ಲಿಯೂ ಕೆಲಸಕ್ಕೆ ಹೋಗಬಾರದು. ಈ ರಸ್ತೆಯ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂದು ಹೇಳುತ್ತಾರೆ. ಈ ಸುದ್ದಿಯನ್ನು ತಿಳಿದ ಜನರು ತಮ್ಮ

ತಮ್ಮ ಮನೆಯಲ್ಲಿ ಡಾಂಬರಿನ ಸುದ್ದಿಯನ್ನು ಮಾತನಾಡುತ್ತಾರೆ. ಅದೇ ಹಳ್ಳಿಯಲ್ಲಿ ನಂಜನಗೂಡು ಮತ್ತು ಮೈಸೂರಿನಲ್ಲಿ ಎಸ್ಸೆಸೆಲ್ಸಿ ಮುಗಿಸಿಕೊಂಡ ನಾಕಾರು ಜನರು ಇರುತ್ತಾರೆ. ಲಕುಮ, ರಾಜಪ್ಪ, ಮಾದು, ಶಂಭು ಇವು ಅವರ ಹೆಸರುಗಳಾಗಿರುತ್ತವೆ. ಈ ತರುಣರ ಗುಂಪು ರಸ್ತೆಯ ಹಣವನ್ನು ಸ್ವಲ್ಪ ಉಳಿಸಿ ಆ ಹಣದಲ್ಲಿ ಹಳ್ಳಿಗೆ ಒಂದು ದೇವಾಲಯ ಕಟ್ಟಿಕೊಳ್ಳಲು ಪಟೇಲರ ತೀರ್ಮಾನವನ್ನು ವಿರೋಧದಿಂದ ವ್ಯಕ್ತಪಡಿಸುತ್ತಾರೆ.

"ಈ ಹೆಸರುಗಳಿಗೂ ಪಟೇಲರಿಗೂ ಅಷ್ಟಕ್ಕಷ್ಟೆ ಇಂದು ಹುಟ್ಟಿದ್ದ ಈ ತುಂಡುಗಳು ತಮ್ಮ ಎದುರು ತಲೆಯೆತ್ತಿ ತಿರುಗುವುದನ್ನು ಜನರು ಹೆಂಗೆ ಸಹಿಸುವರು....? ತಾವು ಕಂಡಹಾಗೆ ತಮ್ಮ ಅಪ್ಪನ ಕಾಲದಿಂದಲೂ ಆಗಿದ್ದಿಲ್ಲ. ಆ ಮಕ್ಕಳು ಮೇಲು ಜಾತಿ, ಕೀಳು ಜಾತಿ ಅನ್ನದೇ ಒಂದೇ ಹೊಟ್ಟೆಯಿಂದ ಬಿದ್ದಂತೆ ಹೊಲ್ಯಾರ ಲಕುಮನೊಡನೆ ತಿರುಗಾಡುವುದರಿಂದ ಹಿಡಿದು ಅವರವರ ಅಪ್ಪಂದಿರ ಮೂಲಕ ಬೈಸಿದರು."[9] ಈ ಸಾಲುಗಳಲ್ಲಿಯೇ ಕಥೆಗಾರರು ದೇಶದ ಹಳ್ಳಿಗಳಲ್ಲಿರುವ ವಾಸ್ತವ ಚಿತ್ರಣವನ್ನು ಬಿಂಬಿಸುತ್ತಿದೆ. ಜಾತಿವ್ಯವಸ್ಥೆಯು ಎಷ್ಟೊಂದು ವ್ಯಾಪಕವಾಗಿ ಸಮಾಜದಲ್ಲಿ ಬೇರೂರಿದೆ. ಈ ಜಾತಿಯಲ್ಲಿರುವ ಮೇಲು ಜಾತಿ, ಕೀಳು ಜಾತಿ ಎಂಬ ತಾರತಮ್ಯದಿಂದ ಸಮಾಜದಲ್ಲುಂಟಾದ ಅಸಮಾನತೆ, ಅಸಹಾಯಕ ಸ್ಥಿತಿ ತಂದು ದಲಿತರನ್ನು ನೋವಿನ ಜೀವನದಲ್ಲಿ ಬಾಳುವಂತೆ ಮಾಡಿದೆ. ಈ ವರ್ಣವ್ಯವಸ್ಥೆಯು ಸಮಾಜದ ಸಮೃದ್ಧಿಗೆ, ನೆಮ್ಮದಿಗೆ ಕಂಟಕವಾಗಿದೆ. ಇದರಿಂದಲೇ ಹಳ್ಳಿಗಳ ಜನರಲ್ಲಿ ದ್ವೇಷ, ತಾರತಮ್ಯ ತಾಂಡವವಾಡುತ್ತಿದೆ. ಕಥೆಗಾರರು ಈ ಕಥೆಯ ಮೂಲಕವಾಗಿ ಸಮಾಜದಲ್ಲಿ ಹರಡಿಕೊಂಡಿರುವ ಜಾತಿವ್ಯವಸ್ಥೆಯನ್ನು ಖಂಡಿಸುತ್ತ, ದಲಿತರ ನೋವುಗಳನ್ನು ಒಳಹೊಕ್ಕು ನೋಡಿ ಅವರ ಜೀವನದಲ್ಲಾದ ಅವಮಾನ, ಅಸಮಧಾನಗಳು ಗುರುತಿಸಿ ದಲಿತರ ಬವಣೆಯನ್ನು ಕಂಡು, ಸಮಾನತೆಯ ಸಮಾಜಕ್ಕಾಗಿ ತಮ್ಮ ಆಶಾಭಾವವನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಈ ಕಥೆಯ ಕೊನೆಯಲ್ಲಿ ರಸ್ತೆ ಮಾಡಲು ತಂದಿರುವ ಡಾಂಬರನ್ನು ಹಳ್ಳವೊಂದಕ್ಕೆ ಸುರಿಯುತ್ತಾರೆ. ಪಟೇಲರ ವಿರುದ್ಧವಾಗಿ ದೂರನ್ನು ಸಲ್ಲಿಸುತ್ತಾರೆ. ಇಂತಹ ಪ್ರತಿಭಟನೆಯಲ್ಲಿ ಹಳ್ಳಿವೊಂದರ ಅರಿತ ಪ್ರಜ್ಞಾವಂತರ ವಿಚಾರ ಕಾರಣವಾಗಿರುತ್ತದೆ. ದೇವಾಲಯವನ್ನು ಕಟ್ಟಲು ವಿರೋಧಿಸುವುದು ಅದು ವಿದ್ಯಾರ್ಥಿಗಳ ಮಹತ್ವದ ನಿರ್ಧಾರವಾಗಿರುತ್ತದೆ. ಏಕೆಂದರೆ ಜನರಿಗೆ ಬೇಕಾಗಿರುವುದು ಸರಕಾರದಿಂದ ಬಂದ ಸೌಲಭ್ಯಗಳಿಂದ ಜನರಿಗೆ ಮೂಲಭೂತ ಸೌಕರ್ಯಗಳು ಸಿಗುವಂತಾಗಬೇಕು. ಅದರಿಂದ ಜನರಿಗೆ ಉಪಯೋಗವಾಗುತ್ತದೆ. ರಸ್ತೆಗಳು ಸರಿಯಾಗಿದ್ದರೆ ಆ ಹಳ್ಳಿಯ ಆರ್ಥಿಕ ಬೆಳವಣಿಗೆ ಹೆಚ್ಚಾಗಲು ಕಾರಣವಾಗುತ್ತದೆ. ಅಷ್ಟೇ ಅಲ್ಲ ಹಳ್ಳಿಗಳಲ್ಲಿ ಮೌಢ್ಯತೆ ಕಡಿಮೆಯಾಗಿ, ದಲಿತರು ನಗರದ ಶಿಕ್ಷಣ ವ್ಯವಸ್ಥೆಯನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತದೆ.

ಅದುಬಿಟ್ಟು ದೇವಾಲಯವನ್ನು ಪಟೇಲರು ಕಟ್ಟಿಸಿದರೆ ಅದರಿಂದ ದಲಿತರಿಗೇನೂ ಉಪಯೋಗವಾಗುವುದಿಲ್ಲ. ಮತ್ತೆ ದಲಿತರನ್ನು ದೇವಾಲಯದ ಹೊರಗಡೆ ನಿಲ್ಲಿಸಿ, ತಾವು ಮಾತ್ರ

ಒಳಗಡೆ ಪ್ರವೇಶ ಮಾಡಿ ಪುರೋಹಿತಶಾಹಿವ್ಯವಸ್ಥೆಯನ್ನು ಸೃಷ್ಟಿಮಾಡಿ, ಮತ್ತೆ ವರ್ಣವ್ಯವಸ್ಥೆಯನ್ನು ಆಚರಿಸಬೇಕಾಗುತ್ತದೆ. ಹಾಗೂ ಮತ್ತೆ ದಲಿತರು ದೇವಸ್ಥಾನದ ಮುಂದೆ ಕಸಬಳಿಯುತ್ತ, ಸ್ವಚ್ಛತೆಯನ್ನು ಮಾಡುತ್ತ ದೀನ ಸ್ಥಿತಿಯಲ್ಲಿ ಹೊರಗಡೆಯೇ ಬದುಕಬೇಕಾಗುತ್ತದೆ. ಈ ಕಾರಣಕ್ಕಾಗಿಯೇ ಕಥೆಗಾರರು ಈ ಕಥೆಯಲ್ಲಿ ದೇವಾಲಯವನ್ನು ಕಟ್ಟಲು ವಿದ್ಯಾರ್ಥಿಗಳಿಂದ ವಿರೋಧ ವ್ಯಕ್ತಪಡಿಸಿದ್ದಾರೆ. ಈ ದೇಶದಲ್ಲಿ ದೇವಾಲಯಗಳ ನಿರ್ಮಾಣಕ್ಕಿಂತ ಶಾಲಾ ಕಟ್ಟಡಗಳ ನಿರ್ಮಾಣವಾಗಬೇಕೆಂಬ ಡಾ.ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಆಶಯವನ್ನು ದೇವನೂರ ಮಹದೇವರವರು ಈ ಕಥೆಯ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಇದು ದಲಿತ ಸಮುದಾಯದ ಆಶಯವಾಗಿ, ದೇಶದ ಸಮಸ್ತ ಪ್ರಜೆಗಳ ಹಿತರಕ್ಷಣೆಯಾಗಿ ಸಮಾನತೆಯತ್ತ ಅರಿವಿನ ಬೆಳಕಾಗಿ ಕಥೆಗಾರರು ತಮ್ಮ ವಿಚಾರಧಾರೆಯನ್ನು ಈ ಕಥೆಯ ಮೂಲಕವಾಗಿ ಕಟ್ಟಿಕೊಟ್ಟಿದ್ದಾರೆ. ಕಾಲಕಾಲಾಂತರಗಳಿಂದ ಪುರೋಹಿತಶಾಹಿ ಮತ್ತು ಬಂಡವಾಳಶಾಹಿಗಳಿಂದ ದಲಿತರು ಅನುಭವಿಸಿಕೊಂಡು ಬಂದಿರುವ ಶೋಷಣೆ, ಯಾತನೆಯನ್ನು ಅದು ಸಮಾಜಕ್ಕೆ ಆಗಿರುವ ಮಾರಕವನ್ನು ತಮ್ಮ ಸೂಕ್ಷ್ಮ ಸಂವೇದನೆಯ ಮೂಲಕ ದಲಿತರ ಒಡಲಾಳದ ಮೌನದ ಮಾತುಗಳನ್ನು ಈ ಕಥೆಯಲ್ಲಿ ತೆರೆದಿಟ್ಟಿದ್ದಾರೆ. ದಲಿತರ ನೋವಿನ ಕೂಗನ್ನು ತಮ್ಮ ಬರವಣಿಗೆಯ ಮೂಲಕ ದೇಶದಲ್ಲಿ ಪ್ರತಿಧ್ವನಿಸುವಂತೆ ದೇವನೂರ ಮಹದೇವರವರು ಸಾಹಿತ್ಯ ಕೃಷಿಗೈದಿದ್ದಾರೆ. 'ಡಾ. ಕಮಲಾದಾಸ್‌ರವರ ಸಮಗ್ರ ಕಥೆಗಳು' ಎಂಬ ಮಲಿಯಾಳಂ ಕಥಾಸಂಕಲನವನ್ನು ಕೆ.ಕೆ.ಗಂಗಾಧರನ್‌ರವರು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಪವಿತ್ರ ಹಸು' ಎಂಬ ಕಥೆಯು ದೇವನೂರ ಮಹದೇವರವರು ಬರೆದಿರುವ 'ಎಲ್ಲಾ ಕಥೆ ಕಾದಂಬರಿಗಳು' ಎಂಬ ಕೃತಿಯಲ್ಲಿರುವ 'ಡಾಂಬರು ಬಂದುದು' ಎಂಬ ಕಥೆಯಂತೆ ಸಮಾಜಕ್ಕೆ ಅಂಟಿರುವ ಜಾತಿ, ಮತ, ಧರ್ಮ, ಪಂಗಡಗಳ ರೋಗಗಳನ್ನು ಕುರಿತು ವಿಶ್ಲೇಷಣೆ ಮಾಡುತ್ತದೆ.

ಮನುಷ್ಯ ಸಮಾಜದಲ್ಲಿ ಬದುಕಲು ಬೇಕಾಗಿರುವುದು ಸಹಜವಾದ ಮಾನವ ಪ್ರೇಮ. ಅದೊಂದಿದ್ದರೆ ಸಾಕು ಇಲ್ಲ ಸಲ್ಲದ ಜಾತಿ, ಮತ, ಧರ್ಮ ಪಂಗಡಗಳ ಭೇದದಿಂದ ಸಮಾಜದಲ್ಲಿ ಮಾನವ ತನ್ನನ್ನು ತಾನು ಮರೆತುಬಿಟ್ಟು, ಮಾನವೀಯತೆಯನ್ನು ಕಳೆದುಕೊಂಡು, ಮೃಗಗಳಿಗಿಂತಲೂ ಕೀಳಾಗಿ ಮತ್ತೊಬ್ಬ ಮಾನವನ ಜೊತೆ ಸಹಜತೆಯಿಂದ ಬದುಕಲಾರದೆ, ಸದಾದ್ವೇಷ, ಅಸೂಯೆ, ಸ್ಪರ್ಧೆಗಳಿಂದ ತುಂಬಿ ಅಜ್ಞಾನದಿಂದ ವರ್ತಿಸುತ್ತಿದ್ದಾನೆ. ಇದರಿಂದಾಗಿ ಸಮಾಜದಲ್ಲಿ ಸಮಾನತೆಯೆಂಬ ಪದವು ಕೇವಲ ಶಬ್ದಗಳಲ್ಲಿ ಉಳಿದುಕೊಂಡಿದೆ. ಭೂಮಿ, ಗಾಳಿ, ನೀರು, ಬೆಂಕಿ ಆಕಾಶಗಳೆಲ್ಲ ಒಂದೇ ಆದರಲ್ಲಿ ಬದುಕುತ್ತಿರುವ ಮನುಷ್ಯ ಮನಸುಗಳು ಮಾತ್ರ ಬೇರೆ ಬೇರೆಯಾಗಿವೆ. ಇದರಿಂದಾಗಿ ಮನುಷ್ಯ ಮನುಷ್ಯನನ್ನೇ ಅಂತ್ಯ ಮಾಡುತ್ತಿದ್ದಾನೆ. ಹೀಗಿರುವ ಸಮಾಜದಲ್ಲಿ ತಾನೇ ಸೃಷ್ಟಿಸಿಕೊಂಡ,

ಜಾತಿ, ಮತ, ಧರ್ಮ, ಪಂಗಡಗಳ ಅವು ಅವನ ಮೇಲೆಯೇ ಆಳ್ವಿಕೆಯನ್ನು ಮಾಡುತ್ತಿವೆ. ತಾನು ಸತ್ಯ, ತನ್ನಿಂದ ಸೃಷ್ಟಿಯಾದವು ಎಲ್ಲವೂ ಅನಿತ್ಯವೆಂಬ ಸಾಮಾನ್ಯ ಜ್ಞಾನವನ್ನು ಮರೆತಿದ್ದಾನೆ.

ಇದರಿಂದಾಗಿ ಸಮಾಜದಲ್ಲಿ ಜಾತಿ, ಮತ, ಧರ್ಮ, ಪಂಗಡಗಳ ಪ್ರಾಬಲ್ಯವೇ ಹೆಚ್ಚುತ್ತಾ ಸಾಗುತ್ತಿದೆ ಎಂಬುದನ್ನು ಈ 'ಪವಿತ್ರ ಹಸು' ಕಥೆಯು ತನ್ನ ವಿಶ್ಲೇಷಣೆಗಳ ಮೂಲಕವಾಗಿ ನಿರೂಪಿಸುತ್ತದೆ. ಒಬ್ಬ ಹುಡುಗನು ಹಸುವಿನಿಂದ ನರಳುತ್ತಿದ್ದಾನೆ. ಏನಾದರೂ ಎಲ್ಲಿಯಾದರೂ ತಿನ್ನಲು ಸಿಗಬಹುದೇನೋ ಎಂದುಕೊಂಡು ಹುಡುಕುತ್ತಿದ್ದಾನೆ. ಆಗ ರಸ್ತೆಯ ಬದಿಯ ಒಂದು ಕಸದ ತೊಟ್ಟಿಯಲ್ಲಿ ಯಾರೋ ತಿಂದು ಎಸೆದ ಹಣ್ಣಿನ ಸಿಪ್ಪೆಗಳು ಕಾಣಿಸುತ್ತವೆ. ಅವುಗಳನ್ನು ತೆಗೆದುಕೊಂಡು ತಿನ್ನಬೇಕೆಂದಾಗ ಹಸುವೊಂದು ಬಂದು ಬಾಯಿ ಹಾಕುತ್ತದೆ. ಆ ಹುಡುಗ ಹಸಿವಿನಿಂದ ಆ ಹಸುವನ್ನು ಗದರಿಸಿ ಓಡಿಸುತ್ತಾನೆ. ಇದರ ಪರಿಣಾಮವಾಗಿ ಸನ್ಯಾಸಿಗಳು ಬಂದು ನೀನೇ ಏನು ಹಸುವನ್ನು ಹಿಂಸಿಸಿದೆಂದು ಕೇಳುತ್ತಾರೆ.

ಹುಡುಗ ಸಹಜ ವಿಷಯ ಹೇಳುತ್ತಾನೆ. ಆದರೆ ಸನ್ಯಾಸಿಗಳು ನೀನು ಯಾವ ಜಾತಿ, ಮತ, ಧರ್ಮ, ಪಂಗಡದವನೆಂದು ಗದರಿಸಿ ಕೇಳುತ್ತಾರೆ. ನನಗೇನೂ ಗೊತ್ತಿಲ್ಲವೆಂದು ಹುಡುಗ ಹೇಳುತ್ತಾನೆ. ಮತ್ತೆ ಸನ್ಯಾಸಿಗಳು ನೀನು ಯಾವ ಮಂದಿರದಲ್ಲಿ ಪ್ರಾರ್ಥನೆ ಮಾಡುತ್ತಿದೆಂದು ಕೇಳುತ್ತಾರೆ. ಆಗ ಆ ಹುಡುಗ "ನಾನು ಯಾವುದೇ ಪ್ರಾರ್ಥನೆಗೂ ಹೊಗುತ್ತಿಲ್ಲ ಏಕೆಂದರೆ ನನಗೆ ಉಡಲು ಅಂಗಿ ಇಲ್ಲ ಒಂದು ಚಡ್ಡಿಯ ಹಿಂಬದಿ ಹರಿದು ಹೋಗಿದೆ."[೨] ಎಂದು ಹೇಳುವ ಮಾತಿನಲ್ಲಿ ಬಡತನದ ನೋವುಗಳೇ ಕಾಣುತ್ತವೆ.ಅದರಂತೆ ಕನ್ನಡದ ದಲಿತ ಸಾಹಿತ್ಯದ ಕಥೆಗಾರರಾದ ದೇವನೂರ ಮಹದೇವರವರು ಬರೆದಿರುವ 'ಡಾಂಬರು ಬಂದುದು' ಎಂಬ ಕನ್ನಡ ಕಥೆಯಲ್ಲಿ ದ್ವೇಷ, ಅಸೂಯೆ, ಬೇಡದ ಉಪದ್ರವ, ಜಾತೀಯತೆ, ಬಡವ, ಶ್ರೀಮಂತ ಬೇಧಪ್ರಜ್ಞೆಯ ವಿಷಯಗಳು ಅನಾವರಣಗೊಳ್ಳುತ್ತವೆ. ಇವೆರಡು ಕಥೆಗಳು ಅಂಬೇಡ್ಕರವಾದದ ಹಿನ್ನೆಲೆಯಲ್ಲಿ ಆರ್ಥಿಕ ಶೋಷಣೆಯಿಂದ ದಲಿತ ಸಮಾಜದವರು ಪಡುತ್ತಿರುವ ಅಸಮಾನತೆಯ ನೋವುಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಬಿತ್ತರಿಸುತ್ತವೆ.

ಕನ್ನಡದ ದಲಿತ ಸಾಹಿತ್ಯ ಲೋಕದಲ್ಲಿ ಶ್ರೇಷ್ಠ ದಲಿತ ಕಥೆಗಾರರಲ್ಲಿ ಒಬ್ಬರಾದ ಡಾ.ಮೊಗಳ್ಳಿ ಗಣೇಶರವರು ಬರೆದಿರುವ 'ಮೊಗಳ್ಳಿ ಕಥೆಗಳು' ಎಂಬ ಕಥಾ ಸಂಕಲನದಲ್ಲಿರುವ 'ಬುಗುರಿ' ಎಂಬ ಕಥೆಯು ತಳವರ್ಗದ, ದಲಿತ ಸಮುದಾಯದ ಶೋಷಿತರ ಚಿತ್ರಣವನ್ನು ಬುಗುರಿ ರೂಪದಲ್ಲಿ ತಿರುಗುತ್ತ, ತಿರುಗುತ್ತ ಮೌನವಾಗಿ ಮತ್ತೆ ತಿರುಗುವ, ತಿರುಗಲು ಪ್ರಯತ್ನಿಸುವ ಹಂಬಲದಲ್ಲಿ ತನ್ನೆಲ್ಲ ಒಳನೋವುಗಳನ್ನು ತೆರೆದಿಡುತ್ತ ದಮನಿತರ ಪ್ರತಿಬಿಂಬವಾಗಿ, ಪ್ರೇರಕತಾರಕಶಕ್ತಿಯಾಗಿ ದಲಿತ ಸಂವೇದನೆಗಳನ್ನು ವಿಶ್ಲೇಷಿಸುತ್ತ, ಬುಗುರಿ ತಿರುಗುತ್ತ ತನ್ನ ಒಳಧ್ವನಿಯನ್ನು ಗುಯ್ ಗುಟ್ಟುತ್ತದೆ. ಹಸಿರು, ಬಿಳಿ, ಕೇಸರಿ ಬಣ್ಣಗಳಿಂದ ತುಂಬಿರುವ ಚೆಲುವನ ಬುಗುರಿ ರಾಷ್ಟ್ರಧ್ವಜದ ಸಂಕೇತವೂ ಹೌದು. ಭೂಮಿ ಮೇಲಿನ ಆ ಬುಗುರಿ ದಲಿತರ ಶೋಷಣೆಯ ಕಣ್ಣೀರೂ ಹೌದು. ಬುಗುರಿ

ರಾಷ್ಟ್ರವನ್ನು ಪ್ರಶ್ನಿಸುತ್ತದೆ. ಹಾಗೆ ರಾಷ್ಟ್ರವನ್ನು ಎಚ್ಚರಿಸುತ್ತದೆ. ಬುಗುರಿ ತಾನೊಂದು ಬಲಿಷ್ಠ ರಾಷ್ಟ್ರವಾಗಿ, ಮತ್ತೊಬ್ಬರ ಚಾಟಿಏಟಿನಿಂದ ತನ್ನ ಇರುವಿಕೆಯ ಸ್ಥಿತಿಯನ್ನೇ ಮರೆತುಬಿಟ್ಟಿದೆ ಎಂಬುವುದನ್ನು ಬುಗುರಿ ಕಥೆಯಲ್ಲಿ ಕಥೆಗಾರರು ರಾಷ್ಟ್ರವೆಂಬ ದಲಿತರನ್ನು ಕೇಂದ್ರಿಕರಿಸಿ, ಅವರಿರುವ ಸ್ಥಿತಿಗತಿಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಈ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ.

ಸಾಮಾನ್ಯ ಜನರು ಸ್ವಚ್ಛಂದವಾಗಿರುವುದಾದರೆ, ಆ ರಾಷ್ಟ್ರ ಸ್ವಚ್ಛಂದವಾಗಿದೆ ಎಂದೇ ಅರ್ಥ. ಹೀಗಾಗಿ ಸಾಮಾನ್ಯ ಜನರೇ ಆ ರಾಷ್ಟ್ರದ ಬೆನ್ನೆಲುಬು. ಆದ್ದರಿಂದ ಬುಗುರಿ ಕಥೆಗಾರರು ಒಂದು ರಾಷ್ಟ್ರದ ಪ್ರತೀಕವಾಗಿ, ಬುಗುರಿಯನ್ನು ಬಳಸಿಕೊಂಡು ಅದರಾಟದಡಿಯಲ್ಲಿ ರಾಷ್ಟ್ರವನ್ನು ಬಲಿಷ್ಠಗೊಳಿಸುವ ತೋಳುಗಳ ಅಸಹಾಯಕ ಸ್ಥಿತಿಯ ಕಾರಣವನ್ನು ಹುಡುಕಿ ಬಲಿಷ್ಠ ರಾಷ್ಟ್ರದ ಸೂತಕಕ್ಕೆ ಪರಿಹಾರವನ್ನು ಸೂಚಿಸುತ್ತ, ರಾಷ್ಟ್ರದ ಉನ್ನತಿಯ ವಾಸ್ತವದಲ್ಲಿ ದಲಿತರ ನೋವಿನ ಚಹರೆಗಳನ್ನು ಗುರುತಿಸುತ್ತ, ಬುಗುರಿಗೆ ರಾಷ್ಟ್ರ ರೂಪವನ್ನು ಕೊಟ್ಟು, ಕಥೆಯ ಮೂಲಕ ದಲಿತ ಲೋಕದ ಕಣ್ಣು ತೆರೆದು, ಅದರಲ್ಲಿ ಕಣ್ಣೀರಿನ ಬುಗುರಿಯನ್ನು ತೋರಿಸುತ್ತಾರೆ.

ಅದು ರಾಷ್ಟ್ರವೆಂಬ ದಲಿತ ಸಂವೇದನೆಗಳ ಸಂಕಲನವೇ 'ಬುಗುರಿ'. ಈ 'ಬುಗುರಿ' ಕಥೆಯು ಸಮಸ್ತ ದಲಿತ ಸಮುದಾಯ, ಕಾಲಕಾಲಾಂತರಗಳಿಂದ ಅನುಭವಿಸಿಕೊಂಡು ಬಂದಿರುವ ಹೀನ ಸ್ಥಿತಿಗತಿಗಳನ್ನು, ಅವಮಾನಗಳ ಶೋಷಣೆಯನ್ನು ತನ್ನ ಸಂವೇದನೆಗಳ ಮೂಲಕ ತೋರಿಸುತ್ತದೆ. ಚೆಲುವ ಶಾಲಾ ಬಾಲಕ, 'ಬುಗುರಿ' ಅವನ ಜೀವ, ತನ್ನ ಅಜ್ಜಿಯ ಹಳೆಯ ಸೀರೆಯ ಬಟ್ಟೆಯಿಂದ ತುಂಡುಮಾಡಿಕೊಂಡು, ತನ್ನ ತಾತನಕಡೆಯಿಂದ ದಾರ ಮಾಡಿಸಿ, ಅದನ್ನು ಬುಗುರಿ ಸುತ್ತಿ ಪಡೆಸಾಲೆಯ ಗಾರೆ ನೆಲದಮೇಲೆ ಬಿಟ್ಟು ಅದರ ಗುಯ್ ಎನ್ನುವ ಶಬ್ದವನ್ನು ಕಿವಿಗೊಟ್ಟು ಕೇಳಿ, ಆನಂದದಿಂದ ಆ ನಾದದಲ್ಲಿ ತಲ್ಲೀನನಾಗಿ ತನ್ನನ್ನು ಮರೆತುಬಿಡುತ್ತಿದ್ದನು. ಆದರೆ ಚೆಲುವನ ತಂದೆ ಚಿಕ್ಕಣ್ಣನಿಗೆ ಈ ಬುಗುರಿಯನ್ನು ಕಂಡರೆ ತುಂಬಾ ಕೋಪ. ಒಂದು ದಿನ ಈ 'ಬುಗುರಿ' ಮನೆಯ ಹಿಂದಲ ಕಕ್ಕಸು ಗುಂಡಿಯಲ್ಲಿ ಈ ಬುಗುರಿ ಬಿದ್ದುಬಿಡುತ್ತದೆ. ಆಗ ಚೆಲುವ ಆ ಬುಗುರಿಯನ್ನು ನೆನೆಯುತ್ತ, ಅಳುತ್ತ ಕಣ್ಣಲ್ಲಿ ನೀರು ತುಂಬಿಕೊಂಡು ಮತ್ತೆ ಹೊಸ ಬುಗುರಿಯನ್ನು ಕೊಂಡುಕೊಳ್ಳಲು ನನ್ನಿಂದ ಸಾಧ್ಯವಾಗುವುದಿಲ್ಲ, ಅಂತಹ ಬುಗುರಿ ಮತ್ತೆಂದೂ ನನಗೆ ಸಿಗುವುದಿಲ್ಲವೆಂದು ಚಿಂತಿಸುತ್ತ, ಒಂಟಿಕಾಲಲ್ಲಿ ಕಕ್ಕಸು ಗುಂಡಿಯನ್ನು ನೋಡುತ್ತ ನಿಂತಿರುತ್ತಾನೆ.

ಬೇಸರವಾಗಿ ಚೆಲುವ ಹೊಂಗೆ ಮರವನ್ನು ಹತ್ತಿ ಅದರಲ್ಲಿ ಕುಳಿತುಕೊಂಡು, ಇಡೀ ದಲಿತ ಕೊಳಕು ಕೇರಿಯನ್ನು ನೋಡುತ್ತಾನೆ. ಏನಾದರೂ ಮಾಡಿ ತನ್ನ ಬುಗುರಿಯನ್ನು ಆ ಕಕ್ಕಸು ಗುಂಡಿಯಿಂದ ಹೊರ ತೆಗೆಯಬೇಕೆಂದು ಆಲೋಚನೆಯನ್ನು ಮಾಡುತ್ತಲೇ ಇರುತ್ತಾನೆ. ಅತ್ತ ನಾಯಿಗಳ ಗುಂಪೊಂದು ಹಂದಿಯನ್ನು ಓಡಿಸಿಕೊಂಡು ಬರುತ್ತಿರುತ್ತವೆ. ಆ ಹಂದಿ ಬಂದು ಕಕ್ಕಸು ಗುಂಡಿಯೊಳಕ್ಕೆ ಬಿದ್ದುಬಿಡುತ್ತದೆ. ಇದನ್ನು ಕಂಡ ಚೆಲುವ ತನ್ನ ಅವ್ವನ ಹತ್ತಿರ ಓಡಿಹೋಗಿ ವಿಷಯವನ್ನು ತಿಳಿಸುತ್ತಾನೆ. ಇದರಿಂದ ಗಾಬರಿಗೊಂಡು ಅದಕ್ಕೇನ್ಲಿ ಜಾಗವಿರಲಿಲ್ಲವೇನು...? ಅದರಲ್ಲಿಯೇ

ಬೀಳಬೇಕೆ..? ಹೋಗು ಚೆಲುವ ನಿನ್ನ ತಾತ ಹೋಟಲ್‌ನಲ್ಲಿ ಇದ್ದಾನೆ. ವಿಷಯವನ್ನು ತಿಳಿಸಿ ಬಾ, ಮತ್ತೆ ಊರಿನವರಿಗೆ ತಿಳಿದರೆ ಆ ಮೇಲೆ ಅದಕ್ಕೆ ಜಗಳವಾಗುವುದೆಂದು ಹೇಳಿ ಕಳಿಸುತ್ತಾಳೆ. ಇತ್ತ ತನ್ನೊಳಗೆ ತನ್ನ ಬುಗುರಿಗೆ ಇಂಥಾ ಸ್ಥಿತಿ ಬಂತಲ್ಲವೆಂದು ಚಿಂತಿಸುತ್ತಾ, ಓಡಿಹೋಗಿ ಯಾರಿಗೂ ಕೇಳದ ಹಾಗೆ ತನ್ನ ತಾತಾ ಗುಂಜಾರಯ್ಯನಿಗೆ ವಿಷಯವನ್ನು ತಿಳಿಸುತ್ತಾನೆ. ಬೆಚ್ಚಿಬಿದ್ದ ಗುಂಜಾರಯ್ಯ ಹಿಂದೆ ನಡೆದ ಘಟನೆಯನ್ನು ತನ್ನಲ್ಲಿ ನೆನಸಿಕೊಳ್ಳುತ್ತಾನೆ. ಊರೆಲ್ಲ ಸುತ್ತಿ ಅಲೆಯುತ್ತ ಮೇಯುವ ಸಲುವಾಗಿ ತಿಪ್ಪೇಗೌಡರ ಕೋಣ ಮೇಯುತ್ತ ಬಂದು ಅದೇ ಕಕ್ಕಸು ಗುಂಡಿಯೊಳಗೆ ಬಿದ್ದುಬಿಟ್ಟಿರುತ್ತದೆ.

ತನ್ನ ಹಿರಿಮಗ ಚಿಕ್ಕಣ್ಣನು ಅದನ್ನು ಮೇಲೆತ್ತಲು ಪಟ್ಟಕಷ್ಟ ನೆನೆಸಿಕೊಂಡು ನಂತರ ಅದು ಸತ್ತುಹೋಗಿ ಅದನ್ನು ಮಾದಿಗರ ಯಾಲಕ್ಕಯ್ಯ ಬಂದುನೋಡಿ, ಚೆನ್ನಾಗಿ ಬಿಸಿ ನೀರಿನಿಂದ ತೊಳೆದು, ಕೇರಿಯ ಹೊಲೆಯ ಮಾದಿಗರು ಬಾಡು ಮಾಡಿಕೊಂಡು ಊಟ ಮಾಡಿದ್ದು, ಈ ಸುದ್ಧಿ ತಿಳಿದ ತಿಪ್ಪೇಗೌಡರು ಬೇಕು ಅಂತಲೇ ಈ ರೀತಿ ತಿನ್ನುವುದಕ್ಕಾಗಿ ನಮ್ಮ ಕೋಣವನ್ನು ಸಾಯಿಸಿದ್ದಾರೆಂದು ಕೋಪಗೊಂಡು ಚಿಕ್ಕಣ್ಣನಿಗೆ ತಪ್ಪುದಂಡ ಕೊಡಬೇಕೆಂದು ತಕರಾರು ಮಾಡುತ್ತಾನೆ.

ಇದಕ್ಕೊಪ್ಪದ ಚಿಕ್ಕಣ್ಣನ ಮೇಲೆ ತಿಪ್ಪೇಗೌಡರ ಕೆಂಡದ ಕಣ್ಣು ಬೀಳುತ್ತದೆ. ಅದನ್ನು ನೆನೆಸಿಕೊಂಡು ಗುಂಜಾರಯ್ಯ ಹೋಟಲಲ್ಲಿ ಬೊಂಡವನ್ನು ಬೇಯಿಸುತ್ತಲೇ ಆತುರದಲ್ಲಿ ಬೊಂಡವನ್ನು ಬಾಂಡ್ಲಿಯಿಂದ ತೆಗೆದುಹಾಕಿ, ಈ ವಿಷಯ ಮತ್ತೆ ಊರಿನವರಿಗೆ ತಿಳಿದರೆ ಮತ್ತೆ ಜಗಳವಾಗುತ್ತದೆ. ಆ ಗುಂಡಿಯನ್ನು ಮುಚ್ಚಲು ತನ್ನ ಮಗನಿಗೆ ಹೇಳಿದರೆ ಅದು ಅವನಿಗೆ ಸಾಧ್ಯವಾಗದೆ ಊರಿನ ಹಲವಾರು ಸಮಸ್ಯೆಗಳಿಗೆ ಈ ಗುಂಡಿ ಕಾರಣವಾಗಿತ್ತು. ಊರಿನವರ ಸಿಟ್ಟು ಚಿಕ್ಕಣ್ಣನ ಮೇಲೆ ಇತ್ತು. ಮತ್ತೆ ಈ ಸಾರೆ ಈ ಹಂದಿ ವಿಷಯ ತಿಳಿದರೆ ಜಗಳವಾಗುವುದಂತು ಸತ್ಯವೆಂದು ಆ ಹಂದಿ ಮೇಲೆ ಎತ್ತುವ ಚಿಂತೆಯನ್ನೆ ಮಾಡುತ್ತ ಗುಂಜಾರಯ್ಯ ಬರುತ್ತಾನೆ. ಚೆಲುವ ಮಾತ್ರ ತನ್ನ ಬುಗುರಿಯನ್ನೆ ಹೇಗಾದರೂ ಮಾಡಿ ಅದನ್ನು ಆ ಗುಂಡಿಯಿಂದ ತೆಗೆಯಬೇಕೆಂದು, ಬುಗುರಿ ಕುರಿತು ಆಲೋಚನೆ ಮಾಡುತ್ತಿರುತ್ತಾನೆ. ಗುಂಜಾರಯ್ಯ ಗುಂಡಿಯ ಮೇಲೆ ಇರುವ ತೆಂಗಿನ ಗರಿಗಳನ್ನು ಸರಿಸಿ ನೋಡಿದಾಗ ಒಳಗಡೆ ಹಂದಿ ಬಿದ್ದುಕೊಂಡಿರುವುದು ಕಾಣಿಸುತ್ತದೆ. ಈ ವಿಷಯ ತನ್ನ ಹಿರಿಯ ಮಗನಿಗೆ ವಿಷಯ ತಿಳಿದಾಗ ಬಯಸದೆ ಬಂದ ಭಾಗ್ಯವೆಂದುಕೊಂಡು ಬಿದ್ದಿರುವ ಹಂದಿಯನ್ನು ಲಪಟಾಯಿಸುವ ನೀಲಿ ನಕ್ಷೆಯನ್ನು ಕುರಿತು ಆಲೋಚಿಸತೊಡಗಿದನು.

ನಂತರ ಅತಾರಿ ಮತ್ತು ಚಿಕ್ಕಣ್ಣ ಸೇರಿಕೊಂಡು ಹಂದಿಯನ್ನು ತೆಗೆದು ಮಾರುಕಟ್ಟೆಗೆ ಮಾರುವ ಸಿದ್ಧತೆಗಳನ್ನು ನಡೆಸಿದರು. ಆ ಹಂದಿಯನ್ನು ಗುಂಡಿಯಲ್ಲಿ ಸಾಯಿಸುವುದು ಅಸಾಧ್ಯದ ಕೆಲಸವಾಗಿತ್ತು. ಇದೊಂದು ಬೇಕಂತಲೇ ಮಾಡಿದ ಕೊಲೆಯೆಂದು ಊರಿನವರಿಗೆ ತಿಳಿದರೆ ಅಥವಾ ಹಂದಿಯ ಮಾಲಿಕ ಕುಂಟಣ್ಣನಿಗೆ ತಿಳಿದರೆ ಅದು ಜಗಳಕ್ಕೆ ದಾರಿ ಮಾಡಿಕೊಡುತ್ತದೆ. ಸಂಜೆಯ ತನಕ ಹಂದಿಯನ್ನು ಅಲ್ಲಿಯೇ ಬಿಟ್ಟರೆ ಅದು ತಾನಾಗಿಯೇ ಸತ್ತು ಹೋಗುತ್ತದೆಂದು ಆಲೋಚಿಸಿದರು. ಇತ್ತ ಚೆಲುವ ತನ್ನ ಬುಗುರಿಯ ಆಸೆಯೇ ಬತ್ತಿಹೋಯಿತು. ಆದರೂ ಚೆಲುವನಿಗೆ ಬುಗುರಿಯ

ಆಲೋಚನೆಯೇ ತಲೆಯಲ್ಲಿ ತಿರುಗುತ್ತಿತ್ತು. ಅದರ ವಾಸನೆಯನ್ನು ಸಹಿಸಿಕೊಳ್ಳಲು ಚಿಕ್ಕಣ್ಣ ಮತ್ತು ಅತಾರಿ ಸಂಜೆ ತನಕ ಹೆಂಡವನ್ನು ಕುಡಿದುಕೊಂಡು, ಕಕ್ಕಸು ಗುಂಡಿಯ ಹತ್ತಿರಬಂದು ಹಂದಿಯನ್ನು ಮೇಲೆ ಎತ್ತಲು ಹಗ್ಗವನ್ನು ತೆಗೆದುಕೊಂಡು, ಗುಂಡಿಯ ಒಳಕ್ಕೆ ಚಿಕ್ಕಣ್ಣ ಮೊದಲು ಇಳಿಯಲು ಪ್ರಯತ್ನಿಸುತ್ತಿದ್ದಂತೆಯೇ ಅದರೊಳಕ್ಕೆ ಕಾಲುಜಾರಿ ಬಿದ್ದುಬಿಡುತ್ತಾನೆ.

ಅದನ್ನು ಕಂಡ ಅತಾರಿ ಮೇಲೆ ನಿಂತು ನಗುತ್ತಾನೆ. ಇಬ್ಬರು ಒಬ್ಬರಿಗೊಬ್ಬರು ಬೈದುಕೊಂಡು ಹಂದಿಯನ್ನು ಮೇಲೆ ಎತ್ತಿ ಹಾಕುವಷ್ಟರಲ್ಲಿ ಹಂದಿ ಸತ್ತುಹೋಗಿರುತ್ತದೆ. ಅತಾರಿ ಚಿಕ್ಕಣ್ಣನ ಅವಸ್ಥೆಗೊಂಡು ನಗಾಡಿದಾಗ ಚಿಕ್ಕಣ್ಣ ಅತಾರಿಯನ್ನು ಹಿಡಿದುಕೊಳ್ಳಲು ಬಂದಾಗ ಅತಾರಿ ಕಾಲುಜಾರಿ ಅದೇ ಕಕ್ಕಸು ಗುಂಡಿಯಲ್ಲಿ ಬಿದ್ದುಬಿಡುತ್ತಾನೆ. ಇವರಿಬ್ಬರ ಜಗಳವನ್ನು ಕಂಡ ಗುಂಜಾರಯ್ಯ ಏನಯ್ಯ ನೀವು ಮಾಡಿಕೊಂಡಿದ್ದು ನಾನು ಹೇಳಿದ್ದೇನು, ನೀವು ಮಾಡಿದ್ದೇನು. ಈ ವಿಷಯ ಊರಿನವರಿಗೆ ತಿಳಿದರೆ ಮುಂದೆ ಆಗುವ ತೊಂದರೆ ಬಗ್ಗೆ ಆಲೋಚಿಸಿ. ನಡಿನಡಿರಿ ಬೇಗನೇ ಮೈ ತೊಳೆದುಕೊಂಡು ಯಾರಾದರೂ ನೋಡಿಯಾರು ಎಂದು ಹೇಳುತ್ತಾನೆ. ಆದರೆ ಅತಾರಿ ಚಿಕ್ಕಣ್ಣನಿಗೆ ಒಂದು ದೊಡ್ಡ ನಮಸ್ಕಾರ ಹೇಳಿ ಹೊರಟು ಹೋಗುತ್ತಾನೆ.

ಅತಾರಿ ಈ ಘಟನೆಯನ್ನು ಬೇರೆಯದೇ ರೀತಿಯಲ್ಲಿ ಪ್ರಸಾರ ಮಾಡಿ, ಸಂಗತಿಯನ್ನು ಊರಿಗೆಲ್ಲ ಪ್ರಚಾರ ಮಾಡುತ್ತಾನೆ. ಆ ಹಂದಿಯನ್ನು ಎತ್ತಿದ ನಂತರ ಬಿಸಿನೀರಿನಿಂದ ತೊಳೆದು, ಕೊಯ್ದು ನಾಳಿನ ಸಾದಾರಳ್ಳಿ ಸಂತೆಯಲ್ಲಿ ಮಾರಿ ಹಣ ಹಂಚಿಕೊಳ್ಳಬೇಕೆಂದಿದ್ದ ಇಬ್ಬರ ಆಲೋಚನೆ ಚೂರು ಚೂರಾಗಿ ಹೋಯಿತು. ಊರಿನವರೆಲ್ಲ ಪಂಚಾಯತಿ ಸೇರಿಸುತ್ತಾರೆ. ಚಿಕ್ಕಣ್ಣನಿಗೆ ಮುನ್ನೂರು ರೂಪಾಯಿ ದಂಡ ಹಾಕುತ್ತಾರೆ. ಅದಕ್ಕೆ ಆತ ಒಪ್ಪುವುದಿಲ್ಲ. ನಂತರ ಈ ವಿಷಯದ ಕುರಿತು ಗುಂಜಾರಯ್ಯನ ಕುಟುಂಬವನ್ನು ಊರಿನಿಂದ ಬಹಿಷ್ಕಾರ ಹಾಕುತ್ತಾರೆ. ನಂತರ ತಿಪ್ಪೆಗೌಡರ ಪ್ರಾಬಲ್ಯದಿಂದ ಪೊಲೀಸ್ ಸ್ಟೇಷನ್‌ಗೆ ಚಿಕ್ಕಣ್ಣ ಮತ್ತು ಅತಾರಿಯನ್ನು ಕರೆತರುತ್ತಾರೆ. ನಡೆದ ವಿಷಯವನ್ನು ಇನ್‌ಸ್ಪೆಕ್ಟರ್‌ರು ವಿಚಾರಣೆ ಮಾಡುತ್ತ ನಮ್ಮ ಸ್ಟೇಷನ್‌ನಲ್ಲಿರುವ ಕಕ್ಕಸು ಗುಂಡಿಯನ್ನು ಇಬ್ಬರೂ ಸೇರಿ ಎತ್ತಿ ಹೊರಹಾಕಿ ಖಾಲಿ ಮಾಡಿಕೊಡಿ ಎಂದು ಹೇಳುತ್ತಾರೆ.

ಅದಕ್ಕೆ ಚಿಕ್ಕಣ್ಣ ಒಪ್ಪದಿದ್ದಾಗ ಇನ್‌ಸ್ಪೆಕ್ಟರರು "ಸೂಳೇ ಮಕ್ಳಾ, ಎಲ್ ಎಲ್‌ನೆ ತಿನ್ಕಂದ್ ಬಿದ್ದಿರ್ರೋ ನೀವು ಹಿಂತಿರುಗ್ ಮಾತಾಡ್ತಿರಾ, ಹಿಂದೆಲ್ಲ ಯೇಲ್‌ನೇ ಅಲ್‌ವೇನ್ರೋ ನೀವು ಹೊರ್‌ತಿತ್ತು. ಈಗೇನ್ ಬಾಳ ದೊಡ್ ಮನುಸ್ಸೇನ್ರೋ ನೀವು. ಲೋಪರ್ ನನ್ನ ಮಕ್ಳಾ, ನಾನ್ ಹೇಳ್ದಂಗ್ ಮಾಡ್ಲಿಲ್ಲಾ ಅಂದ್ರೆ ಚಾರ್ಜ ಸೀಟ್ ಬರ್ದು ಸೆಂಟ್ರು ಜೈಲ್‌ಗಾಕಿ ಸಾಯ್ಸಾಕ್ ಬುಡ್ತಿನಿ. ದೇಶ ದೇಶದ ಎಲೆಲ್ಲಿನು ವರ್ರುವಂಗ್ ಮಾಡ್‌ಬುಡ್ತೀನಿ ಇಲ್ಲೇನೋ ಸ್ವಲ್ಪ ಇದೆ. ಅಲ್ಲಿ ಸೆಂಟ್ರಲ್ ಜೈಲಲ್ಲಿ ಬರೀ ಕಕ್ಕಸನೇ ದಿನಾಕ್ಲೀನ್ ಮಾಡುವಂಗ್ ಮಾಡಿ ಅದ್ನೇ ತಿನ್ನುವಂಗ್ ಮಾಡಿಸ್ತೀನಿ"[೩] ಎಂದು ಹೇಳಿದಾಗ ಬೇರೆದಾರಿಯಿಲ್ಲದೆ ಚಿಕ್ಕ ಮತ್ತು ಅತಾರಿ ಆ ಕಕ್ಕಸು ಗುಂಡಿಯನ್ನೆಲ್ಲ ಖಾಲಿ ಮಾಡಿ, ಮೈಯೆಲ್ಲ ಹೊಲಸು ಮೆತ್ತಿಸಿಕೊಂಡು, ಅವಮಾನದಿಂದ ಮನೆಗೆ ಬರುವುದು. ತಿಪ್ಪೇಗೌಡರಂತ

ಬಂಡವಾಳಶಾಹಿಗಳು ಮತ್ತು ಅಧಿಕಾರಿಕಾಹಿಗಳು ದಲಿತವರ್ಗದ ಮೇಲೆ ನಡೆಸುತ್ತಿರುವ ನಿರಂತರ ಶೋಷಣೆಯನ್ನು ಸೂಚಿಸುತ್ತದೆ. ಕಾಲಕಾಲಾಂತರಗಳಿಂದ ಶೋಷಿತರ ಮೇಲೆ ನಡೆಸುತ್ತಿರುವ ದೌರ್ಜನ್ಯವನ್ನು ಈ ಬುಗುರಿ ಕಥೆಯು ತಿಳಿಸುತ್ತದೆ. ಸಮಸ್ತ ದಲಿತ ಒಳನೋವುಗಳನ್ನು ಈ ಕಥೆಯ ಮೂಲಕವಾಗಿ ದಲಿತ ಸಂವೇದನೆಗಳನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಬುಗುರಿಯ ಮೂಲಕ ತೆರೆದಿಟ್ಟಿದ್ದಾರೆ.

'ಹತ್ತು ತಮಿಳು ಕತೆಗಳು' ಎಂಬ ತಮಿಳು ಕಥಾಸಂಕಲವನ್ನು ಕೆ. ನಲ್ಲತಂಬಿಯವರು ಕನ್ನಡಕ್ಕೆ ಅನುವಾದ ಮಾಡಿರುತ್ತಾರೆ. ಈ ಕಥಾ ಸಂಕಲನದಲ್ಲಿರುವ 'ಬೋಧಿವೃಕ್ಷ' ಕತೆಯನ್ನು ತಮಿಳವನ್ ಅವರ ಇರಟ್ಟೈ ಸೊರ್ಕಳ್ ಎಂಬ ಕಥಾ ಸಂಕಲನದಿಂದ ಆಯ್ದುಕೊಳ್ಳಲಾಗಿದೆ. ಈ ಕತೆಯು ಡಾ.ಮೊಗಳ್ಳಿ ಗಣೇಶರವರು ಬರೆದಿರುವ 'ಬುಗುರಿ' ಎಂಬ ಕತೆಯಂತೆ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿವ್ಯವಸ್ಥೆಯು ಸಮಾಜದಲ್ಲಿ ಎಂತಹ ಅಂತರವನ್ನು ಸೃಷ್ಟಿಸಿದೆ. ಅದರಿಂದಾಗುತ್ತಿರುವ ಮಾನಸಿಕ ತೊಂದರೆಗಳು ದುರ್ಬಲ ವ್ಯಕ್ತಿಗಳನ್ನು ಹೇಗೆ ಮನೋವ್ಯಾದಿಗೆ ಗುರಿಪಡಿಸುತ್ತದೆ ಎಂಬುವುದನ್ನು 'ಬೋಧಿವೃಕ್ಷ' ಕತೆಯು ಸ್ಪಷ್ಟೀಕರಿಸುತ್ತದೆ.

"ಯಾಕಪ್ಪ ಸರ್ಟಿಫಿಕೆಟಿನಿಂದ ಜಾತಿಯ ಹೆಸರನ್ನು ತೆಗೆಯಲು ಹೇಳುತ್ತಿದ್ದೀಯಾ.....? ಅಧಿಕಾರಿಗೆ ಸುಮಾರು ಐವತ್ತು ವರ್ಷ ವಯಸ್ಸಿರಬಹುದು, ತುಂಬ ಜನ ಆ ಕೊಠಡಿಯಲ್ಲಿ ಫೈಲುಗಳೊಂದಿಗೆ ಕುಳಿತಿದ್ದರು. ಎಲ್ಲರ ಕಣ್ಣುಗಳೂ ಇವನನ್ನೇ ನೋಡುತ್ತಿದ್ದವು. ವಾತಾವರಣ ಬಹಳ ಶಾಂತವಾಗಿತ್ತು. ಹಳೆಯ ಫ್ಯಾನ್ ತಿರುಗುವಶಬ್ದ ಒಂದೇ ಸಮನೆ ಕಾಡುತ್ತಿತ್ತು. ಮನಸ್ಸಿನಲ್ಲಿದ್ದದ್ದನ್ನು ಹೇಳಲು ಮತ್ತೆ ಓರೆಕಣ್ಣಿನಿಂದ ಅಧಿಕಾರಿಯನ್ನು ನೋಡಿದನು. ಆಗ ಹಲವಾರು ನೆನಪುಗಳು ತಲೆಯೊಳಗೆ ಸುಳಿದು ಹೋದವು"[1] ಡಾ.ಮೊಗಳ್ಳಿ ಗಣೇಶರವರ 'ಚೆಲುವ' ಅವರ 'ಬುಗುರಿ' ಕತೆಯಲ್ಲಿ ಪಡುತ್ತಿರುವ ಮನೋವ್ಯಥೆಗೂ ಈ 'ಬೋಧಿವೃಕ್ಷ' ಕತೆಯಲ್ಲಿರುವ 'ಗೌತಮ'ನು ಪಡುತ್ತಿರುವ ಮನೋವ್ಯಥೆಗೂ ಈ ಜಾತಿವ್ಯವಸ್ಥೆಯೇ ಕಾರಣವಾಗಿರುವುದನ್ನು ಈ ಎರಡೂ ಕತೆಗಳಲ್ಲಿ ಕಾಣಬಹುದಾಗಿದೆ. ಗೌತಮನು ತಾನು ಶೋಷಣೆಗೆ ಒಳಪಡುತ್ತಿರುವ ಕೆಳವರ್ಗದವರ ಜಾತಿಯಲ್ಲಿ ಹುಟ್ಟಿರುವುದಕ್ಕಾಗಿ, ತನ್ನ ಜಾತಿಯನ್ನು ಬದಲಾವಣೆ ಮಾಡಿಕೊಳ್ಳಲು ಸರಕಾರದ ಆಫೀಸಿಗೆ ಹೋಗುತ್ತಾನೆ.

ಅದಕ್ಕೆ ಸಮಾಜ ಆತನಿಗೆ ಮಾಡುತ್ತಿರುವ ಅವಮಾನದ ಅಸಮಾನತೆಯೇ ಕಾರಣವಾಗಿರುತ್ತದೆ. ಇದರಿಂದಾಗಿ ಆತನು ತನ್ನ ಜಾತಿ ಬದಲಾವಣೆಗಾಗಿ ಆಫೀಸಿಗೆ ಬಂದಿರುವುದನ್ನು ಆ ಆಫೀಸ್‌ನ ಅಧಿಕಾರಿಯು ಗಮನಿಸುತ್ತಾನೆ. ಆತನ ಅರ್ಜಿಯನ್ನು ತೆಗೆದುಕೊಂಡು ನೋಡಿ, ಆತನ ಮನಸ್ಥಿತಿಯನ್ನು ಅರಿತು, ಇನ್ನೆರಡು ದಿನ ಬಿಟ್ಟು ಬರುವಂತೆ ಹೇಳುತ್ತಾನೆ. ಆಗ ಗೌತಮನು ಹೊರಗಡೆ ಬರುತ್ತಿರುವಾಗ ಆ ಆಫೀಸರ್‌ನ ಮೇಲೆ ನಂಬಿಕೆಯನ್ನು ಕಳೆದುಕೊಂಡು ಕೆಲಸಗಾರರ ಮೇಲೆ ಹಲ್ಲೆ ಮಾಡುತ್ತಾನೆ. ಆದರೆ ಆ ಆಫೀಸರ್ ಆತನ ಸಂಕಟವನ್ನು ಅರಿತು, ಆತನನ್ನು ಪೊಲೀಸರಿಗೆ ಒಪ್ಪಿಸದೆ ಅಲ್ಲಿಂದ

ಹೊರಗಡೆ ಕಳಿಸಿಕೊಡುತ್ತಾನೆ. ನಂತರ ಆ ವ್ಯಕ್ತಿ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿರುವಾಗ ಆ ಆಫೀಸ್‌ನ ಗುಮಾಸ್ತೆ ಬಂದು ಆತನನ್ನು ತಾನಿರುವ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅವಳೊಂದು 'ಯಶೋಧ' ಎಂಬ ಪುಸ್ತಕವನ್ನು ಬರೆದಿರುತ್ತಾಳೆ. ಆ ಕತೆಯನ್ನು ಗೌತಮನು ಓದಿದ ನಂತರ ತನ್ನಂತೆ ಜಾತಿವ್ಯವಸ್ಥೆಯಿಂದ ನೊಂದು ಮಾನಸಿಕ ವ್ಯಥೆಗೆ ಸಿಲುಕಿರುವ 'ಯಶೋಧೆ' ಇವಳೇ ಎಂದು ತಿಳಿಯುತ್ತದೆ.ಇವರು ತಮ್ಮ ಜಾತಿಯಿಂದಲೇ ತಮ್ಮ ಹುಟ್ಟನ್ನು ಬದಲಾಯಿಸುವ ನಿರ್ಧಾರವು ಪುರೋಹಿತಶಾಹಿಗಳು ದಲಿತರಿಗೆ ಮಾಡಿರುವ, ಮಾಡುತ್ತಿರುವ ಶೋಷಣೆಯಾಗಿದೆ. ಅದರಂತೆ ಕನ್ನಡದ 'ಬುಗುರಿ' ಕಥೆಯು ಬಂಡವಾಳಶಾಹಿಗಳು ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯಗಳನ್ನು ತಿಳಿಸುತ್ತದೆ. ಇವೆರಡೂ ಕಥೆಗಳು ಅಂಬೇಡ್ಕರವಾದದ ನೆಲೆಯಿಂದ ದಲಿತ ಸಂವೇದನೆಗಳನ್ನು ಅಭಿವ್ಯಕ್ತಿಸುತ್ತವೆ.

'ಸುವರ್ಣ ಕಥಾ ಸಂಕಲನ' ಎಂಬ ಕಥಾ ಸಂಕಲನದಲ್ಲಿರುವ ಅರವಿಂದ ಮಾಲಗತ್ತಿಯವರು ಬರೆದವರು 'ತೂತಿನದುಡ್ಡು ಮತ್ತು ನೀರು' ಎಂಬ ಕಥೆಯು ದಲಿತ ಸಂವೇದನೆವುಳ್ಳ ಐತಿಹಾಸಿಕವಾಗಿ ದಾಖಲೆಯಾಗಿ ಉಳಿದಿರುವ ವಾಸ್ತವದ ಕಥೆಯಾಗಿರುತ್ತದೆ. ಜಡೆ ಸಂಗಮದ ಹತ್ತಿರದ ಊರಾದ 'ಮುದ್ದೇನೂರಿನಲ್ಲಿ' ನಡೆದು ಗತಿಸಿದ ಘಟನೆಯ ಕಥೆಯನ್ನಾದರಿಸಿ ಈ ಕತೆಯು ರಚಿತವಾಗಿರುತ್ತದೆ.

ಅಂದಿನಿಂದ ಇಂದಿನವರಿಗೂ ಜೀವಂತವಾಗಿ ತನ್ನದೆಯಾದ ಭೇದದ ಬೇರುಗಳನ್ನು ಚಾಚಿಕೊಂಡು, ಸಮಾಜದಲ್ಲಿ ಅಸಮಾನತೆಯನ್ನು ಉಂಟುಮಾಡುತ್ತ ಮೇಲ್ವರ್ಗದ ಜಾತಿ, ಕೆಳವರ್ಗದ ಜಾತಿಗಳೆಂದು ಇಟ್ಟಾಗ ಮಾಡಿ ಸಮಾಜದ ಶಾಂತಿಯನ್ನು ಹದಗೆಡಿಸುತ್ತಿರುವ ಜಾತಿವ್ಯವಸ್ಥೆಯನ್ನು ಕುರಿತು ಈ ಕತೆಯು ಘಟನೆಗಳನ್ನಾಧರಿಸಿ ವಿಶ್ಲೇಷಣೆಯನ್ನು ನೀಡುತ್ತದೆ. ಪುರೋಹಿತಶಾಹಿಗಳು ಸೃಷ್ಟಿಸಿದ ಈ ವರ್ಣವ್ಯವಸ್ಥೆಯಿಂದ ತಳ ಸಮುದಾಯದವರು ಅನುಭವಿಸುತ್ತಿರುವ ಅವಮಾನದ ನೋವುಗಳನ್ನು ಮತ್ತು ಬದುಕಲು ಬೇಕಾಗಿರುವ ಮನುಷ್ಯನ ಸ್ವತಂತ್ರವೂ ಇಲ್ಲದಿರುವುದನ್ನು ಈ ಕತೆಯು ಎಳೆಎಳೆಯಾಗಿ ವಿವರಣೆಯನ್ನು ಕೊಡುತ್ತದೆ. ಕೆಳಜಾತಿಯವರೆಂದು ಅವರನ್ನು ಊರಿನ ಹೊರಗಿಟ್ಟು ಅವರ ನೆರಳನ್ನು ತಾವಿರುವ ಜಾಗಕ್ಕೆ ಬೀಳದ ಹಾಗೆ ಅವರನ್ನು ಪಶುಗಳಿಗಿಂತ ಕೀಳಾಗಿ ಕಾಣುತ್ತಿರುವ ಪುರೋಹಿತಶಾಹಿಗಳ ಮೌಢ್ಯ ಸಂಪ್ರದಾಯದ ವಿಚಾರ ರಹಿತ ಆಚರಣೆಗಳನ್ನು ಈ ಕತೆಯು ತಿಳಿಸಿಕೊಡುತ್ತದೆ.

ಮನುಷ್ಯ ಮನುಷ್ಯನಂತೆ, ಮತ್ತೊಬ್ಬ ಮನುಷ್ಯನನ್ನು ಕಾಣದಿರುವ ಸಂಗತಿಯನ್ನು ಕಥೆಗಾರರು ಈ ಕತೆಯ ಮೂಲಕ ಖಂಡಿಸುತ್ತ ದಲಿತರು ಪಡುತ್ತಿರುವ ಅವರ ಅಸಹಾಯಕ ಜೀವನದ ಅವಮಾನಗಳನ್ನು ಅವರ ಮಾನಸಿಕ, ದೈಹಿಕ ಹಿಂಸೆಗಳನ್ನು ಈ ಕಥೆಯ ಮೂಲಕ ಸೆರೆಹಿಡಿದಿದ್ದಾರೆ. ದಲಿತ ಜೀವಿಗಳು ತಮ್ಮ ಬಾಳನ್ನು ಕತ್ತಲಲ್ಲಿ ಕಳೆಯುತ್ತಿರುವುದನ್ನು ಅವರಿಗೆ ಸ್ವತಂತ್ರದ ಬೆಳಕು ಸಿಗದೆ ಇರುವುದನ್ನು ತಿಳಿಸಿಕೊಡುತ್ತ ಈ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿವ್ಯವಸ್ಥೆಯ ಬಲಿಗೆ ಎಷ್ಟೊಂದು ದಲಿತ ದೇಹಗಳು ತಮ್ಮನ್ನೇ ನೋವಿನ ಮಡುವಿನಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ

ಎಂಬುವ ಸಂಗತಿಯನ್ನು ಮನಕಲುಕುವ ರೀತಿಯಲ್ಲಿ ಕಥೆಗಾರರು ಕಟ್ಟಿಕೊಟ್ಟಿದ್ದಾರೆ. ಮನುಷ್ಯರ ಮೈಯಲ್ಲಿ ಹರಿಯುತ್ತಿರುವುದು ಒಂದೇ ರಕ್ತ ಆದರೆ ಮನುಷ್ಯನ ಮನಸ್ಸಿನಲ್ಲಿರುವ ಮೌಢ್ಯ ಸಂಪ್ರದಾಯಗಳ ಆಚರಣೆಯಿಂದ ಮನುಷ್ಯನನ್ನು ಮನುಷ್ಯನಂತೆ ಕಾಣಲಾಗದ ಸ್ಥಿತಿಯ ಈ ವರ್ಣವ್ಯವಸ್ಥೆ ಸಮಾಜದಲ್ಲಿ ತನ್ನ ಬೇರುಗಳನ್ನು ಇಳಿಸಿಬಿಟ್ಟಿದೆ. ಇದರಿಂದಾಗಿ ಕೆಳವರ್ಗದ ಜನರು ಮೇಲ್ವರ್ಗದವರಿಂದ ಶೋಷಣೆಗೆ ಒಳಪಡುತ್ತಿದ್ದಾರೆ.

ಇದನ್ನರಿತ ಕಥೆಗಾರರು ಈ ಕಥೆಯ ಮೂಲಕ ದಲಿತರು ಪಡುತ್ತಿರುವ ಅವರ ಮಾನಸಿಕ ನೋವುಗಳನ್ನು, ದಲಿತರಿಗಿರುವ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು, ಚಿಂತನೆಮಾಡಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಜೀವಿಗಳ ಚಿತ್ರಣವನ್ನು ಈ ಕಥೆಯು ಶೋಧಿಸುತ್ತದೆ. ಮುದ್ದೇನೂರಿನಲ್ಲಿರುವ ಮಠ ತುಂಬಾ ಹೆಸರುವಾಸಿಯಾದ ಮಠ. ಮನುಷ್ಯನ ತೋಳತೆಕ್ಕೆಗೆ ಸಿಗದ ಹನ್ನೆರಡು ಕಂಬಗಳಿಂದ ಸಾಲುಮಂಟಪವನ್ನು ಹೊಂದಿದೆ. ಅದರೆದುರಿಗೆ ಮೂರು ಸುತ್ತಿನ ಕೋಟೆಯಂತೆ ಮಠ ನಿರ್ಮಾಣವಾಗಿರುತ್ತದೆ. ಆ ಮಠದಲ್ಲಿ ಒಂದು ಗಚ್ಚಿನ ಬಾವಿಯಿದೆ. ಈ ಬಾವಿಯ ನೀರು ಬಲವಾಗಿಯೇ ಇದ್ದರೂ ಇದರ ಬಳಕೆ ಮಾತ್ರ ಕಡಿಮೆ ಇರುತ್ತದೆ. ಕಾರಣ ಊರಿನಲ್ಲಿ ಹೊಸದಾಗಿ ಬಾವಿಗಳು ಹುಟ್ಟಿಕೊಂಡಿದ್ದವು. ಮಠದ ಸುತ್ತ ಬೇಲಿಗೋಡೆ ಇರುತ್ತದೆ. ಅದಕ್ಕೊಂದು ಹಿರಿದಾದ ಬಾಗಿಲು ಇರುತ್ತದೆ. ಇಂತಹ ಮಠದ ಬಾವಿಯಲ್ಲಿ ಒಂದುದಿನ ಹಂದಿ ಬಿದ್ದುಸತ್ತು ಹೋಗುತ್ತದೆ.

ಇದನ್ನು ತಿಳಿದ ಮಡಿವಂತರು ಯಾರಿಗೂ ತಿಳಿಯದ ಹಾಗೆ ಹರಿಜನ ಕೇರಿಯ ಬಾಗೋಡಿ ಪರಸಪ್ಪನನ್ನು ಕರೆಯಿಸಿ ಆ ಹಂದಿಯನ್ನು ಮೇಲೆತ್ತಿಸುತ್ತಾರೆ. ಈ ವಿಷಯವನ್ನು ಪರಸಪ್ಪನಿಗೆ ಕೇಳಿದರೂ ನನಗೇನು ಗೊತ್ತಿಲ್ಲವೆಂದು ಹೇಳುತ್ತಾನೆ. ಈತನು ಮಠದ ದನಗಳ ಸಗಣಿಯನ್ನು ತೆಗೆದುಹಾಕಿ, ಕಸವನ್ನು ಗೂಡಿಸುವ ಕೆಲಸವನ್ನು ಮಾಡುತ್ತಿದ್ದನು.ತುಂಬ ನಂಬಿಕೆಯಸ್ಥನಾದ್ದರಿಂದ ಈ ವಿಷಯ ಇತರೆ ಯಾವ ಜನರಿಗೆ ಹಂದಿ ಬಾವಿಯಲ್ಲಿ ಬಿದ್ದ ಸಂಗತಿ ತಿಳಿಯಲಿಲ್ಲ. ನಂತರ ಆ ಊರಿನಲ್ಲಿರುವ ಪುರೋಹಿತಶಾಹಿಗಳು ಮಠದ ಬಾವಿಯನ್ನು ತಮ್ಮ ಸಂಪ್ರದಾಯಗಳ ಮೂಲಕ ಬಾವಿಯನ್ನು ಶುದ್ಧಿ ಮಾಡಿ ನೀರನ್ನು ಬಳಕೆಗಾಗಿ ಬಳಸಿಕೊಳ್ಳುತ್ತಾರೆ. ಮುದ್ದೇನೂರಿನ ಸೂರ್ಯ ಮುಳುಗುವ ದಿಕ್ಕಿಗೆ ದಲಿತರ ಮನೆಗಳಿದ್ದವು. ಅವರಿಗಾಗಿ ಪ್ರತ್ಯೇಕವಾದ ಎರಡು ಬಾವಿಗಳಿದ್ದವು. ಅದು ದಲಿತರ ಬಾವಿಗಳೆಂದು ಗುರಿತಿಸಲು ಎಮ್ಮೆಯ ಕೋಡನ್ನು ಕಟ್ಟಿ ಜೋತು ಬಿಟ್ಟಿದ್ದರು. ಅವರ ಬಾವಿಯ ಮೇಲೆ ಊರ ದನಗಳ ಮಾರಾಟ ವಾರಕ್ಕೊಮ್ಮೆ ಅಲ್ಲಿಯೇ ನಡೆಯುತ್ತಿತ್ತು.

ಹೀಗಾಗಿ ಆ ದಲಿತರ ಬಾವಿಯಲ್ಲಿ ಊರಿನ ದನಗಳು ಅದರಲ್ಲಿಯೇ ನೀರು ಕುಡಿಯುತ್ತಿದ್ದವು. ದನಗಳ ಮೈ ತೊಳೆಯುತ್ತಿದ್ದರು, ಅದೇ ನೀರನ್ನು ದಲಿತರು ಕುಡಿಯಲು ಉಪಯೋಗಿಸುತ್ತಿದ್ದರು. ಅವರಿಗೆ ಬೇರೆಯ ಮಾರ್ಗವೇ ಇರಲಿಲ್ಲ. ಬೇಸಿಗೆಯ ಕಾಲದಲ್ಲಿ ಆ ಬಾವಿಯಲ್ಲಿ ನೀರು ಬತ್ತಿಹೋದವು. ಇದರಿಂದಾಗಿ ದಲಿತರಿಗೆ ಕುಡಿಯುವ ನೀರಿನ ಸಮಸ್ಯೆ ಉಂಟಾಗುತ್ತದೆ. "ದಲಿತರು

ಒಂದು ಧ್ರುವದಿಂದ ಇನ್ನೊಂದು ಧ್ರುವಕ್ಕೆ ಹೋಗಿ ನೀರು ತರುವುದೆಂದರೆ ಮರುಭೂಮಿಯಲ್ಲಿ ನೀರು ಹುಡುಕಿತಂದ ಅನುಭವವಾಗುತ್ತಿತ್ತು. ಬೇಸಿಗೆಯಲ್ಲಿಯೂ ಈ ಅನುಭವನ ಹೆಜ್ಜೆ ಹೆಜ್ಜೆಗೂ ಆಗುತ್ತಿತ್ತು. ಸ್ವಾಭಿಮಾನವಿಲ್ಲದವರು, ವಯಸ್ಸಾದವರು, ಮೇಲು ಜಾತಿಯವರ ಊರ ಬಾವಿಯ ಎದುರು ಕುಳಿತು ಹೋಗಿ ಬರುವವರಿಗೆ ಯಪ್ಪಾ, ನಮ್ಗೊಂದು ಕೊಡ ನೀರು ಸೇದಿ ಹಾಕ್ರಿ ಎಂದು 'ಜೀ' ಎಳೆಯುತ್ತಿದ್ದರೂ ಪ್ರಯೋಜನವಾಗುತ್ತಿರಲಿಲ್ಲ. ಗಂಟೆಗಟ್ಟಲೆ ಕಾದು ಹೇಳಿದ್ದನ್ನೇ ಹೇಳಿ ಗಂಟಲು ಒಣಗಿ ಹೋದರೂ ಕೊಡಕ್ಕೆ ನೀರು ಸಿಕ್ಕುವುದು ಬಿಡಿ, ಬಾಯಿಗೆ ನೀರು ಸಿಗುತ್ತಿರಲಿಲ್ಲ. ಒಂದು ಕೊಡ ನೀರು ಸಿಕ್ಕರೆ ದೇವರೇ ಬಂದು ನೀರು ಹಣಿಸಿದಂತಾಗುತ್ತಿತ್ತು."[೫]

ಹೀಗೆ ದಲಿತ ಸಮುದಾಯದವರಿಗೆ ಕುಡಿಯುವ ನೀರಿನ ಸಮಸ್ಯೆಯಿಂದ ಬಳಲುತ್ತಿದ್ದರು. ಊರಲ್ಲಿರುವ ಬಾವಿಗೆ ದಲಿತರು ಹೋಗುವ ಹಾಗಿಲ್ಲ. ದಲಿತರ ಬಾವಿಗಳಲ್ಲಿ ನೀರು ಇಲ್ಲ, ಇದರಿಂದಾಗಿ ದಲಿತರಿಗೆ ತುಂಬಾ ಕಷ್ಟವಾಗುತ್ತದೆ. ದಲಿತ ಕೇರಿಯಲ್ಲಿರುವ ದುಗ್ಗ, ಸೈದ, ಬಾಬು, ಲಚುಮರು ರಾತ್ರಿ ಹೊತ್ತು ಊರ ಒಳಗಿನ ಬಾವಿಗೆ ಹೋಗಿ, ಕದ್ದು ನೀರು ತರಲು ಪ್ರಾರಂಭಿಸುತ್ತಾರೆ. ಅದರಲ್ಲಿ ಸೈದ ಮಾತ್ರ ಎತ್ತಿದ ಕೈ ಎಂದೆ ಹೇಳಬೇಕು. ಈತನು ಬೆಳ್ಳಿಚುಕ್ಕಿ ಮೂಡುವುದರೊಳಗಾಗಿ ಎದ್ದು ಮಠದಲ್ಲಿರುವ ಗಚ್ಚಿನ ಬಾವಿಯ ನೀರನ್ನು ಕದ್ದು ತರುತ್ತಿರುತ್ತಾನೆ. ರಾತ್ರಿ ಹೋಗುವಾಗ ನಾಯಿಗಳು ಬೊಗಳಬಾರದೆಂದು ಅವುಗಳಿಗೆ ಮಾಂಸವನ್ನು ಹಾಕುತ್ತ ಹೋಗಿ ಮಠದ ಬಾವಿಯಲ್ಲಿ ನೀರು ತರುತ್ತಿರುತ್ತಾನೆ. ಹೋಗುತ್ತಿರುವಾಗ ಓಂ ನಮಃ ಶಿವಾಯ, ಓಂ ನಮಃ ಶಿವಾಯವೆಂದು ಹೇಳುತ್ತಾ ಮಠದ ಒಳಗಡೆ ಹೋಗುತ್ತಿರುತ್ತಾನೆ.

ನೋಡಿದವರು ನಮ್ಮವರು ಇರಬೇಕೆಂದು ಮೇಲ್ವರ್ಗದವರು ತಿಳಿದುಕೊಳ್ಳಲೆಂದು ಹಾಗೆ ಓಂ ನಮಃ ಶಿವಾಯವೆಂದು ಹೇಳುತ್ತಿರುತ್ತಾನೆ. ದೀಪದ ಬೆಳಕನ್ನು ಹಿಡಿದುಕೊಂಡು ಹೋಗಿ, ಹೀಗೆ ದಿನರಾತ್ರಿ ಮಠದ ಬಾವಿಯ ನೀರು ತಂದು ತನ್ನವರಿಗೆ ನೀರನ್ನು ಹಾಕುತ್ತಿರುತ್ತಾನೆ. ಒಂದುದಿನ ಬೆಳ್ಳಿಚುಕ್ಕಿ ಮೂಡಿದ ನಂತರ ಅಂದರೆ ತಡವಾಗಿ ಬೆಳಿಗ್ಗೆ ಏಳುತ್ತಾನೆ. ಅವಸರವಸರವಾಗಿ ಹೋಗುತ್ತಿರುವಾಗ ಸೈದನ ಕಾಲಿಗೆ ಕಲ್ಲು ತಾಕಿ ಹೆಬ್ಬರಳು ರಕ್ತಸ್ರಾವವಾಗುತ್ತದೆ. ಆ ನೋವನ್ನು ತಡೆದುಕೊಂಡು ಓಂ ನಮಃ ಶಿವಾಯ ಮಂತ್ರ ಉಚ್ಚರಿಸುತ್ತ, ಎರಡು ಕೊಡಗಳನ್ನು ಹೊತ್ತುಕೊಂಡು ಮಠದ ಬಾವಿ ಕಡೆ ಹೋಗುತ್ತಿರುವಾಗ ನಾಯಿಯು ಆ ರಕ್ತವನ್ನು ನೆಕ್ಕುತ್ತ ಅವನ ಹಿಂದೆ ಬೆನ್ನತ್ತಿ ಬರುತ್ತಿತ್ತು. ಸೈದ ತುಂಬ ಭಯದಿಂದಲೇ ಹೋಗುತ್ತಿದ್ದನು. ಆದರೂ ವಿಧಿ ಆಟ ಮಠದ ಕಸವನ್ನು ಗೂಡಿಸುವ ಗಂಗವ್ವ ಮುದುಕಿ ದೀಪವನ್ನು ಹಿಡಿದುಕೊಂಡು ಬಂದು ಸೈದನನ್ನು ನೋಡಿ ಯಾರು ನಿಂಗಯ್ಯ ಏನು...? ಅಂತ ಮಾತನಾಡಿಸಿದಳು. ಸೈದ ಬಾವಿಯಲ್ಲಿ ನೀರನ್ನು ಸೇದುತ್ತಿದ್ದಾಗ ಅವನ ಎದೆ ನಡುಕ ಹೆಚ್ಚಾಗತೊಡಗಿತು. ಆಗ ಗಂಗವ್ವ ಮುದುಕಿ ಹತ್ತಿರ ಬಂದು ಏನ ನಿಂಗಯ್ಯ ರಾತ್ರಿ ನೋಡಿದರೆ ಕುಡಿದುಕೊಂಡು ಓಡಾಡುತ್ತಿರುತ್ತಿ ದಿನ ಬೆಳಿಗ್ಗೆ ಓಂ ನಮಃ ಶಿವಾಯ ಅಂತ ಮಠಕ್ಕೆ ಬರುತ್ತಿದೆಂದು ದೀಪ ಹಿಡಿದು ಸೈದನ ಮುಖ ನೋಡಲು ಸೈದ ಗಾಬರಿಯಿಂದ ಸೇದುತ್ತಿದ್ದ

ಕೊಡದ ಆ ಬಾವಿಯಲ್ಲಿಯೇ ಬಿದ್ದುಬಿಡುತ್ತಾನೆ. ಈ ವಿಷಯ ಊರಿನವರಿಗೆ ತಿಳಿಯುತ್ತದೆ. ಬೆಳಿಗ್ಗೆ ಪಂಚಾಯತಿ ಸೇರಿಸಿ ಸೈದನ ಮೀಸೆ, ತಲೆ ಬೋಳಿಸಿ ಅವಮಾನ ಮಾಡುತ್ತಾರೆ.

ಸೈದನ ತಂದೆ ಪರಸಪ್ಪ ನನ್ನ ಮಗ ಮಾಡಿದ ತಪ್ಪಿಗೆ ಅವಮಾನಮಾಡಿ ಮರ್ಯಾದೆ ತೆಗಿಬೇಡಿ, ಬೇಕಾದರೆ ತಪ್ಪಿಗಾಗಿ ದಂಡವನ್ನು ಕಟ್ಟುತ್ತೇನೆಂದು ಬೇಡಿಕೊಳ್ಳುತ್ತಾನೆ. ಯಾರೂ ಅತನ ಮಾತನ್ನು ಕೇಳುವುದಿಲ್ಲ. ಕೊನೆಗೆ ಪರಸಪ್ಪ ದೈವಕ್ಕೆ ಕೈ ಮುಗಿದು ಬೇಡಿಕೊಂಡಾಗ ಆತನ ದುಡ್ಡನ್ನು ತೆಗೆದುಕೊಂಡು, ಮಠದ ಹೆಬ್ಬಾಗಿಲು ಹೊಸ್ತಿಲಿಗೆ ಮೊಳೆಯಿಟ್ಟು ಆತನ ಅಪರಾಧ ತಲೆತಲಾಂತರ ಸಾರಿ ಹೇಳುವಂತೆ ಬಡಿಯುತ್ತಾರೆ. ಅಂದು ಅದೇ ಬಾವಿಯಲ್ಲಿ ಹಂದಿ ಸತ್ತುಬಿದ್ದಾಗ ಅದನ್ನು ದಲಿತನು ಬಾವಿಯಿಂದ ಮೇಲೆ ತೆಗೆದನು. ನಂತರ ಪುರೋಹಿತಶಾಹಿಗಳು ಬಾವಿಯನ್ನು ಶುದ್ಧೀಕರಿಸಿಕೊಂಡರು. ಆದರೆ ಅದೇ ಬಾವಿಯಲ್ಲಿ ಒಬ್ಬ ಮನುಷ್ಯ ನೀರಿಗಾಗಿ ಬಿದ್ದರೆ, ಅವನನ್ನು ಜಾತಿಯ ಹೆಸರಿನಲ್ಲಿ ಅವಮಾನ ಮಾಡಿದರು. ಮಾನವಿಯತೆಯಿಲ್ಲದ ಮನುಷ್ಯ ಸೃಷ್ಟಿಸಿದ ಈ ಜಾತಿವ್ಯವಸ್ಥೆಯೇ ಇದಕ್ಕೆ ಕಾರಣವಾಗಿದೆ ಎಂಬ ದಲಿತ ಸಂವೇದನೆಯನ್ನು ಈ ಕಥೆ ವಿಸ್ತರಿಸುತ್ತದೆ.

ಪಾಲಗುಮ್ಮಿ ಪದ್ಮರಾಜುರವರು ಬರೆದಿರುವ 'ಬಿರುಗಾಳಿ' ಎಂಬ ತೆಲುಗು ಕಥಾ ಸಂಕಲನವನ್ನು ಆರ್ಪೀಯೆಸ್ ಸುಂದರಂರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಕೂಲಿಜನ'ಯೆಂಬ ಕತೆಯು 'ಸುವರ್ಣ ಕಥಾ ಸಂಕಲನ'ದಲ್ಲಿರುವ ಅರವಿಂದ ಮಾಲಗತ್ತಿಯವರು ಬರೆದಿರುವ ಕನ್ನಡದ 'ತೂತಿನ ದುಡ್ಡು ಮತ್ತು ನೀರು' ಎಂಬ ಕತೆಯಂತೆ ದಲಿತರ ಜೀವನದ ಮೂಲಭೂತ ಸೌಕರ್ಯಗಳಲ್ಲಿ ಒಂದಾಗ ಕುಡಿಯುವ 'ನೀರಿನ' ಸಮಸ್ಯೆಯನ್ನು ಕುರಿತು ವಿವೇಚನೆಯನ್ನು ವ್ಯಕ್ತಪಡಿಸುತ್ತದೆ.

ಕುಡಿಯುವ ನೀರಿಗಾಗಿ ದಲಿತರು ಸಮಾಜದಲ್ಲಿ ಪಡುತ್ತಿರುವ ಯಾತನೆಯ ಸ್ಥಿತಿಯನ್ನು ವಾಸ್ತವಿಕ ಅಂಶಗಳೊಂದಿಗೆ ವಿಷದೀಕರಿಸುತ್ತದೆ. ಬಡತನದಿಂದ ಜೀವನವನ್ನು ಸಾಗಿಸುತ್ತಿರುವ ದಲಿತರು, ಕೂಲಿ ಮಾಡಿಯೇ ತಮ್ಮ ಹಸಿವಿನ ಹೊಟ್ಟೆ ತುಂಬಿಸಿಕೊಂಡು ಬದುಕಬೇಕು. ಕೂಲಿ ಇದ್ದರೆ ಇವರ ಜೀವನ. ಕೂಲಿ ಇಲ್ಲದ ದಿನ ಅವತ್ತು ಉಪವಾಸದಿಂದ ಮಲಗಬೇಕು. ಅಸಮಾನತೆಯ ಸಮಾಜದಲ್ಲಿ ಆರ್ಥಿಕತೆಯಿಂದ ವಂಚಿತರಾಗಿರುವ ದಮನಿತರು ತಮ್ಮ ಬೆವರ ಹನಿಗಳನ್ನು ಇಳಿಸಿಕೊಂಡು ನಿತ್ಯ ಅನ್ನವನ್ನು ಕಾಣುತ್ತಾರೆ. ಅದಕ್ಕಾಗಿಯೇ ಅಂದರೆ ಅನ್ನ ಸಿಕ್ಕರೆ ಸಾಕೆಂದು ಹೊಟ್ಟೆಗಾಗಿ ಮಾತ್ರ ಬದುಕುವದೆಂದರೆ ಅದು ದಲಿತರು ಮಾತ್ರ. ಅವರಿಗೆ ಬೇಕಾಗಿರುವುದು ಅನ್ನ. ದುರಾಸೆಯಿಂದ ಉಳ್ಳವರು ಬಯಸುತ್ತಿರುವ ಆಸ್ತಿ ಅಲ್ಲ. ಆದರೆ ಹಸಿದ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿಯೇ ಕೂಲಿಗಾಗಿ ದಲಿತರು ಊರೂರು ಅಲೆಯಬೇಕು. ಬಂಡವಾಳಶಾಹಿಗಳು ನೀಡುವ ಅವಮಾನವನ್ನು ಸಹಿಸಿಕೊಂಡು, ಅವರು ಹೇಳಿದಂತೆ ದೈಹಿಕವಾಗಿ ದುಡಿದು, ಮಾನಸಿಕವಾಗಿಸೊಂದು ಬೆಂದು ಬದುಕುತ್ತಿರುವ ಈ ಕೂಲಿ ಜನಗಳಿಗೆ ಕುಡಿಯಲು ಶುದ್ಧವಾದ

ನೀರನ್ನು ನೀಡಲಾರದ ಈ ಬಂಡವಾಳಶಾಹಿಗಳ ದುರ್ವರ್ತತೆಯನ್ನು ಈ 'ಕೂಲಿ ಜನ' ಕಥೆಯು ಸಾದರಪಡಿಸುತ್ತದೆ.

ಕಾಲುವೆ ಕೆಲಸದಲ್ಲಿ ಎಲ್ಲಾ ಬಡಕೂಲಿಗಳು ತಮ್ಮ ತಮ್ಮ ಕೆಲಸದಲ್ಲಿ ತೊಡಗಿಕೊಂಡು, ಉರಿಉರಿವ ಬಿಸಿಲನ್ನು ತಡೆದುಕೊಂಡು, ತಮ್ಮ ಬೆವರಿನ ಹನಿಗಳಿಂದ ಕಾಲುವೆ ತೋಡಿ ಕಟ್ಟೆದಡವನ್ನು ಹದಗೊಳಿಸುತ್ತಿದ್ದರು. ಒಂದುನೂರು ಗಜಗಳಷ್ಟು ಕಾಲುವೆಯ ಕೆಲಸವನ್ನು ಮುಗಿಸಬೇಕು. ಇಲ್ಲದಿದ್ದರೆ ಸರ್ಕಾರದವರು ಕೂಲಿ ನೀಡುವುದಿಲ್ಲವೆಂದು ಕಂಟ್ರಾಕ್ಟರುಹೆದರಿಸಿದ, ಭಯದಿಂದಲೇ ಕಷ್ಟಪಟ್ಟು ಮಣ್ಣನ್ನು ಹಾರೆಗಳಿಂದ ಅಗೆದು, ಬುಟ್ಟಿಯಲ್ಲಿ ತುಂಬಿ ಕಾಲುವೆಯು ಒಡೆದ ಕಡೆಗೆ ಸುರಿಯುತ್ತಿದ್ದರು. ದಲಿತ ಹೆಣ್ಣು, ಗಂಡು ಮಕ್ಕಳು ಬಿಸಿಲಿನ ತಾಪದಿಂದ ಬಾಯಾರಿಕೆಯಿಂದ ಮಧ್ಯಾಹ್ನ ಕೆಲಸವನ್ನು ನಿಲ್ಲಿಸಿ ಊಟದ ವೇಳೆಗೆ ಅಲ್ಲಿಯೇ ನಿಂತಿರುವ ನೀರಿನಲ್ಲಿ ನೀರು ಕುಡಿಯಲು ಹೋದಾಗ ಹೊಲೆಯ ಪದ್ದಾಲು ಹೀಗೆನ್ನುತ್ತಾನೆ. "ಏನ್ ಗೌಡ್ರೇ ನೀರೆಲ್ಲ ಕಲಕಿ ಬಿಟ್ರೆ ಕುಡಿಯೋದು ಹೆಂಗೆ.....? ಕೂಳ್ ತಿನ್ ಬೇಡ್ವಾ..? "ಕೂಳು ತಿನ್ನೋ ಹೊತ್ಗೆ ತಿಳಿಯಾಯ್ತದೆ" ಎಂದ ಶೆಟ್ಟಿ ಬಣಜಿಗ."[೬] ಹೀಗೆ ದಲಿತರು ಕಷ್ಟಪಟ್ಟು ದುಡಿದಾಗ, ಆ ನೀರನ್ನು ರಾಡಿ ಮಾಡಿ, ಕುಡಿಯಲು ಹೇಳುವ ಮೇಲ್ವರ್ಗದವರು ದಲಿತರ ಮೇಲೆ ಮಾಡುತ್ತಿರುವ ದೌರ್ಜನ್ಯದ ಶೋಷಣೆಯಾಗಿರುತ್ತದೆ. ಆದ್ದರಿಂದ ಈ ಕತೆಯಂತೆ ಅರವಿಂದ ಮಾಲಗತ್ತಿಯವರ 'ತೂತಿನ ದುಡ್ಡು ಮತ್ತು ನೀರು' ಎಂಬ ಕನ್ನಡ ಕಥೆಯು ದಲಿತರು ಕುಡಿಯಲು ಬೇಕಾದ ನೀರಿಗಾಗಿ ಪಡುತ್ತಿರುವ ವೇದನೆಯ ಸಂವೇದನೆಯನ್ನು ಅಂಬೇಡ್ಕರವಾದದ ನೆಲೆಯಿಂದ ಈ ಎರಡು ಕಥೆಗಳು ತಿಳಿಸುತ್ತವೆ.

ಎಸ್.ದಿವಾಕರ್‌ರವರು ಸಂಪಾದಿಸಿರುವ 'ಶತಮಾನದ ಸಣ್ಣ ಕತೆಗಳು' ಎಂಬ ಕಥಾ ಸಂಕಲನದಲ್ಲಿರುವ ಪಿ.ಲಂಕೇಶರವರು ಬರೆದಿರುವ 'ಮುಟ್ಟಿಸಿಕೊಂಡವನು' ಎಂಬ ಕಥೆಯು ಸಮಾಜದಲ್ಲಿ ದಲಿತರೆಂದರೇ ಮುಟ್ಟಲು, ಮುಟ್ಟಿಸಿಕೊಳ್ಳಲು ಯೋಗ್ಯವಲ್ಲದವರು ಎಂಬ ಮಾನಸಿಕ ಸ್ಥಿತಿಯಲ್ಲಿ ದಲಿತರಿಗೆ ನೀಡಿದ ಸ್ಥಾನಮಾನಗಳನ್ನು ಕುರಿತು, ಅವರೆಂದರೆ ಇತರರಂತೆ ಮನುಷ್ಯರೆಂಬ ಭಾವವನ್ನೇ ಮರೆತಿರುವರು.

ಮೇಲ್ವರ್ಗದವರ ಮಾನಸಿಕ ಸ್ಥಿತಿಯನ್ನು, ದಲಿತರುಪಡುತ್ತಿರುವ ಸಾಮಾಜಿಕ ಅಸಮಾನತೆಯನ್ನು ಈ ಕಥೆಯು ಸವಿಸ್ತಾರವಾಗಿ ವಿವರಿಸುತ್ತದೆ. ಪುರೋಹಿತಶಾಹಿಗಳು ಸೃಷ್ಟಿಸಿದ ಮೌಢ್ಯ ಸಂಪ್ರದಾಯದ ಹಾಳು ನಿಯಮ ಆಚಾರಗಳಲ್ಲಿರುವ ಅಸಮಾನತೆಯ, ಅಸ್ಪೃಶ್ಯತೆಯ ಅಳತೆಗೋಲನ್ನು ಈ ಕಥೆಯು ಮುರಿದುಹಾಕುತ್ತದೆ. ಮೇಲ್ವರ್ಗದವರು ಯೋಗ್ಯರು, ಕೆಳವರ್ಗದವರೆಂಬ ದಲಿತರು ಮುಟ್ಟಲು ಅಯೋಗ್ಯರೆಂಬ ತಾರತಮ್ಯವನ್ನು ಈ ಕಥೆಯಲ್ಲಿ ಕಥೆಗಾರರು ಖಂಡಿಸಿದ್ದಾರೆ. ಜಾತಿಯ ವಿಷ ಬೀಜದಿಂದ ಮನುಷ್ಯ ಮನುಷ್ಯರ ನಡುವೆ ಉಂಟಾಗಿರುವ ಈ ಘೋರ ಅನ್ಯಾಯವನ್ನು ತಡೆಯಲು ಹಾಗೂ ಸಮಾನತೆಯ ತತ್ವಸಾರಲು ಈ ಕಥೆಯು ತನ್ನ ಒಡಲಾಳದ ಮಾತುಗಳಿಂದ ದಮನಿತರಿಗೆ ಸಮಾಜದಲ್ಲಿ ನೆಮ್ಮದಿಯನ್ನು ನೀಡಲೆಂದೇ ಈ ಕಥೆಯು ಸೃಷ್ಟಿಯಾಗಿರುತ್ತದೆ. ಎಲ್ಲಾ

ಮನುಷ್ಯರಲ್ಲಿರುವ ಉಸಿರು ಒಂದೇ ಇರುವಾಗ, ದೇವರೊಬ್ಬನೆ ಇರುವಾಗ, ಅಜ್ಞಾನದ ಆಚರಣೆಯಿಂದ ಮಾನವನ ಹೃದಯದಲ್ಲಿ ಪ್ರೇಮವೇ ಇಲ್ಲದಿರುವುದನ್ನು ಕಾಣುತ್ತಾರೆ.

ಲೇಖಕರು ಸಮಾನತೆಗೆ ಸಮಸ್ಯೆಯಾಗಿರುವ ಈ ಮನುಷ್ಯನ ಮನಸ್ಸಿನಲ್ಲಿರುವ ಅಂತರವನ್ನು ತೊಲಗಿಸಲು 'ಮುಟ್ಟಿಸಿಕೊಂಡವನು' ಕಥೆಯು ತನ್ನ ಆಲೋಚನೆಯ ಕಥಾ ಸನ್ನಿವೇಶಗಳ ಮೂಲಕ ಸಮಾಜದ ವಾಸ್ತವ ಲೋಕವನ್ನು ತೆರೆದಿಡುತ್ತದೆ. ಹಾಗೆಯೇ ಸಮಾಜದಲ್ಲಿ ಬೇರೂರಿರುವ ಹಳೆ ಸಂಪ್ರದಾಯಗಳ ಮಡಿಲಲ್ಲಿ, ಒಂದು ದಲಿತವರ್ಗ ಹೇಗೆ ಶೋಷಣೆಗೆ ಒಳಪಟ್ಟು, ತನ್ನ ಸಾಮಾಜಿಕ ಅಂತರದಲ್ಲಿ ತೋಳಲಾಡುತ್ತಿದೆ ಎಂಬುದನ್ನು ಸಹ ಕಥೆಗಾರರು ಸೂಕ್ಷ್ಮವಾದ ತಮ್ಮ ಸಂವೇದನೆಗಳ ಮೂಲಕವಾಗಿ ಈ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ. ಮನುಷ್ಯ ಸೃಷ್ಟಿಸಿದ ಜಾತಿವ್ಯವಸ್ಥೆ ಮನುಷ್ಯನನ್ನೆ ಆಳುತ್ತಿದೆ. ಅದರಿಂದಾಗಿ ಸಮಾಜದಲ್ಲಿರುವಅಶಾಂತಿಯನ್ನು ಕಂಡು, ಕಥೆಗಾರರು ತಮ್ಮ ಅನುಭವನಗಳ ಮೂಲಕ ವಾಸ್ತವ ಲೋಕದಲ್ಲಿ ಪ್ರವೇಶಿಸಿ, ಒಂದು ತಳವರ್ಗದವರು ಅನುಭವಿಸುತ್ತಿರುವ ಮಾನಸಿಕ ವ್ಯಥೆಯನ್ನು ಈ ಕಥೆಯು ಟೀಕಿಸುತ್ತದೆ. ಬಸವಲಿಂಗಯ್ಯ ಶ್ರಮಜೀವಿ, ಉತ್ತಮ ವ್ಯವಸಾಯಗಾರ, ಮಣ್ಣನ್ನೆ ನಂಬಿಕೊಂಡು ತನ್ನ ಬದುಕನ್ನು ನಡೆಸುತ್ತಿದ್ದನು. ಯಾವ ಕಾಲದಲ್ಲಿ ಏನು ಮಾಡಬೇಕು ನೆಲ್ಲದಲ್ಲಿ ಎಂಬುದನ್ನು ಅರಿತಿದ್ದನು. ಸರಿಯಾದ ಸಮಯದಲ್ಲಿ ಹೊಲದ ಕೆಲಸವನ್ನು ಮಾಡಿ ಮುಗಿಸಿಕೊಂಡು ಬಿಡುವಿಲ್ಲದೆ ತನ್ನ ಜೀವನವನ್ನು ಸಾಗಿಸುತ್ತಿದ್ದನು.

ತನ್ನ ಎರಡು ಎತ್ತುಗಳನ್ನು ಕಟ್ಟಿಕೊಂಡು ಕೃಷಿ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದನು. ಆತನ ಎರಡು ಎತ್ತುಗಳು ಕಾಲಕಳೆದಂತೆ ಅದರಲ್ಲಿ ಒಂದು ನೊಗ ಇಟ್ಟೊಡನೆ ಮಲಗಲು ಪ್ರಾರಂಭಿಸತೊಡಗಿತು. ಇದರಿಂದಾಗಿ ಬಸವಲಿಂಗಯ್ಯನಿಗೆ ವ್ಯವಸಾಯದಲ್ಲಿ ತೊಂದರೆಯಾಯಿತು. ಈ ಎರಡು ಎತ್ತುಗಳನ್ನು ಸಾಟಿಯಲ್ಲಿ ಯಾರಿಗಾದರು ಕೊಟ್ಟು, ಹೊಸ ಎತ್ತುಗಳನ್ನು ತರುವ ಆಲೋಚನೆಯನ್ನು ಮಾಡಿದನು. ಆದರೆ ಮನೆಯಲ್ಲಿ ಮಗುವಿಗೆ ಆರೋಗ್ಯ ಸರಿ ಇರುವುದಿಲ್ಲ, ಶಿವನೂರು ಸ್ವಾಮಿಗಳಿಗೆ ಮಗುವನ್ನು ಕರೆದುಕೊಂಡು ಹೋಗಿ ತೋರಿಸಿಕೊಂಡು ಬರಬೇಕೆಂದು ಹೆಂಡಿತಿ ಸಿದ್ಲಿಂಗಿ ಹೇಳುತ್ತಾಳೆ.

ಮಗುವಿಗೆ ಕೆಮ್ಮ ಕಡಿಮೆಯಾಗುತ್ತಿಲ್ಲ, ಮನೆಯ ಪರಿಸ್ಥಿತಿ ತುಂಬಾ ಗಂಭೀರ ಸ್ಥಿತಿಯಲ್ಲಿ ನೋವಿನಿಂದ ಪರಿಣಮಿಸುತ್ತದೆ. ತನ್ನ ವ್ಯವಸಾಯಕ್ಕೆ ಎತ್ತುಗಳಿಲ್ಲ. ತನ್ನ ಮಗುವಿನ ಆರೋಗ್ಯ ಸರಿಯಿಲ್ಲ. ಇದರ ಜೊತೆಗೆ ಇಂತಹ ಪರಿಸ್ಥಿತಿಯಲ್ಲಿ ಬಸವಲಿಂಗಯ್ಯನ ಎಡಗಣ್ಣಿನಲ್ಲಿ ನೋವು ಕಾಣಿಸಿಕೊಂಡಿತು. ಅದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಹೋಯಿತು. ಮೊದಲಿಗೆ ಇದು ಕಣ್ಣುಬೇನೆ ಇರಬಹುದೆಂದು ತಿಳಿದು, ಅದನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಲಿಲ್ಲ. ಆದರೆ ಕಣ್ಣು ಕೆಂಪಾಗದೆ ಕಣ್ಣಿನಸುತ್ತ ನೋವು ಹೆಚ್ಚಾಗುತ್ತ, ನೋವಿನೊಂದಿಗೆ ಎಡಗಣ್ಣು ಮಂದವಾಗುತ್ತಿದ್ದಂತೆ ಅನ್ನಿಸತೊಡಗಿತು. ಇದರಿಂದಾಗಿ ಬಸವಲಿಂಗಯ್ಯನಿಗೆ ಹೆದರಿಕೆ ಪ್ರಾರಂಭವಾಯಿತು. ಇದನ್ನು ಹೆಂಡತಿ ಸಿದ್ಲಿಂಗಿಗೆ ಹೇಳಿದರೆ ಅದನ್ನು ನಂಬುವುದಿಲ್ಲ. ಆಗ ಬಸವಲಿಂಗನಲ್ಲಿ ಅಸಹಾಯಕತೆ

ಶುರುವಾಗುತ್ತದೆ. ಮಗುವಿನ ಕಾಯಿಲೆಗಿಂತ ತನ್ನ ನೋವೇ ಅಧಿಕವಾಯಿತು. ತನ್ನ ಕಷ್ಟವನ್ನು ಊರಿನ ಇತರ ಜನರೊಂದಿಗೆ ಹಂಚಿಕೊಂಡಾಗ, ಅದರಲ್ಲಿ ಯಾರೊ ಒಬ್ಬರು, ಸರ್ಕಾರಿ ಆಸ್ಪತ್ರೆಯಲ್ಲಿರುವ ಡಾ.ತಿಮ್ಮಪ್ಪನಿಗೆ ತೋರಿಸಲು ಹೇಳಿದರು.

ಸರ್ಕಾರಿ ಆಸ್ಪತ್ರೆಯೆಂದರೆ ದಿಕ್ಕು ದಿವಾಳಿ ಇಲ್ಲದವರು ಹೋಗುವ ಜಾಗ ಎಂದು ಬಸವಲಿಂಗಯ್ಯ ತಿಳಿದಿದ್ದನು. ಖಾಸಗಿ ವೈದ್ಯರು ಕೆಟ್ಟವರಿದ್ದಾರೆಂದು ವಿವರಿಸಿದಾಗ, ಧೈರ್ಯ ತಂದುಕೊಂಡು ಸರ್ಕಾರಿ ಆಸ್ಪತ್ರೆಗೆ ಹೋಗಲು ಬಸವಲಿಂಗಯ್ಯ ಸಿದ್ಧನಾಗುತ್ತಾನೆ. ಡಾ.ತಿಮ್ಮಪ್ಪ ಬಿಡುವಿಲ್ಲದ ಸರ್ಕಾರಿ ವೈದ್ಯರಾಗಿದ್ದರು. ಆದ್ದರಿಂದ ಅವರಲ್ಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಜನರು ಬಂದು ತೋರಿಸಿಕೊಂಡು ಹೋಗುತ್ತಿದ್ದರು. ಆಸ್ಪತ್ರೆಯಲ್ಲಿ ಡಾ.ತಿಮ್ಮಪ್ಪರನ್ನು ಭೇಟಿಯಾಗಿ ರೋಗಿಗಳು ಸರದಿಯಲ್ಲಿ ಸಾಲಾಗಿ ಕಾಯುತ್ತ ನಿಂತಿದ್ದರು. ಬಸಲಿಂಗಯ್ಯನ ಸರದಿ ಬಂದಾಗ ಡಾ.ತಿಮ್ಮಪ್ಪರನ್ನು ಭೇಟಿಯಾಗಿ, ತನಗೆ ಬಂದಿರುವ ಎಲ್ಲಾ ಕಷ್ಟಗಳನ್ನು ಹಂಚಿಕೊಳ್ಳುತ್ತಾನೆ. ಡಾ.ತಿಮ್ಮಪ್ಪನವರು ಬಸವಲಿಂಗಯ್ಯನಿಗೆ ವಿಶ್ವಾಸವನ್ನು ತುಂಬಿ, ಸರಿಯಾಗಿ ಪರೀಕ್ಷಿಸಿ ನೋಡಿದರು. ಬಸವಲಿಂಗಯ್ಯನ ದೃಷ್ಟಿಯ ಅಳತೆಯನ್ನು ಹಾಗೂ ಸ್ಪಷ್ಟತೆಯನ್ನು ನೋಡಿ, ಕಣ್ಣಿನ ನೋವಿಗೆ ಕಾರಣ ಹುಡುಕಿದರು. ನಂತರ ನಿನ್ನ ಕಣ್ಣು ಸರಿಹೋಗುತ್ತದೆ. ಆದರೆ ಅಪರೇಷನ್ ಆಗಬೇಕು ಎಂದು ಹೇಳಿದರು.

ಖಂಡಿತಾ ಸರಿಹೋಗುತ್ತಾ ಡಾಕ್ಟರ್‌ರೇ, ನಾನು ನಾಳೆ ಬರುತ್ತೇನೆಂದು ಹೇಳಿ ಬಸವಲಿಂಗಯ್ಯ ಹೊರಟು ಹೋಗಿ, ಮನೆಯಲ್ಲಿ ಹೆಂಡತಿಗೆ ವಿಷಯ ತಿಳಿಸಿ ನಂತರ ಮರುದಿನ ಆಸ್ಪತ್ರೆಗೆ ಬಂದು, ಅನುಭವಿ ವೈದ್ಯರಾದ ಡಾ.ತಿಮ್ಮಪ್ಪರವರನ್ನು ಭೇಟಿಯಾಗಿ ಆಪರೇಷನ್‌ಗೆ ಸಿದ್ಧವಾದನು. ಕೆಲವೇ ನಿಮಿಷಗಳಲ್ಲಿ ಅಪರೇಷನ್ ಮುಗಿಸಿದರು. ಬಸವಲಿಂಗಯ್ಯನ ಕೈ ಹಿಡಿದುಕೊಂಡು ಹೇಳಿದರು, ನೋಡು ಇದು ಸೂಕ್ಷ್ಮವಾದ ಶಸ್ತ್ರಚಿಕಿತ್ಸೆ, ನೀನು ಎರಡುವಾರ ತಲೆಗೆ ನೀರನ್ನು ಹಾಕಬೇಡ. ಹಾಕಿದರೆ ನಿನ್ನ ಕಣ್ಣು ಕೆಟ್ಟು ಹೋಗುವ ಅಪಾಯವಿದೆ ಎಂದು ಹೇಳಿ ಕಳಿಸಿದರು. "ಆದರೆ ಅವನು ಮನೆಗೆ ಹೋದ ಮೇಲೆ ಸಿದ್ಲಿಂಗಿ ದೊಡ್ಡರಾದ್ಧಾಂತವನ್ನೇ ಎಬ್ಬಿಸಿದಳು. ಆಕೆಗೆ ಅದು ಹೇಗೋ ತಿಮ್ಮಪ್ಪ ಹೊಲೆಯರೆಂಬದು ಗೊತ್ತಾಗಿತ್ತು. ತನಗೆ ಗೊತ್ತಿಲ್ಲದ ವಿಷಯ ಆಕೆಗೆ ಹೇಗೆ ತಿಳಿಯಿತೆಂದು ಬೆರಗಾದ. ತನ್ನನ್ನು ಮುಟ್ಟುವ ಮುನ್ನ ಅವರು ತಮ್ಮ ಜಾತಿಯ ಬಗ್ಗೆ ಒಂದು ಮಾತು ಹೇಳಿದ್ದರೆ ಒಳ್ಳೆಯದಿತ್ತೆಂದು ಕ್ಷಣ ಅನ್ನಿಸಿತು."[೭]

ಈ ವಿಷಯವನ್ನು ಊರಲ್ಲಿ ಯಾರಿಗೂ ಹೇಳಬಾರದೆಂದು ಗಂಡ-ಹೆಂಡತಿ ತೀರ್ಮಾನಿಸಿದರು. ಸಿದ್ಲಿಂಗಿ ಸೂತಕವನ್ನು ಪರಿಹರಿಸಲು ಬಸವಲಿಂಗಯ್ಯನ ಮೈ ತೊಳೆಯಲು ಬಿಸಿ ನೀರಿನಿಂದ ಸ್ನಾನ ಮಾಡಿಸಿದಳು. ನಂತರ ಎರಡು ದಿನ ಕಣ್ಣು ನೋವು ಕಾಣಿಸಲಿಲ್ಲ. ಆದರೆ ಮರುದಿನ ಕಣ್ಣು ನೋವು ಪ್ರಾರಂಭಿಸುತ್ತದೆ. ಬಸವಲಿಂಗಯ್ಯ ಜಾತಿ ಕೆಡಿಸಿದನೆಂದು ಡಾ.ತಿಮ್ಮಪ್ಪನವರ ಮೇಲೆ ಬಸವಲಿಂಗಯ್ಯ ಕೋಪಕೊಂಡು, ಬೇರೆ ವೈದ್ಯರ ಬಳಿಹೋಗಿ ಎಷ್ಟು ತೋರಿಸಿದರೂ ಕಣ್ಣು ನೋವು ಕಡಿಮೆಯಾಗುವುದಿಲ್ಲ. ಬಸವಲಿಂಗಯ್ಯ ಡಾ.ಚಂದ್ರಪ್ಪನವರ ಬಳಿ ಹೋದಾಗ ನಡೆದ

ವಿಷಯ ತಿಳಿದ ಅವರು ಡಾ. ತಿಮ್ಮಪ್ಪನವರು ದೊಡ್ಡ ವೈದ್ಯರು. ಅಂತವರಿಂದ ಆಗದ್ದು ನನ್ನಿಂದ ಸಾಧ್ಯವಿಲ್ಲ. ಬೇರೇಲ್ಲೂ ಹೋಗದೆ ಅವರಲ್ಲಿಗೆ ಹೋದರೆ ಮಾತ್ರ ನಿನ್ನ ಕಣ್ಣು ವಾಸಿಯಾಗುತ್ತದೆ ಎಂದು ಹೇಳುತ್ತಾರೆ. ನಂತರ ಬಸವಲಿಂಗಯ್ಯ ನಡೆದ ವಿಷಯವನ್ನು ಡಾ.ತಿಮ್ಮಪ್ಪನವರಲ್ಲಿ ಬಂದು ಹೇಳಿಕೊಳ್ಳುತ್ತಾನೆ. ಆಗ ತಿಮ್ಮಪ್ಪನರು ನಿನ್ನ ಮುಟ್ಟಿದ್ದು ಡಾಕ್ಟರ್‌ನಾಗಿ ಅದು ನನ್ನ ತಪ್ಪಲ್ಲವೆಂದು ಹೇಳುವುದರಲ್ಲಿ ಮೇಲ್ವರ್ಗವರು ಸೃಷ್ಟಿಸಿದ ಅಸ್ಪೃಶ್ಯತೆಯಿಂದಾಗಿ ಮನುಷ್ಯತ್ವವನ್ನೇ ಮರೆಸಿಬಿಟ್ಟದೆ ಎಂಬುದರ ದಲಿತ ಸಂವೇದನೆಯಾಗಿ ಈ ಮುಟ್ಟಿಸಿಕೊಂಡವನು ಕಥೆಯು ವಿವರಿಸುತ್ತದೆ.

ಗಿರೀಶ ಜಕಾಪುರೆಯವರು 'ಸದಾ ಪ್ರವಹಿಸುವ ಕಥೆಗಳು' ಎಂಬ ಮರಾಠಿಯ ಪ್ರಸಿದ್ಧ ಕತೆಗಾರರ ಕತೆಗಳನ್ನು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ರಥಯಾತ್ರೆ' ಎಂಬ ಕಥೆಯನ್ನು ಮಹೆಬೂಬ ಇಮಾಮ್‌ಸಾಬ ಜಿಡ್ಡೆಯವರು ಕನ್ನಡಿಕರಿಸಿದ್ದಾರೆ. ಮೂಲದಲ್ಲಿ ಶರಣಕುಮಾರ ಲಿಂಬೋಳಿಯವರು ಮರಾಠಿಯಲ್ಲಿ 'ರಥಯಾತ್ರೆ' ಎಂಬ ಹೆಸರಿನಿಂದಲೇ ಈ ಕಥೆಯನ್ನು ಬರೆದಿದ್ದಾರೆ. ಈ ಕಥೆಯು ಕನ್ನಡದ ಎಸ್.ದಿವಾಕರ್‌ರವರು ಸಂಪಾದಿಸಿರುವ 'ಶತ ಮಾನದ ಸಣ್ಣ ಕತೆಗಳು' ಎಂಬ ಕಥಾ ಸಂಕಲನದಲ್ಲಿರುವ ಪಿ.ಲಂಕೇಶರವರು ಬರೆದಿರುವ 'ಮುಟ್ಟಿಸಿಕೊಂಡವನು' ಎಂಬ ಕತೆಯಂತೆ. ಆಳವಾದ ಗಟ್ಟಿಯಾದ ದಲಿತ ಸಂವೇದನೆಗಳನ್ನು ಒಳಗೊಂಡಿರುತ್ತದೆ. ಇದು ಸಮಾಜದಲ್ಲಿರುವ ಜಾತಿ ವ್ಯವಸ್ಥೆಯನ್ನು ಕೇಂದ್ರಿಕರಿಸಿ ಬರೆಯಲ್ಪಟ್ಟಿರುತ್ತದೆ. "ಹಿಂದೂ ಧರ್ಮ ಬ್ರಾಹ್ಮಣರದ್ದಾಗಿರುವಂತೆಯೇ ಶೂದ್ರರದ್ದೂ ಆಗಿದೆ. ಹಿಂದೂಗಳ ದೇವಾಲಯಗಳಲ್ಲಿ ನಾಯಿ-ಬೆಕ್ಕುಗಳು ಹೋಗಬಹುದು... ಆದರೆ ಅಸ್ಪೃಶ್ಯರು ಯಾಕೆ ಹೋಗುವಂತಿಲ್ಲ..? ಅಸ್ಪೃಶ್ಯರ ನೆರಳಿನಿಂದ ಒಂದು ವೇಳೆ ಪರಮೇಶ್ವರನಿಗೆ ಮೈಲಿಗೆ ಆಗುತ್ತದೆ ಎಂದರೆ ಅವನೆಂಥ ದೇವರು...? ಬಾಬಾ ಸಾಹೇಬ ಅಂಬೇಡ್ಕರರು ಮನುಷ್ಯರಿಗೆ ಮನುಷ್ಯತ್ವವನ್ನು ಕಲಿಸಲು ಸತ್ಯಾಗ್ರಹ ಮಾಡಿದರು."[೮]

ದಲಿತರ ಮೇಲೆ ಜಾತಿ, ಧರ್ಮದ ಹೆಸರಿನಲ್ಲಿ ಶೋಷಣೆಯನ್ನು ಮಾಡುತ್ತ, ಅವರಿಗೂ ನಮ್ಮಂತೆ ಮನಸ್ಸಿರುತ್ತದೆ, ಅವರು ಮನುಷ್ಯರೆಂಬುವುದನ್ನೇ ಮರೆತು ಪುರೋಹಿತಶಾಹಿಗಳು ವರ್ಣವ್ಯವಸ್ಥೆಯನ್ನು ಸೃಷ್ಟಿ ಮಾಡಿದ್ದಾರೆ. ಧರ್ಮವೆಂದರೆ ಪರರನ್ನು ತನ್ನಂತೆ ಕಾಣವುದಾಗಿದೆ. ಅದು ಬಿಟ್ಟು ಸಮಾಜದಲ್ಲಿ ಅಶಾಂತಿಯನ್ನು ಎಬ್ಬಿಸಲು ಮನುಷ್ಯ-ಮನುಷ್ಯನನಡುವೆ ವೈಷಮ್ಯ ಬೆಳೆಸಲು ವರ್ಣವ್ಯಸ್ಥೆಯನ್ನು ಹುಟ್ಟುಹಾಕಲಾಗಿದೆ. ಇದರಿಂದಾಗಿ ದಲಿತರು ಮಾನಸಿಕ ವೇದನೆಯಲ್ಲಿ ಬದುಕುತ್ತಿದ್ದಾರೆ.

ದಲಿತರ ಸಂಗತಿಯನ್ನು ಈ ಕಥೆಯು ನಿರೂಪಿಸುತ್ತದೆ. ಅದರಂತೆ ಕನ್ನಡದ ಶ್ರೇಷ್ಠ ಲೇಖಕರಲ್ಲಿ ಒಬ್ಬರಾದ ಪಿ.ಲಂಕೇಶರವರು ಬರೆದಿರುವ ಮುಟ್ಟಿಸಿಕೊಂಡವನುಎಂಬ ಕಥೆಯು ಜಾತಿ ವ್ಯವಸ್ಥೆಯ ನಿರ್ಮಾಣದಿಂದಾಗಿ ಸಮಾಜದಲ್ಲಿ ಉಂಟಾಗಿರುವ ಮಾನಸಿಕ ಸ್ಥಿತಿಯು ಎಂತಹ ಅನಾಹುತಕ್ಕೆ ಕೊಂಡ್ಯೋಯುತ್ತದೆ ಎಂಬುವುದನ್ನು ಸಾದರಪಡಿಸುತ್ತದೆ. ದಲಿತರು ಪಡುತ್ತಿರುವ ಸಾಮಾಜಿಕ ಅಸಮಾನತೆಯ ನೋವುಗಳನ್ನು, ಅವರ ಸ್ಥಿತಿಗತಿಗಳನ್ನು ಈ ಎರಡೂ ಕತೆಗಳು ದಲಿತ

ಸಂವೇದನೆಯ ನೆಲೆಯಲ್ಲಿ ಅಭಿವ್ಯಕ್ತಿಗೊಳಿಸುತ್ತವೆ. ದಲಿತರು ಸ್ವತಂತ್ರವಾಗಿ ಸ್ವಾಭಿಮಾನದಿಂದ ಬದುಕು ನಡೆಸಿದಾಗ ಮಾತ್ರ 'ಸಮಾನತೆ' ಎಂಬ ಹಕ್ಕಿಗೆ ಅರ್ಥ ಬರುತ್ತದೆ. ಶೋಷಿಸುತ್ತಿರುವ ಬಂಡವಾಳಶಾಹಿಗಳ ಹಾಗೂ ಪುರೋಹಿತಶಾಹಿಗಳ ದುಷ್ಟನೀತಿಯನ್ನು ಅಂಬೇಡ್ಕರವಾದದ ನೆಲೆಯಲ್ಲಿ ಈ ಕತೆಗಳು ಖಂಡಿಸುತ್ತವೆ.

ಎಚ್.ಎಸ್.ಬೇನಾಳರವರು ಬರೆದಿರುವ 'ಬಹಿಷ್ಕಾರ' ಎಂಬ ಕನ್ನಡ ಕಥಾ ಸಂಕಲನದಲ್ಲಿರುವ 'ಬಹಿಷ್ಕಾರ' ಎಂಬ ಕಥೆಯು ಕರ್ನಾಟಕ ರಾಜ್ಯದ ದಲಿತ ಸಮುದಾಯದ ಬದುಕು, ಬವಣೆಗಳನ್ನು ಅತ್ಯಂತ ವಿಶಿಷ್ಟವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಈ ಕಥೆಯಲ್ಲಿ ದಲಿತರ ಬದುಕಿನ ನೋವಿನ ಬಿಸಿಯಿದೆ. ಅವರ ಸಂಕಟಗಳ ಸರಮಾಲೆಯಿದೆ. ಅದರಂತೆ ಮಾನವೀಯತೆಯನ್ನು ಸಾರುವ ಸಂಸ್ಕಾರವು ಇದೆ. 'ಬಹಿಷ್ಕಾರ' ಎಂಬ ಕಥೆಯ ಶೀರ್ಷಿಕೆಯೇ ನಮ್ಮನ್ನು ಚಿಂತನೆಯ ಕಡೆಗೆ ಆಲೋಚಿಸುವಂತೆ ಮಾಡುತ್ತದೆ. ಶೋಷಿತ ಸಮುದಾಯದಲ್ಲಿರುವವರ ಎದೆ ನೋವುಗಳನ್ನು ಈ ಕತೆಯು ತೆರೆದಿಡುತ್ತದೆ. ಹಾಗೂ ಮಾನವೀಯ ಅಂಶಗಳನ್ನು ಅನ್ವೇಷಣೆ ಮಾಡಿ ಈ ಕತೆಯು ದಾಖಲಿಸಿರುವುದು ಈ ಕತೆಗೆ ಮಹತ್ವವನ್ನು ತಂದುಕೊಡುತ್ತದೆ. ದಲಿತರನ್ನು ಜಾತಿನಿಂದನೆಯಿಂದ ನೋಯಿಸಿ, ಊರಿನಿಂದ ಬಹಿಷ್ಕಾರ ಹಾಕುವುದು ಈ ಕಥೆಯ ಮುಖ್ಯ ಕಥಾವಸ್ತುವಾಗಿದೆ.

ಮನುಷ್ಯ ಮನುಷ್ಯರ ನಡುವೆ ಮಾನಸಿಕ ದೂರವನ್ನು ಸೃಷ್ಟಿಸಿರುವ ಈ ಜಾತಿವ್ಯವಸ್ಥೆಯು ಒಂದು ಕೆಳ ಸಮುದಾಯದವರನ್ನು ಹೇಗೆ ಅದು ಅವಮಾನ ಮಾಡಿ, ಅದರಿಂದ ಅವರು ಜೀವನ ಸಾಗಿಸುವುದಕ್ಕೂ ಆಗದೆ ಅಸಹಾಯಕರಾಗಿ ಗುಲಾಮರಂತೆ ಬದುಕಬೇಕಾಗಿರುವ ದುಸ್ಥಿತಿಯನ್ನು ಈ ಕತೆಯು ವಿವರಿಸುತ್ತದೆ. ಮೇಲ್ವರ್ಗದವರು ಕೆಳಸಮುದಾಯವರ ಮೇಲೆ ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಶೋಷಣೆಯನ್ನು ಮಾಡುತ್ತ ದಲಿತರನ್ನು ಪಶುಗಳಿಗಿಂತಲೂ ಕೀಳಾಗಿ ನೋಡುತ್ತಿರುವ ಅವರಿಗೆ, ಸಾಮಾಜಿಕ ಸಮಾನತೆ ನೀಡದೆ, ಸಂವಿಧಾನದ ಕಾನೂನುಗಳನ್ನು ಉಲ್ಲಂಘಿಸಿ ಅವರ ಸಂಪತ್ತಿನ ದರ್ಪದಿಂದ ದಲಿತರ ಮೇಲೆ ಮಾನಸಿಕವಾಗಿ, ದೈಹಿಕವಾಗಿ, ದಂಡಿಸುತ್ತ ಅವರನ್ನು ನಿರಂತರ ಶೋಷಣೆಯಲ್ಲಿ ಮುಳುಗಿಸಿದ್ದಾರೆ. ಅವರ ಶ್ರಮವನ್ನು ಮಾತ್ರ ತೆಗೆದುಕೊಂಡು ಅವರನ್ನು ಮಾತ್ರ ಸಾಮಾಜಿಕ ವ್ಯವಸ್ಥೆಯಲ್ಲಿ ಬಹಿಷ್ಕರಿಸಿ ಬದುಕುತ್ತಿರುವ ಸ್ವಾತಂತ್ರ ಭಾರತದ ದುರಂತವೂ ಆಗಿದೆ.ಯಾವ ಕಾನೂನುಗಳು ಅವರಿಗೆ ಸಹಾಯವನ್ನು ನೀಡದೆ, ಇನ್ನೂ ದಲಿತರು ಅವಮಾನಗಳಿಂದ, ಅನ್ಯಾಯವನ್ನು ಸಹಿಕೊಳ್ಳುತ್ತ ತಮ್ಮ ನೋವಿನ ಧ್ವನಿ ಎತ್ತಲೂ ಸಾಧ್ಯವಿಲ್ಲದೆ ಅಸಹಾಯಕ ಸ್ಥಿತಿಯಲ್ಲಿ ಸವರ್ಣೀಯರು ಇದ್ದಾರೆ.

ಅವರ ಮನೆಯ ಬಾಗಿಲಿಗೆ ಗುಲಾಮರಾಗಿ ಬದುಕಬೇಕಾಗಿರುವ ಕೆಟ್ಟ ಪರಿಸ್ಥಿತಿಯನ್ನೇ ಈ 'ಬಹಿಷ್ಕಾರ' ಕಥೆಯಲ್ಲಿ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳಿಂದ, ದಲಿತರ ಒಳನೋವುಗಳನ್ನು ಈ ಕಥೆಯ ಮೂಲಕ ದಲಿತ ಸಂವೇದನೆಗಳನ್ನು ಕಟ್ಟಿಕೊಟ್ಟಿದ್ದಾರೆ. 'ಬಹಿಷ್ಕಾರ' ಕಥೆಯು ಮನಮಿಡಿಯುವ ಕಥೆಯಾಗಿದೆ. ಬಿಸಿಯೂಟದ ಯೋಜನೆಯ ಅಡುಗೆ ಸಹಾಯಕಿಯಾಗಿ

ನೇಮಕಗೊಂಡ ದಲಿತ ಮಹಿಳೆ ಲಕ್ಷ್ಮಮ್ಮ ಮತ್ತು ಶಿವನಗರ ಗ್ರಾಮದ ೩೭ ದಲಿತ ಕುಟುಂಬಗಳು ಎದುರಿಸಿರುವ ಸಾಮಾಜಿಕ ಬಹಿಷ್ಕಾರದ ಘಟನೆಗಳನ್ನು ಈ ಕತೆಯು ಅನಾವರಣಗೊಳಿಸುತ್ತದೆ. ೨೦೧೭ರ ಇಸ್ವಿಯಲ್ಲಿ ನಡೆದಂತ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ 'ಶಿವನಗರ' ಎಂಬ ಗ್ರಾಮದಲ್ಲಿ ೩೭ ದಲಿತ ಕುಟುಂಬಗಳನ್ನು ಊರಿನಿಂದ 'ಬಹಿಷ್ಕಾರ' ಹಾಕಿರುತ್ತಾರೆ.

ಇದನ್ನೇ ಕಥೆಗಾರರು ತಾವು ಶಿಕ್ಷಕರಾಗಿ ತಮ್ಮ ಗೆಳೆಯ ಶಿಕ್ಷಕರೊಬ್ಬರಿಗೆ ಕತೆಯನ್ನು ಹೇಳುತ್ತ, ಆ ದಲಿತ ಸಮುದಾಯದ ಚರಿತ್ರೆಯ ನೋವಿನ ಸಂಗತಿಗಳನ್ನು ಹಂಚಿಕೊಳ್ಳುತ್ತಾರೆ. ಗುಂಪು ಗುಂಪಾಗಿ ಅಸಹಾಯಕರಾಗಿ ನಿಂತಿದ್ದ ದಲಿತರನ್ನು ಊರ ಮುಂದಿನ ಮೈಲಾರಲಿಂಗನ ಗುಡಿ ಕಟ್ಟಿಮ್ಯಾಲ ನಿಂತುಕೊಂಡು, ಕ್ವಾರಿ ಮೀಸೆ ತಿರುವಿಕೊಂಡು, ಜರದಾರಿರುಮಾಲು ಸುತ್ತಿದ ವ್ಯಕ್ತಿ ಜೋರು ಧ್ವನಿಯಲ್ಲಿ ಗದರಿಸುತ್ತ, ಮುಂದೆ ನಿಂತ ಜನಗಳಿಗೆ ನಡಿರ್ಲೆ ಮಕ್ಕಳ್ರಾ ಹೊಲದಾಗ ತೋಟದಲ್ಲಿ ಬಾಳೆ ಸಸಿ ನೆಡಾಕಾ ಗುಂಡಿ ತೆಗೆದು ಕಸಾ ಮ್ಯಾಗ ಹಾಕಲಾಕ ಎಂದು ಹೇಳುತ್ತಿರುವಾಗ ಆ ದಲಿತರು ಆಯ್ತು ದಣ್ಯಾರಾ ನಾವು ಬರತೀವಿ, ಎಂದು ಗುದ್ದಲಿ, ಸಲಿಕೀ, ಬುಟ್ಟಿ ಹೆಗಲ ಮೇಲೆ ಇಟ್ಟುಕೊಂಡು ಹೋಗುವ ಘಟನೆಯನ್ನು ಕಂಡು ಕಥೆಗಾರರು ಅದಕ್ಕೆ ಕಾರಣವಾದ ಸಂಗತಿಯನ್ನು ವಿವರಿಸುತ್ತಾರೆ. ಶಾಲೆಯ ಅಡುಗೆ ಸಹಾಯಕಿಯಾಗಿ ನೇಮಕಗೊಂಡ ದಲಿತರ 'ಲಕ್ಷ್ಮಮ್ಮ' ನನ್ನು ಮೇಲ್ವರ್ಗದವರು ನೀನು ಮಾಡಿದ ಊಟವನ್ನು ನಮ್ಮ ಮಕ್ಕಳು ಊಟ ಮಾಡಬೇಕೆ...? ನೀನು ನಿನ್ನ ಕೆಲಸವನ್ನು ಬಿಟ್ಟುಬಿಡು ನಿನ್ನ ಜಾತಿಗೆ ಸರಿಯಾದ ಕೆಲಸವನ್ನು ನಾವು ಕೊಡುತ್ತೇವೆ ಎಂದು ಹೇಳುತ್ತಾರೆ.

ಆದರೆ ಅದಕ್ಕೆ 'ಲಕ್ಷ್ಮಮ್ಮ' ಒಪ್ಪದೆ ಇದ್ದಾಗ ಇಡೀ ದಲಿತ ಸಮುದಾಯದ ಕುಟುಂಬಗಳನ್ನು ಊರಿನಿಂದ ಬಹಿಷ್ಕಾರ ಹಾಕುತ್ತಾರೆ. ಇದರಿಂದ ನೊಂದುಕೊಂಡು ಆ ಊರಲ್ಲಿ ಬದುಕಲು ಸಾಧ್ಯವಾಗದೆ ಈ ಘಟನೆಯನ್ನು ವಿರೋಧಿಸಿ ಆ ಊರಿನ ೩೭ ದಲಿತ ಕುಟುಂಬಗಳು ಕೇರಿಯ ಮನೆ, ಮಕ್ಕಳನ್ನು ಕಟ್ಟಿಕೊಂಡು ಬೆಂಗಳೂರಿಗೆ ಹೋಗಿ ಅಲ್ಲಿನ ಸ್ವಾತಂತ್ರ್ಯ ಉದ್ಯಾನವನದಲ್ಲಿ ಸತ್ಯಾಗ್ರಹವನ್ನು ಮಾಡುತ್ತಾರೆ. ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳು ಬಂದು ಈ ವಿಷಯ ತಿಳಿದು, ನಿಮ್ಮ ಊರಿನಲ್ಲಿ ನಿಮಗೆ ಸ್ವತಂತ್ರತೆಯಿಂದ ಬಾಳಲು ನಿಮಗೆ ಭೂಮಿ ಕೊಡುತ್ತೇವೆ. ೧೨ ಸಾವಿರ ರೂಪಾಯಿ ನೀಡುತ್ತೇವೆ. ಬೀಸಲು ಗಿರಣಿ ಕೊಡುತ್ತೇವೆ. ಹೀಗೆ ಹತ್ತಾರು ಭರವಸೆಯ ನೀಡಿ ಅಲ್ಲಿಂದ ಶಿವನಗರಕ್ಕೆ ದಲಿತ ಕುಟುಂಬಗಳನ್ನು ಕಳಿಸುತ್ತಾರೆ. ಆದರೆ ದಿನ, ತಿಂಗಳು ಕಳೆದರೂ ಯಾರೂ ಇವರ ಕಷ್ಟಕ್ಕೆ ಬರುವುದಿಲ್ಲ. ಈ ಕುಟುಂಬಗಳ 'ಬಹಿಷ್ಕಾರ' ಹಾಕಿದಮೇಲ್ವರ್ಗದವರ ಮನೆಗೇ ಅನ್ನಕ್ಕಾಗಿಕೂಲಿ ಹೋಗುತ್ತಾರೆ.

"ನಾನು ಬೇಯ್ಸಿದ್ದ ಕೂಳ ಮಕ್ಕಳ ತಿನ್ನಬಾರ್ದು ಅಂತ ದೊಡ್ ಜನ ನನ್ನ ಕೆಲ್ಸ ಬುಡು ಅಂದ್ರು, ಆಗಲ್ಲಾ ಅಂದಿದ್ಕೆ ಊರಿಂದ ಹೊರಗಾಕವ್ರೆ, ಎನ್ನುತ್ತಾಳೆ. ಲಕ್ಷ್ಮಮ್ಮ 'ನಾವು ಊರೊಳಗೆ ಕಾಣುಸ್ಕಳಂಗಿಲ್ಲ, ಊರೋರೊಂದ್ಗೆ ಮಾತಾಡಂಗಿಲ್ಲ, ಅಂಗ್ಡೀಲಿ ಸಾಮಾನ್ ಕೊಡ್ತಿಲ್ಲ, ಜೋಳನಾ

ಗಿರಣಿಗೆ ಓಗಂಗಿಲ್ಲ. ನಮ್ಮನ್ನ ಕೂಲಿಗೂ ಕರೀತಿಲ್ಲ. ಹಿಂಗಾದ್ರೆ ನಾವು ಜೀವ್ನ ಮೊಡೋದೆಂಗೆ ಎನ್ನುವ ಆಕೆಗೆ ಇದರಾಚೆಗಿನ ಯಾವುದೇ ತಿಳುವಳಿಕೆ ಇಲ್ಲ." ಇಂತಹ ಸಾಮಾಜಿಕ ಅಸಮಾನತೆಯನ್ನು ಕಂಡು ಕಥೆಗಾರರು ಒಂದು ಸ್ವತಂತ್ರ ರಾಷ್ಟ್ರದಲ್ಲಿ ಸಂವಿಧಾನಾತ್ಮಕ ಕಾನೂನುಗಳ ಅಡಿಯಲ್ಲಿ ಬದುಕು ನಡೆಸುತ್ತಿರುವ ಸಮಾಜದಲ್ಲಿ ಸಾಮಾಜಿಕ ಅಸಮಾನತೆಯನ್ನು ಮತ್ತು ಅಸ್ಪೃಶ್ಯತೆಯನ್ನು ಕಂಡು ಖಂಡಿಸಿದ್ದಾರೆ.

ದಲಿತ ಸಮುದಾಯಗಳಿಗೆ ಸಹಾಯವನ್ನು ಮಾಡದ ಅಧಿಕಾರಿಗಳು ಶೋಷಣೆಯನ್ನು ಮಾಡುತ್ತಿರುವ ಬಂಡವಾಳಶಾಹಿಗಳು, ಕಾನೂನು ಪರಿಪಾಲನೆ ಮಾಡದಿರುವ ರಕ್ಷಣಾ ಇಲಾಖೆಗಳು, ಇಂತವರು ಮಧ್ಯೆ ದಲಿತರು, ದಮನಿತರು ಜೀವನ ನಡೆಸುವ ಸುಮಾರ್ಗವಾದರೂ ಯಾವುದು..? ಅವರಿಗೆ ಸಾಮಾಜಿಕ ಸಮಾನತೆ, ಆರ್ಥಿಕ ಸ್ವಾವಲಂಬನೆ ದಕ್ಕುವುದಾದರೂ ಯಾವಾಗ? ದಲಿತ ಬಲಿಷ್ಠನಾಗಿ ಇತರರಂತೆ ನೆಮ್ಮದಿಯಿಂದ ತಮ್ಮ ಬದುಕನ್ನು ನಡೆಸುವ ದಿನ ಬರುವುದಾದರು ಹೇಗೆ..? ಅವರ ಶೋಷಣೆಯ ತಾಳ್ಮೆಗೆ ಅಂತ್ಯವೆಂಬುದಿಲ್ಲವೇ...? ಎಂಬ ಇತ್ಯಾದಿ ಪ್ರಶ್ನೆಗಳನ್ನು ಈ 'ಬಹಿಷ್ಕಾರ' ಕಥೆಯು ಓದುಗರ ಹೃದಯದಲ್ಲಿ ಹುಟ್ಟಿಸುತ್ತದೆ. ಮೇಲ್ವರ್ಗದವರ ಮನಸ್ಥಿತಿ ಬದಲಾಗಿ, ದಲಿತರನ್ನು ತಮ್ಮಂತೆ ಕಂಡು ಅವರಿಗೆ ಆರ್ಥಿಕ ಸಮಾನತೆ ನೀಡಬೇಕು. ದಲಿತರಿಗೂ ಸಮಾನತೆಯಲ್ಲಿ ಬದುಕುವ ಹಕ್ಕಿದೆ. ಅವರಿಗೆ ಅವರದೆಯಾದ ಸ್ಥಾನ ಮಾನಗಳು ದೊರೆಯಬೇಕು.ಉಳ್ಳವರ ದರ್ಪದಿಂದ ದಲಿತರು ವಿಮುಕ್ತಿಯನ್ನು ಪಡೆಯಬೇಕು. ದೇಶದ ಅಭಿವೃದ್ಧಿಗೆ ಕಳಂಕವಾಗಿ ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸುತ್ತಿರುವ ಈ 'ಜಾತಿ ವ್ಯವಸ್ಥೆ' ಕೊನೆಯಾಗಬೇಕು. ಮನುಷ್ಯ ಮನುಷ್ಯನನ್ನು ಪ್ರೀತಿಸಬೇಕು ಎಂಬ ಆಶಯವನ್ನು ಈ ಕಥೆ ವ್ಯಕ್ತಪಡಿಸುತ್ತದೆ. ಅಷ್ಟೇ ಅಲ್ಲದೆ ದಲಿತ ತಳಸಮುದಾಯದ ನೋವುಗಳನ್ನು ಸೂಕ್ಷ್ಮವಾಗಿ ಕಥೆಗಾರರು ತಮ್ಮ ಸಂವೇದನೆಗಳ ಮೂಲಕ ಇಡೀ ದಲಿತ ಕುಲದ ಚಿತ್ರಣವನ್ನು 'ಬಹಿಷ್ಕಾರ' ಕಥೆಯ ಮೂಲಕ ಪ್ರತಿಬಿಂಬಿಸಿದ್ದಾರೆ.

ಡಾ.ವಿಜಯ.ಆರ್.ಕಾಂಬಳೆಯವರು ಕನ್ನಡನುವಾದ ಮಾಡಿರುವ 'ಮನುಷ್ಯರನ್ನು ಹುಡುಕುತ್ತ. ಎಂಬ ಮರಾಠಿ ದಲಿತ ಕಥೆಗಳನ್ನು ಮರಾಠಿಯ ಕಥೆಗಾರರಾದ ಡಾ.ಬಾಬುರಾವ್ ಗಾಯಕವಾಡ್‌ರವರು ಬರೆದಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಮಣ್ಣುಗೂಡಿದ ಅನ್ನದಗಳು' ಎಂಬ ಕಥೆಯು ಕನ್ನಡದ ಎಚ್.ಎಸ್.ಬೇನಾಳರವರು ಬರೆದಿರುವ 'ಬಹಿಷ್ಕಾರ' ಎಂಬ ಕನ್ನಡ ಕಥಾ ಸಂಕಲನದಲ್ಲಿರುವ 'ಬಹಿಷ್ಕಾರ' ಕತೆಯಂತೆ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿ ವ್ಯವಸ್ಥೆಯಿಂದಾಗಿ ಸಮಾಜದಲ್ಲಿ ಮೇಲ್ವರ್ಗ ಮತ್ತು ಕೆಳವರ್ಗಗಳೆಂದು ಕೆರೆಯಲ್ಪಟ್ಟು, ಅದರಿಂದಾಗಿ ಉಳ್ಳವರಾದ ಮೇಲ್ವರ್ಗದವರು ಕೆಳವರ್ಗದವರ ಮೇಲೆ ಶೋಷಣೆ ಮಾಡುತ್ತಿರುವುದನ್ನು ಇವೆರಡೂ ಕಥೆಗಳು ದಲಿತ ಸಂವೇದನೆಯ ಒನ್ನೆಲೆಯಲ್ಲಿ ದಲಿತರು ಪಡುತ್ತಿರುವ ಜಾತಿವ್ಯವಸ್ಥೆಯ ನಿಂದನೆಗಳನ್ನು ಬಡತನದ ನೋವುಗಳನ್ನು ಅಭಿವ್ಯಕ್ತಗೊಳಿಸುತ್ತವೆ.

ಸಮಾಜದಲ್ಲಿ ಸ್ಪೃಶ್ಯ ಜಾತಿಯರೆಂಬ ಮೇಲ್ವರ್ಗ ತಮ್ಮ ಏಳ್ಗಿಗಾಗಿ ಮಾತ್ರ ಕೆಳವರ್ಗದ ದಲಿತರನ್ನು ಬಳಸಿಕೊಂಡು, ಅವರಿಗೆ ಆರ್ಥಿಕ ಶೋಷಣೆಯನ್ನು ಮಾಡಿ ಸಮಾಜದಲ್ಲಿ ಅಸಮಾನತೆಯನ್ನು ಸೃಷ್ಟಿಸಿ ಬಡವ-ಶ್ರೀಮಮತರೆಂಬ ತಾರತಮ್ಯದಲ್ಲಿ ದಲಿತರಿಗೆ ಅನ್ಯಾಯ ಮಾಡುತ್ತಿದ್ದಾರೆ. ಕೆಳ ದರ್ಜೆಯ ಕೆಲಸಗಳಿಗೆ ಮಾತ್ರ ದಲಿತರನ್ನು ಬಳಸಿಕೊಂಡು ಮತ್ತೆ ಅವರನ್ನು ಊರಿನಿಂದಾಚೆ ಇಟ್ಟಿರುತ್ತಾರೆ. ಮೇಲ್ವರ್ಗದವರು ಹೇಳಿದಂತೆ ದಲಿತರು ಕೇಳಬೇಕು. ಅವರ ಮುಂದೆ ತಲೆ ತಗ್ಗಿಸಿಕೊಂಡು ನಡೆಯಬೇಕು. ದಲಿತರನ್ನು ಮನುಷ್ಯರಂತೆ ಕಾಣದೆ ಅವರು ಮುಟ್ಟಲು ಅಯೋಗ್ಯರೆಂಬ ಭಾವನೆಯ ವಿಷ ಬೀಜವನ್ನು ಈ ಸಮಾಜದಲ್ಲಿ ಬಿತ್ತನೆಮಾಡಿದ್ದು ಜಾತಿವ್ಯವಸ್ಥೆ. ಇದರಿಂದಾಗಿ ದಲಿತರು ಸಮಾಜದಲ್ಲಿ ಅವಮಾನಗಳನ್ನು ಅನುಭವಿಸಿಕೊಂಡು ಸಮಾಜದ ವ್ಯವಸ್ಥೆಯಲ್ಲಿ ಪ್ರತ್ಯೇಕವಾಗಿ ಬದುಕುವಂತಾಗಿದೆ. ಈ ತಾರತಮ್ಯದ ಜಾತಿ ವ್ಯವಸ್ಥೆಯಿಂದ ಮನುಷ್ಯತ್ವವನ್ನು ಕಳೆದುಕೊಂಡು ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಮನುಷ್ಯನೆಂದು ಒಪ್ಪಿಕೊಳ್ಳದ ಸ್ಥಿತಿ ನಿರ್ಮಾಣವಾಗಿರುತ್ತದೆ.

ಇದೆಲ್ಲದಕ್ಕೂ ಕಾರಣ ಪುರೋಹಿತಶಾಹಿಗಳು ನಿರ್ಮಿಸಿದ ಜಾತಿ ವ್ಯವಸ್ಥೆ "ಆ ಮಠದಲ್ಲಿನ ಮುದುಕ ಪೂಜಾರಿಯು ಕಟ್ಟಿಗೆಯನ್ನು ಊರುತ್ತ ಬರುತ್ತಿದ್ದನು. ಅವನು ನನ್ನನ್ನು ನೋಡುತ್ತಿದ್ದಂತೆಯೇ" ಇಂವ ಯಾರು...? ಮೂಲ್ಯಾಗಯಾಕ ಕುಂತಾನ...? ಹೊಲೆ ಮಾದಿಗರ ಹುಡುಗ ಅದನ ಏನ....? ಎಂದು ಕೇಳಿದನು..... ಆವಾಗ ಹುಡುಗರು 'ಹೌದು' 'ಹೌದು' ಎಂದು ಕೂಗಿದರು. ಭೋಸಡಿ ಮಗನೇ... ಮಠಾ ಎಲ್ಲಾ ಹಾಳಿಗಿ ಹಚ್ಚದಲ್ಲೋ...? ಎಂದು ಹಲ್ಲು ಕಡಿಯುತ್ತ ಕಣ್ಣುಗಳನ್ನು ಅಗಲಿಸಿ ಸಿಟ್ಟಿನಿಂದ ನನ್ನ ಹತ್ತಿರವೇ ಬಂದನು."[೧೦] ಶಾಲಾ ವಿದ್ಯಾರ್ಥಿಯಾದ ಅವಡ್ಯಾ ತಿನ್ನುತ್ತಿರುವ ಅನ್ನವನ್ನುಮಣ್ಣು ಪಾಲು ಮಾಡುವುದಕ್ಕೆ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ. ಅದರಂತೆ ಎಚ್.ಎಸ್.ಬೇನಾಳರವರು ಬರೆದಿರುವ ಕನ್ನಡದ 'ಬಹಿಷ್ಕಾರ' ಎಂಬ ಕತೆಯಲ್ಲಿ ದಲಿತ ಸಮುದಾಯದವರನ್ನು ಊರಿನಿಂದಾಚೆ ಹಾಕುವುದಕ್ಕೂ ಈ ಜಾತಿವ್ಯವಸ್ಥೆಯೇ ಕಾರಣವಾಗಿದೆ. ಆದ್ದರಿಂದ ಈ ಎರಡೂ ಕತೆಗಳು ದಲಿತರು ಜಾತಿ ವ್ಯವಸ್ಥೆಯಿಂದಾಗಿ ಪುರೋಹಿತಶಾಹಿಗಳಿಂದ, ಬಂಡವಾಳಶಾಹಿಗಳಿಂದ ಹೇಗೆ ಅವಮಾನವನ್ನು ಅನುಭವಿಸುತ್ತಿದ್ದಾರೆ, ದಲಿತರನ್ನು ಮನುಷ್ಯರಂತೆ ಕಾಣದ ಸಮಾಜದಲ್ಲಿ ದಲಿತರ ಪಡುತ್ತಿರುವ ವೇದನೆಗಳನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಸಮಾಜದಲ್ಲಿನ ಸ್ಥಾನಮಾನಗಳನ್ನು, ಅವರ ಗಂಭೀರ ಸ್ಥಿತಿಗತಿಗಳನ್ನು ಈ ಕತೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಸಮಾನತೆಯ ಸಮಾಜದಲ್ಲಿ ಅಸಮಾನತೆಯ ವಾಸ್ತವ ರೂಪವನ್ನು ಅಂಬೇಡ್ಕರವಾದದ ನೆಲೆಯಿಂದ ಈ ಕಥೆಗಳು ತೆರೆದು ತೋರಿಸುತ್ತವೆ.

ಎಸ್.ಜಿ.ಸಿದ್ದರಾಮಯ್ಯ ರವರು ಸಂಪಾದನೆ ಮಾಡಿರುವ 'ನವಲೇಖನ ಕನ್ನಡ ಕತೆಗಳು' ಎಂಬ ಕಥಾ ಸಂಕಲನದಲ್ಲಿರುವ ಜಡೇಕುಂಟೆ ಮಂಜುನಾಥರವರು ಬರೆದಿರುವ 'ಅಪ್ಪನತಪ್ಪಡಿ' ಎಂಬ ಕಥೆಯು ಸಮಾಜದಲ್ಲಿರುವ ಮೇಲು-ಕೀಳೆಂಬ ಭಾವನೆಗಳನ್ನು ಸೃಷ್ಟಿಸಿದ 'ಜಾತಿ ವ್ಯವಸ್ಥೆ'ಯನ್ನು ಕುರಿತು ಈ ಕತೆಯು ಪ್ರತಿಪಾದನೆ ಮಾಡುತ್ತದೆ.

ಸಂಪ್ರದಾಯಗಳ ಹೆಸರಿನಲ್ಲಿ ಮೌಢ್ಯತೆಯನ್ನು ಆಚರಣೆ ಮಾಡಿಕೊಂಡು ಬಂದು, ಅದರಲ್ಲಿ ದೇವರೆಂಬ ನಂಬಿಕೆಯ ಹೆಸರನ್ನು ಸೇರಿಸಿ ಯಾವ ರೀತಿಯಾಗಿ ದಲಿತರನ್ನು ಶೋಷಣೆ ಮಾಡುತ್ತಾರೆ ಎಂಬುವುದನ್ನು, ಬಂಡವಾಳಶಾಹಿಗಳ ಒಡೆತನದಲ್ಲಿರುವ ಹಳ್ಳಿಗಳಲ್ಲಿರುವ ತಳ ಸಮುದಾಯಗಳ ವಾಸ್ತವ ಚಿತ್ರಣವನ್ನು ಚಿತ್ರಿಸುತ್ತ, ಒಬ್ಬರು ಮತ್ತೊಬ್ಬರಿಗೆ ಶೋಷಣೆ ಮಾಡುವುದನ್ನೇ ಸಂಪ್ರದಾಯದ ತಳಹದಿಯಲ್ಲಿ ಧರ್ಮವನ್ನು ಬೆರೆಸಿಕೊಂಡು, ಉಳ್ಳವರು ದೀನದಲಿತರ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯ ಆಡಳಿತ ಕ್ರಮವನ್ನು ಈ ಕಥೆಯು ತಿಳಿಸಿ ಕೊಡುತ್ತದೆ. ವರ್ಣವ್ಯವಸ್ಥೆಯ ಆಧಾರದ ಮೇಲೆ ನಿರ್ಧರಿಸಲಾದ ಕಾಯಕಗಳ ಹಿನ್ನೆಲೆಯಲ್ಲಿ ದಲಿತರನ್ನೇ ಕೆಳದರ್ಜೆಯ ಕೆಲಸವನ್ನು ಮಾಡಿಸುತ್ತ, ಅವರಿಗಿರುವ ಸ್ವಾಭಿಮಾನವನ್ನು ಕಳೆದು ಅವಮಾನದಿಂದ ಮಾಡಿಸುತ್ತಿರುವ ಮೇಲ್ವರ್ಗದವರ ಮಾದರಿ ಕ್ರಮವನ್ನು ಈ ಕಥೆ ಖಂಡಿಸತುತ್ತದೆ. ದಲಿತ ಕೇರಿಯನ್ನು ಊರಿಂದಾಚೆ ಪ್ರತ್ಯೇಕಿಸಿ, ಅವರಿಗೆ ಬೇಕಾದಾಗ ಮಾತ್ರ ಅವರನ್ನು ಉಪಯೋಗಿಸಿಕೊಂಡು ಮತ್ತೆ ಅವರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿರುವ ಮೇಲ್ವರ್ಗದವರು ಸಮಾಜದಲ್ಲಿ ಜಾತಿವ್ಯವಸ್ಥೆಯಡಿಯಲ್ಲಿ ದಲಿತ ಸಮುದಾಯದವರನ್ನು ಕೀಳಾಗಿ ಕಾಣುತ್ತಿದ್ದಾರೆ.

ಊರಿನ ಸ್ವಚ್ಛತೆಗಾಗಿ, ನೈರ್ಮಲ್ಯತೆಗಾಗಿ ಮಾತ್ರ ದಲಿತರನ್ನು ಬಳಸಿಕೊಂಡು ಅವರಿಗೆ ಸಾಮಾಜಿಕ, ಆರ್ಥಿಕವಾಗಿ ಶೋಷಣೆಯನ್ನು ಮಾಡುತ್ತಿದ್ದಾರೆ. ದಲಿತ ಕುಟುಂಬದಲ್ಲಿರುವ ಮಕ್ಕಳು ಸ್ವತಂತ್ರವಾಗಿ ಶೈಕ್ಷಣಿಕವಾಗಿ ಬೆಳೆಯಲು ಈ ಮೇಲ್ವರ್ಗದವರು ಬಿಡದೆ, ದಲಿತರ ಮಕ್ಕಳನ್ನು ತಮ್ಮ ಮನೆಗೆಲಸಕ್ಕೆ ಮತ್ತು ಊರಿನ ಸ್ವಚ್ಛತೆಗೆ ಮಾತ್ರ ಯೋಗ್ಯರೆಂದು ತಮ್ಮ ಏಳ್ಗೆಗಾಗಿ ದಲಿತರನ್ನು ದುಡಿಸಿಕೊಳ್ಳುತ್ತಾರೆ. ದಲಿತರನ್ನು ತಮ್ಮಂತೆ ಅವರೂ ಮನುಷ್ಯರೆಂದು ಕಾಣುವುದೇ ಇಲ್ಲ. ದಲಿತರಿಗೆ ಎಂದೂ ಸ್ವತಂತ್ರವಾಗಿ ಊರಲ್ಲಿ ನಡೆದಾಡಿಸಲು ಸಹ ಬಿಡುವುದಿಲ್ಲ. ಬರೀ ಅವಮಾನದ, ಅಸ್ಪೃಶ್ಯತೆಯ ವಾತಾವರಣದಲ್ಲಿ ಅವರನ್ನು ಇರಿಸಿ ಶೋಷಣೆಯನ್ನು ಮಾಡುತ್ತಾರೆ. ಒಟ್ಟಾರೆಯಾಗಿ ಸ್ವತಂತ್ರ ಭಾರತದ ಸಂದರ್ಭದಲ್ಲೂ ದಲಿತರಿಗಿರುವ ಸ್ಥಾನಮಾನಗಳನ್ನು ಅವರ ಸ್ಥಿತಿಗತಿಗಳನ್ನು ಕುರಿತು ಈ ಕಥೆಯು ತನ್ನ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ದಲಿತ ಸಂವೇದನೆಗಳನ್ನು ಪ್ರತಿಬಿಂಬಿಸುತ್ತದೆ.

ದಲಿತರು ಪಡುತ್ತಿರುವ ಯಾತನೆಯನ್ನು ಅವರ ಜೀವನ ಕ್ರಮವನ್ನು ತಿಳಿಸಿಕೊಡುತ್ತ ಕಾಲಕಾಲಾಂತರಗಳಿಂದ ಶೋಷಿಸಲ್ಪಟ್ಟ ದಲಿತರಿಗೆ ಸ್ವತಂತ್ರವಾಗಿ ಸ್ವಾಭಿಮಾನದಿಂದ ಬದುಕನ್ನು ನಡೆಸುವುದು ಯಾವಾಗ ಎಂಬ ಪ್ರಶ್ನೆಯನ್ನು ಮುಂದಿಡುತ್ತದೆ. ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿರುವ ಈ ಅಸಮಾನತೆಯ ಜಾತಿವ್ಯವಸ್ಥೆಯನ್ನು ಈ ಕಥೆಯು ಖಂಡಿಸುತ್ತದೆ. ಈ ಜಾತಿವ್ಯವಸ್ಥೆಯು ಒಬ್ಬ ಶಾಲಾ ಬಾಲಕನ ಮೇಲೆ ಎಷ್ಟೊಂದು ಪರಿಣಾಮವನ್ನು ಬೀರುತ್ತದೆ ಎಂಬುವುದನ್ನು ತೋರಿಸಿ ಕೊಡುವುದೇ ಈ ಕಥೆಯು ಮುಖ್ಯ ಉದ್ದೇಶವಾಗಿರುತ್ತದೆ. ಊರಿನ ಜನರೆಲ್ಲರೂ ಹನುಮಂತ ದೇವರ ಗುಡಿಯ ಹತ್ತಿರ ಬಂದು ಸೇರುತ್ತಾರೆ. ಈ ಸಭೆಯು ಚರ್ಚೆಯ

ಮುಂದಾಳತ್ವವನ್ನು ತಾಯವ್ವ ವಹಿಸಿಕೊಂಡಿರುತ್ತಾಳೆ. ಇವಳು ಪುರುಷನ ಗಾಂಭೀರ್ಯ ಧ್ವನಿಯಿಂದ ಎಲ್ಲರನ್ನು ಮಾತಿಲ್ಲದಂತೆ ಮಾಡುವ ಸಾಮರ್ಥ್ಯ ಹೊಂದಿರುತ್ತಾಳೆ.

ಆಕೆಯ ನಿರ್ಧಾರವೇ ಅಂತಿಮವಾಗಿರುತ್ತದೆ. ತಾಯವ್ವ ಊರಿನ ಪಕ್ಕದ ಹೊಲದಲ್ಲಿ ಕುರಿಹಟ್ಟಿ ಹಾಕಿಕೊಂಡು ಸುಮಾರು ಮುನ್ನೂರು ಕುರಿಗಳನ್ನು ಸಾಕಿರುತ್ತಾಳೆ. ತಾಯವ್ವನ ಗಂಡ ಮರಿಯಪ್ಪ ತನ್ನ ಕುರಿಹಟ್ಟಿಯನ್ನು ಬಿಟ್ಟು ಊರಲ್ಲಿ ಬರುತ್ತಿರಲಿಲ್ಲ. ಯಾವುದೋ ಹಬ್ಬಕ್ಕೆ ಮಾತ್ರ ಬರುತ್ತಿದ್ದ. ಆದರೆ ತಾಯವ್ವ ಮಾತ್ರ ಊರಿನ ಮುಂದಾಳತ್ವದಿಂದ ತನ್ನ ನಿರ್ಣಯಗಳನ್ನು ನಿರ್ಧರಿಸುತ್ತಿದ್ದಳು. ಊರಿನ ಪ್ರಮುಖರೆಲ್ಲರು ಗುಡಿಯ ಹತ್ತಿರ ಸೇರಿದಾಗ ತಾಯವ್ವ ತನ್ನ ಮಾತುಗಳನ್ನು ಮುಂದುವರಿಸುತ್ತ, ಪಕ್ಕದ ಉರಿನಲ್ಲಿ ಅಲ್ಪ ಸ್ವಲ್ಪ ಮಳೆಯಾಗಿದೆ ಆದರೆ ನಮ್ಮ ಊರಲ್ಲಿ ಮರೆಯಾಗಿದೆ. ಊರಿನ ಕೆರೆ ಬಾವಿಗಳು ಬತ್ತಿ ಹೋಗಿವೆ. ಹಾಗೆ ಹೊಲದಲ್ಲಿ ಯಾವ ಬೆಳೆಯೂ ಇಲ್ಲದೆ, ಮರುಭೂಮಿಯಂತೆ ಮಲಗಿಕೊಂಡಿದೆ. ದನಕರುಗಳಿಗೆ ಮೇವು ಇಲ್ಲದೆ, ಕಾಡು ಗುಡ್ಡಗಳೆಲ್ಲ ಬಿಸಿಲಿನಿಂದ ಬಾಡಿ ಹೋಗಿವೆ. ಇದಕ್ಕೆ ಆ ತಾಯಿ ಮಾರಮ್ಮನೆ ಕಾರಣ. ಆದ್ದರಿಂದ ಪ್ರತಿ ವರ್ಷದಂತೆ ಮಾರಮ್ಮನ ಹಬ್ಬವನ್ನು ಎಲ್ಲರೂ ಸೇರಿ ಮಾಡೋಣ. ಅದಕ್ಕೆ ನಿಮ್ಮೆಲ್ಲರ ಅಭಿಪ್ರಾಯವನ್ನು ತಿಳಿಸಬೇಕೆಂದು ಕೇಳುತ್ತಾಳೆ.

ಆಗ ಹೌದು ನಮ್ಮೂರಲ್ಲಿ ಮಳೆ ಇಲ್ಲದೆ ಕುಡಿಯೋ ನೀರಿಗಾಗಿ ಜಗ್ಗಾನಲ್ಲಿಗೇ ಗಂಟೆಗಟ್ಟಲೆ ಜಗ್ಗಿದರೂ ನೀರು ಬರುವುದಿಲ್ಲ.ಊರಿನ ಹೆಂಗಸರೆಲ್ಲ ಬಟ್ಟೆ ತೊಳೆಯಲೆಂದು ಕೆರೆಕಟ್ಟೆ ಕಡೆ ಹೋದರೂ ನೀರು ಇರುವುದಿಲ್ಲ. ಈ ಮಳೆಯ ಅಭಾವದಿಂದ ಊರಲ್ಲಿದ್ದವರು ಸಹ ಇಲ್ಲಿ ಬದುಕುವುದಕ್ಕೆ ಆಗದೆ, ಕೂಲಿ ಮಾಡಿಕೊಂಡು ಬದುಕುವುದಕ್ಕೆ ಬೆಂಗಳೂರಿಗೆ ಹೋಗಿದ್ದಾರೆ. ಅಷ್ಟೇ ಅಲ್ಲ ಮಳೆ ಇಲ್ಲದೆ ಗಂಡುಮಕ್ಕಳು ಕೆಲಸವಿಲ್ಲದೆ ಮನೆಯಲ್ಲಿಯೇ ಕೈ ಕಟ್ಟಿ ಕುಳಿತುಕೊಂಡಿದ್ದಾರೆ. ಹೀಗಾಗಿ ಮೊದಲೆಲ್ಲ ಕಾಲಕಾಲಕ್ಕೆ ಮಳೆ ಬಾರದೇ ಇದ್ದಾಗ ಊರಿನ ಹಿರೀಕರೆಲ್ಲ ಸೇರಿ ಮಾರಮ್ಮನಿಗೆ ಹೂ ಕೇಳುವುದು, ದೇವರನ್ನು ಹೊಳೆಗೆ ಕರೆದುಕೊಂಡು ಹೊಗುವುದು, ಕತ್ತೆ ಮರೆವಣಿಗೆ ಮಾಡುವುದು, ಮಾರಮ್ಮನಿಗೆ ಆರತಿ ಬೆಳಗುವುದು ಮಾಡುತ್ತಿದ್ದರು. ಆದರೆ ಊರಿನ ಗೌಡ್ರು ಸುಮ್ಮನೆ ಕುಳಿತಿದ್ದಕ್ಕಾಗಿ ಈ ವರ್ಷ ಮಳೆ ಇಲ್ಲದಂತಾಗಿದೆ. ಅದಕ್ಕಾಗಿ ನಾವೆಲ್ಲರೂ ಸೇರಿ ಈ ವರ್ಷ ಮಾರಮ್ಮನ ಜಾತ್ರೆಯನ್ನು ಮಾಡಬೇಕೆಂದು ಎಲ್ಲರೂ ತೀರ್ಮಾನಿಸಿದರು.

ಅದಕ್ಕೆ ತಾಯವ್ವ ತನ್ನ ಮಾತುಗಳನ್ನು ಮುಂದುವರಿಸಿ ನಾನು ಪ್ರತಿ ವರ್ಷ ಮಾರಮ್ಮ ದೇವಿಗೆ ಕೊಡುತ್ತಿದ್ದ ಎರಡು ಟಗರುಗಳ ಬದಲಿಗೆ ಈ ಸಾರಿ ನಾಲ್ಕು ಟಗರುಗಳನ್ನು ಕೊಡುತ್ತೇನೆಂದು ಹೇಳುತ್ತಾಳೆ. ತಾಯವ್ವ ತನ್ನ ಕುರಿಗಳಿಗೆ ಏನಾದರೂ ಕಾಯಿಲೆ ಬಂದರೆ ಮಾರಮ್ಮನಿಗೆ ಬೇಡಿಕೊಂಡು ಹರಕೆ ಹೊರುತ್ತಿದ್ದಳು. ಇದರಿಂದಾಗಿ ಈ ವರ್ಷ ಮಾರಮ್ಮ ದೇವಿಯ ಜಾತ್ರೆಯನ್ನು ಸೊಗಸಾಗಿ ಮಾಡೋಣವೆಂದು ತೀರ್ಮಾನಿಸಿದರು. ನಂತರ ಮಾರಮ್ಮದೇವಿಗೆ ಆರತಿಯನ್ನು ಬೆಳಗಲು ಊರಲ್ಲಿರುವ ಎಲ್ಲ ಹೆಣ್ಣುಮಕ್ಕಳು ಆರತಿ ತರುವುದಕ್ಕಾಗಿ ತಿಳಿಸಲು ದಲಿತರ ಮಣೆಗಾರ ಸಿಂಗಪ್ಪನನ್ನು ತಪ್ಪಡಿ

ಬಡಿಯುವುದಕ್ಕೆ ಕರೆತರಬೇಕೆಂದು ತಾಯವ್ವ ಹೇಳಿದಳು. ಮಣೆಗಾರ ದುರುಗಪ್ಪ ಗುಡಿಯ ಹತ್ತಿರ ಕುಳಿತುಕೊಂಡಿದ್ದರು. ಈ ವಿಷಯ ತಿಳಿದಾಗ ಸಭೆ ನಡೆಯುತ್ತಿದ್ದ ಅದೇ ಹನುಮಂತ ದೇವರ ಕಟ್ಟೆಯ ಕೆಳಭಾಗದ ಎಡ ಮೂಲೆಯಲ್ಲಿ ಮಣೆಗಾರ ಹಟ್ಟಿಯ ನಿಂಗಪ್ಪನ ಮಗ 'ಏಕಾಂತ' ಇದ್ದಾನೆಂದು ಹೇಳಿದರು.

ಊರಿನ ಹಿರಿಕರೆಲ್ಲರೂ ಏಕಾಂತನಿಗೆ ನಿಮ್ಮ ಅಪ್ಪನನ್ನು ತಪ್ಪಡಿ ತೆಗೆದುಕೊಂಡು ಬರಲು ಹೇಳು, ಊರಿನ ಮಾರಮ್ಮ ದೇವರಿಗೆ ಆರತಿ ಬೆಳಗಬೇಕೆಂದು ಹೇಳು ಅಂತ ಹೇಳಿದರು. ಈ ವಿಷಯ ತಿಳಿಯುತ್ತಿದ್ದಂತೆ ಬಾಲಕ ಏಕಾಂತ ಓಡೋಡಿ ತನ್ನ ಹಟ್ಟಿಯಲ್ಲಿರುವ ಮನೆಗೆ ಬರುತ್ತಾನೆ. ಹೆ....ಯಪ್ಪಾ, ಯಪ್ಪಾ ಎನ್ನುತ್ತಲೇ ಹಳೆಜಂತಿ ಮನೆ ಒಳಕ್ಕೆ ದೊಡ್ಡ ಹೆಜ್ಜೆ ಮೇಲೆ ನುಗ್ಗಿಕೊಂಡು ಏಕಾಂತ ಹೋದನು. ಮನೆಯ ಹೊರಗೂ, ಒಳಗೂ ಅವರಪ್ಪ ಇಲ್ಲದಿರುವುದನ್ನು ಗಮನಿಸಿ ಜಂತಿ ಮನೆಯ ಗೋಡೆಗೆ ನೇತು ಹಾಕಿದ್ದ ತಪ್ಪಡಿಯನ್ನು ತೆಗೆದುಕೊಂಡು ಹೊರಗಡೆಗೆ ಬಂದನು. ಅದನ್ನು ಹೊರಗಡೆಯಿಂದ ಬರುತ್ತಿದ್ದ ಏಕಾಂತನ ತಂದೆ ಮೂಲಿಮನೆ ನಿಂಗಪ್ಪ ನೋಡಿದನು. ಮಗ ತಪ್ಪಡಿ ಹಿಡಿದುಕೊಂಡಿರುವುದನ್ನು ಸಿಟ್ಟಿನಿಂದ ಲೇ ಏಕಾಂತ ತಪ್ಪಡಿ ಯಾಕೋ ತಗೊಂಡಿ ಮನೆಯಲ್ಲಿಡು ಹೋಗಿ, ಎಂದು ಸಿಟ್ಟಿನಿಂದ ಗದರಿಸಿದನು. ಆಗ ಮಗ ಏಕಾಂತ ಅಲ್ಲಿ ಗುಡಿ ಹತ್ತಿರ ಊರಾಗಿನ ಎಲ್ಲಾ ಗೌಡರು, ಗೊಂಚಿಗಾರ್ರು ಸಭೆ ಸೇರಿದ್ದಾರೆ. ಕರೆದುಕೊಂಡು ತಪ್ಪಡಿ ತಕ್ಕಂಡು ಬಾ ಹೋಗಲೇ ಎಂದು ನನ್ನನ್ನು ಕಳಿಸಿದ್ದಾರೆ.

ಅದಕ್ಕೆ ಈ ತಪ್ಪಡಿ ತೆಗೆದುಕೊಂಡಿದ್ದೇನೆ ಎಂದು ಉತ್ತರಿಸುತ್ತಾನೆ. ಆಗ ತಂದೆ ಲೇ ಆ ತಪ್ಪಡಿನಾ ಅಲ್ಲಿಡು, ನಿನ್ಯಾಕಲೇ ಅಲ್ಲಿಗೆ ಹೋಗುತ್ತಿಯಾ ನೀನು ಸ್ವಲ್ಪ ಚೆನ್ನಾಗಿ ಓದಿಕೊಂಡು, ಬರೆದುಕೊಂಡು ವಿದ್ಯಾವಂತನಾಗಿ ಏನಾದರೂ ಕೆಲಸ ತೆಗೆದುಕೊಂಡು ಉದ್ಧಾರ ಆಗು, ನಮ್ಮಂತೆ ಆಗಬೇಡಂತ ನಿನ್ನನ್ನು ಶಾಲೆಗೆ ಕಳಿಸಿದ್ದರೆ, ನೀನು ನೋಡಿದರೆ ಈ ತಪ್ಪಡಿ ತಗೊಂಡು ನಿಂತುಕೊಂಡಿದ್ದಿಯಾ...! ನಾನು, ನನ್ನಪ್ಪ, ನನ್ನಜ್ಜ ಈ ತಪ್ಪಡಿಯನ್ನು ಬಡಿದದ್ದು ಸಾಕು, ಇದು ನನ್ನಿಂದಲೇ ಕೊನೆಯಾಗಲಿ ಈ ತಪ್ಪಡಿ ಬಡಿಯುವ ನೋವು ನಿನಗೆ ಗೊತ್ತಾಗಬಾರದು ನೀನು ಶಾಲೆಗೆ ಹೋಗು ನಾನು ತಪ್ಪಡಿ ತೆಗೆದುಕೊಂಡು ಊರೊಕ್ಕೆ ಹೋಗುತ್ತೇನೆಂದು ಹೇಳಿ ಗುಡಿಯ ಕಡಗೆ ತಪ್ಪಡಿ ತೆಗೆದುಕೊಂಡು ನಿಂಗಪ್ಪ ಹೋಗುತ್ತಾನೆ. ಗೌಡರ ಮಾತಿನಂತೆ ಊರೆಲ್ಲ ಆರತಿ ಸುದ್ದಿಯನ್ನು ತಿಳಿಸುತ್ತ ತಪ್ಪಡಿ ಬಡಿದುಕೊಂಡು ಮನೆಗೆ ಬರುತ್ತಾನೆ. ಶಾಲೆಯನ್ನು ಮುಗಿಸಿಕೊಂಡು ಏಕಾಂತ ಮನೆಗೆ ಬಂದಿದ್ದನು.

ತನ್ನ ತಾಯಿಯಾದ ಕಮಲಕ್ಕನಿಗೆ, ಅವ್ವ ಎಲ್ಲರೂ ದೇವರಿಗೆ ಆರತಿ ಬೆಳಗಲು ಹೋಗಿದ್ದಾರೆ. ನೀವ್ಯಾಕೆ ಹೋಗಿಲ್ಲ ನಾವೂ ದೇವರಿಗೆ ಆರತಿ ಬೆಳಗಲು ಹೋಗೋಣ ಬಾರವ್ವೊ ಎಂದು ಕರೆಯುತ್ತಾನೆ. ಆಗ ಏಕಾಂತನ ತಾಯಿ ನಾವು ಊರೊಳಕ್ಕೆ ದೇವರಿಗೆ ಆರತಿ ಬೆಳಗಲು ಹೋಗುವಹಾಗಿಲ್ಲ. ಏಕೆಂದರೆ ನಾವು ಕೆಳಗಿನ ಜಾತಿಯವರು ಆದಕ್ಕೆ ದೇವರಿಗೆ ಆರತಿ ಬೆಳಗುವ

ಸಮಯದಲ್ಲಿ ನಾವು ಮನೆಯಲ್ಲಿಯೇ ಇರಬೇಕು. ಅಲ್ಲಿಗೆ ಹೋಗಬಾರದೆಂದು ಹೇಳುತ್ತಾಳೆ. ಆಗ ಏಕಾಂತ ಅದ್ಯಾಕವ್ವೊ ಅಪ್ಪ ಅವಾಗಲೇ ತಪ್ಪಡಿ ಬಡಿಯೋಕೆ ಹೋಗಿದ್ದು ನಾನೇ ನೋಡಿದ್ದಿನಿ. ಈಗ ನೋಡಿದರೆ ನಾವು ಅಲ್ಲಿಗೆ ಹೋಗಬಾರದೆಂದು ಹೇಳುತ್ತಿದ್ದೀಯಾ. ಯಾಕೆ ಹೀಗೆ ಎಂದು ಮರುಪ್ರಶ್ನೆ ಮಾಡುತ್ತಾನೆ. ಆಗ ತಾಯಿ ನಾವು ಕೀಳು ಜಾತಿಯವರಂತೆಂದು ಹೇಳುತ್ತಾಳೆ.

"ಏಕಾಂತನಿಗೆ ಊರಾಗಿನ ಮೇಲು ಜಾತಿಯವರ ಜತೆಗೆ ನಮ್ಮ ಹಟ್ಟ್ಯಾಗಿನ ಜನರು ಯಾಕೆ ಆರತಿ ಬೆಳಗಬಾರದು...? ಎಂಬ ಯೋಚನೆಗೆ ಬಿದ್ದ. ಮನಸ್ಸು ಒಂತಾರ ಆರ್ತಿ ಬೆಳಗೋ ಸುತ್ತಾನೇ ಹೊರಳುತ್ತಿತ್ತು. ತಾತ, ಮುತ್ತಾತರ ಕಾಲದಿಂದಲೂ ಊರಾಗಿನ ಜನರ ಜತೆಗೆ ನಮ್ಮ ಹಟ್ಟ್ಯಾಗಿನ ಜನರು ಆರತಿ ಬೆಳೆಗಿಲ್ಲದ್ದನ್ನು ತನ್ನವ್ವನ ಮಾತುಗಳಿಂದ ಕೇಳಿದ ಏಕಾಂತ ಮನೆಯ ಮೂಲೆಯಲ್ಲಿ ನೇತುಹಾಕಿದ್ದ ಅಪ್ಪನ ತಪ್ಪಡಿಯನ್ನು ಒಮ್ಮೆ ತದೇಕಚಿತ್ತದಿಂದ ಗಮನಿಸಿದ"[10] ನನ್ನ ತಾತಯ್ಯ, ಅಪ್ಪಯ್ಯ ಅದೇಷ್ಟು ವರ್ಷಗಳಿಂದ ಈ ತಪ್ಪಡಿಯನ್ನು ಹೆಗಲಿಗೆ ಹಾಕಿಕೊಂಡು ಬಂದಿದ್ದಾರೆ. ಬಡಿದು, ಬಡಿದು ಈ ತಪ್ಪಡಿಯ ಮೇಲೆಲ್ಲಾ ಅದೇಷ್ಟೊಂದು ಗಾಯದ ಗುರುತುಗಳಾಗಿದ್ದಾವೆ. ಆದರೆ ನಮ್ಮನ್ನು ಮಾತ್ರ ಮಾರಮ್ಮನಿಗೆ ಆರತಿ ಬೆಳಗುವಾಗ ಸೇರಿಸಿಕೊಳ್ಳುವುದಿಲ್ಲ. ಅವರಿಗಿರುವ ಸಂಭ್ರಮ ನಮಗ್ಯಾಕೆ ಇರುವುದಿಲ್ಲ ಎಂಬ ನೋವಿನಿಂದ ಏಕಾಂತ ತಪ್ಪಡಿಯನ್ನು ತೆಗೆದುಕೊಂಡು ಊರಮ್ಮನ ಗುಡಿಯ ಹಿಂದೆ ಇರುವ ಕೆರೆಯ ಪಕ್ಕದಲ್ಲಿ ತಪ್ಪಡಿ ಬಡಿಯುತ್ತ ನಿಂತುಕೊಳ್ಳುತ್ತಾನೆ. ಅವನ ತಪ್ಪಡಿಯ ಸದ್ದುಗಳಿಗೆ ಆಕಾಶದ ಮೋಡಗಳು ಕರಗಿ ಮಳೆಯನ್ನು ಸುರಿಸಿದವು. ಹೀಗೆ ಏಕಾಂತನ ನೋವಿನಲ್ಲಿ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿವ್ಯವಸ್ಥೆಯಿಂದ ಬಂಡವಾಳಶಾಹಿಗಳು ಹೇಗೆ ದಲಿತರ ಮೇಲೆ ಶೋಷಣೆಯನ್ನು ಮಾಡುತ್ತಿದ್ದಾರೆ ಎಂಬುವುದನ್ನು ಕಥೆಗಾರರು 'ಅಪ್ಪನ ತಪ್ಪಡಿ'ಯ ಕಥೆಯ ಮೂಲಕ ತಮ್ಮ ಸೂಕ್ಷ್ಮ ಸಂವೇದನೆಗಳಲ್ಲಿದಲಿತರ ನೋವುಗಳನ್ನು ತೋರಿಸಿಕೊಟ್ಟಿದ್ದಾರೆ.

ಡಾ.ಶರಣಕುಮಾರ ಲಿಂಬಾಳೆಯವರು ಬರೆದಿರುವ 'ಚುವಾಚೂತ್' ಎಂಬ ಮರಾಠಿ ಕಥಾ ಸಂಕಲನವು ಬಹು ಜನಪ್ರಿಯವಾದದ್ದು ಇದರಲ್ಲಿ ಮೂರು ಭಾಗಗಳಿವೆ. ದಲಿತರ ಶೋಷಣೆ ಅವರ ಮೇಲಾಗುತ್ತಿರುವ ದೌರ್ಜನ್ಯ ದಬ್ಬಾಳಿಕೆ ಅವರಿಗೆ ನೀಡುತ್ತಿರುವ ದೈಹಿಕ ಮತ್ತು ಮಾನಸಿಕ ಹಿಂಸೆಗಳ ಸಂಗತಿಗಳನ್ನು ತಮ್ಮದೆಯಾದ ರೀತಿಯಲ್ಲಿ ಲೇಖಕರು ಹಿಡಿದಿಟ್ಟಿದ್ದಾರೆ. ಈ ಕಥಾ ಸಂಕಲನವನ್ನು ಕನ್ನಡದ ಜಾಯಿಮಾನಕ್ಕೆ ಒಗ್ಗುವ ಹಾಗೆ ಅನುವಾದಿಸಿ ಡಾ. ಪ್ರಮೀಳಾ ಮಾಧವ್‌ರವರು 'ಅಸ್ಪೃಶ್ಯ' ಎಂಬ ಹೆಸರಿನಲ್ಲಿ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಬರುವ 'ಹರಿಜನ' ಎಂಬ ಕತೆಯು ಎಸ್.ಜಿ.ಸಿದ್ದರಾಮಯ್ಯನವರು ಸಂಪಾದನೆ ಮಾಡಿರುವ 'ನವಲೇಖಿನ ಕನ್ನಡ ಕತೆಗಳು' ಎಂಬ ಕಥಾ ಸಂಕಲನದಲ್ಲಿರುವ ಜಡೇಕುಂಟೆ ಮಂಜುನಾಥರವರು ಬರೆದಿರುವ ಕನ್ನಡದ 'ಅಪ್ಪನ ತಪ್ಪಡಿ' ಎಂಬ ಕಥೆಯಂತೆ ಪುರೋಹಿತಶಾಹಿಗಳು ಸೃಷ್ಟಿಸಿದ ಜಾತಿ ವ್ಯವಸ್ಥೆಯನ್ನು ಕುರಿತು

ಆದರಿಂದ ದಲಿತರು ಪಡುತ್ತಿರುವ ಮಾನಸಿಕ ವ್ಯಥೆಯನ್ನು ಮನ ಮುಟ್ಟುವಂತೆ ತಮ್ಮ ಘಟನಾವಳಿಗಳ ಮೂಲಕ ಈ ಕಥೆಗಳು ಅಭಿವ್ಯಕ್ತಪಡಿಸುತ್ತವೆ.

"ನಮ್ಮ ಮನೆಯಲ್ಲಿ ಎರಡು ಪ್ರಾಮಾಣಿಕ ಪ್ರಾಣಿಗಳಿದ್ದವು ಒಂದು ಕೋಂಡ್ಯಾ ಮಹಾರ್, ಇನ್ನೊಂದು ನಮ್ಮ ಮನೆಯ ನಾಯಿ, ತಿನ್ನುವ ಅನ್ನಕ್ಕೆ ಪ್ರತಿಯಾಗಿ ತುಂಬಾ ನಿಷ್ಠೆಯನ್ನು ತೋರಿಸುತ್ತಿದ್ದವು. ಕೋಂಡ್ಯಾನಿಗಿಂತ ಹೆಚ್ಚಾಗಿ ನಾವು ನಾಯಿಯನ್ನು ಪ್ರೀತಿಸುತ್ತಿದ್ದೆವು. ನಾಯಿಯಾದರೋ ಮನೆಯಿಡೀ ಓಡಾಡುತ್ತಿತ್ತು. ಆದರೆ ಕೋಂಡ್ಯಾನಿಗೆ ಮನೆಯ ಮೆಟ್ಟಿಲುಗಳವರೆಗೆ ಮಾತ್ರ ಪ್ರವೇಶವಿತ್ತು.

ನಾವು ನಾಯಿಯನ್ನು ಹೆಗಲ ಮೇಲಿಟ್ಟು ಅದರ ಜತೆ ಆಟವಾಡುತ್ತಿದ್ದವು. ಆದರೆ ಕೋಂಡ್ಯಾನನ್ನು ನಾವು ಯಾವಗಲೂ ದೂರವೇ ಇಡುತ್ತಿದ್ದೇವು"[೧೨] 'ಕೋಂಡ್ಯಾ; ಪಟೇಲರ ಮನೆಯಲ್ಲಿ ಕೆಲಸ ಮಾಡಿಕೊಂಡು ಯಾವ ಶಿಕ್ಷಣವನ್ನು ಪಡೆಯದಿರುವ ಮಹಾರ್ ಜಾತಿಯವನಾಗಿದ್ದನು. ಶಾಲೆಯಲ್ಲಿ ಪಟೇಲರ ಮಕ್ಕಳು ಪ್ರತ್ಯೇಕ್ಷವಾಗಿ ಕುಳಿತುಕೊಂಡು ಶಿಕ್ಷಣವನ್ನು ಪಡೆದರೆ, ಹರಿಜನ ಜಾತಿಯ ಮಕ್ಕಳನ್ನು ಕಸ ಗೂಡಿಸುವ ಮೂಲೆಯಲ್ಲಿ ಕೂರಿಸಿ ಶಿಕ್ಷಣವನ್ನು ಅಧ್ಯಾಪಕರು ಬೋಧನೆ ಮಾಡುತ್ತಿದ್ದರು. ಪಟೇಲರರು ಆ ಅಧ್ಯಾಪಕರಿಗೆ ಮನೆಗೆ ಬೇಕಾದ ಎಲ್ಲ ದವಸ ಧಾನ್ಯಗಳನ್ನು ಕಾಣಿಕೆಯಾಗಿ ನೀಡುತ್ತಿದ್ದರು. ಒಮ್ಮೆ ಆ ಶಾಲೆಗೆ ಹರಿಜನ ಅಧ್ಯಾಪಕನು ನೇಮಕವಾಗಿ ಬರುತ್ತಾನೆ. ಆಗ ಪಟೇಲರ ಮಕ್ಕಳು ಶಾಲೆಗೆ ಬರುವುದನ್ನೇ ನಿಲ್ಲಿಸುತ್ತಾರೆ. ಕಲಿಕೆಯಿಲ್ಲದ ಕೋಂಡ್ಯಾ ಮಹಾರ್‌ನನ್ನು ಗುಲಾಮನಂತೆ ಕಾಣುವ ಪಟೇಲರು ಅಕ್ಷರ ಕಲಿತ ಅಧ್ಯಾಪಕರನ್ನು ಹರಿಜನ ಎನ್ನುವ ಕಾರಣಕ್ಕಾಗಿ ಗೌರವ ನೀಡದಿರುವುದು, ಇವೆರಡೂ ಸಂಗತಿಗಳು ಮೇಲ್ವರ್ಗದವರು ದಲಿತರಿಗೆ ಮಾಡುವ ಅಸ್ಪೃಶ್ಯತೆಯನ್ನು ಒತ್ತಿ ಹೇಳುತ್ತವೆ.

ಅದರಂತೆ ಜಡೇಕುಂಟೆ ಮಂಜುನಾಥರವರು ಬರೆದಿರುವ ಕನ್ನಡದ 'ಅಪ್ಪನ ತಪ್ಪಡಿ' ಎಂಬ ಕಥೆಯು ಅಸ್ಪೃಶ್ಯತೆಯಿಂದ ನೊಂದುಕೊಂಡು ಮನೋವ್ಯಥೆಗೆ ಗುರಿಯಾದ ಏಕಾಂತನ ಜೀವನದಂತೆ ಈ ಕತೆಯಲ್ಲಿಯೂ ಕೂಡ ಜಾತೀಯತೆಯಿಂದಾಗಿ 'ಕೋಂಡ್ಯಾ' ಮಾನಸಿಕವಾಗಿ ಹಿಂಸೆಗೆ ಒಳಗಾಗಿರುವುದನ್ನು ಕಾಣಬಹುದಾಗಿದೆ. ಪುರೋಹಿತಶಾಹಿಗಳು ಸೃಷ್ಟಿಸಿದ ವರ್ಣವ್ಯವಸ್ಥೆಯಿಂದಾಗಿ ಮಾನವ ಸಮಾಜವು ಅಸಮಾನತೆಯಿಂದ ಕೂಡಿರುವ ಸಂಗತಿಯನ್ನು ಅಂಬೇಡ್ಕರವಾದದ ನೆಲೆಯಿಂದ ಇವೆರಡೂ ಕತೆಗಳು ತಮ್ಮ ಸಂವೇದನೆಗಳ ಮೂಲಕ ತೋರಿಸಿಕೊಟ್ಟಿವೆ.

### ೫.೩. ಬಂಡವಾಳಶಾಹಿಗಳು ಮತ್ತು ಹಸಿದ ಹೊಟ್ಟೆಗಳ ಬದುಕು

'ಸುವರ್ಣ ಕರ್ನಾಟಕ' ಸಂದರ್ಭದಲ್ಲಿ ಕರ್ನಾಟಕ ಸರಕಾರದ ಪರವಾಗಿ 'ಕನ್ನಡ ಮತ್ತು ಸಂಸ್ಕೃತಿ ಇಲಾಖೆ' ಅವರಿಂದ ಪ್ರಕಟಿತವಾದ 'ಸುವರ್ಣ ಕಥಾ ಸಂಕಲನ'ದಲ್ಲಿರುವ ಹಳೇಮನೆ ರಾಜಶೇಖರ ರವರು ಬರೆದಿರುವ 'ಉರಿವ ಜೀವ' ಎಂಬ ಕಥೆಯು ಸ್ವತಂತ್ರಕಾಲ ಸಂದರ್ಭದಲ್ಲೂ, ಬಡತನದ ಹಸಿವಿನಿಂದ ಬಳಲುತ್ತಿರುವ ದಲಿತ ಬಡಕುಟುಂಬದ ದುರ್ಬಲ ಸ್ಥಿತಿಯನ್ನು ಕಂಡು

ವಿವರಿಸುತ್ತದೆ. ಸಾಂವಿಧಾನಿಕ ಸಲವತ್ತುಗಳ ಅಡಿಯಲ್ಲಿ ಬದುಕುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಮನುಷ್ಯನಿಗೆ ಮೂಲಭೂತ ಸೌಕರ್ಯಗಳಾದ ಆಹಾರ, ವಸತಿ, ವಸ್ತ್ರ, ಶುದ್ಧ ನೀರು ನೀಡಬೇಕಾಗಿರುವುದು ಸಮಾಜದ, ಸಮಾಜವನ್ನು ಆಳುತ್ತಿರುವ ಸಕಾರದ ಆದ್ಯ ಕರ್ತವ್ಯವಾಗಿದೆ. ಬಡತನದಿಂದ ಯಾವುದೇ ಒಂದು ಕುಟುಂಬ ಹಸಿವಿನಿಂದ ಸತ್ತರೆ ಅದಕ್ಕೆ ಸರ್ಕಾರವೇ ನೇರ ಕಾರಣವಾಗುತ್ತದೆ. ಇಂತಹ ಕಾನೂನಾತ್ಮಕ ಆಡಳಿತದ ವ್ಯವಸ್ಥೆಯಲ್ಲೂ, ದಲಿತ ಕುಟುಂಬಗಳು ಇನ್ನೂ ಹಸಿವಿನ ಬಾಧೆಯಿಂದ ತಮ್ಮ ನಿತ್ಯ ಜೀವನವನ್ನು ಕಳೆಯುತ್ತಿದ್ದಾರೆ.

ತಮ್ಮ ಹಕ್ಕುಗಳಿಗಿರುವ ಸ್ವತಂತ್ರವನ್ನು ಕಳೆದುಕೊಂಡು, ಬಂಡವಾಳಶಾಹಿಗಳ ಅಧೀನದಲ್ಲಿ ಗುಲಾಮರಂತೆ ಬದುಕುತ್ತಿದ್ದಾರೆ ಎಂಬ ಸತ್ಯಾಂಶವನ್ನು ಈ ಕತೆಯು ತನ್ನ ಕಥಾ ಹಂದರದ ಜೊತೆ ತೆರೆದುಕೊಳ್ಳುತ್ತ ಸಾಗುತ್ತದೆ. ಬಹುಮುಖ್ಯವಾಗಿ ಮನುಷ್ಯನಿಗೆ ಬೇಕಾಗಿರುವುದು ಹಸಿದ ಹೊಟ್ಟೆಗೆ 'ಅನ್ನ'. ಅದುವೇ ಇಲ್ಲದಿದ್ದರೆ ಅವರ ಜೀವನ ಏನಾಗುತ್ತದೆ, ಎಂಬುವುದನ್ನು ಕಣ್ಣೀರಿನ ರೂಪದಲ್ಲಿ ಕಥೆಯು ತನ್ನ ಭಾವಾಭಿವ್ಯಕ್ತಿಯಲ್ಲಿ ಬಡತನದ ಸ್ಥಿತಿಗತಿಗಳನ್ನು ಕಟ್ಟಿಕೊಡುತ್ತದೆ. ಬಡತನದ ಗೋಳು ಅದುವೇ ಅವರ ಬಾಳಾಗಿರುತ್ತದೆ ಎಂಬುವುದನ್ನು ದಲಿತ ಸಂವೇದನೆಗಳ ಮೂಲಕ ಕಥೆಗಾರರು ತಮ್ಮ ತೀರ್ಪಿನ ವಾಸ್ತವಾಂಶದಲ್ಲಿ ತೋರಿಸಿ ಕೊಡುತ್ತಾರೆ. ನೊಂದು ಬೆಂದು ಬಡತನದ ಹಸಿವಿನ ಬೆಂಕಿಯಲ್ಲಿಯೇ ತಮ್ಮ ಜೀವನವನ್ನು ಸುಟ್ಟುಕೊಳ್ಳುತ್ತಿರುವ ದಲಿತ ಸಮುದಾಯಗಳ ಚಿತ್ರಣವನ್ನೇ ಈ ಕಥೆ ಕಣ್ಣಿಗೆ ತಂದುಕೊಟ್ಟು ಕಣ್ಣೀರಿನಿಂದ ಕಥೆಯಾಗಿ ಬರವಣಿಗೆಯ ಮಾತಿನಲ್ಲಿ ದಲಿತ ಚಹರೆಗಳನ್ನು ಸಮಾಜದ ಮೇಲೆ ಚೆಲ್ಲುತ್ತದೆ.

ಬಡತನವನ್ನು ನಿರ್ಮೂಲನೆ ಮಾಡಬೇಕಾಗಿರುವುದು ಈ ದೇಶವನ್ನಾಳಬೇಕೆಂಬುವವರ ಉದ್ದೇಶವಾಗಿರಬೇಕು. ಆದರೆ ಈ ಕಥೆಯಲ್ಲಿ ಬಡವರ ಬಡತನದ ಹಸಿವಿನ ಸಾವನ್ನು ಅಧಿಕಾರದಾಸೆಗಾಗಿ ಬಳಕೆ ಮಾಡಿಕೊಳ್ಳುವ, ಬಂಡವಾಳಶಾಹಿಗಳ, ನಾಯಕರ ದುರ್ವರ್ತನೆಯನ್ನು ತೋರಿಸಿ ಕೊಟ್ಟು, ಆಳುವ ಅಧಿಕಾರಿಶಾಹಿಗಳ ಅಮಾನವಿಯತೆಯನ್ನು ಲೇಖನಿಯಧ್ವನಿಯಿಂದ ಖಂಡಿಸುತ್ತದೆ. ಇಲ್ಲಿ ಕಥೆಗಾರರು ತಾವು ಕಂಡುಂಡಂತೆ ಅನುಭವಗಳನ್ನು ಕ್ರೋಢಿಕರಿಸಿ ದಮನಿತರ ಧ್ವನಿಯಾಗಿ, ದಲಿತರ ಒಳನೋವುಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ಅಭಿವ್ಯಕ್ತಪಡಿಸಿದ್ದಾರೆ. ದಲಿತರನ್ನು ಬಂಡವಾಳಶಾಹಿಗಳು ಹಾಗೂ ಅಧಿಕಾರಿಶಾಹಿಗಳು ಹೇಗೆ ಶೋಷಣೆಗೆ ಒಳಪಡಿಸಿದ್ದಾರೆ ಎಂಬುವುದನ್ನು ತಿಳಿಸುವುದೇ ಈ 'ಉರಿವ ಜೀವ' ಕಥೆಯ ಮೂಲ ಉದ್ದೇಶವಾಗಿದೆ. ಜಯಣ್ಣ ಮತ್ತು ಸುಂಕ್ಲವ್ವ ಎಂಬ ಗಂಡ ಹೆಂಡತಿಯರು ಅವರಿಗೆ ದೊಡ್ಡ ಮಗಳು ಸುಂಕ್ಲಿ, ಎರಡನೇಯ ಮಗ ಮರ್ಯಾ, ಮೂರನೆಯ ಮಗ ಸೊಲಗ, ಕೊನೆ ಮಗಳು ಪಾತಿ.

ಈ ಬಡಕುಟುಂಬದವರು ತಮ್ಮ ಊರನ್ನು ಬಿಟ್ಟು, ಹೊಟ್ಟೆ ಪಾಡಿಗಾಗಿ ದುಡಿಯುವುದಕ್ಕಾಗಿ ಮತ್ತೊಂದು ಊರಿಗೆ ಬಂದು, ಅಲ್ಲಿ ಮಲ್ಲನಗೌಡರೆಂಬ ಆ ಊರಿನ ಸಾಹುಕಾರನ ಮನೆಯನ್ನು ಕಟ್ಟಲು ಕೆಲಸಕ್ಕಾಗಿ ಬಂದು, ಆ ಗೌಡರ ಹೊಲದಲ್ಲಿ ಒಂದು ಚಿಕ್ಕ ಗುಡಿಸಲನ್ನು ಹಾಕಿಕೊಂಡು

ತಮ್ಮ ಬದುಕನ್ನು ನಡೆಸುತ್ತಿರುತ್ತಾರೆ. ಮಲ್ಲನಗೌಡರ ಮನೆಕಟ್ಟುವುದು ಮುಗಿದು ಹೋಗುತ್ತದೆ. ಆ ಬಡಕುಟುಂಬ ತಮ್ಮ ಊರಿಗೆ ಹೋಗಬೇಕೆಂದು ಅಂದುಕೊಂಡಿರುವ ಜಯಣ್ಣನ ಹೆಂಡತಿಗೆ ಮೈಯಲ್ಲಿ ಜ್ವರ ಬಂದು ತುಂಬಾ ಅನಾರೋಗ್ಯದಿಂದ ಬಳಲುತ್ತಿರುತ್ತಾಳೆ. ಈ ಕಾರಣಕ್ಕಾಗಿ ಜಯಣ್ಣ ತನ್ನ ಹೆಂಡತಿಗೆ ಆರೋಗ್ಯ ಸರಿಯಾದ ಮೇಲೆ ತನ್ನ ಊರಿಗೆ ಹೋಗಬೇಕೆಂದು ನಿರ್ಧರಿಸುತ್ತಾನೆ. ಹೀಗಿರುವಾಗ ಕಿತ್ತುತಿನ್ನುವ ಬಡತನ ಅವರನ್ನು ದಿನೆ, ದಿನೆ ನೋವಿನಲ್ಲಿಡುವಂತೆ ಮಾಡುತ್ತದೆ. ಬಿಸಿಲಿನ ತಾಪಕ್ಕೆ ಗುಡಿಸಲಿನಲ್ಲಿ ಮಲಗಿರುವ ಸುಂಕ್ಲವ್ವನಿಗೆ ಜ್ವರದ ಬಾಧೆ ಇನ್ನೂ ಹೆಚ್ಚಾಗುತ್ತದೆ. ಮನೆಯಲ್ಲಿ ಶೇಖರಿಸಿಕೊಂಡಿದ್ದ ಎಲ್ಲ ಧಾನ್ಯಗಳು ಮುಗಿಯುತ್ತ ಬರುತ್ತವೆ. ಸುಂಕ್ಲವ್ವಳ ಆರೋಗ್ಯ ಮಾತ್ರ ಸರಿಯಾಗುವುದಿಲ್ಲ.

ಬಿಸಿಲಿನಿಂದ ಮಕ್ಕಳು ನೀರು, ನೀರು ಎನ್ನುತ್ತಿರುತ್ತಾವೆ. ಮನೆಯಲ್ಲಿ ಕುಡಿಯಲು ನೀರು ಇರುವುದಿಲ್ಲ. ಜಯಣ್ಣ ನೀರು ತರಲೆಂದು ಹಳ್ಳಕ್ಕೆ ಹೋಗುತ್ತಾನೆ. ಆದರೆ ಹಳ್ಳದ ನೀರು ಹೊಂಡಾಗಿರುತ್ತದೆ. ಇದರಿಂದಾಗಿ ಹಳ್ಳದಿಂದ ಊರಲ್ಲಿರುವ ಬೋರಿಂಗಿಗೆ ಬಂದು ನಿಂತುಕೊಳ್ಳುತ್ತಾನೆ. ಆ ಬೋರಿಂಗಿಗೆ ನೀರಿಗಾಗಿ ಜಾತ್ರೆಯ ರೂಪದಲ್ಲಿ ಜನ ಸೇರಿರುತ್ತಾರೆ. ಎರಡು ದಿನದಿಂದ ವಿದ್ಯುತ್ ಇಲ್ಲದುದರಿಂದ ಊರಿನ ಎಲ್ಲಾ ಬೋರಿಂಗ್‌ನಲ್ಲಿ ನೀರು ಇರುವುದಿಲ್ಲ. ಇದೊಂದೆ ಆದ್ದರಿಂದ ಅಷ್ಟೊಂದು ಜನ ಸೇರಿರುತ್ತಾರೆ. ಜಯಣ್ಣನ ಮನೆಯಲ್ಲಿ ಮಕ್ಕಳೆಲ್ಲ ತಂದೆಯ ಬರುವಿಕೆಗಾಗಿ ಕಾಯುತ್ತಿರುತ್ತಾರೆ. ಇತ್ತ ಜಯಣ್ಣ ನೀರಿನ ಸರದಿಯಲ್ಲಿ ನಿಂತಿರುತ್ತಾನೆ. ಆಂಧ್ರದ ಕ್ಯಾಂಪಿನಿಂದ ಸೂರ್ಯರಾವ್‌ನ ಆಳುಗಳು ಮೂರು ಡ್ರಮ್ಮು ತೆಗೆದುಕೊಂಡುಬಂದು ತುಂಬಿಸಿಕೊಳ್ಳುತ್ತಿದ್ದಾರೆ. ಅವು ತುಂಬುವವರೆಗೆ ಮತ್ತು ಸಾಲಲ್ಲಿ ನಿಂತಿರುವ ಜನರು ನೀರು ತುಂಬಿಸಿಕೊಳ್ಳವವರೆಗೆ ಜಯಣ್ಣ ಕಾಯಬೇಕಾಗಿರುವ ಸ್ಥಿತಿ ಬಂದಿರುತ್ತದೆ. ಆದರೆ ತನ್ನ ಸಂಕಟವನ್ನು ತಾಳಲಾರದೆ ಯಪ್ಪಾ ನನ್ನ ಮಕ್ಕಳು ಗುಡಿಸಲಲ್ಲಿ ನೀರುನೀರೆಂದು ಅಳುತ್ತಿದ್ದಾರೆ.

ದಯಮಾಡಿ ನನಗೊಂದು ಕೊಡ ನೀರು ಬಿಟ್ಟುಬಿಡಿ ಎಂದು ಬೇಡಿಕೊಳ್ಳುತ್ತಾನೆ. ಆದರೆ ಅಲ್ಲಿ ಯಾರೂ ನೀರನ್ನು ಹಾಕದ ಮನಸ್ಥಿತಿಯಲ್ಲಿ ಇರುತ್ತಾರೆ. ಕೊನೆಗೆ ಜಯಣ್ಣನ ಸಂಕಟವನ್ನು ನೋಡಲಾರದೆ ಕನಿಕರ ತೋರಿ ಒಂದೆರಡು ಕೊಡ ನೀರು ಬಿಡುತ್ತಾರೆ. ಜಯಣ್ಣ ನೀರು ತುಂಬಿಸಿಕೊಂಡು ತನ್ನ ಹಸಿದು ಬಾಯಾರಿಕೆಯಿಂದ ಬಳಲುತ್ತಿರುವ ಹೆಂಡತಿ ಮಕ್ಕಳಿಗಾಗಿ ನೀರನ್ನು ಹೊತ್ತುಕೊಂಡು ಓಡೋಡಿ ಬಿಸಿಲೆನ್ನದೆ ಬೆವರಿಳಿಸಿಕೊಂಡು ಮಲ್ಲನ ಗೌಡರ ಹೊಲದಲ್ಲಿರುವ ತನ್ನ ಪುಟ್ಟ ಗುಡಿಸಲಿನ ಮನೆಗೆ ಬರುತ್ತಾನೆ. "ಜಯಣ್ಣನಿಗೆ ಬಂದದ್ದೇ ತಡ, ಮಕ್ಕಳು ಅಡ್ಡಬುರಿಸಿ ಎದ್ದು ಕುಂತವು. ಹೊಟ್ಟೆಲ್ಲಾ ಬೆನ್ನಿಗೆ ಹತ್ತಿಕೊಂಡು ಕೈ ಕಾಲು ಕಡ್ಡಿಯಂತಿದ್ದವು. ಮುಂಜಾನೆಯಿಂದ ಏನು ತಿಂದಿರಲಿಲ್ಲ. ಹಸಿವಿನಿಂದ ಕಂಗೆಟ್ಟಿದ್ದವು. ಜಯಣ್ಣ ಒಂದರಿಂದೆ ಒಂದು ನಾಲ್ಕು ಮಕ್ಕಳನ್ನು ಹುಟ್ಟಿಸಿದ್ದ. "ಯಪ್ಪಾ ಉಂಬಾಕ ಬೇಕು..... ಎಂದು ರಾಗ ತೆಗೆದವು.' 'ಸುಮ್ಕಿರ್‍ರಾ ನಿಮ್ಮವ್ವ

ಅಳಬ್ಯಾಡ್ರಿ ಅಂದು ನಾಲ್ಕು ಮಕ್ಕಳನ್ನ ತನ್ನ ತೆಕ್ಕಾಗ ತಕ್ಕಂಡ. ಮಕ್ಕಳಿಗೆ ನೀರುಕೊಟ್ಟ, ಮುನುಗುತ್ತಿದ್ದ ಸುಂಕ್ಲವ್ವ ಗಂಡ ಬಂದದ್ದು ನೋಡಿ ಹಾಂಗ ಎದ್ದು ಕುಂತಳು. ಆಕೆಗೂ ನೀರು ಕೊಟ್ಟ."[೧೩]

ಎಲ್ಲರೂ ನೀರು ಕುಡಿದು ನಂತರ ಹಸಿದುಕೊಂಡಿದ್ದ ಮಕ್ಕಳಿಗೆ ಕೊನೆಯದಾಗಿ ಉಳಿದಿದ್ದ ಸ್ವಲ್ಪ ಅಕ್ಕಿ ತೆಗೆದು, ಗಂಜಿ ಮಾಡಿ ಗಂಡ,ಹೆಂಡತಿ, ಮಕ್ಕಳು ಸೇರಿಕೊಂಡು ಹೊಟ್ಟೆ ತುಂಬ ಬರೀ ನೀರಿನ ಗಂಜಿಯನ್ನು ಕುಡಿದರು. ಜಯಣ್ಣ ನಂತರ ಹೆಂಡತಿಗೆ ನಾನು ಮಲ್ಲನಗೌಡರ ಮನೆಗೆ ಹೋಗಿ ಬರುತ್ತೇನೆ.ಧಣಿಯರ ಹತ್ತಿರ ಉಣ್ಣುವುದಕ್ಕೆ ಸ್ವಲ್ಪ ಕಾಳು ಕೇಳಿಬರುತ್ತೇನೆಂದು ಹೋಗುತ್ತಾನೆ. ಜಯಣ್ಣ ಮನೆಗೆ ಹೋದಾಗ ಮಲ್ಲನಗೌಡರು ಊಟ ಮಾಡುತ್ತಿರುತ್ತಾರೆ. ಜಯಣ್ಣ ಬಂದಿರುವುದನ್ನು ನೋಡಿ ಅವನಿಗೂ ಊಟಕ್ಕೆ ನೀಡುತ್ತಾರೆ. ಹಸಿದ ಹೊಟ್ಟೆಯಿಂದ ಊಟ ಮಾಡಿದ ಜಯಣ್ಣ ಗೌಡಸ್ಯಾನಿ ಗೌರಮ್ಮನನ್ನು ನೆನೆಯುತ್ತಾನೆ. ನಂತರ ಗೌಡರು ಊಟ ಮುಗಿಸಿ ಬಂದು ಜಯಣ್ಣನನ್ನು ವಿಚಾರಿಸುತ್ತಿರುವಾಗ, ಜಯಣ್ಣನ ಹೆಂಡತಿ ಎದೆ ಬಡಿದುಕೊಂಡು ಚೀರುತ್ತ ಬರುತ್ತಾಳೆ.

ಆಗ ಜಯಣ್ಣ ಏನಾಯಿತೆಂದು ವಿಚಾರಿಸುವಾಗಲೇ ಅವಳು ನೋವಿನಿಂದಾಗಿ ಮೂರ್ಛೆ ಹೋಗುತ್ತಾಳೆ. ಗೌಡರು ನೀರನ್ನು ಚುಮಿಕಿಸಿದಾಗ ಎಚ್ಚರವಾದಾಗ ಅವಳು ಅಳಲು ಪ್ರಾರಂಭ ಮಾಡುತ್ತಾಳೆ. ಏನಾಯ್ತು ಎಂದು ಜಯಣ್ಣ ಮತ್ತೆ ಕೇಳಿದಾಗ 'ಪಾತಿ' ಹಸಿವಿನಿಂದಾಗಿ ಮಣ್ಣುತಿಂದು ಸತ್ತಳು ಎಂದು ಹೇಳುತ್ತಾಳೆ. ಆಗ ಜಯಣ್ಣ ದುಃಖ ತಡೆಯದೆ ಗುಡಿಸಲು ಬಳಿ ಬಂದು ನೋಡಿದಾಗ 'ಪಾತಿ' ಮಣ್ಣುತಿಂದು ಸತ್ತು ಹೋಗಿರುತ್ತಾಳೆ. ನಂತರ ಊರಿನ ಜನರೆಲ್ಲರನ್ನು ಮಲ್ಲನಗೌಡರು ಸೇರಿಸಿ ಈ ಸಾವಿಗೆ ಶಾಸಕ ವೀರಯ್ಯಸ್ವಾಮಿ ಕಾರಣವೆಂದು ಹಾಗೂ ಕೂಳಿಲ್ಲದೆ ಮಣ್ಣುತಿಂದು ಮಗು ಸತ್ತಿರುವುದಕ್ಕೆ ಸತ್ಯಾಗ್ರಹವನ್ನು ಮಾಡಿಸುತ್ತಾನೆ. ರಾಜಕೀಯದ ಎರಡು ಗುಂಪುಗಳ ಘರ್ಷಣೆಯಲ್ಲಿ ಜಯಣ್ಣನಿಗೆ ತನ್ನ ಮಗುವನ್ನು ಮಣ್ಣು ಮಾಡಲು ಸಾಧ್ಯವಿಲ್ಲದಂತಾಗುತ್ತದೆ. ಕೊನೆಗೆ ಸತ್ತ ಮಗುವನ್ನು ಸುತ್ತಿಕೊಂಡು ತಮ್ಮ ಊರಿಗೆ ಓಡೋಡಿ ಹೋಗುತ್ತಾರೆ.

ಜಯಣ್ಣನ ಮಗು ಮಣ್ಣುತಿಂದು ಹಸಿವಿನಿಂದ ಸಾಯುವುದನ್ನು ಅದನ್ನೇ ಒಂದು ಅಸ್ತ್ರವನ್ನಾಗಿಸಿಕೊಂಡು ರಾಜಕೀಯ ಮಾಡಿ, ಮಗುವನ್ನು ಮಣ್ಣು ಮಾಡಲು ಬಿಡದೆ ಇರುವುದಕ್ಕೂ ಮಲ್ಲನಗೌಡರಂತ ಬಂಡವಾಳಶಾಹಿಗಳು ದಲಿತರ ಮೇಲೆ ಮಾಡುತ್ತಿರುವ ನಿರಂತರ ಶೋಷಣೆಯಾಗಿದೆ. ಅವರ ಸಂಪತ್ತಿನ ಸೊಕ್ಕಿನಿಂದ ದಲಿತರ ಮೇಲೆ ಸದಾ ದೌರ್ಜನ್ಯವನ್ನು ನಡೆಸುತ್ತಿದ್ದಾರೆ. ಅವರಿಗೆ ಅಧಿಕಾರ, ಸಂಪತ್ತು ಮುಖ್ಯ. ಮನುಷ್ಯರು ಅವರಿಗೆ ಬೇಕಾಗಿಲ್ಲ. ದಲಿತರನ್ನು ತಮ್ಮ ಉಪಯೋಗಕ್ಕಾಗಿ ಬಳಸಿಕೊಂಡು ಅವರಿಗೆ ನೆಲೆಯಿಲ್ಲದಂತೆ ಮಾಡಿ ಆರ್ಥಿಕ ಶೋಷಣೆಯನ್ನು ಮಾಡುತ್ತಾರೆ. ದಲಿತರ ಜೀವ ಉರಿವ ಬೆಂಕಿಯಲ್ಲಿ ಬದುಕುತ್ತದೆ ಎಂಬುವುದನ್ನು ಕಥೆಗಾರರು ತಮ್ಮ ಈ ಕಥೆಯಲ್ಲಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತರ ಕಷ್ಟಕಾರ್ಪಣ್ಯಗಳನ್ನು ತಿಳಿಸಿದ್ದಾರೆ.

ಅಖಿಲನ್‌ರವರು ಸಂಪಾದನೆ ಮಾಡಿರುವ 'ತಮಿಳು ಕಥಾ ಸೌರಭ' ಎಂಬ ಕಥಾ ಸಂಕಲನವನ್ನು ಶೇಷನಾರಾಯಣ ರವರು ಕನ್ನಡದ ಅನುವಾದ ಮಾಡಿದ್ದಾರೆ. ಈ ಕಥಾ

ಸಂಕಲನದಲ್ಲಿರುವ ನೀಲ ಪದ್ಮನಾಭನ್‌ರವರು ಬರೆದಿರುವ 'ಅಕ್ಕಿ' ಎಂಬ ಕತೆಯು 'ಸುವರ್ಣ ಕರ್ನಾಟಕ' ಸಂದರ್ಭದಲ್ಲಿ ಕರ್ನಾಟಕ ಸರಕಾರದ ಪರವಾಗಿ 'ಕನ್ನಡ ಮತ್ತು ಸಂಸ್ಕೃತಿ ಇಲಾಖೆ' ಅವರಿಂದ ಪ್ರಕಟಿತವಾದ 'ಸುವರ್ಣ ಕಥಾ ಸಂಕಲನದಲ್ಲಿರುವ' ಹಳೆಮನೆ ರಾಜಶೇಖರ ರವರು ಬರೆದಿರುವ 'ಉರಿವ ಜೀವ' ಎಂಬ ಕನ್ನಡದ ಕಥೆಯಂತೆ ಬಂಡವಾಳಶಾಹಿಗಳು ಸಮಾಜದಲ್ಲಿರುವ ದಲಿತ ವರ್ಗದವರ ಮೇಲೆ ತಮ್ಮ ಅಧಿಕಾರಿಗಳನ್ನು ಚಲಾಯಿಸಿ, ದೌರ್ಜನ್ಯದಿಂದ ಆರ್ಥಿಕ ಶೋಷಣೆಯನ್ನು ಮಾಡಿ, ಅವರನ್ನು ಅಸಹಾಯಕರನ್ನಾಗಿ ಮಾಡಿ ಅಸಮಾನತೆಯ ನೆಲೆಯಲ್ಲಿ ದಲಿತರಿಗೆ ಮೂಲಭೂತ ಸೌಕರ್ಯಗಳಿಂದ ಅವರನ್ನು ವಂಚಿಸಿ, ಹಸಿವಿನಿಂದ ನರಳಾಡುವಂತೆ ಮಾಡುತ್ತಿರುವ ದುಸ್ಥಿತಿಯನ್ನು ಈ ಕತೆಯು ಅಭಿವ್ಯಕ್ತಗೊಳಿಸುತ್ತದೆ. ಕೆಳವರ್ಗದವರು ಪ್ರತಿನಿತ್ಯ ತಮ್ಮ ಬೆವರನ್ನು ಸುರಿಸುತ್ತಿರುವುದು ಅಕ್ಕಿಗಾಗಿ ಆ ಅಕ್ಕಿ ಸಿಗದೆ ಇದ್ದರೆ ಅವರ ಜೀವ ಅಂದು ಉಪವಾಸದಿಂದ ನರಳಾಡಬೇಕಾಗುತ್ತದೆ.

ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಭ್ರಷ್ಟ ಅಧಿಕಾರಿಶಾಹಿವರ್ಗದವರ ಅಲಕ್ಷ್ಯತನದಿಂದ ಅದೇಷ್ಟೋ ಬಡ ಕುಟುಂಬಗಳಿಗೆ ಅಕ್ಕಿ ಸಿಗದೆ, ಅನ್ನಕ್ಕಾಗಿ ಭಿಕ್ಷೆ ಬೇಡಿಕೊಂಡು ಮನೆ ಮನೆ ತಿರುಗುವಂತೆ ಆಗಿರುತ್ತದೆ ಎಂಬುವುದನ್ನು ಈ ಕತೆಯು ತನ್ನ ಸಂವೇದನೆಯಲ್ಲಿ ದಲಿತರ ಹಸಿವಿನ ತೊಳಲಾಟವನ್ನು ವ್ಯಕ್ತಪಡಿಸುತ್ತದೆ. ಉಳ್ಳವರು ತಿನ್ನುವ ಅಕ್ಕಿಯನ್ನು ತಮ್ಮ ಬಂಡವಾಳ ವ್ಯವಸ್ಥೆ ಬಲಿಸಿಕೊಳ್ಳುವುದಕ್ಕಾಗಿ ಅದೇಷ್ಟೋ ಟನ್‌ಗಳ ಲೆಕ್ಕದಲ್ಲಿ ಸಂಗ್ರಹಿಸಿ ಶೇಖರಣೆ ಮಾಡಿ ತಮ್ಮ ತಮ್ಮ ಮಳಿಗೆಯಲ್ಲಿ ಮುಚ್ಚಿ ಇಟ್ಟಿರುತ್ತಾರೆ. ಆದರೆ ದುಡಿದು ತಿನ್ನುವ ದಲಿತರಿಗೆ ಮಾತ್ರ 'ಅಕ್ಕಿ' ಸಿಗುವುದಿಲ್ಲ. 'ಅಕ್ಕಿ' ಇರುವುದೇ ತಿನ್ನುವುದಕ್ಕಾಗಿ. ಆದರೆ ಅದನ್ನು ಸಂಗ್ರಹಿಸಿ ಸಮಾಜದ ಕೆಳವರ್ಗದವರಿಗೆ ಸಿಗದಂತೆ ಮಾಡುತ್ತಿರುವುದು ಬಂಡವಾಳಶಾಹಿಗಳು ದಲಿತರಿಗೆ ಮಾಡುತ್ತಿರುವ ನಿರಂತರ ಶೋಷಣೆಯಾಗಿರುತ್ತದೆ. ಅಧಿಕಾರಿಶಾಹಿಗಳು ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಂಡು ಕೆಳವರ್ಗದವರಿಗೆ 'ಅಕ್ಕಿ' ಇಲ್ಲದಂತೆ ಮಾಡಿ ಹಸಿವಿನಿಂದಲೇ ಸಾಯುವಂತೆ ಮಾಡುತ್ತಿದ್ದಾರೆ.

ಉಳ್ಳವರು ಹಸಿವು ಅಂದರೇನು ತಿಳಿಯದೇ ಅದರ ನೋವು, ಬೆಲೆ ಗೊತ್ತಾಗದೆ ಹಸಿವಿನ ಸಮಾಜವನ್ನೇ ನಿರ್ಮಿಸಿದ್ದಾರೆ. ಅವರಿಗೆ ಬಡವರೆಂದು ದಲಿತರೆಂದು ಕರೆದು ಮಾನವೀಯತೆಯನ್ನು ಮರೆತಿದ್ದಾರೆ. "ಏನ ನ್ಯಾಯ...? ಈ ರಗಳೆ...? ಮನೆ ಮನೆ ಸುತ್ತಿ ಭಿಕ್ಷೆ ಮಾಡಿ ಅಕ್ಕಿ ತಂದಿದ್ದಾನೆ... ಇಂಥವರಿಗೆಲ್ಲಾ ಏನೂ ತೊಂದರೆ ಮಾಡೋದು...? ಲಾರಿ ಲಾರಿ ಅಕ್ಕಿ ಕಳ್ಳತನವಾಗಿ ಸಾಗಿಸ್ತಾರೆ... ಅದನ್ನ ಕೇಳೋರಿಲ್ಲ...!"[೧೪] ಹೀಗೆ ಬಡವರಾದವರು ಅಕ್ಕಿಗಾಗಿ ಭಿಕ್ಷಾಟನೆ ಮಾಡಿಕೊಂಡು ಬದುಕನ್ನು ನಡೆಸುವುದಕ್ಕೂ ಹಾಗೂ ಹಳೇಮನೆ ರಾಜಶೇಖರ ರವರ 'ಉರಿವ ಜೀವ' ಕನ್ನಡದ ಕಥೆಯಲ್ಲಿ ಒಂದು ಬಡ ಕುಟುಂಬ ಬಂಡವಾಳಶಾಹಿಗಳ ಮನೆ ಕೆಲಸದಲ್ಲಿ ಆ ಕುಟುಂಬದ ಮಗು 'ಅನ್ನ' ಸಿಗದೆ ಹೊಟ್ಟೆ ಹಸಿವಿನಿಂದ ಮಣ್ಣುತಿಂದು ಸತ್ತು ಹೋಗುವ ಸ್ಥಿತಿಗೂ ಈ ಎರಡೂ ಕತೆಗಳ ಮೂಲಧ್ವನಿಯು ದಲಿತರು ಹಸಿವಿನಿಂದ ಪಡುತ್ತಿರುವ ಅವರವರ ಒಳನೋವುಗಳನ್ನು ತಿಳಿಸುತ್ತಿರುವ

ದಲಿತ ಸಂವೇದನೆಯ ಕಥೆಗಳಾಗಿರುತ್ತವೆ. ಬಂಡವಾಳಶಾಹಿಗಳ ಕುತಂತ್ರದ ಶೋಷಣೆಯಿಂದ ದಲಿತರಿಗೆ 'ಅನ್ನ' ಸಿಗದಿರುವ ಸ್ಥಿತಿಯನ್ನು ಮಾರ್ಕ್ಸ್ ಮತ್ತು ಲೋಹಿಯವಾದದ ನೆಲೆಯಲ್ಲಿ ಅಭಿವ್ಯಕ್ತಗೊಳಿಸುತ್ತವೆ.

ಜಿ.ಪಿ.ಬಸವರಾಜುರವರು ಬರೆದಿರುವ 'ಬೆತ್ತಲೆಯ ಬೆಳಕನುಟ್ಟು' ಎಂಬ ಕಥಾ ಸಂಕಲನದಲ್ಲಿರುವ 'ರೊಟ್ಟಿ' ಎಂಬ ಕಥೆಯು ಹಸಿವಿನ ಮಹತ್ವವನ್ನು, ಹಸಿವಿನ ಅಭಾವವನ್ನು ಕುರಿತು ವಿಶ್ಲೇಷಣೆಯನ್ನು ನೀಡುತ್ತ ಒಂದು ದಲಿತ ಕುಟುಂಬ ಅನ್ನದಿಂದ ವಂಚಿತವಾದರೆ ಅದು ಎಂಥಹ ದುರಾವಸ್ಥೆಯನ್ನು ಅನುಭವಿಸುತ್ತದೆ ಎಂಬುವುದನ್ನು ಸ್ಪಷ್ಟೀಕರಣಗೊಳಿಸುತ್ತದೆ.ಅನ್ನ ದೇವರ ಸ್ವರೂಪ, ದೇಹದ ಮೂಲ ಶಕ್ತಿ. ಅದೇ ಇಲ್ಲದಿದ್ದರೇ ಜೀವಿಸುವುದಾದರು ಹೇಗೆ...? ಜೀವನದಲ್ಲಿ ಏನಾದರೂ ಸಾಧಿಸಬೇಕಾದರೂ ಅನ್ನಬೇಕು. ಹಸಿದ ಹೊಟ್ಟೆಗೆ ಅನ್ನ ಸಿಕ್ಕರೆ ಏನು ಬೇಕಾದರೂ ಮಾಡಬಹುದು. ಅದಕ್ಕಾಗಿಯೇ ಮಹಾತ್ಮ ಗಾಂಧೀಜಿಯವರು 'ಹಸಿದವರಿಗೆ ಆಹಾರವೇ ದೇವರು' ಎಂದು ಹೇಳಿದ ಮಾತು ಸತ್ಯವಾಗಿದೆ.

ಆದರೆ ಅನ್ನವೇ ಇಲ್ಲದೆ ಬದುಕನ್ನು ಅತಂತ್ರತೆಯಿಂದ ಕಳೆಯುತ್ತಿರುವ ದಲಿತ ಕುಟುಂಬಗಳಿಗೆ ಸರಿಯಾದ ನೆಲೆಯಿಲ್ಲದಿರುವ, ಅವರ ಜೀವನಕ್ಕೆ ಕಾರಣವಾದ ಅಂತಹ ಪರಿಸ್ಥಿತಿಗೆ, ಅವರ ಅಸಹಾಯಕ ಜೀವನಕ್ಕೆ ಕಾರಣವನ್ನು ಹುಡುಕುತ್ತ, ದಲಿತರು ಪಡುತ್ತಿರುವ ಹೀನಾಯ ಜೀವನದ ಯಾತನೆಗಳನ್ನು ಈ 'ರೊಟ್ಟಿ' ಕತೆಯು ತನ್ನ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ತನ್ನ ಜೀವಸತ್ವ ವಿವರಣೆಯನ್ನು ನೀಡುತ್ತದೆ. ಅಷ್ಟೇ ಅಲ್ಲ ದಲಿತರು ತಮ್ಮ ಜೀವನ ನಿರ್ವಹಣೆಗೆ ಸಿಗಬೇಕಾಗಿರುವ ಮೂಲ ಸೌಕರ್ಯಗಳಾದ ಆಹಾರ, ನೀರು, ಗಾಳಿ, ವಸತಿ, ವಸ್ತ್ರಗಳಿಂದ ಹೇಗೆ ವಂಚಿತರಾಗಿರುತ್ತಾರೆ ಎಂಬುವುದನ್ನು 'ರೊಟ್ಟಿ' ಕಥೆಯು ಅರ್ಥೈಸುತ್ತದೆ.ದೇಶದ ಸಮಸಮಾಜ ನಿರ್ಮಾಣದ ಸಮಾನತೆಯ ತತ್ವವನ್ನು ಧ್ಯೇಯವನ್ನಾಗಿ ಮಾಡಿಕೊಡಿರುವ ದೇಶದಲ್ಲಿ ಅಸಮಾನತೆ ಹೇಗೆ ತಾಂಡವವಾಡುತ್ತಿದೆ ಎಂಬುವುದನ್ನು ತಿಳಿಸಿಕೊಡುತ್ತದೆ. ಅಧಿಕಾರಿಶಾಹಿ ವರ್ಗದವರು ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದೆ, ಸಂವಿಧಾನದ ಕಾನೂನುಗಳನ್ನು ಪಾಲಿಸದೆ, ಅದರಿಂದ ದಲಿತರನ್ನು ವಂಚಿಸಿ ಅಸಮಾನತೆಯಿಂದ ದೇಶ ಕೂಡಿರುವುದಕ್ಕೆ ಕಾರಣವಾಗಿರುತ್ತದೆ ಎಂಬುವುದನ್ನು ಈ ಕಥೆಯು ನಿರೂಪಿಸುತ್ತದೆ.

ಅನ್ನವಿಲ್ಲದೆ ಸರಕಾರದ ಸೌಲಭ್ಯಗಳಿಂದ ವಂಚಿತರಾಗಿ ಬಡತನವನ್ನೆ ತಮ್ಮ ಜೀವನವನ್ನಾಗಿ ಮಾಡಿಕೊಂಡು ದೇಶದ ಆರ್ಥಿಕ ಅಭಿವೃದ್ಧಿಗೆ ಕುಂಠಿತವಾಗಿರುವುದಕ್ಕೆ ಅವರ ಸಹಜ ಆರ್ಥಿಕತೆಗೆ ಕಾರಣವಾಗಿ, ಅವರ ಶ್ರಮದ ವ್ಯರ್ಥತೆಯನ್ನು ಗಮನಿಸಿ ಅದರಿಂದಾಗುವ ದೇಶದ ಅಸಮತೋಲನದ ಸ್ಥಿತಿಗತಿಗಳನ್ನು ಈ 'ರೊಟ್ಟಿ' ಕತೆಯಲ್ಲಿ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ಓಡಿದಿಟ್ಟಿದ್ದಾರೆ.ದಲಿತರಿಗೆ ಸಿಗಬೇಕಾದ ಮೂಲ ಸೌಕರ್ಯಗಳು ಸಿಕ್ಕರೆ ಅವರು ಇತರರಂತೆ ಎಲ್ಲವನ್ನು ಸಾಧಿಸಿ ತೋರಿಸಬಲ್ಲರು. ಅವರಲ್ಲೂ ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಸಾಮರ್ಥ್ಯವಿದೆ.

ಅದನ್ನು ಉಪಯೋಗಿಸಿಕೊಂಡಾಗ ಮಾತ್ರ ದೇಶದ ಸಮಾನತತ್ವ ಸಾರ್ಥಕವಾಗುತ್ತದೆ ಎಂಬುವುದನ್ನು ರೊಟ್ಟಿ ಕತೆಯು ತನ್ನ ನಿಲುವುಗಳನ್ನು ಕಟ್ಟಿಕೊಟ್ಟಿದೆ. ಕಥೆಗಾರರು ಈ ಕತೆಯಲ್ಲಿ ಸಂಜೆಯ ಹೊತ್ತು ಒಂದು ವಿಶಾಲವಾದ ಬಯಲಿನಲ್ಲಿ ಸಂಚರಿಸುತ್ತಿರುವಾಗ ಅಲ್ಲಿಯ ಸದೃಶ್ಯಗಳನ್ನೆ ತಮ್ಮ ಈ ಕತೆಯ ಸನ್ನಿವೇಶಗಳಿಗಾಗಿ ಬಳಕೆ ಮಾಡಿಕೊಂಡಿದ್ದಾರೆ. ಬಯಲು ಎಂದ ತಕ್ಷಣ ಅಲ್ಲಿನ ವಾತಾವರಣದಲ್ಲಿ ಮಕ್ಕಳು ಬಯಲನ್ನೆ ಮೈದಾನವನ್ನಾಗಿ ಮಾಡಿಕೊಂಡು ತಮ್ಮಿಷ್ಟದಂತೆ ಆಟವಾಡಿಕೊಳ್ಳುತ್ತಾರೆ.

ಬಯಲಿನ ಉಪಯೋಗ ಎಂದರೆ ಅದು ಎಲ್ಲರಿಗೂ ಪ್ರೀಯವಾದದ್ದು. ಅವರವರಿಗೆ ಬೇಕಾದ ರೀತಿಯಲ್ಲಿ ಬಯಲನ್ನು ಬಳಸಿಕೊಳ್ಳುತ್ತಾರೆ. ಆ ಬಯಲು ಎಲ್ಲರಿಗೂ ಅವಕಾಶ ಮಾಡಿಕೊಡುತ್ತದೆ. ಅದು ದಿಕ್ಕಿಲ್ಲದ, ನೆಲೆಯಿಲ್ಲದ ಅಲೆಮಾರಿ ಬಡ ದಲಿತ ಕುಟುಂಬಕ್ಕೂ ಆ ಬಯಲೇ ಅವರ ಅರಮನೆ. ಅದೇ ಅವರಿಗೆಲ್ಲ ದಿಕ್ಕು. ಆ ಬಯಲಿನಲ್ಲಿ ಹರಟೆಯಲ್ಲಿ ಮುಳುಗಿದವರ, ಹವಾ ಸಂಚಾರದವರ ನಡುವೆ, ಧೂಳು ತುಂಬಿದ ಅವ್ಯವಸ್ಥೆಯಲ್ಲಿ ಕೂಡಿರುವ ಆ ಬಯಲಿನ ಪಕ್ಕದಲ್ಲಿ ಒಂದು ದಲಿತ ಬಡಕುಟುಂಬ ಮೂಲೆಯಲ್ಲಿ ತನ್ನ ಬಿಡಾರದೊಂದಿಗೆ ವಾಸವಾಗಿರುವುದನ್ನು ಕಥೆಗಾರರು ಕಾಣುತ್ತಾರೆ.

ಎಲ್ಲಿ ದುಡಿಮೆಯೋ, ಎಲ್ಲಿ ಅನ್ನವೋ ಅಂತೂ ಬಯಲನ್ನು ನಂಬಿದ್ದ ಆ ಸಂಸಾರ ಡೇರೆಯನ್ನು ಹಾಕಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಅಕ್ಕ ಪಕ್ಕದಿಂದ ಸೌದೆಯನ್ನು ಹಾಯ್ದುಕೊಂಡು ಬಂದು, ಎಲ್ಲಿಂದಲೋ ನೀರನ್ನು ಕಷ್ಟ ಪಟ್ಟು ತುಂಬಿಕೊಂಡು ಬಂದು, ಸರಿಯಾದ ಶುಭ್ರ ಬಟ್ಟೆಗಳಿಲ್ಲದೆ, ಒಂದು ಅಸಹಾಯಕ ಜೀವನವನ್ನು ನಡೆಸುತ್ತಿರುವುದನ್ನು ಕಂಡರು. ಡೇರೆಯ ಒಳಗೆ ಅಲ್ಪ ಸ್ವಲ್ಪ ಅಡುಗೆ ಸಾಮಾನುಗಳಿದ್ದವು. ಅವರದೆಯಾದ ಅದೇನೋ ತುಂಬಿಕೊಂಡು ಕಟ್ಟಿದ್ದ ಗಂಟುಗಳಿದ್ದವು. ಮಳೆ ಏನಾದರೂ ಬಂದರೆ ಮುಗಿಯಿತು ಮಲಗಲು ಸಾಧ್ಯವಾಗದ ಸಂಸಾರ, ಅದರಲ್ಲಿಯೇ ಜೀವನ ನಡೆಸುವ ಸ್ಥಿತಿಯಿಂದ ಕೂಡಿತ್ತು. ಇದನ್ನು ಕಂಡು ಡೇರೆಯ ಹೊರಗಡೆ ಒಮ್ಮೆ ಕಥೆಗಾರರು ನೋಡಿದಾಗ ಒಲೆಹೂಡಿದ್ದ ತಾಯಿ ರೊಟ್ಟಿಯನ್ನು ಬೇಯಿಸುತ್ತಿದ್ದಳು. ಅತ್ತ ಗಾಳಿಯು ಸುಯ್ಯೆಂದು ಬೀಸುತ್ತಿತ್ತು. ಇದರಿಂದಾಗಿ ರೊಟ್ಟಿ ಮಾಡಲು ತಾಯಿಗೆ ತೊಂದರೆಯಾಗುತ್ತಿತ್ತು. ಒಣಗಿದ ಸೌಧೆಗಳಿಲ್ಲದೆ ಒಲೆಯು ಸರಿಯಾಗಿ ಉರಿಯುತ್ತಿರಲಿಲ್ಲ. ಆ ತಾಯಿ ಕಷ್ಟಪಟ್ಟು ರೊಟ್ಟಿಯನ್ನು ಬೇಯಿಸುತ್ತಿದ್ದಳು.

ಒಳಗಡೆ ಬೀಡಿಯನ್ನು ಎಳೆಯುತ್ತ ಗಂಡನು ಕುಳಿತುಕೊಂಡಿದ್ದನು. ಅವನು ತುಂಬ ದಣಿದವನಂತೆ ಕಾಣುತ್ತಿದ್ದನು. ಹಸಿದ ಹೊಟ್ಟೆಯಲ್ಲಿ ಅಡುಗೆ ಮಾಡುತ್ತಿರುವ ಅವಳನ್ನೇ ನೋಡುತ್ತಿದ್ದನು. ಆ ತಾಯಿ ಪಕ್ಕದಲ್ಲಿ ಮಗು ಯಾವುದೊ ಗೊಂದಲಮಯದಲ್ಲಿ ಸದ್ದು ಮಾಡುತ್ತಿತ್ತು. ಆ ಗೊಂದಲಕ್ಕೆ ಆ ಮಗುವಿನ ಹಸಿವು ಕಾರಣವಾಗಿತ್ತು. ಒಂದು, ಎರಡು, ಮೂರು, ಹದಿನಾಲ್ಕು, ಹದಿನೆಂಟು, ಏಳು ಹೀಗೆ ಹಾಡುತ್ತ ಲೆಕ್ಕ ತಪ್ಪಿದಂತೆ ಭಾಸವಾಗುತ್ತ ಅದನ್ನು ಹಾಡಿನ ರೂಪದಲ್ಲಿ ಹೇಳುತ್ತಿತ್ತು. ಇದನ್ನು ನೋಡಿದ ಆ ಮಗುವಿನ ತಂದೆ ಮಗುವಿನ ಬೆನ್ನಿನ ಮೇಲೊಂದು ಗುದ್ದು

ಗುದ್ದಿದನು. ಅದರಿಂದಾಗಿ ಆ ಮಗು ಅಳತೊಡಗಿತು. ಅದನ್ನು ಕಂಡ ತಾಯಿ ಕೋಪದಿಂದ ಬೆನ್ನಿಗೆ ಗುದ್ದು ಕೊಟ್ಟವನನ್ನು ನೋಡಿದಳು. ಆಗ ಮಗು ಅಳುತ್ತಲೇ ತಾಯಿಯ ಮಡಿಲನ್ನು ಸೇರಿತು. ನಂತರ ಆಕೆಯ ಗಂಡ ಆ ಮಗುವನ್ನು ಕುರಿತು ಇವನು ಶಾಲೆಯನ್ನು ಕಲಿತಹಾಗೆನೇ ಮಗ್ಗಿಯನ್ನು ಸರಿಯಾಗಿ ಹೇಳುವುದಕ್ಕೆ ಬರುವುದಿಲ್ಲ. ನಮ್ಮಂತೆಯೇ ಮುಂದೆ ಊರೂರುಸುತ್ತಿ ಬದುಕ ಬೇಕಾಗುತ್ತದೆ.

ಅವನಿಗೆ ಒಂದು ನಾಕು ಏಟು ಕೊಡು ಇಲ್ಲ ಅಂದ್ರೇ ಅವನು ಶಾಲೆ ಕಲಿಯವುದಿಲ್ಲವೆಂದು ತನ್ನ ಹೆಂಡತಿಗೆ ಹೇಳುತ್ತಾನೆ. ಆದರೆ ಆ ತಾಯಿ ಅವನ ಮಾತನ್ನು ಲೆಕ್ಕಕ್ಕೆ ತೆಗದುಕೊಳ್ಳದೆ ಮಗುವನ್ನು ಸಂತೈಸುತ್ತ ತನ್ನ ಮಡಿಲಲ್ಲಿಟ್ಟುಕೊಂಡು ಹಾಗೆಯೇ ರೊಟ್ಟಿ ತಟ್ಟುತ್ತಿದ್ದಳು. ಆಗ ಅವಳ ರೊಟ್ಟಿ ತಟ್ಟುವನಾದದ ಲಯಕ್ಕೆ ಆ ಮಗು ಅಳುವುದನ್ನು ನಿಲ್ಲಿಸಿತು. ಆ ನಾದವನ್ನು ತನ್ನ ಎದೆಯೊಳಗೆ ತಂದುಕೊಂಡಾಗ ರೊಟ್ಟಿಯನ್ನು ನೋಡುತ್ತ ತಾಯಿಯ ಮಡಿಲಲ್ಲಿ ಕುಳಿತುಕೊಂಡಿತ್ತು. ಒಲೆಯಲ್ಲಿ ಗಾಳಿಯ ಬೀಸುವಿಕೆಯಿಂದ ಜ್ವಾಲೆಗಳು ನರ್ತಿಸುತ್ತಿದ್ದವು. ಮೂರು ಕಲ್ಲುಗಳ ಮೇಲೆ ಕಾದ ಹೆಂಚು ರೊಟ್ಟಿಯ ಘಮ ಘಮ ಆ ಮಗುವಿನ ಮೂಗಿಗೆ ಬಂದು ಮುತ್ತಿಕೊಂಡಿತು. ರೊಟ್ಟಿ ರೊಟ್ಟಿಯೇ ಯಾರು ಎಲ್ಲಿ ಮಾಡಿದರೂ ಅದರ ಪರಿಮಳ ಕಡಿಮೆಯಾಗುವುದಿಲ್ಲ.ಇದನ್ನು ನೋಡುತ್ತಿದ್ದ ಕಥೆಗಾರರ ಮನಸ್ಸು ಅರಳಿತು.

ರೊಟ್ಟಿಯ ವಾಸನೆ ಮೂಗಿಗೆ ತಾಕಿತು. ನಿಧಾನವಾಗಿ ಕಥೆಗಾರರು ಹೆಜ್ಜೆಗಳನ್ನು ಎತ್ತಿಡುತ್ತಿದ್ದಂತೆ "ಹೆಂಚಿನಿಂದ ರೊಟ್ಟಿಯನ್ನು ತೆಗೆದು, ಮಡಿಲಿನಿಂದ ಮಗುವನ್ನು ದೂರ ಸರಿಸಿದ ತಾಯಿ ರೊಟ್ಟಿಯನ್ನು ಮುರಿದು ಅರ್ಧ ಮಾಡಿದಳು. ಅದು ಸುಡದಂತೆ ಸೆರಗಿನಲ್ಲಿಟ್ಟು ಆರಿಸಿ ಮಗುವಿನ ಕೈಯಲ್ಲಿಟ್ಟಳು. ಮಗು ರೊಟ್ಟಿಯನ್ನು ಮುರಿದು ಮುರಿದು ಬಾಯಿಗಿಟ್ಟಿತು. ಒಂದು ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಬತ್ತು ಹತ್ತು ಮಗು ಹೇಳುತ್ತಲೇ ಹೋಯಿತು."[೧೫] ಇದನ್ನು ಕಂಡ ಗಂಡ ಹೆಂಡತಿಯರು ಹಿಗ್ಗಿದರು. ಆಗ ಆ ಮಗು ಮಗ್ಗಿಯನ್ನು ತಪ್ಪಾಗಿ ಹೇಳುವುದಕ್ಕೆ ಮಗುವಿಗೆ ರೊಟ್ಟಿಯಿಲ್ಲದ ಹಸಿದ ಹೊಟ್ಟೆ ಕಾರಣವಾಗಿತ್ತು. ರೊಟ್ಟಿ ಸಿಕ್ಕ ಮೇಲೆ ಆ ಮಗು ಮಗ್ಗಿಯನ್ನು ಸರಿಯಾಗಿ ಹೇಳುವುದಕ್ಕೆ ದಲಿತರಿಗೆ ಸರಿಯಾಗಿ ಅನ್ನವನ್ನು ನೀಡಿದ್ದರೆ, ಅವರಿಗೆ ಸಿಗಬೇಕಾದ ಹಕ್ಕುಗಳು ಸರಿಯಾಗಿ ಸಿಕ್ಕಿದ್ದರೆ, ಅವರು ಎಲ್ಲವನ್ನು ಕಲಿಯಬಲ್ಲರು, ಏನನ್ನು ಬೇಕಾದರು ಸಾಧಿಸಿ ತೋರಿಸಬಲ್ಲರು ಎಂಬ ಸತ್ಯವನ್ನು ಈ ರೊಟ್ಟಿ ಕಥೆಯ ಮೂಲಕ ಕಥೆಗಾರರು ದಲಿತರ ಒಳನೋವಿನ ಸೂಕ್ಷ್ಮ ಸಂವೇದನೆಗಳನ್ನು ಈ ಕಥೆಯ ಮೂಲಕ ಚಿತ್ರಿಸುತ್ತ, ದಲಿತರಿಗೆ ಆಗಿರುವ ಶೋಷಣೆಯನ್ನು ಕುರಿತು ಮಾರ್ಮಿಕವಾಗಿ ಟೀಕಿಸಿದ್ದಾರೆ.

'ಕಥಾ ಭಾರತಿ' ಎಂಬ ಕಥಾ ಸಂಕಲನವನ್ನು ಜಿ.ಎಸ್.ಖೂಬಾರವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ತಮಿಳಿನ ಶ್ರೀಪವಣ್ಣನ್‌ರವರು ಬರೆದಿರುವ 'ಅಂಗಿ' ಎಂಬ ಕತೆಯು ಕನ್ನಡದ ಜಿ.ಪಿ.ಬಸವರಾಜುರವರು ಬರೆದಿರುವ 'ಚಿತ್ತಲೆಯ ಬೆಳಕನುಟ್ಟು' ಎಂಬ ಕಥಾ ಸಂಕಲನದಲ್ಲಿರುವ 'ರೊಟ್ಟಿ' ಎಂಬ ಕನ್ನಡದ ಕತೆಯಂತೆ ದಲಿತರ ಮಕ್ಕಳ ಬಡತನದ

ಬೆಂಕಿಯಲ್ಲಿ ಬೇಯುತ್ತಿರುವ ಅವರ ಅಸಹಾಯಕ ಜೀವನ ಚಿತ್ರವಣವನ್ನು ಚಿತ್ರಿಸುತ್ತವೆ. ಪ್ರಜಾಸತ್ತಾತ್ಮಕ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಸರ್ವರಿಗೂ ಸಮಬಾಳು, ಸಮಪಾಲು ತತ್ವವನ್ನು ಅಂಗಿಕರಿಸಿಕೊಂಡು ಬದುಕುತ್ತಿರುವ ಸಮಾನತೆಯ ಕಲ್ಪನೆಯ ವ್ಯವಸ್ಥೆಯಲ್ಲಿ ಬದುಕುತ್ತಿರುವ ಪ್ರತಿಯೊಬ್ಬರಿಗೂ ಮೂಲಭೂತ ಸೌಕರ್ಯಗಳಾದ ಆಹಾರ, ನೀರು, ವಸ್ತ್ರ, ಶಿಕ್ಷಣ ಸಿಗಬೇಕಾಗಿರುವುದು ಅನಿವಾರ್ಯ ಆತ್ಯವಶ್ಯಕವಾಗಿದೆ. ಅದು ಸಂವಿಧಾನಾತ್ಮಕ ಬದುಕುವ ಹಕ್ಕಾಗಿರುತ್ತದೆ.

ಆದರೆ ಬಂಡವಾಳಶಾಹಿಗಳು ತಮ್ಮ ಪ್ರಾಬಲ್ಯದಿಂದ ಸಮಾಜವನ್ನು ಅಸಮಾನತೆಯಲ್ಲಿ ತಂದು ಬಡತನವನ್ನು ಸ್ಥಾಪಿಸಿ, ದಲಿತರಿಗೆ ಸಿಗಬೇಕಾಗಿರುವ ಮೂಲಭೂತ ಸೌಕರ್ಯಗಳಿಂದ ವಂಚಿಸಿ ಶೋಷಣೆ ಮಾಡುತ್ತಿರುವುದನ್ನು ಈ ಕತೆಗಳು ತಮ್ಮ ವಾಸ್ತದ ನೆಲೆಯಲ್ಲಿ ಕಟ್ಟಿಕೊಟ್ಟಿವೆ. ದಲಿತರ ಮಕ್ಕಳಿಗೆ ಬಾಲ್ಯವಸ್ಥೆಯಲ್ಲಿ ಸಿಗಬೇಕಾಗಿರುವ ಶಿಕ್ಷಣ ವ್ಯವಸ್ಥೆಯಿಂದ ಕಲಿಕೆಯಲ್ಲಿ ವಂಚಿತರಾಗಿದ್ದಾರೆ. ಮತ್ತೆ ತಮ್ಮ ತಂದೆ ತಾಯಿಗಳು ಮಾಡುತ್ತಿದ್ದ ಬಂಡವಾಳಶಾಹಿಗಳ ಚಾಕರಿಯನ್ನು ಮಾಡಿಕೊಂಡು ಬಡತನದಲ್ಲಿಯೇ ಜೀವಿಸುಂತಾಗಿದೆ. ತಮ್ಮ ಹೊಟ್ಟೆ ಹಸಿವಿಗಾಗಿ ಕೂಲಿಯನ್ನು ಮಾಡಿದರೂ ತೊಟ್ಟುಕೊಳ್ಳಲು ಒಂದು ಜೊತೆ ಸರಿಯಾದ ಬಟ್ಟೆಗಳು ಸಹ ಇರುವುದಿಲ್ಲ. ಇಂತಹ ಪರಿಸ್ಥಿತಿಯ ಚಿತ್ರಣವನ್ನು ಈ ಕತೆಗಳು ತೋರಿಸುತ್ತವೆ.

ದಲಿತರ "ಧನಪತ...! ಅಳಬೇಡ ಮಗು...! ನಾವು ದರಿದ್ರರಿದ್ದೇವೆಂದು ತಿಳಿದು ಈ ಜಗತ್ತು ಹೀಗೆ ಮನಬಂದಂತೆ ಮಾತಾಡುತ್ತದೆ. ಹೋಗಲಿ ಬಿಡು ಮಗು...! ಅಳಬೇಡ ತಾಯಿಯು ಧನಪತನ ತಲೆಯ ಮೇಲೆ ಕೈಯಾಡಿಸುತ್ತ 'ನಿನಗೆ ಅಂಗಿ ಹೊಲಿದು ಕೊಡಬೇಕಾಗಿದೆಯಷ್ಟೇ ಅಲ್ಲವೇ...? ಮಸೀನಿನ ಮೇಲೆ ಹೊಲಿದರೇ ಹೊಲಿಗೆ ಎನಿಸಿಕೊಳ್ಳುವುದಿಲ್ಲ. ನಾನು ಸೂಜಿದಾರದಿಂದ ಹೊಲಿದು ಕೊಡುತ್ತೇನೆ."[೧೬] ಎಂದು ಹೇಳುವ ತಾಯಿಯ ಮಾತಿನಲ್ಲಿ ಬಡತನದಿಂದ ತುಂಬಿದ ನೋವಿನ ಬೆಂಕಿ ಇದೆ. ದಲಿತರು ತಮ್ಮ ಮಕ್ಕಳಿಗೆ ಶಾಲೆಗೆ ಹೋಗುವುದಕ್ಕೆ ಸರಿಯಾದ ಬಟ್ಟೆಯಿಲ್ಲದಂತಹ ಸ್ಥಿತಿಗೆ ಬಂಡವಾಳಶಾಹಿಗಳು ದಲಿತರನ್ನು ದುಡಿಸಿಕೊಂಡು ಆರ್ಥಿಕ ಶೋಷಣೆಯನ್ನು ಮಾಡಿರುವುದೇ ಇದಕ್ಕೆ ಕಾರಣವಾಗಿದೆ. ಇದರಂತೆ ಕನ್ನಡದ ಕಥೆಗಾರರಾದ ಜಿ.ಪಿ.ಬಸವರಾಜುರವರು ಬರೆದಿರುವ ಕನ್ನಡದ 'ರೊಟ್ಟಿ' ಕಥೆಯು ಒಂದು ದಲಿತ ಕುಟುಂಬ ಅನ್ನದಿಂದ ವಂಚಿತವಾಗಿರುವ ಬಡತನದ ದುಸ್ಥಿತಿಯನ್ನು ಅಭಿವ್ಯಕ್ತಗೊಳಿಸುತ್ತದೆ.ಇವೆರಡೂ ಕಥೆಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ದಲಿತರು ಪಡುತ್ತಿರುವ ನೋವುಗಳನ್ನು ಅವರಿಗೆ ಆಗಿರುವ ಶೋಷಣೆಯ ನೆಲೆಯಲ್ಲಿ ಕಥೆಗಳು ಗುರುತಿಸಿಕೊಡುತ್ತವೆ.ತಮ್ಮ ದಲಿತ ಸಂವೇದನೆಗಳ ಮೂಲಕ ದಲಿತರ ಸಾಮಾಜಿಕ ಸ್ಥಿತಿಗಳನ್ನು ಅವರಿಗಿರುವ ಹೋರಾಟದ ಸವಾಲುಗಳನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಲ್ಲಿ ಈ ಎರಡೂ ಕಥೆಗಳು ತಿಳಿಸುತ್ತವೆ.

ನವಲೇಖನ ಕನ್ನಡ ಕತೆಗಳು ಎಂಬ ಕಥಾ ಸಂಕಲನವನ್ನು ಎಸ್.ಜಿ.ಸಿದ್ದರಾಮಯ್ಯರವರು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಹಾಳು ಸುಡಗಾಡ ಬದುಕು' ಎಂಬ

ಕಥೆಯನ್ನು ಹನುಮಂತ ಹಾಲಗೇರಿಯವರು ಬರೆದಿದ್ದಾರೆ. ಈ ಕಥೆಯು ದಲಿತರು ಪಡುತ್ತಿರುವ ಬಡತನದ ಧಾರಣಸ್ಥಿತಿಯನ್ನು ಕುರಿತು ವಿವರಿಸುತ್ತದೆ.ಯಾರಾದರೂ ಸತ್ತರೆ ಮಾತ್ರ ಇವರಿಗೆ ಹೊಟ್ಟೆ ತುಂಬ ಊಟಸಿಗುವ, ಸುಡುಗಾಡು ಕಾಯುವ ಕುಟುಂಬದ ಹೀನ ಪರಿಸ್ಥಿತಿಯನ್ನು ಈ ಕಥೆಯು ಮನೋವ್ಯಥೆಯ ರೂಪವಾಗಿ,ತನ್ನ ಘಟನಾವಳಿಗಳನ್ನು ಬಿಚ್ಚಿಕೊಳ್ಳುತ್ತ ಹೋಗುತ್ತದೆ. ರೈತರಿಗೆ ಜಮೀನು, ಜಾನುವಾರುಗಳು ಆಸ್ತಿಯಾದರೆ, ಇವರಿಗೆ ಸುಡಗಾಡೇ ಬದುಕಿಗಿರುವ ದೊಡ್ಡ ಆಸ್ತಿ. ಅದನ್ನು ನಂಬಿಕೊಂಡು ಹೆಣಗಳು ಬರುವುದನ್ನು ನೋಡಿಕೊಂಡು, ದಿನ ಕಳೆಯುವುದೇ ಇವರ ಜೀವನ. ಯಾರಾದರೂ ಸತ್ತರೆ ಆ ದಿನ ಊಟ, ಇಲ್ಲದಿದ್ದರೆ ಉಪವಾಸ.

ಇಂತಹ ಸ್ಥಿತಿಯಿಂದ ಬದುಕುತ್ತಿರುವ ಕುಟುಂಬದ ಸ್ಥಿತಿಯನ್ನು ದಲಿತರ ಬದುಕಿನ ಚಿತ್ರಣವನ್ನು ಈ ಕಥೆಯು ಚಿತ್ರೀಕರಿಸುತ್ತದೆ. ಆಂಧ್ರಪ್ರದೇಶದ ಸುಡುಗಾಡುಕಾಯುವ ಕಾಪಾಲಿಕ ಎಂಬ ಬುಡಕಟ್ಟಿನವರು ಯಾವುದೊಂದೋ ಕಾರಣಕ್ಕೆ ನೆಲೆ ಕಳೆದುಕೊಂಡು ಹುಬ್ಬಳ್ಳಿಗೆ ಬಂದುಸುಡುಗಾಡುಗಟ್ಟೆಗಳಲ್ಲಿ ನೆಲೆ ನಿಂತಿದ್ದಾರೆ. ದರಿಯ ಮತ್ತು ಅವನ ಹೆಂಡತಿ ಮಾತೆವ್ವಅಲ್ಲಿ ವಾಸ ಮಾಡುತ್ತಿದ್ದರು. ದರಿಯನ ಜನ್ಮನಾಮ ದೊರೆರಾಜ್.ಅದು ಅವನ ಕಾಯಕದಿಂದ ಅಲ್ಲಿನ ಸುತ್ತ ಮುತ್ತಲಿನ ಜನರು 'ದರ್ಯಾ' ಎಂದು ಕರೆಯುತ್ತಿದ್ದರು.

ಅದರಂತೆ ಅವನ ಹೆಂಡತಿ ಮೇರಿಮಾತಾ ಆ ನೆಲದ ನುಡಿಗೆ ಅನುಗುಣವಾಗಿ 'ಮಾತೆವ್ವ' ಆಗಿದ್ದಳು. ಒಂದು ವರ್ಷದಲ್ಲಿ 'ಸ್ಟೈಲ್ಲಾ' ಎಂಬ ಮಗಳು ಜನಿಸಿದ್ದಳು. ಇವರ ಇಡೀ ಕುಟುಂಬ ಸುಡುಗಾಡನ್ನು ನಂಬಿಕೊಂಡು ಅನ್ನವನ್ನು ಕಾಣುತ್ತಿದ್ದರು. ಒಂದು ಕಡೆ ಹೆಣಬೇಯಿಸ್ತಾ ಇದ್ದರೆ, ಇನ್ನೊಂದು ಕಡೆ ಹೆಣದ ಮೇಲಿನ ಅಕ್ಕಿಯನ್ನು ತಂದು ಬೇಯಿಸಿಕೊಂಡು ತಿಂದು ಮಲಗುತ್ತಿದ್ದರು. ಮಗಳಿಗೆ ಹೆರಿಗೆ ಬೇನೆ ಕಾಣಿಸಿಕೊಂಡಾಗ, ದರಿಯ ಬೀಳುತ್ತಿರುವ ಮಳೆಯಲ್ಲಿಕರೆದುಕೊಂಡು ಹೋಗುತ್ತಾನೆ. ಕೆ.ಎಂ.ಸಿ ಆಸ್ಪತ್ರೆಗೆ ದಾಖಲಿಸಿ, ಹೆರಿಗೆ ವಾರ್ಡಿನೊಳಗೆ ಹೆರಿಗೆಯನ್ನು ಮಾಡಿಸಿಕೊಂಡು, ತನ್ನ ಸುಡುಗಾಡಿನಲ್ಲಿರುವ ಮುರುಕಲು ಗುಡಿಸಲಿಗೆ ಕರೆತರುತ್ತಾನೆ.ಮಳೆ ಸುರಿಯುತ್ತಿದ್ದರಿಂದ ಗುಡಿಸಲು ಸೊರುತ್ತಿತ್ತು. ಆಗ ಹೆಂಡತಿ ದರಿಯನಿಗೆ ಮಗಳ ಮಗುವಿಗೆ ನೀರು ಚಿಡಿಯಬಾರದೆಂದು ಏನಾದರೂ ಮೇಲೆ ಮುಚ್ಚಲು ಕಿಟಕಿ ಕಡೆ ಹೇಳುತ್ತಾಳೆ. ದರಿಯನಿಗೆ ಏನೂ ಸಿಗುವುದಿಲ್ಲ. ಸುಡುಗಾಡಿನಲ್ಲಿರುವ ಸತ್ತ ಹೆಣಗಳ ನಾಮ ಫಲಕಗಳನ್ನು ಕಿತ್ತುಕೊಂಡು ಬಂದು ಕಿಟಕಿಗೆ ಮುಚ್ಚುತ್ತಾನೆ.

ಜೀವವಿರುವ ಮನುಷ್ಯರಿಗಿಂತ, ಸತ್ತ ಮನುಷ್ಯರೆ ಒಳ್ಳೆಯವರು ಎನ್ನುವ ಅವನು ನಂಬಿದ ಏಕೈಕ ತತ್ವವಾಗಿತ್ತು. ಮುರುಕಲು ಮನೆಯಲ್ಲಿ ಸ್ಥಳವಿಲ್ಲದೆ ಸಿಕ್ಕ ಹಾಸಿಗೆಯನ್ನು ತೆಗೆದುಕೊಂಡು ಹೋಗಿದರಿಯ ರುದ್ರಮಂಟಪದಲ್ಲಿ ಮಲಗಿಕೊಳ್ಳುತ್ತಾನೆ. ಮರುದಿನ ಮುಂಜಾನೆ ದರಿಯನ ಹೆಂಡತಿ ಮಾತೆವ್ವ ಹಾಸಿಗೆ ಜಗ್ಗಿ ಗಂಡನನ್ನು ಎಬ್ಬಿಸುತ್ತಾಳೆ. 'ಒಂದು ಬದುಕು ಬರೂದೈತಿ, ಒಂದು ಕುಣಿ ರಡಿ ಮಾಡಬೇಕು, ಎದ್ದೇಳು ಎಂದು ಅವನ ಹಾಸಿಗೆಯನ್ನು ಜಗ್ಗತೊಡಗುತ್ತಾಳೆ. ತಮ್ಮೊಡಲಿಗೆ ಅನ್ನಹಾಕುವ ಹೆಣಗಳನ್ನು ಬದುಕು ಎಂದು ಕರೆಯುವ ಕಾಯಕ ಜೋಡಿ ಇದು. ಎದ್ದುಬಂದು

ದರಿಯ ಮೊಮ್ಮಗಳ ನಗುಮುಖವನ್ನು ನೋಡಿ, ನಿನ್ನ ದರ್ಶನದಿಂದ ಇವತ್ತು ಹೆಚ್ಚಿಗೆ ಚಿಲ್ಲರೆ ಕಾಸು ಬರಲೆವ್ವ ನಿಮ್ಮವ್ವನಿಗೆ ಕೋಳಿ ಸಾರು ಮಾಡಿ ಹಾಕಿಸುತ್ತೇನೆ, ಎಂದು ಹೇಳುತ್ತಾ ಸಲಕಿ, ಪುಟ್ಟಿ ತೆಗೆದುಕೊಂಡು ಹೋಗುತ್ತಾನೆ. ಇನ್ನೊಂದು ತಾಸಿನಲ್ಲಿ ಹೆಣ ಬರುತ್ತದೆಂದು ಕುಣಿತೊಡಲು ಪ್ರಾರಂಭಿಸುತ್ತಾನೆ.

ಕುಣಿ ತೆಗೆಯುವಾಗ ಬರುವ ಮೂಳೆಗಳನ್ನು ತೆಗೆದು ಹಾಕುತ್ತಿದ್ದನು. ನಂತರ ಮಾತೆವ್ವ ಬಂದು ಅವನ ಜೊತೆ ತನ್ನ ಸೆರಗನ್ನೇ ಸಿಂಬಿಯನ್ನಾಗಿ ಮಾಡಿಕೊಂಡು ಕುಣಿಯೊಳಗೆ ಇಳಿದು, ಮಣ್ಣು ಸಲಕಿಯಿಂದ ತುಂಬಿ ಹೊರಗೆ ಹಾಕಿದಳು. ಕುಣಿಯೆಲ್ಲ ಮುಗಿದ ಮೇಲೆ ಹೆಣದವರು ಬಂದರು, ಹೆಣವನ್ನು ಮುಚ್ಚಿದ ಮೇಲೆ ದರಿಯ ತನ್ನ ಗುಡಿಸಲಿನಕಡಕಿಗೆ ಮುಚ್ಚಿದ ನಾಮಫಲಕಗಳು ಕಣ್ಣಿಗೆ ಬೀಳುತ್ತವೆ. ಇದರಿಂದ ಕರ್ನಾಟಕ ಹಿಂದೂ ರಕ್ಷಣಾ ಸಮಿತಿ ಯವರು ದರಿಯನಿಗೆ ಧರ್ಮದ ಹೆಸರಿನಲ್ಲಿ ಹೊಡೆಯುತ್ತಾರೆ. ಯಾರನ್ನು ಕೇಳಿ ಮುಟ್ಟಿದಿಯೋ ಅಂದಾಗ ದರಿಯ ಎಪ್ಪ ಯಾರನ್ನೇನು ಕೇಳೋದು, ಹುಟ್ಟಿದಾಗಿನಿಂದ ನಾನು ಇಲ್ಲಿ ಬದುಕಿದ್ದೇನೆ. ಇದೇ ಸುಡುಗಾಡು ನನ್ನ ಮನೆ. ಇಲ್ಲಿ ಗೋರಿಗಳೊಳಗೆ ಮಲಗಿಕೊಂಡಿರುವರಲ್ಲ ಅವರು ನನ್ನ ದೇವರು. ನನ್ನ ಮೊಮ್ಮಗಳ ಕಷ್ಟ ನೋಡಲಾರದೆ ಅವರು ನನಗೆ ಈ ಪಾಠಿಗಲ್ಲು ತೊಗೊಂಡು ಹೋಗು ಅಂದ್ರು, ಅದಕ್ಕೆ ತಂದುಬಿಟ್ಟೆ ತಪ್ಪಿದ್ರೆ ನನ್ನ ಕ್ಷಮಿಸಿ ಎಂದು ಬೇಡಿಕೊಂಡನು.

ಅದನ್ನು ಕೇಳದೆ ಕರ್ನಾಟಕ ಹಿಂದೂ ರಕ್ಷಣಾ ಸಮಿತಿಯ ಅಧ್ಯಕ್ಷರು, ದರಿಯ ಸುಡುಗಾಡಿನಲ್ಲಿ ಅಸ್ತಿಪಂಜರ, ಎಲುಬು, ಆಗಷ್ಟೆ ಹುಗಿದ ಹೆಣ ಮಾರುತ್ತಾನೆಂದು ಪಿ.ಎಸ್.ಐ ಸೂರ್ಯ ರೆಡ್ಡಿಗೆ ಹೇಳಿ ಕೇಸು ಹಾಕಿದರು. ನಂತರ ದರಿಯನನ್ನು ಕರೆದು ತಂದು ಜೈಲಿನಲ್ಲಿ ಹಾಕುತ್ತಾರೆ. ದರಿಯ ಏನೂ ತಿಳಿಯದೆ ತನ್ನ ಟವೆಲ್ಲು ಹಾಸಿ ಮಲಗಿಕೊಳ್ಳುತ್ತಾನೆ. ಮಾಧ್ಯಮದವರು ಈ ಪ್ರಕರಣವನ್ನು ಗಂಭೀರವಾಗಿ ತೆಗೆದುಕೊಂಡು, ದೇಶಭಕ್ತರು ದೇಶದ ರಕ್ಷಣೆಗಾಗಿ ಸಿಕ್ಕ ಅವಕಾಶವನ್ನು ಕಳೆದುಕೊಳ್ಳಬಾರದೆಂದು ನಿರ್ಧರಿಸಿ, ಒಟ್ಟಾಗಿ ಸೇರಿ ತುರ್ತುಸಭೆಗಳನ್ನು ನಡೆಸಿದರು. ಇದರ ಫಲವಾಗಿ ಸುಡುಗಾಡಿನ ಮುಂದೆ ಬೃಹತ ಪ್ರತಿಭಟನಾ ಧರಣಿ ನಡೆಸಿ, ದರಿಯನ ಕುಟುಂಬದವರ ಮೇಲೆ ಕಲ್ಲುಗಳನ್ನು ತೂರಿದರು. ಈ ಸುದ್ದಿಯನ್ನು ತಿಳಿದ ಅಳಿಯ ಮುನ್ಸಿಪಾಲ್ಟಿ ನೌಕರ ಗಂಗರಾಜು, ಓಡೋಡಿ ಬಂದು ತನ್ನ ಬಾಣಂತಿ ಹೆಂಡತಿ ಮತ್ತು ಅತ್ತೆ ಮಾತೆವ್ವಳನ್ನು, ತನ್ನ ತಗಡಿನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಇತ್ತ ಹೆಣಗಳ್ಳತನ ಘೋರವಾದ ಅಪರಾಧವೆಂದು ಗೌರವಾನ್ವಿತ ನ್ಯಾಯಮೂರ್ತಿಗಳು ದರಿಯನಿಗೆ ೫ ವರ್ಷ ಸಜೆಯನ್ನು ವಿಧಿಸುತ್ತಾರೆ.

ಆ ಐದು ವರ್ಷಗಳು ಕಳೆದ ನಂತರ ಏನೆನೆಲ್ಲ ಬದಲಾಗಿತ್ತು. ಅಳಿಯ ಗಂಗರಾಜು ತನ್ನ ಹೆಂಡತಿ ಮತ್ತು ಅತ್ತೆ ಮಾತೆವ್ವಳನ್ನು ತನ್ನ ಮನೆಯಲ್ಲಿ ಇಟ್ಟುಕೊಂಡಿದ್ದನು. ಆದರೆ ಮಾತೆವ್ವ ಸದಾ ಗಂಡನ ಜೊತೆ ಜಗಳವಾಡಿಕೊಂಡು ಜೀವನ ಕಳೆದದ್ದು, ಅವಳು ಯಾರೊಂದಿಗೂ ಮಾತನಾಡದೆ ಗಂಡನ ನೆನಪಿನಲ್ಲಿಯೇ ದಿನವೂ ಕುಸಿಯುತ್ತಾ ಒಂದು ದಿನ ಮಣ್ಣಲ್ಲಿ ಸೇರಿ ಹೋಗಿದ್ದಳು. ಐದು

ವರ್ಷದ ನಂತರ ಬಿಡುಗಡೆಗೊಂಡ ದರಿಯಜ್ಜ ಸುಡುಗಾಡಿಗೆ ಬಂದು ನೋಡಿದರೆ, ಆ ಸುಡುಗಾಡಿ ಬದಲಾಗಿತ್ತು. ದರಿಯನ ಮುರುಕಲು ಮನೆಯನ್ನು ಯಾವತ್ತೊ ಬೀಳಿಸಲಾಗಿತ್ತು. ಒಂದಲ್ಲ ಎರಡು ವಿದ್ಯುತ್ ಶವಾಗಾರಗಳನ್ನು ತಂದು ಜೋಡಿಸಲಾಗಿತ್ತು.ಅವುಗಳನ್ನು ನಡೆಸಲು ಪ್ಯಾಂಟು ಶರ್ಟಿನ ನೌಕರರನ್ನು ನೇಮಿಸಿದ್ದರು. ಗೇಟ್‌ನೊಳಗೆ ಈ ಅಜ್ಜನನ್ನು ಕಂಡು ಕಾವಲುಗಾರ ಆತನನ್ನು ತಡೆದು, ಒಳಗೆ ಬಿಡುವುದಿಲ್ಲ. ಆತನನ್ನು ಹುಚ್ಚನೆಂದು ತಿಳಿಯುತ್ತಾರೆ.

ಹಿಂದಿನ ಎಲ್ಲ ಸತ್ಯವನ್ನು ಹೇಳಿದರೂ ಕಾವಲುಗಾರರು ದರಿಯಜ್ಜನನ್ನು ಹೊರಗೆ ತಳ್ಳುತ್ತಾರೆ. "ಇದಾದ ೮ ದಿನಗಳವರೆಗೂ ಅಜ್ಜಗೇಟ್ ಪಕ್ಕದ ಗಿಡದ ನೆರಳಲ್ಲಿ ತಳ ಊರಿದ್ದ. ಗೇಟ್ ಸಪ್ಪಳವಾದಾಗೊಮ್ಮೆ, ಗೇಟ್ ಹತ್ತಿರ ಕಾಲೆಳೆದುಕೊಂಡು ಬರುತ್ತಿದ್ದ. ಒಳಗೆ ನುಸಳಲು ಸಾಧ್ಯವಾಗದೆ ಸೋತು ಗಿಡದ ಬಡ್ಡೆಗೆ ಹಿಂತಿರುಗುತ್ತಿದ್ದನು. ಬರಬರುತ್ತ ಗೇಟಿನಕಡೆ ಕೇವಲ ಮಲಗಿದ್ದಲ್ಲಿಂದಲೇ ದೃಷ್ಟಿ ಹಾಯಿಸುತ್ತಿದ್ದ. ೯ನೇ ದಿನ ಅಪರಾಹ್ನ ನೊಣಗಳು ಅವನ ದೇಹದೊಳಗೆ ಹೋಗಿ ಬರುವುದನ್ನು ಮಾಡುವ ಮೂಲಕ ಅವನ ಜೀವ ಹೋಗಿದ್ದನ್ನು ಜಗತ್ತಿಗೆ ಸಾರಲು ಯತ್ನಿಸುತ್ತಿದ್ದವು.ಆದರೆ ತನ್ನದೆಯಾದ ಜಂಜಡದೊಳಗೆ ಮುಳುಗಿದ್ದ ಈ ಜಗತ್ತು, ಇದ್ಯಾವುದರ ಪರಿವೆಯಿಲ್ಲದೆ ಬೈಕು, ಕಾರುಗಳಲ್ಲಿ ಕುಳಿತು ಓಡುತ್ತಲೇ ಇತ್ತು."[೧೭] ಹೀಗೆ ದರಿಯನ ದುರಂತ ಸಾವು ಸಂಭವಿಸುತ್ತದೆ.

ಇದು ದಲಿತ ಸಮುದಾಯದವರ ನೋವಿನ ಸಂಗತಿಯಾಗಿದೆ. ಇದನ್ನು ಕಥೆಗಾರರುಈ ಕಥೆಯಲ್ಲಿ ತಮ್ಮ ಅನುಭವದ ದಲಿತರ ಸಂವೇದನೆಗಳನ್ನು ಹೊರ ಹಾಕಿದ್ದಾರೆ.ಅದರಂತೆ 'ರಾಸಾನಿ ಕಥೆಗಳು' ಎಂಬ ತೆಲುಗು ಕಥಾ ಸಂಕಲವನ್ನು ಬಿ.ಡಿ.ರಾಜಣ್ಣ ತಗ್ಗಿಯವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿ ರಾಸಾನಿಯವರು ಬರೆದಿರುವ 'ಸಾವಿನ ಕೂಳು' ಎಂಬ ಕಥೆಯು ನವಲೇಖಿನ ಕನ್ನಡ ಕತೆಗಳು ಎಂಬ ಕಥಾ ಸಂಕಲನವನ್ನು ಎಸ್.ಜಿ.ಸಿದ್ದರಾಮಯ್ಯನವರು ಸಂಪಾದನೆ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಕನ್ನಡದ ಹಾಲಗೇರಿಯವರು ಬರೆದಿರುವ 'ಹಾಳು ಸುಡಗಾಡ ಬದುಕು' ಕತೆಯಂತೆ ಬಡತನದಿಂದ ದಲಿತರು ಪಡುತ್ತಿರುವ ಹಸಿವಿನ ವೇದನೆಯನ್ನು ಕುರಿತು ಈ ಕತೆಗಳು ವಿವರಿಸುತ್ತವೆ.ಮನುಷ್ಯ ಅನ್ನದಿಂದ ಮಾತ್ರ ಬದುಕುತ್ತಾನೆ. ಆ ಅನ್ನವೇ ಸಿಗದೆ ಇದ್ದರೆ ಆಗುವ ಹಸಿವಿನ ಬಾಧೆಯನ್ನು ದಲಿತರು ಅನುಭವಿಸುತ್ತಿರುವ ವಾಸ್ತವದ ಆರ್ಥಿಕ ಶೋಷಣೆಯ ಸ್ಥಿತಿಗತಿಗಳನ್ನು ಈ ಕತೆಗಳು ನಿರೂಪಿಸುತ್ತವೆ.

"ಇಷ್ಟು ದೊಡ್ಡ ಪಟ್ಟಣದಾಗೆ ಹತ್ತು ದಿನಗಳಿಂದ್ಲೂ ಒಬ್ಬ ನನ್ಮಗ್ನೂ ಸಾಯಲಿಲ್ಲವಲ್ಲ..! ಯೆಂಗಪ್ಪ ಜೀವನ ಸಾಗ್ಸೋದು..! ಒಂದೊತ್ತಿಗಿದ್ರೆ ಒಂದೊತ್ಗಿಲ್ಲದ ಬದುಕು. ಮನೆಯಲ್ಲಿ ಹೆಂಡ್ರುಗೆ ಇರೋ ಒಂದೇ ಸೀರೆನೂ ಹರ್ದೋಗೈತಿ. ಕುಪ್ಪಸ ಅಸಲು ಇಲ್ವೆ ಇಲ್ಲ ತಗೊಂಡ ಬರೋಣ ಅಂದ್ರೆ ಕೈಸಾಗೆ ಜಿಡಿಗಾಸಿಲ್ದೇ ಹೋಯ್ತು. ಮಕ್ಕಳು ನೋಡಿದ್ರೆ ಹತ್ ಜನ ಅವ್ರೇ. ಆರು ಜನ ಹೆಣ್ಣು ಮಕ್ಕಳು, ನಾಲ್ಕು ಜನ ಗಂಡು ಮಕ್ಕಳು. ಯೆಂಗಪ್ಪ ಸಂಸಾರ ಮಾಡೋದು."[೧೮] ಎಂದು ಮುನಿದಾಸಪ್ಪ ಸತ್ತವರ ಪಿಂಡವನ್ನು ಉಂಡು, ಸತ್ತವರಿಗಾಗಿಯೇ ಕಾಯುತ್ತ, ಸತ್ತವರನ್ನು ಹೂಳುತ್ತಲೇ

ಸಾವನ್ನಪ್ಪುವ ದುರುಂತದ ಸ್ಥಿತಿಗೆ ಸಮಾಜದಲ್ಲಿ ಬಂಡವಾಳಶಾಹಿಗಳು ಮಾಡಿರುವ ಆರ್ಥಿಕ ಅಸಮಾನತೆಯೇ ಕಾರಣವಾಗಿರುತ್ತದೆ.

ಕಷ್ಟಪಟ್ಟು ದುಡಿದರೂ ಅವರಿಗೆ ಅವರದೆಯಾದ ಒಂದು ಸ್ವಂತ ಮನೆಯಿಲ್ಲದೆ, ಸರಿಯಾದ ಸಮಯಕ್ಕೆ ಬದುಕಲುಬೇಕಾದ ಮೂಲಸೌಕರ್ಯ ಸಿಗದಿರುವುದಕ್ಕೆ, ಉಳ್ಳವರು ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯದ ಶೋಷಣೆಯಾಗಿರುತ್ತದೆ. ಊರಿನಲ್ಲಿ ಯಾರಾದರೂ ಸತ್ತರೆ ಮಾತ್ರ ಅನ್ನ ಸಿಗುತ್ತದೆ. ಇಲ್ಲದಿದ್ದರೆ ಉಪವಾಸದಿಂದ ನರಳುತ್ತಿರುವ ಕುಟುಂಬಕ್ಕೆ ಸಮಾಜದಲ್ಲಿ ಧನಿಕರು ಮಾಡಿದ ಆರ್ಥಿಕ ಶೋಷಣೆಯೇ ಕಾರಣವಾಗಿರುತ್ತದೆ. ಊರಲ್ಲಿ ಯಾರು ಸತ್ತಿದ್ದಾರೆಂದು ಅನ್ನಕ್ಕಾಗಿ ಕಾಯುವ ದಲಿತ ಕುಟುಂಬದ ನೋವು ಮನಸ್ಸನ್ನೇ ಹಿಂಡಿಬಿಡುತ್ತದೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಸಮಾನತೆಯ ಹಕ್ಕನ್ನು ಪಡೆದಿರುವ ಎಲ್ಲರೂ ಆರ್ಥಿಕವಾಗಿ ಸಬಲರಾಗಬೇಕು. ಆದರೆ ಬಂಡವಾಳಶಾಹಿಗಳ ಕುತಂತ್ರದಿಂದ ಇನ್ನೂ ದಲಿತರು ಅಸಮಾನತೆಯ ಮಡಿಲಿನಲ್ಲಿ ಬದುಕುತ್ತಿದ್ದಾರೆ.ಇದರಂತೆ ಕನ್ನಡದ ಹನುಮಂತ ಹಾಲಗೇರಿಯವರು ಬರೆದಿರುವ 'ಹಾಳು ಸುಡಗಾಡ ಬದುಕು' ಎಂಬ ಕನ್ನಡ ಕಥೆಯು ದರಿಯ ಎಂಬ ದಲಿತ ತನ್ನ ಇಡೀ ಕುಟುಂಬವನ್ನು ಸುಡುಗಾಡಿನಲ್ಲಿಯೇ, ಗುಡಿಸಲನ್ನು ಹಾಕಿಕೊಂಡು ಸುಡುಗಾಡ ನಂಬಿಕೊಂಡು, ಜೀವನ ಮಾಡುತ್ತಿರುವ ದಮನಿತರ ಹಸಿವಿನ ಬದುಕಿನ ಅಂತರಾಳದ ನೋವನ್ನು ಈ ಎರಡೂ ಕಥೆಗಳು ದಲಿತ ಸಂವೇದನೆಯ ಮೂಲಕ ದಲಿತರ ಕಷ್ಟ ಕಾರ್ಪಣ್ಯಗಳನ್ನು ಅರ್ಥೈಸುತ್ತಾರೆ.

ಬಂಡವಾಳಶಾಹಿಗಳಿಂದ ದಲಿತರು ಹೇಗೆ ಶೊಷಣೆಗೆ ಒಳಪಟ್ಟಿದ್ದಾರೆ ಎಂಬ ಸತ್ಯಾಂಶವನ್ನು ತೋರಿಸಿಕೊಡುತ್ತವೆ. ದಲಿತರ ಮೇಲೆ ಆರ್ಥಿಕವಾಗಿ ಶೋಷಣೆಯನ್ನು ಮಾಡಿ, ರಾಷ್ಟ್ರವನ್ನು ಅಸಮಾನತೆಯಲ್ಲಿ ತೊಡಗಿಸಿದ್ದಾರೆ ಎಂಬ ವಿಷಾಧವನ್ನು ಮಾರ್ಕ್ಸ ಮತ್ತು ಲೋಹಿಯಾವಾದದ ನೆಲೆಯಿಂದ ವ್ಯಕ್ತಪಡಿಸುತ್ತವೆ.

ಎಸ್ ದಿವಾಕರ್ ರವರು ಸಂಪಾದನೆ ಮಾಡಿರುವ 'ಶತಮಾನದ ಸಣ್ಣ ಕಥೆಗಳು' ಎಂಬ ಕಥಾ ಸಂಕಲನದಲ್ಲಿರುವ ಈಶ್ವರಚಂದ್ರರವರು ಬರೆದಿರುವ 'ಕೊಂಪೆಯಲ್ಲಿ ಕಟ್ಟುತ್ತಿರುವ ಬಂಗಲೆ' ಎಂಬ ಕಥೆಯು ದಲಿತರೆಂದು ಕರೆಸಿಕೊಳ್ಳುವ ಗಿಜಿಗಿಜಿಯೆಂದು ತುಂಬಿಕೊಂಡು, ಒಟ್ಟೊಟ್ಟಿಗೆ ಬದುಕುತ್ತಿರುವ ಕಪ್ಪನೆಯ, ಬೂದು ಬೂದು ಮೈ ಜನ, ಕೆದರಿದ ತಲೆ, ತುಂಡು ಪಂಡು ಬಟ್ಟೆ, ಸಪ್ಪನೆಯ ಮುಖವನ್ನು ಹೊಂದಿರುವ, ರಸ್ತೆ ಕೂಲಿಗಳು, ಚಮ್ಮಾರರು, ಊದಿನಕಡ್ಡಿ ಕಾರ್ಖಾನೆಯ ಕೆಲಸಗಾರರು, ಮಂಡಿಪೇಟೆ ಕೂಲಿಗಳು, ಭಿಕ್ಷುಕರು, ಅವರೆಂದೂ ಬೆಚ್ಚನೆಯ ಮನೆಯಲ್ಲಿ ಮೆತ್ತನೆಯ ಹಾಸಿಗೆಯನ್ನು ಕಾಣದಿರುವ ಬಂಡವಾಳಶಾಹಿಗಳ ಶೋಷಣೆಯಿಂದ ಮೂಲ ಸೌಕರ್ಯಗಳಾದ ಆಹಾರ, ವಸತಿ, ವಸ್ತ್ರ, ಶುದ್ಧ ನೀರು, ಇಲ್ಲದೆ ಬದುಕನ್ನು ಯಾತನೆಯಲ್ಲಿ ಕಳೆಯುತ್ತಿರುವ, ಅಂತವರ ಕುಟುಂಬಗಳ ಸ್ಥಿತಿಗತಿಗಳ ಬಗ್ಗೆ ವಿಶೇಷವಾಗಿ ಮಲಗಲು ವಸತಿ ಇಲ್ಲದ ದುಸ್ಥಿತಿಯ ಚಿತ್ರಣವನ್ನು ಈ ಕಥೆಯು ತನ್ನ ಸಂವೇದನೆಗಳ ಮೂಲಕ ವಿವರಿಸುತ್ತದೆ.

ಇಂತವರಿಗಿರುವ ಒಂದೇ ಒಂದು ಪ್ರದೇಶದಲ್ಲಿ ನಗರ ಸವಲತ್ತುಗಳಿಂದ ವಂಚಿತರಾಗಿ, ಬಡತನದ ಬೇಗೆಯಲ್ಲಿ ತಮ್ಮ ಜೀವನವನ್ನು ಕಳೆಯುತ್ತ, ಸ್ವತಂತ್ರ ಭಾರತದ ಸಂದರ್ಭದಲ್ಲಿ ಅಸಮಾನತೆಯು ತಾಂಡವ ಆಡುತ್ತಿರುವುದನ್ನು ಕಥೆಗಾರರು ದಲಿತರು ಪಡುತ್ತಿರುವ ಸಾಮಾಜಿಕ ತೊಂದರೆಗಳನ್ನು ಕಟ್ಟಿಕೊಡುತ್ತ ಅವರಿಗಿರುವ ಸಾಮಾಜಿಕ ಶೋಷಣೆಯನ್ನು ಎತ್ತಿ ತೋರಿಸಿದ್ದಾರೆ. 'ಅಜಾಮಿಳ ನಗರ' ವೆಂಬುದು ಅದೊಂದು ನಗರದ ಹೆಸರಲ್ಲ. ಅದಕ್ಕೆ ಯಾರು ಹೆಸರು ಇಟ್ಟರು ಎಂದು ಯಾರಿಗೂ ತಿಳಿದಿಲ್ಲ. ಆದರೆ 'ಅಜಾಮಿಳ ನಗರ'ದ ಸುದ್ದಿಯು ನಗರದ ತುಂಬೆಲ್ಲ ಹರಡಿರುತ್ತದೆ. ನಗರ ಸಭೆಯ ಅಧಿವೇಶನಗಳು ನಡೆಯುತ್ತಿರುವಾಗ, ವಿರೋಧ ಪಕ್ಷದವರು ಆ ಹೆಸರನ್ನು ತೆಗೆದುಕೊಂಡು ಬೈಯುತ್ತಾರೆ. ಅಷ್ಟೊಂದು ಹೆಸರುವಾಸಿ ಅದು ನಗರ ಸಭೆಯ ಹಿಂಬಾಗದಲ್ಲಿಯೇ ಇರುತ್ತದೆ. ಒಂದು ಸಲ ನಗರಸಭೆಯ ಮೇಯರ್ ಯಾವುದರೀ ಅದು 'ಅಜಾಮಿಳ ನಗರ' ಎಂದು ತಮ್ಮ ಕಾರ್ಯಾಲಯದ ಪಿ.ಎಯನ್ನು ಕೇಳಿದಾಗ, ಅವನು ದಿನವೆಲ್ಲ ಫೈಲುಗಳನ್ನೆಲ್ಲಾ ತೆಗೆದು ಹುಡುಕಿದರೂ ಆ ಹೆಸರು ಮಾತ್ರ ಸಿಗುವುದಿಲ್ಲ. ಅದೊಂದು ನಗರದ ತಗ್ಗಾದ ಪ್ರದೇಶ. ಮಳೆ ಬಂದಾಗ ಅದನ್ನು ನೋಡಲೂ ಸಹ ಆಗುವುದಿಲ್ಲ. ರಸ್ತೆಯ ನೀರು ಗುಂಡಿ ಗೊಟರುಗಳ ಮೂಲಕ ಹರಿದು ಬಂದು ಅಲ್ಲಿಯೇ ನೀರು ಮಲೆತುಕೊಳ್ಳುವುದು. ನೀರಿನ ರಾಡಿಯು ಅಲ್ಲಿರುವ ದಲಿತ ಬಡಕುಟುಂಬಗಳ ಸಣ್ಣ ಸಣ್ಣ ಗುಡಿಸಲುಗಳ ಒಳಗೆ ಹೋಗುತ್ತದೆ. ದೂರದಲ್ಲಿ ಅಲ್ಲೊಂದು ಇಲ್ಲೊಂದು ಹಾಕಿರುವ ಕಲ್ಲುಗಳ ಮೇಲೆ ಕಾಲೂರಿಕೊಂಡು ಮನೆಯ ಒಳಗೆ ಆ ರಾಡಿಯಲ್ಲಿಯೇ ಬಡ ಜನರು ನಡೆದುಕೊಂಡು ಹೋಗುತ್ತಿದ್ದರು.

ರಾಡಿಯಲ್ಲಿಯೇ ಅವರ ಬದುಕು ತುಂಬಿರುವುದರಿಂದ ಅವರಿಗೆ ಯಾವತ್ತೂ ಅದು ರಾಡಿಯೆಂದು ಕಾಣುತ್ತಿರಲಿಲ್ಲ. ನಗರಸಭೆಯವರು ಅದನ್ನು ಒಂದು ಸುಂದರ ನಗರ ಪ್ರದೇಶವನ್ನಾಗಿ ರೂಪಿಸಲು ತಮ್ಮ ಕರ್ತವ್ಯ ಪಾಲನೆಯಲ್ಲಿ ಸೋತು ಹೋಗಿದ್ದರು. ತಗ್ಗಾದ ಆ ಪ್ರದೇಶದಲ್ಲಿ ಸದಾ ನೀರು ತುಂಬಿಕೊಂಡು ನಿಂತಿರುತ್ತಿತ್ತು. ಇಂತಹ ಪ್ರದೇಶದಲ್ಲಿ ದಿಕ್ಕಿಲ್ಲದವರು, ಯಾವ ಊರಿನವರೆಂದು ತಿಳಿಯದ ನಿರಾಶ್ರಿತರು ಒಬ್ಬರಂತೆ ಮತ್ತೊಬ್ಬರು ಅಲ್ಲಿಗೆ ಬಂದು ಬಿದಿರು ದೆಬ್ಬೆಗಳಿಂದ ತಡಿಕೆ ಕಟ್ಟಿ ಅದಕ್ಕೆ ಮಣ್ಣು ಮೆತ್ತಿದ ಗೋಡೆಗಳನ್ನು ಮಾಡಿಕೊಂಡು, ಆಳೆತ್ತರವೂ ಇಲ್ಲದ ಮಾಡುಗಳಿಗೆ ತೆಂಗಿನ ಗರಿ ಹಾಕಿಕೊಂಡು, ಗುಡಿಸಲನ್ನಾಗಿ ಕಟ್ಟಿಕೊಂಡು ಜೀವನ ನಡೆಸುತ್ತಿರುವ ದಲಿತರ ಸಾಮಾನ್ಯ ಸ್ಥಿತಿ ಗತಿಗಳನ್ನು ಈ ಕಥೆಯು ತನ್ನ ಸಂವೇದನೆಗಳ ಮೂಲಕ ಅನಾವರಣಗೊಳಿಸುತ್ತದೆ.

ರಾತ್ರಿ ನೋಡಿದಾಗ ಅಜಾಮಿಳ ನಗರದ ಪ್ರದೇಶ ಕಪ್ಪನೆ ಮೋಡದಲ್ಲಿ ಅಲ್ಲಲ್ಲಿ ಚಿಮಣಿಗಳ ಬೆಳಕು ಕಾಣುತ್ತಿರುತ್ತದೆ. ಹಗಲಿನಲ್ಲಿ ಆ ಬಡಪಾಯಿಗಳು ತಮ್ಮ ಆಹಾರಕ್ಕಾಗಿ ಕುದಿಸುತ್ತಿರುವ ಹೊಗೆ ಏಳುತ್ತಿರುತ್ತದೆ. ಆ ಪ್ರದೇಶದಿಂದ ದೂರದ ಬೀದಿಯಿಂದ ಮಡಕೆಯನ್ನು ತೆಗೆದುಕೊಂಡು ಹೋಗಿ, ನಲ್ಲಿಯ ಮೂಲಕ ನೀರನ್ನು ಹಿಡಿದುಕೊಂಡು ಸಾಲು ಸಾಲಾಗಿ ಆ ಬಡಜೀವಿಗಳು ಬರುತ್ತಾರೆ. ಅವರ ಗುಡಿಸಲುಗಳ ಪಕ್ಕದಲ್ಲಿ ಕಜ್ಜಿನಾಯಿಗಳು, ಹಂದಿಮರಿಗಳು ಅಲ್ಲಿಯೇ ವಾಸಮಾಡುತ್ತಿರುತ್ತವೆ.

ಅಂತಹ ಕೊಳಕು ತುಂಬಿದ ಪ್ರದೇಶವನ್ನೇ ಈ ಅಜಾಮಿಳ ನಗರವೆಂದು ಕರೆಯುತ್ತಿರುತ್ತಾರೆ. ಆ ದಲಿತ ಕುಟುಂಬಗಳು ಯಾವುದೇ ನೀರಿನ, ಬೆಳಕಿನ ಹಂಗಿಲ್ಲದೆ ಯಾವ ನೆಲದ ಬಾಡಿಗೆಯ ಯೋಚನೆಯೂ ಇಲ್ಲದೆ, ಯಾರಿಗೂ ತಾವು ಏನೂ ಕೊಡದೆ ಆರಾಮದಿಂದ ಬಡಜೀವಿಗಳು ಅಂಬಲಿ ಬೇಯಿಸಿಕೊಂಡು, ತಮ್ಮ ಮಕ್ಕಳು ಮರಿಯ ಸಂಗಡ ಸಣ್ಣ ಪುಟ್ಟ ಜಗಳವಾಡಿಕೊಂಡಿದ್ದರೂ ನೆಮ್ಮದಿಯ ಜೀವನವನ್ನು ಕಳೆಯುತ್ತಿದ್ದರು. ಆದರೆ ಒಂದು ದಿನ ಇದ್ದಕ್ಕಿದ್ದಂತೆ ಆರು ಜನ ಅಲ್ಲಿಗೆ ಬಂದರು. ಮೂಗಿಗೆ ಕರ್ಚಿಫ್ ಕಟ್ಟಿಕೊಂಡಿದ್ದರು.

ಗಡಿಗೆಯಲ್ಲಿರುವ ನೀರನ್ನು ಸುರಿದುಕೊಂಡು, ಬಯಲಿನಲ್ಲಿಯೇ ಅರೆಬೆತ್ತಲೆಯಾಗಿ ಸ್ನಾನ ಮಾಡುತ್ತಿರುವ ಅಲ್ಲಿರುವ ದಲಿತರ ಹೆಣ್ಣು ಮಕ್ಕಳ ಮೇಲೆ ಕಣ್ಣು ಹಾಕಿದರು. ಆ ಬಡ ಹೆಣ್ಣು ಮಕ್ಕಳಿಗೆ ಅವರ ಗಂಡಸರು ಇಲ್ಲದಿರುವುದನ್ನು ಗುರುತಿಸಿಕೊಂಡು ತೊಂದರೆಯನ್ನು ನೀಡಿದರು. ನಂತರ ಯಾರನ್ನು ಕೇಳಿ ಈ ಸ್ಥಳದಲ್ಲಿ ನಿಮ್ಮ ಮನೆಗಳನ್ನು ಹಾಕಿಕೊಂಡಿರುವಿರಿ ಇದು ನಮಗೆ ಸೇರಿದ ಜಾಗವಾಗಿರುತ್ತದೆ. ನೀವೆಲ್ಲರೂ ಇನ್ನುಮುಂದೆ ಈ ಜಾಗವನ್ನು ಬಿಟ್ಟು ಹೋಗಬೇಕು ಎಂದು ಆದೇಶದಿಂದ ಬಡಜನರನ್ನು ಭಯ ಬೀತಗೊಳಿಸಿದರು. ನಂತರ ಅಲ್ಲಿರುವ ಹಿರಿಯ ಮುದುಕಕುಂಜು ಎಂಬುವಾತ ಬೇಡಿಕೊಳ್ಳುತ್ತಾ ನಾವು ಅದೆಷ್ಟೋ ವರ್ಷಗಳಿಂದ ಇದೇ ಸ್ಥಳದಲ್ಲಿ ವಾಸಮಾಡಿಕೊಂಡು ಬದುಕುತ್ತಿದ್ದೇವೆ. ನಮಗೆ ಬೇರೆ ಯಾವ ಸ್ಥಳವೂ ನಮ್ಮದೆನ್ನುವುದು ಇರುವುದಿಲ್ಲ. ಅದಕ್ಕೆ ಅವರೆಲ್ಲರೂ ತೀರ್ಮಾನಿಸಿ ಪ್ರತಿಯೊಂದು ಮನೆಯವರು ತಿಂಗಳಿಗೆ ೩ ರೂಪಾಯಿ ನೀಡಬೇಕು ಇಲ್ಲದಿದ್ದರೆ ನಿಮ್ಮ ಮನೆಗಳನ್ನು ಖಾಲಿ ಮಾಡಿಸುತ್ತೇವೆ ಎಂದು ಹೇಳಿ ಹೊರಟು ಹೋಗುತ್ತಾರೆ. ಆಗ ಆ ಕೊಳಕು ಪ್ರದೇಶದ ಬಡಜನರು ಚಿಂತೆಯಲ್ಲಿ ಮಗ್ನರಾಗುತ್ತಾರೆ.

"ಕೂಲಿ ಮಾಡಿ ದಿನಕ್ಕೆ ಒಂದುವರೆಯೋ ಎರಡೋ ದುಡಿದರೆ, ಆರೇಳು ಜನರ ಹೊಟ್ಟೆಗೆ ರಾಗಿ ಹಿಟ್ಟಿನ ಅಂಬಲಿ ತುಂಬುತ್ತಿರಲಿಲ್ಲ. ಮೈಗೆ ಬಟ್ಟೆಯನ್ನು ಮುಚ್ಚುವ ಯೋಚನೆಯೇ ಇಲ್ಲ. ಈಗ ಅದರಲ್ಲೇ ಉಳಿಸಿ ತಿಂಗಳಿಗೆ ಮೂರು ರೂಪಾಯಿ ಬಾಡಿಗೆ ಕೊಡುವುದಾದರೂ ಹೇಗೆ...? ಕತ್ತಲಾದ ಮೇಲೆ ಕೆಲಸದಿಂದ ಹಿಂತಿರುಗುತ್ತಾ ಬೀಡಿ, ಜರುಕಿ ಎಳೆಯುತ್ತಾ, ಹೆಂಡದ ವಾಸನೆ ಹೊಡೆಯುತ್ತಾ, ಕೊಂಪೆಗೆ ವಾಪಸ್‌ಬಂದ ಗಂಡಸರ ಜೇಬುಗಳಲ್ಲಿ ದೊಡ್ಡ ತೂತು ಬಿದ್ದಿತ್ತು.ಅವತ್ತು ದುಡಿದು ಅವತ್ತು ತಿನ್ನಬೇಕು ಅನ್ನೋ ಸ್ಥಿತಿಯಲ್ಲಿ ತಿಂಗಳಿಗೆ ಮೂರು ರೂಪಾಯಿ ಉಳಿಸೋದಾದರೂ ಹೇಗೆ ಎಂಬ ವಾಗ್ವಾದದಲ್ಲಿ ಒಂದೊಂದು ಮನೆಯಲ್ಲೂ ಜಗಳ."[೧೯] ಈ ರೀತಿಯಾಗಿ ಬಂಡವಾಳಶಾಹಿಗಳು ದಲಿತ ಕುಟುಂಬದವರ ಅಸಹಾಯಕತೆಯನ್ನು ಬಂಡವಾಳವನ್ನಾಗಿ ಮಾಡಿಕೊಂಡು, ಶೋಷಣೆಯನ್ನು ಮಾಡುವ ವಾಸ್ತವ ಸಂಗತಿಯನ್ನು ಕಥೆಗಾರರು ಇಲ್ಲಿ ತಮ್ಮ ಸಂವೇದನೆಗಲ್ಲಿ ದಲಿತರ ದುರ್ಬಲ ಚಿತ್ರಣವನ್ನು ಈ ಕಥೆಯಲ್ಲಿ ತೋರಿಸಿದ್ದಾರೆ. ಅಜಾಮಿಳ ನಗರ ಪ್ರದೇಶದ ಬಡಕುಟುಂಬಗಳು ಆ ತಿಂಗಳ ಮೂರು ರೂಪಾಯಿ ಬಾಡಿಗೆಯನ್ನು ಕೊಡುವುದರ ಕುರಿತು ಚಿಂತಿಸುತ್ತಾರೆ.

ನಾವೆಲ್ಲರೂ ಇಲ್ಲಿಂದ ಬೇರೆ ಕಡೆಗೆ ಹೋಗುವುದಕ್ಕಿಂತ ಮೂರು ರೂಪಾಯಿ ಬಾಡಿಗೆ ಕೊಡುವುದೇ ಒಳ್ಳೆಯದೆಂದು ತೀರ್ಮಾನಿಸುತ್ತಾರೆ. ದಿನಕ್ಕೆ ಹತ್ತು ಪೈಸೆ ಉಳಿದರೆ ತಿಂಗಳಿಗೆ ಮೂರು ರೂಪಾಯಿ ಆಯಿತು. ಇಲ್ಲದಿದ್ದರೆ ಎರಡು ಮೂರು ದಿನ ಒಪ್ಪೊತ್ತು ಊಟ ಬಿಟ್ಟಾದರೂ ದುಡ್ಡು ಉಳಿಸಬೇಕೆಂದು ತೀರ್ಮಾನಿಸಿ, ಅದರಂತೆ ಎಲ್ಲರ ಮನೆಯಿಂದಲೂ ತಮ್ಮ ಕಣ್ಣೀರಿನಿಂದ ಬಾಡಿಗೆ ನೀಡಲಾರಂಭಿಸುತ್ತಾರೆ. ಬಾಡಿಗೆ ವಸೂಲಿಗಾರರು ಬಂದು ತಮ್ಮ ಮನಬಂದಂತೆ ಮಾತನಾಡಿ ಅವಮಾನ ಮಾಡುತ್ತಾರೆ. ಕೊನೆಗೆ ಒಂದು ದಿನ ಪ್ಯಾಂಟು ಬೂಟಿನ ಜನ ಬಂದು ಅಜಾಮಿಳನಗರದ ಉದ್ದಗಲಗಳನ್ನು ಅಳತೆ ಮಾಡುತ್ತಾರೆ. ಸುಣ್ಣದಿಂದ ಗುರುತು ಮಾಡುತ್ತಾರೆ. ಇದನ್ನು ಅಲ್ಲಿರುವ ಹೆಂಗಸರು, ಮಕ್ಕಳು, ಮುದುಕರು, ಮುದುಕಿಯರು ಎಲ್ಲರೂ ಗುಂಪಾಗಿ ಸೇರಿಕೊಂಡು ಬೆರಗಾಗಿ ನೋಡುತ್ತಾರೆ. ಅವರೇನು ಮಾಡುತ್ತಿದ್ದಾರೆ ಎಂಬುದು ಅವರಿಗೆ ಅರ್ಥವಾಗುವುದಿಲ್ಲ.

ಮರುದಿನ ಮತ್ತೆ ಬಂದು ಕೇಳಿರಿ, ಕೇಳಿರಿ ಇನ್ನೂ ಒಂದು ಗಂಟೆಯೊಳಗಾಗಿ ನಿಮ್ಮ ಗುಡಿಸಲುಗಳನ್ನು ಖಾಲಿ ಮಾಡದಿದ್ದರೆ, ನಿಮ್ಮೆಲ್ಲಾ ಗುಡಿಸಲುಗಳನ್ನು ನೆಲಸಮ ಮಾಡಲಾಗುವುದೆಂದು ಎಚ್ಚರಿಕೆ ನೀಡುತ್ತಾರೆ.ಅದರಂತೆ ಎರಡು ದೊಡ್ಡ ದೊಡ್ಡ ವಾಹನಗಳು ರಾಕ್ಷಸರ ರೂಪದಲ್ಲಿ ದಲಿತರ ಎಲ್ಲ ಗುಡಿಸಲುಗಳನ್ನು ನೆಲಸಮ ಮಾಡುತ್ತಾರೆ. ನಂತರ ಆ ಗುಡಿಸಲಿನ ಎಲ್ಲ ವಸ್ತುಗಳನ್ನು ಸುಟ್ಟುಹಾಕುತ್ತಾರೆ. ಇದನ್ನು ಕಂಡ ಅವರು ಗುಂಪುಗೂಡಿಕೊಂಡು ಅರಚುತ್ತ ಅಳತೊಡಗುತ್ತಾರೆ. ಅವರ ಅಳುವನ್ನು ಯಾರೂ ಕೇಳುವದಿಲ್ಲ. ಮಡಿಕೆ ಕುಡಿಕೆಗಳು, ಹರಿದ ದುಪ್ಪಟಗಳು, ಈಚಲು ಚಾಪೆಯನ್ನು, ಗೋಣಿ ಚೀಲದ ಗಂಟು, ಸಣ್ಣ ಬಟ್ಟೆಯ ಚೀಲ, ಎಲ್ಲವನ್ನೂ ತೆಗೆದುಕೊಂಡು ತಮ್ಮನ್ನೇ ಸುಟ್ಟರೆಂದುಕೊಂಡು ಜ್ವಾಲೆಯ ನೋವಿನಲ್ಲಿ ತಳಮಳಗೊಂಡು ಚಡಪಡಿಸತೊಡಗಿದರು.

ಕೆಲವು ದಿನಗಳ ನಂತರ ಅದೇ ಪ್ರದೇಶದಲ್ಲಿ ದೊಡ್ಡದಾದ ಬಂಗಲೆಯನ್ನು ಕಟ್ಟಲು ಪ್ರಾರಂಭಿಸಿದರು. ಆ ದಲಿತ ಬಡಕುಟುಂಬದವರನ್ನು ಕೆಲಸಕ್ಕೆ ತೆಗೆದುಕೊಂಡು, ಅವರ ಬೆವರಿನ ಹನಿಗಳಿಂದಲೇ ಬಂಗಲೆಯನ್ನು ಪೂರ್ಣಗೊಳಿಸಿಕೊಂಡರು. ಅವರಿಗೆ ಮಾತ್ರ ವಾಸಿಸಲು ಯಾವ ಪ್ರದೇಶವೂ ಉಳಿದಿರುವುದಿಲ್ಲ. ದಲಿತರ ಪ್ರದೇಶವನ್ನು ವಶಪಡಿಸಿಕೊಂಡು, ಅದರಲ್ಲಿ ಅವರಿಂದಲೇ ಬಂಗಲೆಯನ್ನು ಕಟ್ಟಿಸಿಕೊಳ್ಳುವ ಬಂಡವಾಳಶಾಹಿಗಳು ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯದ ಶೋಷಣೆಯಾಗಿರುತ್ತದೆ. ಮನುಷ್ಯ ಬದುಕುವ ಹಕ್ಕನ್ನು ಪಡೆದುಕೊಂಡಿದ್ದಾನೆ. ಆದರೆ ಅದರ ಬದಲು ಮೂಲಸೌಕರ್ಯಗಳಿಂದ ವಂಚಿತವಾದರೆ ಅವರು ಬದುಕು ನಡೆಸುವುದಾದರೂ ಹೇಗೆ.....? ಸಮಾನತೆಯ ಹಕ್ಕನ್ನು ಹೊಂದಿರುವ ರಾಷ್ಟ್ರದಲ್ಲಿ ಉಳ್ಳವರು ನಡೆಸುತ್ತಿರುವ ಶೋಷಣೆಗೆ ಕೊನೆ ಯಾವಾಗ....? ದಲಿತರ ನೋವುಗಳಿಗೆ ಸ್ಪಂದನೆಯನ್ನು ನೀಡದ ಸರಕಾರದ ಅಧಿಕಾರಿಶಾಹಿಗಳು ನಡೆಸುತ್ತಿರುವ ಅಸಮಾನತೆಯ ಶೋಷಣೆಯಾಗಿದೆ ಎಂಬುದನ್ನು ಕಥೆಗಾರರು ಈ ಕಥೆಯಲ್ಲಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತರ ಪರ ಚಿಂತನೆಗಳಿಂದ ವಾಸ್ತವದ ಅಂಶಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ.

ಈ ಕಥೆಯ ತುಂಬೆಲ್ಲಾ ದಲಿತ ಸಂವೇದನೆಗಳೇ ಹರಡಿಕೊಂಡಿರುತ್ತವೆ.'ಜಯಕಾಂತನ್ ಅವರ ಕಥೆಗಳು' ಎಂಬ ತಮಿಳು ಕಥಾ ಸಂಕಲನವನ್ನು ಡಿ. ಜಯಕಾಂತನ್ ಅವರು ಸಂಪಾದನೆ ಮಾಡಿದ್ದಾರೆ. ಈ ತಮಿಳು ಕಥೆಗಳನ್ನು ಹೆಚ್.ವಿ.ನಾರಾಯಣ್‌ರವರು ಕನ್ನಡ ಅನುವಾದ ಮಾಡಿದ್ದಾರೆ. ಈ ಕಥಾಸಂಕಲನದಲ್ಲಿರುವ 'ನಂದನವನದಲ್ಲಿ ಒಬ್ಬ ಆಂಡಿ' ಎಂಬ ಕಥೆಯು ಎಸ್.ದಿವಾಕರ್‌ರವರು ಸಂಪಾದನೆ ಮಾಡಿರುವ 'ಶತಮಾನದ ಸಣ್ಣ ಕಥೆಗಳು' ಎಂಬ ಕನ್ನಡ ಕಥಾ ಸಂಕಲನದಲ್ಲಿರುವ ಈಶ್ವರಚಂದ್ರರವರು ಬರೆದಿರುವ 'ಕೊಂಪೆಯಲ್ಲಿ ಕಟ್ಟುತ್ತಿರುವ ಬಂಗಲೆ' ಎಂಬ ಕಥೆಯಂತೆ ಕಾರ್ಲಮಾರ್ಕ್ಸವಾದದ ನೆಲೆಯಲ್ಲಿ ರೂಪಿತಗೊಂಡಿದೆ. ದೂರದಿಂದ ನೋಡುವವರಿಗೆ ಅದೊಂದು ನಂದನವನದಂತೆ ಕಾಣುತ್ತದೆ. ಆದರೆ ಅದು ನಂದನವನವಲ್ಲ ಸ್ಮಶಾನವಾಗಿರುತ್ತದೆ.

ಹಸಿರು, ಬಳ್ಳಿ, ಗಿಡಗಂಟೆಗಳಿಂದ ಕೂಡಿಕೊಂಡು ದೂರದಿಂದ ನೋಡುವವರಿಗೆ ನಂದನವನದಂತೆಯೇ ಕಾಣುತ್ತದೆ. ಅದಕ್ಕೆ ಕಾರಣ ಆ ಸ್ಮಶಾನದ ಉತ್ತರ ದಿಕ್ಕಿಗೆ ಒಂದು ಮೂಲೆಯಲ್ಲಿ ಈಚಲು ಗರಿಗಳಿಂದ ಕಟ್ಟಲ್ಪಟ್ಟ ಒಂದು ಚಿಕ್ಕದಾದ ಗುಡಿಸಲಿನಲ್ಲಿ 'ಆಂಡಿ' ಎಂಬುವವನು ಆ ಸ್ಮಶಾನದ ಎಲ್ಲಾ ಕೆಲಸಗಳನ್ನು ಮಾಡಿಕೊಂಡು, ಸ್ಮಶಾನವನ್ನು ಅತ್ಯಂತ ಸುಂದರವಾಗಿ ಕಾಣಲು ಕಾರಣವಾಗಿದ್ದಾನೆ. ಆದರೆ ಆತನಿಗೆ ಎಲ್ಲರಂತೆ ಊರಲ್ಲಿ ಬಂದು ವಾಸಮಾಡಲು ಮನೆ ಇರುವುದಿಲ್ಲ. ಆ ಸ್ಮಶಾನದಲ್ಲಿಯೇ ಅದೆಷ್ಟೋ ವರ್ಷಗಳಿಂದ ಅಲ್ಲಿಯೇ ಬರುವ ಶವಗಳನ್ನು ಹೂಳುತ್ತ, ಅದರಿಂದಲೇ ತನ್ನ ಹೆಂಡತಿಯ ಜೊತೆ ಜೀವನವನ್ನು ಸಾಗಿಸುತ್ತಿದ್ದಾನೆ.ಆದರೇನು ಮಾಡುವುದು, ಸ್ಮಶಾನವನ್ನು ನಂದನವನವನ್ನಾಗಿ ಮಾಡಿದವನಿಗೆ ಒಂದು ವಾಸಿಸಲು ತನ್ನದೇಯಾದ ಸ್ವತಂತ್ರ ಮನೆ ಇರುವುದಿಲ್ಲ. ಯಾರೂ ಮಲಗಲು ಸಾಧ್ಯವಿಲ್ಲದ ಸ್ಮಶಾನದಲ್ಲಿ, ಅವನ ಹೆಂಡತಿ ಜೊತೆ ಮಳೆಗಾಳಿ ಜೊತೆಯಲ್ಲಿ ನೊಂದು ಬೆಂದು ಜೀವನ ಕಳೆಯುತ್ತಿರುತ್ತಾನೆ.

ಎಲ್ಲರನ್ನು ಮಣ್ಣು ಮಾಡುವಾಗ ಆತನ ವೇದನೆ ಒಂದು ರೀತಿಯಲ್ಲಿದ್ದರೆ, ಕೊನೆಗೆ ತನ್ನ ಮಗುವಿನ ಶವವನ್ನು ಮಣ್ಣು ಮಾಡಬೇಕಾದ ಸಂದರ್ಭ ಬಂದಾಗ "ಪನ್ನೀರು ಮರದಡಿಯಲ್ಲಿ ಮಗನ ಶವದ ಬಳಿ ಮುಖ ಮುಚ್ಚಿಕೊಂಡು ಬಿದ್ದಿದ್ದ ಆಂಡಿಯನ್ನು ಕಂಡು, ಗಾಬರಿಗೊಂಡು ಓಡಿಬಂದಳು ಮುರುಗಾಯಿ ಅವನನ್ನು ಹೊರಳಿಸಿ ಎತ್ತಿ ಮಡಿಲಲ್ಲಿ ಮಲಗಿಸಿಕೊಂಡಳು. ಅತ್ತಳು, ಅವನ ರೆಪ್ಪೆಗಳು ಅಲುಗಾಡಿದವು. ದೇವರೇ ಅವನಿನ್ನೂ ಜೀವಂತವಾಗಿದ್ದ ಸತ್ತಿರಲಿಲ್ಲ. ಆ ನಂದನವನದಲ್ಲಿ ವಾಸಿಸುತ್ತಿದ್ದಾನೆ. ಆದರೆ ಹಿಂದಿನಂತೆ ಈಗ ಹಾಡುವುದಿಲ್ಲ. ಸ್ಮಶಾನ ಭೂಮಿಗೆ ಬರುವ ಶವಗಳನ್ನು ನೋಡಿದಾಗಲೆಲ್ಲ ಪರಿತಪಿಸಿ ಅಳುತ್ತಾನೆ. ಊರಿನವರ ಶೋಕಕ್ಕೆಲ್ಲಾ ಅವನು ಬಲಿಯಾದರೆ ಈಗಲೂ ಅವನನ್ನು 'ಒಂದು ತರಹೇ' ಎಂದೇ ಹೇಳುವರು."[೨೦] ಹೀಗೆ ಮನೆಯಿಲ್ಲದೆ ನೊಂದುಕೊಂಡು ಅವಮಾನಗಳನ್ನು ಅನುಭವಿಸುತ್ತ, ಸ್ಮಶಾನವನ್ನೇ ತನ್ನ ಮನೆಯನ್ನಾಗಿಸಿಕೊಂಡಿರುವ ಆ ದಲಿತ ದಂಪತಿಗಳಾದ ಆಂಡಿ ಮತ್ತು ಮುರುಗಾಯಿಯವರ ಸ್ಥಿತಿಗೆ ಬಂಡವಾಳಶಾಹಿಗಳು

ಮತ್ತು ಪುರೋಹಿಶಾಹಿಗಳು ದಲಿತರ ಮೇಲೆ ನಿರ್ಬಂಧಿಸಿದ ಸಂಪ್ರದಾಯಿಕ ಕಟ್ಟುಪಾಡುಗಳೇ ಕಾರಣವಾಗಿವೆ.

ಇವೇ ದಲಿತರ ಜೀವನವನ್ನು ಶೋಷಣೆಯಲ್ಲಿ ಬಾಳುವಂತೆ ಮಾಡಿವೆ.ಅದರಂತೆ ಆರ್ಥಿಕ ಅಸಮಾನತೆಯಿಂದ ದಲಿತರು ಬದುಕುತ್ತ, ಮೂಲಭೂತ ಸೌಕರ್ಯಗಳಾದ ಊಟ, ವಸತಿ, ವಸ್ತ್ರ, ಶುದ್ಧ ನೀರುಗಳಿಂದ ವಂಚಿತರಾಗಿರುತ್ತಾರೆ. ಹೀಗೆ ಕನ್ನಡದ ಕಥೆಗಾರರಾದ ಈಶ್ವರಚಂದ್ರರವರು ಬರೆದಿರುವ 'ಕೊಂಪೆಯಲ್ಲಿ ಕಟ್ಟುತ್ತಿರುವ ಬಂಗಲೆ' ಎಂಬ ಕಥೆಯು ನಿರಾಶ್ರಿತರು ಬದುಕಲು ಮನೆಯಿಲ್ಲದೆ, ಕೊಳಚೆ ಪ್ರದೇಶದಲ್ಲಿ ಬದುಕುತ್ತಿರುವ ಅವರು ಅಲ್ಲಿ ಅನುಭವಿಸುತ್ತಿರುವ ಸಂಕಟಗಳೆಲ್ಲವೂ ಪರಸ್ಪರ ಈ ಎರಡೂ ಕಥೆಗಳಲ್ಲಿ ದಲಿತರ ಮೇಲೆ ಉಳ್ಳವರು ನಡೆಸುತ್ತಿರುವ ಆರ್ಥಿಕ ಶೋಷಣೆಯಾಗಿರುತ್ತದೆ. ಅದರಂತೆ ಇವು ಮಾರ್ಕ್ಸ್ ಮತ್ತು ಲೋಹಿಯವಾದದ ನೆಲೆಯಿಂದ ಸಾಮಾಜಿಕ ಸಮಾನತೆಯನ್ನು ಪ್ರತಿಪಾದಿಸುತ್ತವೆ.

**೫.೪. ಜೀತ ಪದ್ಧತಿ ಮತ್ತು ಜಮೀನ್ದಾರರ ಒಡೆತನ**

'ಬರಿ ಕಥೆಯಲ್ಲೋ ಅಣ್ಣಾ' ಕುಂ.ವೀ. ಸಮಗ್ರ ಕಥೆಗಳಲ್ಲಿ ಕುಂ.ವೀರಭದ್ರಪ್ಪನವರು ಬರೆದ 'ಪರ್ಯಾವಸಾನ' ಎಂಬ ಕಥೆಯು ಆಂಧ್ರಪ್ರದೇಶದ ಜಮೀನ್ದಾರಿ ವ್ಯವಸ್ಥೆಯ ಸೂಕ್ಷ್ಮತೆಗಳನ್ನು ಕುರಿತು ವಿವರಿಸುತ್ತದೆ. ಈ ಜಮೀನ್ದಾರಿ ವ್ಯವಸ್ಥೆಯ ಕುರಿತು ಬೇಟೆ, ಕರಿವೇಮಲ, ಕನಕಾಂಗಿ ಕಲ್ಯಾಣ, ಬೆಟ್ಟದಾಚೆ, ಸೂತಕ, ವಾಗ್ವಿಲಾಸದಂತ ಕತೆಗಳೆಷ್ಟೋ ಇವೆ. ಆದರೆ ಈ 'ಪರ್ಯಾವಸಾನ' ಕಥೆಯು ಇತರ ಕಥೆಗಳಿಗಿಂತ ವಿಶಿಷ್ಟವಾದ ಭಾಷಾ ವಿಮುಖತೆಯನ್ನು ಹೊಂದಿದೆ. ಊಳುವವನು ಊಳುತ್ತಲೆ ಇರಬೇಕು, ಒಡೆಯನಾಗಬಾರದು. ದುಡಿಯುವವನು ದುಡಿಯುತ್ತಲೆ ಇರಬೇಕು, ಧಣಿಯಾಗಬಾರದು. ಆಳುವವನು ಆಳಾಗಬಾರದು, ಅರಸನಾಗಿಯೇ ಇರಬೇಕು. ಇದು ಜಮೀನ್ದಾರಿ ಪದ್ಧತಿಯ ವ್ಯವಸ್ಥೆ.

ಅದೊಂದು ರೀತಿಯ ಹಳ್ಳಿ, ಅಲ್ಲಿನ ಜನರೇ ಯೋಚನೆ ಅಂದರೇನು ಅಂತ ತಿಳಿಯದವರು. ಅವರೆಲ್ಲರಿಗೂ ಸತ್ತರೆ ಊಳಲು ಮೂರುಮೊಳ ಜಾಗ ಬಿಟ್ಟರೆ ಬೇರೇನೂ ಇಲ್ಲ. ಅವರದು ಅಂದರೆ ಸುಡುಗಾಡು ಒಂದೇ ಜಮೀನು. ಪ್ರತಿದಿನ ಬೇರೆ ಊರಿಗೆ ಹೋಗಿ, ಕೂಲಿ ಮಾಡಿ, ಹೊಟ್ಟೆ ತುಂಬಿಸಿಕೊಂಡು ನಿದ್ದೆ ಮಾಡುವುದೇ ಅವರ ನಿತ್ಯ ಜೀವನಕ್ರಮ. ಬಡತನಕ್ಕಿರುವುದು ಒಂದೇ ಆಸೆ, ಹೊಟ್ಟೆ ತುಂಬಿಸಿಕೊಳ್ಳುವುದು ಮಾತ್ರ. ಆದರೆ ಶ್ರೀಮಂತರಾದವರು ತಮ್ಮ ತಮ್ಮ ಮನೆಗಳನ್ನು ತುಂಬಿಕೊಳ್ಳುತ್ತಾರೆ. ಮನಸ್ಸಿನ ತುಂಬೆಲ್ಲಾ ದುರಾಸೆಯ ಕನಸುಗಳ ಕಟ್ಟಿಕೊಂಡು ಬದುಕುತ್ತಾರೆ. ಆ ಊರಿನಲ್ಲಿದ್ದ ಡಕ, ಡಕಿ, ಆತ, ಆಕಿ ಒಂದು ಪಕ್ಕದ ಊರಿಗೆ ಕೆಲಸಕ್ಕೆಂದು ಹೋಗುತ್ತಾರೆ. ಹೊಲದ ತುಂಬೆಲ್ಲಾ ಮಾಲಿಕ ಹಸಿರು ತೊಪ್ಪಲನ್ನು ಬೆಳೆಸಿರುತ್ತಾನೆ. ಅವರಿಗೆ ಪ್ರತಿ ದಿನ ಹೊಲದ ಮಾಲಿಕ ಹಸಿರು ತೊಪ್ಪಲನ್ನೇ ಯಾಕೆ ಬೆಳೆಸಿದ್ದಾನೆಂದು ಚಿಂತನೆಯನ್ನು ಮಾಡುತ್ತಿರುತ್ತಾರೆ. ಒಂದು ದಿನ ಹೋಗಿ ಮಾಲಿಕನನ್ನು ವಿಚಾರಿಸಿದಾಗ, ಮಾಲಿಕ ಆ ತೊಪ್ಪಲನ್ನು ನುಸಿಗಾತದ ಹುಳುಗಳಿಗೆ ಹಾಕಿದ.

ಆ ಸೂಕ್ಷ್ಮ ಹುಳುಗಳು ಗಬಗಬ ತಿನ್ನುತ್ತಿದ್ದವು. ಇದನ್ನು ಕಂಡ ಡಕ, ಡಕಿ, ಆತ, ಆಕಿಯವರಿಗೆ ಆಶ್ಚರ್ಯವಾಯಿತು. ಆ ಹುಳುಗಳು ದಿನ ದಿನಕ್ಕೆ ಬುರುಬುರನೆ ಬೆಳೆಯುತ್ತಿದ್ದವು. ಇದನ್ನು ನೋಡುತ್ತಿದ್ದ ಅವರು ಸಾವ್ಕರ್ರೇ ಈ ಹುಳುಗಳನ್ನು ನೀವೇನು ಮಾಡುತ್ತಿರಿ ಎಂದು ಕೇಳಿದಾಗ, ಮಾಲಿಕನ ಉತ್ತರದಿಂದ ಅವರಲ್ಲಿ ಇದುವರೆಗೂ ಇದ್ದೆಲ್ಲ ಅಜ್ಞಾನದ ಅಂಧಕಾರವೆಲ್ಲ ನಶಿಸಿ ಹೋಗಿ, ತಮ್ಮ ಜೀವನ ಕ್ರಮದ ಅರಿವು ಅವರಿಗಾಯಿತು. ಆ ಮಾಲಿಕನ ಮಾತಿನಲ್ಲಿ ಅವರಿಗೆ ಸಂಬಂಧಿಸಿದ ಒಳ ಅರ್ಥ ಹುದುಗಿಕೊಂಡಿತ್ತು. ಆ ಮಾಲಿಕನ ಮರ್ಮದ ಮಾತು 'ಹುಳುಗಳು ಗೂಡು ಕಟ್ಟುತ್ತವೆ. ಆ ಗೂಡುಗಳನ್ನು ಮಾರದಿದ್ದಲ್ಲಿ ಚಿಟ್ಟೆಗಳಾಗಿ ಹಾರಿ ಹೋಗುವುವು' ಈ ಮಾತಿನ ಸತ್ಯವನ್ನು ತಿಳಿದುಕೊಂಡ ಡಕ, ಡಕಿ, ಆತ, ಆಕಿಯವರು ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ತಾವು ತಿಳಿದುಕೊಂಡ ವಿಷಯವನ್ನು ತಮ್ಮ ಹಳ್ಳಿಯ ಅಕ್ಕ ಪಕ್ಕದವರ ಮನೆಗೆಯವರಿಗೆ ಮುಟ್ಟಿಸುತ್ತಾರೆ. ಅವರ ಮೆದುಳಿನಲ್ಲಿರುವುದನ್ನು ತಮ್ಮ ಹೊಟ್ಟೆಯಲ್ಲಿ ಇಟ್ಟುಕೊಂಡು ರಾತ್ರಿ ದಿನ ಆಲೋಚನೆ ಮಾಡುವುದರಲ್ಲಿ ಕಾಲ ಕಳೆಯುವುದರಲ್ಲಿ ಅವರಿಗೆ ಹಸಿವೆಯ ಸಂವೇದನೆಯೇ ಆಗಲಿಲ್ಲ.

ಹುಳುಗಳೇ ಸ್ವತಂತ್ರವಾಗಿ ಜೀವಿಸುತ್ತಿರುವಾಗ ನಾವೇಕೆ ಅತಂತ್ರರಾಗಿ ಇನ್ನೊಬ್ಬರಿಗೆ ಗುಲಾಮರಾಗಿ ಬದುಕಬೇಕು. ಹುಳುಗಳಿಗಿಂತ ನಾವೇನು ಕಡಿಮೆಯೇ ಎಂದು ಆಲೋಚನೆ ಮಾಡಿದರು. ನಮ್ಮ ಶ್ರಮವೇ ಇವತ್ತಿನ ಶ್ರೀಮಂತರ ಸಿರಿವಂತಿಕೆಗೆ ಕಾರಣವಾಗಿದೆ ಎಂಬ ಅರಿವು ಅವರಿಗೆ ಗೋಚರವಾಯಿತು. ಹೀಗೆ ನಾವು ನಮ್ಮಿಷ್ಟಕ್ಕೆ ಸುಮ್ಮನೆ ಜೀತ ಮಾಡಿಕೊಂಡು ಬದುಕುವುದರಿಂದ ಪಾರಮಾರ್ಥ ಲಭಿಸುತ್ತದೆಯೇ...? ಇಲ್ಲವೆಂದು ಪರಸ್ಪರ ಚರ್ಚೆ ಮಾಡಿಕೊಂಡು ತಮ್ಮ ತಮ್ಮ ಮಕ್ಕಳು ಹಲವು ಊರುಗಳಲ್ಲಿ ಜಮೀನ್ದಾರರ ಬಳಿ, ಕೋಮಟಿಗರ ಬಳಿ, ಅರ್ಚಕರ ಬಳಿ ಜೀತವಿರುವ ತಂತಮ್ಮ ಮಕ್ಕಳನ್ನು ಈ ಹುಳುತ್ವದಿಂದ ಬಿಡುಗಡೆಗೊಳಿಸಿ ಸ್ವತಂತ್ರವಾಗಿ ನಾವೆಲ್ಲರೂಬದುಕಬೇಕೆಂದು ಒಂದೊಂದು ನೆಪ ಒಡ್ಡಿ ತಂತಮ್ಮ ಮಕ್ಕಳನ್ನು ತಂತಮ್ಮ ಗಂಡಂದಿರನ್ನು, ತಂತಮ್ಮ ಹೆಂಡಂದಿರನ್ನು ಅಕ್ಕ ಪಕ್ಕದ ಊರುಗಳಿಂದ ಕರೆಸಿಕೊಳ್ಳುತ್ತಾರೆ.

ಎಲ್ಲಾರೂ ಸೇರಿ ಹೊಲಕ್ಕೆ ಮುತ್ತಿಗೆ ಹಾಕಿ ಒಂದೊಂದು ಹೊರೆ ಸೊಪ್ಪನ್ನು ತಂದು, ಆಲದ ಮರದ ಬುಡದಲ್ಲಿ ತಂದು ಹಾಕುತ್ತಾರೆ. ಅವವರೆಲ್ಲರೂ ಆ ತೊಪ್ಪಲನ್ನು ತಿನ್ನ ತೊಡಗುತ್ತಾರೆ. ಒಂದೊಂದು ದಿನ ಒಂದೊಂದು ಅನುಭವ ಪಡೆಯುತ್ತಾರೆ. ಒಂದೆರಡು ದಿನದಲ್ಲಿ ಎದೆ ನೆಲಕ್ಕೆ ಹಚ್ಚಿ ದೇಕತೊಡಗಿ ಮಾತನಾಡಲು ಸಾಧ್ಯವಿಲ್ಲದೆ ಜ್ವರ ತುಂಬಿ ಬರುತ್ತದೆ. ಅವರೆಲ್ಲರ ಬಾಯಿಯಲ್ಲಿ ಅಂಟು ಅಂಟಾದ ದ್ರವ ಸ್ರವಿಸುತ್ತದೆ. ತಮ್ಮೊಳಗೆ ತಾವೇ ಗೂಡು ಕಟ್ಟಿಕೊಳ್ಳತೊಡಗಿದರು. ಆಲದಮರ ಬುಡದಲ್ಲಿ ಸಾವಿರಾರು ಗೂಡುಗಳು ನಿರ್ಮಾಣವಾಗುತ್ತವೆ. ಆ ಹೊಲದ ಮಾಲಿಕನಿಗೆ ವಿಷಯ ಗೊತ್ತಾಗಿ ಅಕ್ಕಪಕ್ಕದ ಊರಿನ ಜಮೀನ್ದಾರರಿಗೆ, ಶೆಟ್ಟಿಗಳಿಗೆ, ಅರ್ಚಕರಿಗೆ ಸುದ್ದಿಯನ್ನು ತಿಳಿಸುತ್ತಾನೆ. ಆಗ ಜೊತೆಗಾರರೆಲ್ಲ ಸ್ವತಂತ್ರವಾದರೆ ನಮಗೆ ನಷ್ಟವಾಗುತ್ತೆಂದು ಅವರುಗಳಿಂದ

ಬರೆಸಿಕೊಂಡ ಪ್ರಾಂಸರಿ ಪತ್ರಗಳನ್ನು, ಕರಾರು ಪತ್ರಗಳನ್ನು ಆ ಹಳ್ಳಿಗೆ ತೆಗೆದುಕೊಂಡು ಬರುತ್ತಾರೆ. ಅವರು ಬರುವಾಗಲೆ ಆ ಹಳ್ಳಿಯವರು ಆಳೆತ್ತರದ ಗೂಡುಗಳಾಗಿ ಬಿರುಕು ಬಿಟ್ಟಿದ್ದವು. ಸುಂದರ ಬಣ್ಣದ ರೆಕ್ಕೆಗಳನ್ನು ಮುಡಿದು, ಗೂಡಿನಿಂದ ಹೊರ ಬರುತ್ತಿದ್ದವು. ಇಲ್ಲಿನ ಪಾತ್ರಗಳು ರೂಪಕಗಳಿಂದ ಕೂಡಿವೆ.

ಚಿಟ್ಟೆಗಳಾಗಿ ಹಾರುವುದು ಅದು ಜೀತ ವರ್ಗದ ಸ್ವತಂತ್ರತೆಯನ್ನು ತೋರಿಸುತ್ತದೆ. ಹುಳುತ್ವ ಅದು ಜೀತದಾರರನ್ನು ಆಳುವ ಜಮೀನ್ದಾರರು, ಶೆಟ್ಟಿಗಳು, ಅರ್ಚಕರಾಗಿದ್ದಾರೆ. ಇವರ ಕಪಿಮುಷ್ಟಿಯಿಂದ ಬಿಡುಗಡೆ ಪಡೆಯಬೇಕಾದದ್ದು ಜೀತವರ್ಗದವರ ಆದ್ಯ ಹಕ್ಕಾಗಿರುತ್ತದೆ. ಆ ಹಳ್ಳಿಯ ಜನರು "ನೂರಾರು ಚಿಟ್ಟೆಗಳ ರೂಪದಿ ಅವರು ತಂತಮ್ಮ ರೆಕ್ಕೆಗಳನ್ನು ಕಾಲುಗಳನ್ನು ಸರಿಪಡಿಸಿಕೊಂಡು,ಮುಗಿಲ ಕಡೆ ಜಿಗಿದು ಹಾರುವಲ್ಲಿ ಸಫಲರಾದರು. ಆ ಚಿಟ್ಟೆಗಳನ್ನು ಹಿಡಿಯಲು ಓಡಿ ಬಂದು ಕೈ ಚಾಚಿ ಜಮೀನ್ದಾರರು ವಿಫಲರಾದರು. ದುಡಿದು ತಿಂದು ಬದುಕಿದವರಿಗೆ ಬಣ್ಣದ ಚಿಟ್ಟೆಗಳಾಗುವುದು ಸಾಧ್ಯವಿರುವಾಗ, ಶೋಷಣೆ ಮಾಡಿ ಬದುಕಿರುವ ತಾವು ಯಾಕೆ ಊಜಿನೊಣ ಆಗಬಾರದೆಂದು ಅವರೆಲ್ಲರೂ ಭಯಂಕರ ಊಜಿನೊಣಗಳಾಗಲು ಎಷ್ಟೇ ಪ್ರಯತ್ನಿಸಿದರೂ ಬೆವೆತರೇ ಹೊರತು ಆಗಲೇ ಇಲ್ಲ. ಕೊನೆಗೆ ಊಜಿ ನೊಣಕ್ಕಿಂತಲೂ ಭಯಂಕರವಾದದ್ದು ಮನುಷ್ಯ ರೂಪವೆಂದು ಬಗೆದು, ಮನುಷ್ಯ ರೂಪದೊಳಗೆ ಬದುಕಲು ನಿರ್ಧರಿಸಿದರು"[೨೧] ನೊಂದು ಬೆಂದು ಕಲ್ಲುಗಳಾದ ಶ್ರಮಿಕರು ಶ್ರಮಿಸಿದರೆ ಅವರಿಗೆ ಸರಿ ಯಾರೂ ಆಗುವುದಿಲ್ಲ. ಅವರ ಪರಿಶ್ರಮಕ್ಕೆ ಸ್ವತಂತ್ರತೆ ಬೇಕಾಗಿದೆ.

ಅದು ಅವರ ಮೂಲಭೂತ ಹಕ್ಕು. ಅದನ್ನೇ ಕಸಿದುಕೊಂಡು ಮನೆಗಳ ಮೇಲೆ ಮನೆ ಕಟ್ಟಿಸಿಕೊಂಡು, ನೂರಾರು ಎಕರೆ ಜಮೀನನ್ನು ಗಿಟ್ಟಿಸಿಕೊಂಡು ದೌರ್ಜನ್ಯದಿಂದ ದೀನದಲಿತರ ಮೇಲೆ ಶೋಷಣೆಯನ್ನು ಮಾಡುತ್ತಿದ್ದಾರೆ. ದಮನಿತರು ಎಲ್ಲಿತನಕ ಸುಮ್ಮನಿದ್ದು ಜೀತಗಾರಿಕೆಯನ್ನು ಮಾಡುತ್ತಿರುತ್ತಾರೋ, ಅಲ್ಲಿಯತನಕ ಜೀತ ಸೃಷ್ಟಿಕರ್ತರು ಮುಗ್ಧ ಹೃದಯಗಳನ್ನು ತಮ್ಮ ಚಪ್ಪಲಿ ಕೆಳಗೆ ತುಳಿಯುತ್ತಲೇ ಇರುತ್ತಾರೆ. ದುಡಿಯಲು ನಮ್ಮದೇಯಾದ ಶಕ್ತಿ ಇರುವಾಗ ನಾವೇಕೆ ನಮ್ಮ ಶ್ರಮದಿಂದ ಅವರನ್ನು ಶ್ರೀಮಂತರನ್ನಾಗಿಸಬೇಕು.

ನಮ್ಮನ್ನೇ ಬಳಸಿಕೊಂಡು ನಮ್ಮನ್ನೇ ಆಳುತ್ತಿರುವ ಈ ಆಳುವ ಪ್ರವೃತ್ತಿ ಬುಡಸಮೇತ ಕಿತ್ತಿ ಹಾಕಬೇಕು.ನೀವು ಮಲಗಿದರೆ ನಿಮ್ಮನ್ನು ಎಲ್ಲರೂ ಮಲಗಿಸುತ್ತಾರೆ. ನೀವು ಎಚ್ಚರಗೊಂಡರೆ ಯಾರೂ ನಿಮ್ಮನ್ನು ಮಲಗಿಸುವುದಿಲ್ಲ. ದಲಿತರು ಚಿಟ್ಟೆಗಳಾಗಬೇಕು. ಹುಳುತ್ವದಿಂದ ಬಿಡುಗಡೆ ಪಡೆಯಬೇಕು. ನಿಮ್ಮ ಸ್ವತಂತ್ರದ ಬದುಕಿಗೆ ನಿಮ್ಮ ಆಲೋಚನೆಯ ಕ್ರಮವೇ ಮೂಲವಾಗಿದೆ ಎಂದು ಪರ್ಯಾವಸಾನ ಕಥೆಯು ಹೇಳುತ್ತಾ, ಶ್ರಮಿಕವರ್ಗವನ್ನು ಹೇಗೆ ಮೇಲ್ವರ್ಗದವರು ಶೋಷಣೆಯನ್ನು ಮಾಡುತ್ತಿದ್ದಾರೆಂಬುವುದನ್ನು ಸವಿವರವಾಗಿ ವಿವರಿಸುತ್ತದೆ. ತೆಲುಗಿನ 'ರಾವೂರಿ ಭರದ್ವಾಜ' ರವರು ಬರೆದಿರುವ 'ನೊಂದವರ ಸತ್ಯ ಕಥೆಗಳು' ಎಂಬ ಉಪಶೀರ್ಷಿಕೆಯನ್ನೊಳಗೊಂಡ 'ಜೀವನ ಸಮರ'

ಎಂಬ ಕಥಾ ಸಂಕಲನದಲ್ಲಿ 'ಬೆವರಿನ ಬೆಲೆ' ಕಥೆಯು 'ಬರಿ ಕಥೆಯಲ್ಲೋ ಅಣ್ಣಾ' ಕುಂ.ವೀ. ಸಮಗ್ರ ಕಥೆಗಳಲ್ಲಿ ಕುಂ.ವೀರಭದ್ರಪ್ಪನವರು ಬರೆದಿರುವ ಕನ್ನಡದ 'ಪರ್ಯಾವಸಾನ' ಎಂಬ ಕಥೆಯಂತೆ ಜಮೀನ್ದಾರಿ ವ್ಯವಸ್ಥೆಯ ಪ್ರತಿಫಲವಾಗಿ ದಲಿತರಿಗೆ ದುಡಿದು ಉಣ್ಣುವುದಕ್ಕೆ ಯಾವುದೇ ಬದುಕಿನ ಆರ್ಥಿಕ ನೆಲೆಯಿಲ್ಲದೆ, ಆರ್ಥಿಕ ಅಭದ್ರತೆಯಿಂದ ದಮನಿತರ ಜೀವನ ಸಮರವಾಗಿ ಅವರ ಜೀವನದ ಹುಡುಕಾಟಕ್ಕೆ ಕೊನೆಯೇ ಇಲ್ಲದೆ ತಮ್ಮ ಬೆವರಿನ ಮೂಲಕ ಪಡೆದುಕೊಳ್ಳಬೇಕಾಗಿರುವ ಪ್ರತಿಫಲದ ಬೆಲೆಯೇ ಸಿಗದಿರುವುದನ್ನು ಕಂಡು ಬಂಡವಾಳಶಾಹಿಗಳು ದಲಿತರ ಮೇಲೆ ನಡೆಸುವ ಶೋಷಣೆಯನ್ನು ಈ ಕತೆಯು ತನ್ನ ಸೂಕ್ಷ್ಮ ಸಂವೇದನೆಗಳ ಮುಲಕ ವಿವರಿಸುತ್ತದೆ.

"ಗನ್ನವರಂ ವಿಮಾನ ನಿಲ್ದಾಣ ತೆನಾಲಿಯ ರೈಲ್ವೆ ಸೇತುವೆ, ರಾಜ ಮಹೇಂದ್ರಿಯ ಬಳಿಯ ಆಣೆಕಟ್ಟು, ಹೈದರಾಬಾದಿನ ಹೋಟಲ್, ಅನಂತಪುರದಲ್ಲಿನ ಚಲನಚಿತ್ರ ಮಂದಿರಗಳನ್ನು ನೋಡಿದವರಿಗೆ ಸಹ ಶೇಷಯ್ಯನ ಹೆಸರು ತಿಳಿಯುವ ಅವಕಾಶ ಇಲ್ಲ. ಇವುಗಳ ನಿರ್ಮಾಣದಲ್ಲಿ ಪಾಲುಗೊಂಡ ನೂರಾರು ಕೂಲಿಗಳಲ್ಲಿ ಶೇಷಯ್ಯನೂ ಒಬ್ಬ, ಆದ್ದರಿಂದಲೇ ಆತನಿಗೆ ಒಂದು ಊರು ಎಂಬುದು ಇಲ್ಲ."[೨೨] ಇಂತಹ ಸ್ಥಿತಿಯಲ್ಲಿ ಶೇಷಯ್ಯನ ಜೀವನ ಹೋರಾಟದಿಂದ ಸಾಗುತ್ತಿದೆ. ಯಾವುದೇ ಬದುಕಿನ ನೆಲೆಯಿಲ್ಲದ ಅತಂತ್ರತೆಯ ಅಸಹಾಯಕ ಜೀವನವನ್ನು ಕಳೆಯುತ್ತಿದ್ದಾನೆ. ಬಾಲ್ಯದಲ್ಲಿ ಯಾವುದೇ ಶಿಕ್ಷಣವನ್ನು ಪಡೆದುಕೊಳ್ಳಲು ಸಾಧ್ಯವಾಗದೆ ಇರುವುದರಿಂದ, ಯಾವುದೇ ಬದುಕಿನ ನೆಲೆ ಸಿಗದೆ, ಅಲೆಮಾರಿಯಾಗಿ ಮನೆಕಟ್ಟುವ ಕೆಲಸವನ್ನು ಮಾಡುತ್ತ ಜೀವನ ನಡೆಸುತ್ತಿದ್ದಾನೆ. ಈತನಿಗೆ ತನ್ನದೆಯಾದ ಸ್ವಂತ ಊರು ಇರುವುದಿಲ್ಲ. ಅದರಂತೆ ತನ್ನದೆಯಾದ ಸ್ವಂತ ಮನೆಯೂ ಇರುವುದಿಲ್ಲ. ಈತನದು ಒಂದು ದಿನಕ್ಕೆ ೧೫ ರೂಪಾಯಿ ಸಂಪಾದನೆಯಾಗಿದೆ. ಈ ಲೆಕ್ಕದಂತೆ ಈತನ ಸಂಪಾದನೆ ತಿಂಗಳಿಗೆ ೪೫೦ ರೂಪಾಯಿಯೂ ಆಗುವುದಿಲ್ಲ. ಏಕೆಂದರೆ ಇಡೀ ತಿಂಗಳ ಆತನಿಗೆ ಕೆಲಸ ಸಿಗುವುದಿಲ್ಲ. ಆದ್ದರಿಂದಲೇ ಆತನ ಜೀವನವೂ ಹೋರಾಟದ ಜೀವನವಾಗಿರುತ್ತದೆ. ಶೇಷಯ್ಯನಿಗೆ ನಾಲ್ಕು ಜನ ಮಕ್ಕಳಿದ್ದಾರೆ. ಎಲ್ಲರಿಗಾಗಿ ಮನೆಯನ್ನು ಕಟ್ಟಿಕೊಡುವ ಈತ ತಾನೇ ಮನೆಯಿಲ್ಲದವನಾಗಿದ್ದಾನೆ. ಕಷ್ಟಪಟ್ಟು ಬೆವರನ್ನು ಸುರಿಸುವ ದಲಿತರಿಗೆ ಮನೆಯಿಲ್ಲದಂತಾಗಿದೆ. ಆದರೆ ಅವರ ಶ್ರಮದಿಂದಲೇ ಮನೆಯನ್ನು ಕಟ್ಟಿಸಿಕೊಂಡು ನೆಮ್ಮದಿಯ ಜೀವನವನ್ನು ಬಂಡವಾಳಶಾಹಿಗಳು ನಡೆಸುತ್ತಿರುವುದರಲ್ಲಿ ಅದು ದಲಿತರಿಗೆ ಮಾಡುತ್ತಿರುವ ಶೋಷಣೆಯಾಗಿರುತ್ತದೆ.

ಕನ್ನಡದ ಕುಂ.ವೀರಭದ್ರಪ್ಪನವರು ಬರೆದಿರುವ 'ಪರ್ಯಾವಸಾನ' ಕಥೆಯಲ್ಲೂ ಜಮೀನ್ದಾರರು ನೂರಾರು ಎಕರೆ ಭೂಮಿಯ ಒಡೆತನವನ್ನು ಸಂಪಾದಿಸಿಕೊಂಡು, ದಲಿತರಿಗೆ ಭೂಮಿ ಇಲ್ಲದಂತೆ ಮಾಡಿ ಆರ್ಥಿಕ ಶೋಷಣೆಯನ್ನು ಮಾಡುತ್ತಿದ್ದಾರೆ. ಅದರಂತೆ ತೆಲುಗಿನ ರಾವೂರಿ ಭರದ್ವಾಜರವರು ಬರೆದಿರುವ ಈ 'ಬೆವರಿನ ಬೆಲೆ' ಕಥೆಯಲ್ಲಿ ಬಂಡವಾಳಶಾಹಿಗಳು ಶೇಷಯ್ಯನಿಗೆ ಒಂದು ಮನೆ ನಿರ್ಮಿಸಿ ಕೊಳ್ಳಲಾಗದಂತೆ ಮಾಡಿದ್ದಾರೆ. ಇವೆರಡು ಕಥೆಗಳು ದಲಿತರ ಮೇಲೆ ಉಳ್ಳವರು

ನಡೆಸುತ್ತಿರುವ ನಿರಂತರದ ಶೋಷಣೆಯಾಗಿದೆ ಎಂಬುವುದನ್ನು ಮಾರ್ಕ್ಸ್ ಮತ್ತು ಲೋಹಿಯವಾದದ ನೆಲೆಯಿಂದ ತಿಳಿಸಿಕೊಡುತ್ತವೆ.

'ಸಮಗ್ರ ಕಥಾ ಸಂಪುಟ'ದಲ್ಲಿ ಡಾ.ಚೆನ್ನಣ್ಣ ವಾಲೀಕಾರರವರು ಬರೆದಿರುವ "ಕುತ್ತದಲ್ಲಿ ಕುದ್ದವರ ಕಥೆಗಳು" ಎಂಬ ಕಥಾ ಸಂಕಲನದಲ್ಲಿರುವ 'ಹೊಲೇರ ಹುಡುಗ' ಎಂಬ ಕಥೆಯು ಗ್ರಾಮೀಣ ಪ್ರದೇಶದಲ್ಲಿರುವ, ದಲಿತ ಸಮುದಾಯದವರ ಕಡುಬಡತನದ ಬದುಕು, ಉಳ್ಳವರ ಕ್ರೌರ್ಯ, ಆರ್ಥಿಕ ಕ್ಷೋಭೆಯಿಂದಾಗಿ ಸೃಜಿಸುವ ಹಾದರ ಸಂಬಂಧಗಳು, ಹೆಣ್ಣು, ಭೂಮಿ ಮತ್ತು ಜಾತಿ ಕಾರಣದಿಂದಾಗಿ ನಡೆಯುವ ಕಥಾ ಹಂದರವಾಗಿದೆ.ದಲಿತ ಸಾಹಿತ್ಯ ಸಂಘಟನೆ ಮತ್ತು ಹೋರಾಟದ ಕಾಲಘಟ್ಟದಲ್ಲಿ ಪ್ರಮುಖ ಲೇಖಕರಲ್ಲಿ ಒಬ್ಬರಾದ ಡಾ.ಚೆನ್ನಣ್ಣ ವಾಲೀಕಾರರವರು ಒಟ್ಟು ಬರಹ ಮಾನವೀಯತೆಗಾಗಿ ಮಿಡಿಯುವ ಅಂತಃಕರಣ ಇವರದ್ದು. ಹೊಲೇರ ಹುಡುಗನು ಒಬ್ಬ ಅತ್ಯುತ್ತಮ ಹಾಡುಗಾರ. ಮಾಲಿಗೌಡರ ತೋಟದಲ್ಲಿ ಕೆಲಸ ಮಾಡುವವ, ಆತನ ಹೆಸರು ಬಾಲ್ಯಾ ತುಂಬುಪ್ರಾಯದ ಹುಡುಗ. ಮೊಟ್ಟೆ ಹೊಡೆಯುತ್ತ, ಹಾಡನ್ನು ಹಾಡುತ್ತಾ ಮೈಮರೆಯುವವ ಮಾಲೀಗೌಡರ ತೋಟದ ಗುಡಿಸಲಿನಲ್ಲಿಯೇ ಇವನ ವಾಸ. ಹೊಲೇರ ಭೀಮಪ್ಪನ ಮಗ.

ತನ್ನ ಬಡತನದ ಹೊಟ್ಟೆಪಾಡಿಗಾಗಿ ತೋಟದ ಕೆಲಸ ಮಾಡುತ್ತಾ, ಅಲ್ಲೆ ಹಗಲಿರುಳು ದುಡಿಯುತ್ತಿರುವ ದೃಢಕಾಯದ ಯುವ ಯುವಕ. ಜಗತ್ತಿನ ಸತ್ಯಾಸತ್ಯತೆಯನ್ನು ಅರಿಯದೆ, ನಂಬಿಕೆಯಿಂದ ಮಾಲಿಗೌಡರಲ್ಲಿ ಅನ್ನಕ್ಕಾಗಿ ಬದುಕುವ ನಿಷ್ಠಾವಂತ ಸೇವಕ. ಇತ್ತ ಸಾಹುಕಾರನ ಹೆಂಡತಿ ಮೈ ಕೈ ತುಂಬಿಕೊಂಡು ರಾತ್ರಿಯಲ್ಲಿ ನಿದ್ದೆಬಾರದೆ ಒರಳಾಡುತ್ತಿರುವ, ಮುಡಿಯಲು ಯಾರು ಇಲ್ಲದೆ ಚಂದ್ರಾಮನ್ನೇ ನೋಡುತ್ತಿರುವ ರಸಪುಷ್ಪ ಗೌಡಸಾನಿ ನಿಂಗಮ್ಮ. ಸಾಹುಕಾರ ಮನೆಯಲ್ಲಿ ಇಲ್ಲ, ಈಶ್ವರನ ಜಾತ್ರೆಗೆ ನಾಟಕ ಆಡಲು ಬಂದಿದ್ದ ಪಾತ್ರದವರನ್ನು ಬಿಡಲು ರಾಯಚೂರಿಗೆ ಹೋಗಿದ್ದಾನೆ. ಗೌಡಸಾನಿ ನಿಂಗಮ್ಮಳಿಗೆ ಮನೆ, ಮನ ಭಣಭಣ ಅನ್ನಿಸತೊಡಗಿತ್ತು. ಬೆಳಿಗ್ಗೆ ಎದ್ದು ಜಳಕ ಮಾಡಿ, ಊಟ ಮಾಡಿ ಮನೆಯ ಎಲ್ಲಾ ಕೆಲಸ ಮುಗಿಸಿಕೊಂಡು, ಹೊಲದಲ್ಲಿ ಏನೇನು ಕೆಲಸ ನಡೆದಿದೆಯೆಂದು ನೋಡಲು ಕುದುರೆ ಹತ್ತಿಕೊಂಡು ಹೊರಟಳು. ಮಟಮಟ ಮಧ್ಯಾಹ್ನದಲ್ಲಿ ಬೆಟ್ಟದ ಸಾಲುಗಳ ಮಧ್ಯದಿಂದ, ಮಾಲೀಗೌಡರ ತೋಟದಲ್ಲಿ ಬಾಲ್ಯ ಹಾಡು ಹಾಡುತ್ತಿರುವುದು ಕೇಳಿಸಿತು.ಇಷ್ಟೊಂದು ಸುಮಧುರವಾಗಿ ಹಾಡುತ್ತಿರುವವರು ಯಾರಿರಬಹುದೆಂದು ಬಂದು ನೋಡಿದಾಗ ಹೊಲೇರ ಹುಡುಗ ಬಾಲ್ಯಾ ಆಗಿದ್ದನು.ಈತನು ತುಂಬಾ ಬಲಿಷ್ಠವಾದ ತೋಳುಗಳಿಂದ ಗಟ್ಟಿಮುಟ್ಟಾದ ದೇಹವನ್ನು ಹೊಂದಿದ್ದನು.

ಆತನು ಕಷ್ಟಪಟ್ಟು ದುಡಿದು ಉಣ್ಣುವ ವ್ಯಕ್ತಿಯಾಗಿದ್ದನು. ದಲಿತರು ಹೀಗೇ ಇರುವುದು ಸ್ವಾಭಾವಿಕ. ಇದನ್ನು ನೋಡಿದ ಗೌಡಶ್ಯಾನಿ ಬಾಲ್ಯಾನ ಮೇಲೆ ತನ್ನ ಕೆಟ್ಟ ಕಾಮದ ಕಣ್ಣನ್ನು ಹಾಕಿದಳು. ಅವನ ಜೊತೆಗೆ ಸಲುಗೆಯಿಂದ ವರ್ತಿಸಿದಳು. ಇದನ್ನು ಅರಿತ ಬಾಲ್ಯಾ ನಾನು ಹೊಲೇರ ಹುಡುಗ ಇದ್ದೇನೆ ಬೆಡವೆಂದು ಹೇಳಿದನು. ಅದನ್ನು ಕೇಳದೆ ಗೌಡಶ್ಯಾನಿ ಬಾಲ್ಯಾನ

ಜೊತೆ ದೇಹಸಂಗ ಮಾಡಿದಳು. ಕಾಮಕ್ಕೆ ಬೇಕಾಗಿರುವುದು ಜಾತಿ ಅಲ್ಲ, ಸಂಪತ್ತು ಅಲ್ಲ, ಸುಖ ಕೊಡುವ ಯೌವ್ವನ. ಆವಾಗ ಯಾರಿಗೂ ಏನೂ ಬೇಕಿಲ್ಲ, ದೇಹಬೇಕು. ಆದರೆ ಮೇಲ್ವರ್ಗದವರಿಗೆ ಜಾತಿ ತುಂಬಿದ ಮನುಷ್ಯ ಬೇಕಿಲ್ಲ. ಸಾಹುಕಾರನ ಹೆಂಡತಿ ರಾತ್ರಿವಿಡೀ ಬಾಲ್ಯಾನಿಂದ ಸಂಭ್ರಮಿಸಿ ದೇಹವನ್ನು ತಣಿಸಿಕೊಂಡು, ಗುಡಿಸಲಿನಿಂದ ಹೊರಗೆ ಬರುವಾಗ ಆಕೆಯ ಮನೆಯ ಕೂಲಿಗಾರ ಹೊಲೇಯ ಲಾಲ್ಯಾ ನೋಡುತ್ತಾನೆ. ಅವನಿಗೆ ಬಾಲ್ಯಾನ ಗುಡಿಸಲಿನಿಂದ ಗೌಡಸಾನಿ ಬಂದಿದ್ದು ಅಚ್ಚರಿಯನ್ನುಂಟು ಮಾಡುತ್ತದೆ.

ದೊಡ್ಡವರ ಹಾದರ ತೆಗೆದುಕೊಂಡು ತಾನೇನು ಮಾಡಬೇಕಾಗಿದೆಯೆಂದು ಸುಮ್ಮನಾಗುತ್ತಾನೆ. ಆದರೂ ಮನಸಿನೊಳಗೆ ಸಾಹುಕಾರನ ಹೆಂಡತಿ ಹೊಲೇಯ ಬಾಲ್ಯಾನ ಜೊತೆ ಹೀಗೇಕೆ ಮಾಡಿದ್ದಾಳೆ ಎಂದು ಚಿಂತಿಸುತ್ತ ಹೊಲಕ್ಕೆ ಹೋಗುತ್ತಾನೆ. ಆದರೆ ತಮ್ಮಾಳು ಮಗ ಹೊಲೇರ ಲಾಲ್ಯಾ, ನಾನು ಬಾಲ್ಯಾನ ಗುಡಿಸಲಿನಿಂದ ಎದ್ದು ಬರುವುದನ್ನು ನೋಡಿದ ಸಂಗತಿ ತನ್ನ ಗಂಡ ಸಾಹುಕಾರನಿಗೆ ತಿಳಿಸಿದರೆ ನನ್ನಗತಿ ಏನಾಗುತ್ತದೆಂದು ಚಿಂತಿಸಿದಳು. ಮೊದಲೆ ಸಾಹುಕಾರನಿಗೆ ಈ ಆಳು ಮಗ ಲಾಲ್ಯಾ ತುಂಬಾ ನಂಬಿಕೆವುಳ್ಳವನು. ನಾಳೆ ಇದರಿಂದಾಗುವ ಅನಾಹುತವನ್ನು ಹೇಗೆ ತಪ್ಪಿಸಬೇಕೆಂದು ಜಳಕ, ಊಟ, ನಿದ್ದೆ ಮಾಡದೆ ಮಲಗಿಕೊಳ್ಳುತ್ತಾಳೆ. ಯಾರೇ ಬಂದು ಕೇಳಿದರೂ ತಲೆ ನೋವು ಎಂದು ಹೇಳಿ ಕಳಿಸುತ್ತಾಳೆ. ಕೊನೆಗೆ ಏನಾದರೂ ಮಾಡಿ ಸಾಹುಕಾರ ರಾಯಚೂರಿನಿಂದ ಮನೆಗೆ ಬರುವುದರೊಳಗಾಗಿ ಹೊಲೇರ ಲಾಲ್ಯಾನನ್ನು ಮುಗಿಸಬೇಕೆಂದು ನಿರ್ಧರಿಸುತ್ತಾಳೆ.

ಹೊಲದಲ್ಲಿ ರಾಶಿ ಮಾಡಿರುವ ಚೀಲಗಳನ್ನು ಬಂಡಿಯಲ್ಲಿ ಹಾಕಿಕೊಂಡು ಲಾಲ್ಯಾ ಸಾಹುಕಾರನ ಮನೆಗೆ ಬರುತ್ತಾನೆ. ತಂದ ಚೀಲಗಳನ್ನು ಕೋಣೆಯಲ್ಲಿ ಲೆಕ್ಕಮಾಡಿ ಹಾಕುತ್ತಾನೆ. ಆಗ ಗೌಡಸಾನಿ ನಿಂಗಮ್ಮ ನಿಮ್ಮ ಗೌಡರು ಊರಿಂದ ಇವತ್ತು ಬರುತ್ತಾರೆ, ನೀನು ಇಲ್ಲಿಯೇ ಮಲಗು ಎಂದು ಆದೇಶ ಮಾಡುತ್ತಾಳೆ. ಯಾವುದನ್ನು ಅರಿಯದ ಹೊಲೇಯ ಲಾಲ್ಯಾ ಕಂಬಳಿಯನ್ನು ಮಾರಿತುಂಬ ಮುಚ್ಚಿಕೊಂಡು ಹೊರಕಟ್ಟೆಯ ಮೇಲೆ ಮಲಗಿಕೊಳ್ಳುತ್ತಾನೆ. ರಾತ್ರಿ ಮಂದಿಯ ಸುಳಿವು ಇಲ್ಲದಿದ್ದಾಗ, ನಿಂಗಮ್ಮ ಲಾಲ್ಯಾ ಮಲಗಿಕೊಂಡಿರುವುದನ್ನು ಒಳಗಡೆಯಿಂದ ಹೊರಗೆ ಬಂದು ಗಮನಿಸುತ್ತಾಳೆ. ದಣಿದ ದೇಹ ನಿದ್ದೆಯಲ್ಲಿ ಮಲಗಿಕೊಂಡಿತು. ಆಗ "ನೇರವಾಗಿ ಮನೆಯೊಳಗೆ ಹೋದಳು. ಒಳಗಿರುವ ಬಂಗಾರ, ಬೆಳ್ಳಿ, ವಸ್ತು, ವಡವೆಗಳ ಪೆಟ್ಟಿಗೆಗಳನ್ನು ಹೊರತಂದು ಒಗೆದಳು. ಮನೆಯೊಳಗಿನ ಸಾಮಾನುಗಳನ್ನು ಚೆಲ್ಲಾಪಿಲ್ಲಿ ಮಾಡಿದಳು.

ತನ್ನ ಬಳೆ ಒಡೆದುಕೊಂಡು, ಸೀರೆ ಕುಬುಸ ಹರಿದುಕೊಂಡಳು, ಮೊದಲು ಅಂಗಳದಲ್ಲಿ ಬಿದ್ದಿದ್ದ ತರಗಲ್ಲನೆತ್ತಿ ಲಾಲ್ಯಾನ ತಲೆಯ ಮೇಲೆ ಜೋರಾಗಿ ಹಾಕಿದಳು. ಮುಖದ ತುಂಬ ಕಂಬಳಿ ಮುಸುಕು ಹಾಕಿಕೊಂಡಿದ್ದ ಲಾಲ್ಯಾ ಕಲ್ಲಿನೇಟಿಗೆ ಏಳದಂತಾದನು."[೨೩] ಕಲ್ಲನ್ನೆತ್ತಿ ನಿಂಗಮ್ಮ ಮತ್ತೆ ಮತ್ತೆ ಹಾಕಿದಳು. ಆಗ ಲಾಲ್ಯಾ ಮೇಲೇಳದಂತಾದನು. ಕಲ್ಲಿನ ಒಡೆತಕ್ಕೆ ತಲೆ ಬುರುಡೆ ಚೂರು ಚೂರಾಯಿತು. ರಕ್ತ ಹರಿಯಲ್ಲಟ್ಟಿತು. ನಂತರ ನಿಂಗಮ್ಮ ಕಳ್ಳರು ಬಂದಿದ್ದಾರೆ ಬರ್ರೆಪ್ಪೋ ಎಂದು

ನಾಟಕದ ಧ್ವನಿಯಲ್ಲಿ ಕೂಗಿಕೊಂಡಳು. ತಾನು ಮಾಡಿದ ತಪ್ಪಿಗಾಗಿ, ಅಕ್ರಮವಾದ ಸಂಬಂಧಕ್ಕಾಗಿ, ಒಬ್ಬ ದಲಿತರ ಹುಡುಗನನ್ನು ಬಲಿ ತೆಗೆದುಕೊಂಡಿದ್ದು ಗೌಡಸಾನಿ ನಿಂಗಮ್ಮ ಮಾಡಿದ ವಂಚನೆಯಾಗಿದೆ. ಇದು ಕಾಲಕಾಲಾಂತರಗಳಿಂದ ಉಳ್ಳವವರು ಅಸಹಾಯಕರಾದವರ ಮೇಲೆ ನಿರಂತರವಾಗಿ ಮಾಡುತ್ತಿರುವ ಅನ್ಯಾಯವಾಗಿದೆ. ತಮಗಾಗಿ, ತಮ್ಮ ಏಳ್ಗೆಗಾಗಿ, ತಮ್ಮ ತಪ್ಪುಗಳಿಗಾಗಿ ದಲಿತರನ್ನು ಬಲಿತೆಗೆದುಕೊಳ್ಳುತ್ತಿದ್ದಾರೆ.

ಕೊನೆಗೆ ತಾವು ನಿರಪರಾಧಿಗಳಾಗಿ, ತಾವೇ ಬಡವರ ಮೇಲೆ ಅಧಿಕಾರವನ್ನು ಚಲಾಯಿಸುತ್ತಿರುವುದು, ಯಾವ ತಪ್ಪನ್ನು ಮಾಡದೆ, ಉಳ್ಳವರು ಮಾಡುವ ಅಪರಾಧಕ್ಕೆ, ದಲಿತರು ಬಲಿಯಾಗುತ್ತಿರುವುದು ಸಾಮಾನ್ಯದ ಶೋಷಣೆಯಾಗಿಬಿಟ್ಟಿದೆ. ಆಳುವ ಕಾನೂನುಗಳು ಉಳ್ಳವರ ಪರವಾಗಿರುವಾಗ, ಲಾಲ್ಯಾನ ಸಾವಿನಿಂದ ಹೊಲಗೇರಿಗೆ ಹೊಲಗೇರಿಯೇ ಮುಗಿಲು ಮುಟ್ಟುವಂತೆ ಅಳುತ್ತಿರುವ ಅವರ ನೋವಿಗೆ ಪರಿಹಾರವೇನು...? ಇಂತಹ ಶೋಷಿತರ ಬಲಿಗೆ ಕೊನೆ ಯಾವಾಗ...? ಇದಕ್ಕೆಲ್ಲ ಸಿದ್ಧೌಷಧಿ ಅಂಬೇಡ್ಕರವರು ಹೇಳಿದ ಶಿಕ್ಷಣ ಸಂಘಟನೆಗೆ, ಹೋರಾಟವೆಂದು ಕಥೆಗಾರ ತನ್ನ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ. ವೆಂಕಟ ಸುಬ್ಬಯ್ಯನವರು ಸಂಪಾದನೆ ಮಾಡಿರುವ 'ತೆಲುಗು ಕಥಾ ಸಂಕಲನ'ದ ಸಿ.ಆರ್.ರಾವುರವರು ಬರೆದಿರುವ 'ಬಂಗಾರಮ್ಮನ ಜಮಿಂದಾರಿ' ಎಂಬ ಕತೆಯು 'ಸಮಗ್ರ ಕಥಾ ಸಂಪುಟ'ದಲ್ಲಿ ಡಾ.ಚೆನ್ನಣ್ಣ ವಾಲೀಕಾರವರು ಬರೆದಿರುವ 'ಕುತ್ತದಲ್ಲಿ ಕುದ್ದವರ ಕಥೆಗಳು' ಎಂಬ ಕಥಾ ಸಂಕಲನದಲ್ಲಿರುವ 'ಹೊಲೇರ ಹುಡುಗ' ಎಂಬ ಕತೆಯಂತೆ ಮೇಲ್ವರ್ಗದವರು ಕೆಳವರ್ಗದವರಿಗೆ ಮಾಡುತ್ತಿರುವ ಶೋಷಣೆಯ ಕತೆಯಾಗಿರುತ್ತದೆ.

ಒಬ್ಬ ದಲಿತ ವ್ಯಕ್ತಿಯಲ್ಲಿರುವ ಮುಗ್ಧತೆಯನ್ನು, ಅವರ ಸರಳತೆಯನ್ನು ಮೂರ್ಖತ್ವವೆಂದು ಭಾವಿಸಿಕೊಂಡು, ಉಳ್ಳವರು ಹೇಗೆ ದಲಿತರನ್ನು ತಮ್ಮ ಬಳಕೆಗಾಗಿ ಬಳಸಿಕೊಂಡು, ಬಲಿ ಕೊಡುತ್ತಾರೆಂದು ಈ ಕತೆಯು ಸ್ಪಷ್ಟತೆಯನ್ನು ನೀಡುತ್ತದೆ. "ಏಳನೇ ವಯಸ್ಸಿನಲ್ಲಿ ದನಕಾಯಲು ಅಲ್ಲಿ ಸೇರಿ, ರಾತ್ರಿಯ ತಂಗಳನ್ನು ಬೆಳಿಗ್ಗೆ, ಬೆಳಗ್ಗೆಯ ತಂಗಳನ್ನು ರಾತ್ರಿ ತಿಂದು ಕಾಯ ಕಷ್ಟಪಟ್ಟು ದೇಹ ಗಟ್ಟಿಗೊಳಿಸಿಕೊಳ್ಳುತ್ತ ಇಪ್ಪತ್ತೈದರ ವಯಸ್ಸಿನವನಾದ ಭೀಮಯ್ಯ, ಜಮಿಂದಾರಿ ಎಲ್ಲ ರೀತಿಯಲ್ಲಿ ಎರಡಷ್ಟು ಬೆಳೆಯಿತು. ಆದರೆ ಭೀಮಯ್ಯನ ಗುಡಿಸಲು ತಂದೆಯ ಕಾಲದಲ್ಲಿ ಹೇಗಿತ್ತೋ ಈಗಲೂ ಹಾಗೆ ಇದೆ. ಇದ್ದಷ್ಟೇ ಇದೆ. ಅಷ್ಟೆ ಅಲ್ಲದೆ ಹಾಳು ಬಿದ್ದಿದೆ."[೨೪] ನಂಬಿಕೆಯೇ ದೇವರೆಂದುಕೊಂಡು ತನ್ನ ಇಡೀ ಜೀವನವನ್ನೇ ವಂಚಿಸುತ್ತಿರುವ ಧನಿಕರಿಗೆ ತನ್ನನ್ನೇ ಸಮರ್ಪಿಸಿದ್ದಾನೆ.

ಬಡ ಯುವಕನು ಶೋಷಣೆಗೆ ಒಳಪಟ್ಟು ಹೇಗೆ ಅವರ ಕುತಂತ್ರಕ್ಕೆ ಭೀಮಯ್ಯ ತನ್ನ ಕುಟುಂಬವನ್ನು ಸರ್ವನಾಶ ಮಾಡಿಕೊಳ್ಳುವಂತೆ ಮಾಡುತ್ತದೆಂಬುವುದನ್ನು 'ಬಂಗಾರಮ್ಮನ ಜಮಿಂದಾರಿ' ಕಥೆಯು ಸವಿಸ್ತಾರವಾಗಿ ವಿವರಿಸುತ್ತದೆ. ಬಂಗಾರಮ್ಮ ಜಮಿಂದಾರಿಯ ಯಜಮಾನಿ ಅವಳೊಬ್ಬ ವಿಧವೆ. ತನ್ನ ಮನೆ ಹೊಲದ ಕೆಲಸಕ್ಕೊಂದು ತನ್ನ ಬಿಡಿ ಇಡಿಯ ಸೇವೆಗಾಗಿ ಜೀತದಾಳನ್ನು ಇಟ್ಟುಕೊಂಡಿದ್ದಾಳೆ. ಆ ಯುವಕನೇದಲಿತ ಬಡಭೀಮಯ್ಯ ಹಗಳಿರುಳೆನ್ನದೆ ನಿಷ್ಠೆಯಿಂದ ಕೆಲಸ

ಮಾಡುವ ವ್ಯಕ್ತಿ. ಈತನು ಅನ್ನ ಕೊಡುವ ಬಂಗಾರಮ್ಮನೇ ತನ್ನ ದೇವರೆಂದುಕೊಂಡು, ತನ್ನ ಯೌವನದ ದಿನಗಳ ಶಕ್ತಿಯನ್ನೆಲ್ಲ ಅವಳ ಹೊಲಗದ್ದೆಗಳಲ್ಲಿ ಶ್ರಮಿಸಿ, ಭೀಮಯ್ಯನ ಬೆವರ ಹನಿಯಿಂದಲೇ ಅತಿ ಹೆಚ್ಚು ಬೆಳೆಯನ್ನು ತಂದು ಕೊಟ್ಟು ಊರಿನ ಜನರಿಂದಲೇ ಸೈ ಎನಿಸಿಕೊಂಡು, ಬಂಗಾರಮ್ಮನ ನಂಬಿಕೆಯ ಜೀತದಾಳಾಗಿ ತನ್ನ ಜೀವನವನ್ನು ಸಾಗಿಸುತ್ತಿದ್ದನು. ವಿಧವೆಯಾದ ಬಂಗಾರಮ್ಮ ಭೀಮಯ್ಯನ ಗಂಡುತನವನ್ನು ಬಳಕೆ ಮಾಡಿಕೊಂಡಿರೆ, ತನ್ನ ದೇಹ ಸುಖವೂ ಸಿಗುತ್ತದೆ, ಅದಲ್ಲದೆ ಅವಳಿಗೆ ಗುಲಾಮನಾಗಿ ತನ್ನ ಮನೆಯ ಹೊಲ ಕೆಲಸದಲ್ಲಿ ಹೆಚ್ಚು ದುಡಿದು ನನ್ನ ಆದಾಯವನ್ನು ಇನ್ನೂ ಹೆಚ್ಚಿಸಲು ಸಾಧ್ಯವಾಗುತ್ತೆಂದು ಭೀಮಯ್ಯನನ್ನು ಮನೆ ಒಳಕ್ಕೆ ಕರೆದು, ಆತನನ್ನು ಎಷ್ಟೇ ಕಾಡಿಸಿದರೂ ಬಂಗಾರಮ್ಮನ ಕಾಮಾಸ್ತಕಿಯು ಫಲಿಸುವುದಿಲ್ಲ.

ಇದರ ಸಿಟ್ಟಿನಿಂದಾಗಿಯೇ ಭೀಮಯ್ಯನ ಹೆಂಡತಿಯ ಹೆರಿಗೆಯ ಸಮಯದಲ್ಲಿ ಭೀಮಯ್ಯನನ್ನು ಮನೆಗೆ ಹೋಗಲು ಬಿಡುವುದಿಲ್ಲ. ಅವಳ ಹಾರೈಕೆಯನ್ನು ಮನೆಯಲ್ಲಿ ಯಾರು ಮಾಡಲು ಇಲ್ಲದಿರುವಾಗ ಅವಳು ಸತ್ತು ಹೋಗುತ್ತಾಳೆ. ಭೀಮಯ್ಯನಿಗೆ ಸತ್ಯ ತಿಳಿದು ಯಜಮಾನಿಯ ಮನೆಯನ್ನು ಬಿಟ್ಟು ಬರುತ್ತಾನೆ. ಈ ಕಥೆಗೂ ಮತ್ತು ಕನ್ನಡದ ಡಾ.ಚೆನ್ನಣ್ಣವಾಲೀಕಾರರರು ಬರೆದಿರುವ 'ಹೊಲೇರ ಹುಡುಗ' ಎಂಬ ಕಥೆಯ ಹುಡುಗನಿಗೂ ಬಂಡವಾಳಶಾಹಿಗಳು ಹೇಗೆ ತಮ್ಮ ಸ್ವಹಿತಕ್ಕಾಗಿ ದಲಿತರನ್ನು ಶೋಷಣೆ ಮಾಡಿ ಹೇಗೆ ಬಲಿ ತೆಗೆದುಕೊಳ್ಳುತ್ತಾರೆ ಎಂಬುವುದನ್ನು ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಲ್ಲಿ ತಿಳಿಸುತ್ತವೆ.

'ಸುವರ್ಣ ಕಥಾ ಸಂಕಲನ' ಎಂಬ ಕನ್ನಡ ಕಥಾ ಸಂಕಲನವನ್ನು 'ಸುವರ್ಣ ಕರ್ನಾಟಕ' ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ್, ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ಪ್ರಕಟಿತವಾದ ಈ ಕಥಾ ಸಂಕಲನದಲ್ಲಿರುವ 'ಒಂದು ಹುಡುಗನಿಗೆ ಬಿದ್ದ ಕನಸು' ಎಂಬ ಕಥೆಯನ್ನು ಬೆಸಗರಹಳ್ಳಿ ರಾಮಣ್ಣನವರು ಬರೆದಿದ್ದಾರೆ. ಈ ಕಥೆಯು ಶ್ರಮಿಕರಿಗಿಲ್ಲದ ನ್ಯಾಯದ ಬೆಲೆಯನ್ನು ತಿಳಿಸಿಕೊಡುತ್ತದೆ. ಇದು ಒಬ್ಬ ಹುಡುಗನಿಗೆ ಬಿದ್ದ ಕೇವಲ ಕನಸಾಗಿರದೆ, ದಲಿತ ವರ್ಗದವರ ವಾಸ್ತವದ ಬದುಕಾಗಿರುತ್ತದೆ ಎಂಬುವುದನ್ನು ಕಥೆಗಾರರು ಅತ್ಯಂತ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ಈ ಕಥೆಯಲ್ಲಿ ಹಿಡಿದಿಟ್ಟಿದ್ದಾರೆ. ಕಷ್ಟಪಟ್ಟು ಬೇವರು ಸುರಿಸಿ ದುಡಿದವರಿಗಿಲ್ಲದ ಕೀರ್ತಿ, ಸಂಪತ್ತು, ನೆಮ್ಮದಿಯಿಂದ ಬದುಕುವೆಂಬುದನ್ನು ತಿಳಿಸುವುದು ಈ ಕಥೆಯ ಮುಖ್ಯ ಆಶಯವಾಗಿರುತ್ತದೆ. ಆದರೆ ಶ್ರಮಿಕರ ಬೆವರಿನ ಸಂಪತ್ತನ್ನು ಪಡೆದುಕೊಂಡು ನಾವೇ ದೊರೆಗಳೆಂದು ಶ್ರಮಿಕರನ್ನೇ ಕಡೆಗಣಿಸಿ ನೊಡುತ್ತಿರುವ ಐತಿಹಾಸಿಕ ಪರಂಪರೆಯ ಚಿತ್ರಣವನ್ನು ಸೂಕ್ಷ್ಮತೆಯಿಂದ ಟೀಕಿಸಿದ್ದಾರೆ.

ದೇಶದಲ್ಲಿ ಕಷ್ಟಪಡುವರು ಒಬ್ಬರು ಅವರ ಶ್ರಮದಿಂದ ತಮ್ಮ ಕೀರ್ತಿಯನ್ನು ಬೆಳಸಿಕೊಂಡು ಇತಿಹಾಸದ ಪುಟಗಳಲ್ಲಿ ರಾರಾಜಿಸುತ್ತಿರುವವರು ಮತ್ತೊಬ್ಬರು ಅದಕ್ಕೆ ಕಾರಣವಾದ ಶ್ರಮಿಕರನ್ನು ಯಾರೂ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಇದು ಅಂದಿನಿಂದ ಇಂದಿನವರೆಗೆ ದಲಿತವರ್ಗದವರಿಗೆ

ಮಾಡುತ್ತಿರುವ ಅನ್ಯಾಯದ ದುರಂತದ ಚರಿತ್ರೆಯಾಗಿದೆ. ಇದನ್ನೆ ಈ ಕಥೆಯ ಮೂಲಕವಾಗಿ ಶ್ರಮಿಕರ ಬೆವರಿನ ಬೆಲೆಯ ಮಹತ್ವವನ್ನು ತಿಳಿಸಿಕೊಟ್ಟಿದ್ದಾರೆ. ಅಷ್ಟೇ ಅಲ್ಲದೆ ಶ್ರಮಿಕರನ್ನು ಕಾಲದಿಂದ ಕಾಲಕ್ಕೂ ಹೇಗೆ ಶೋಷಣೆಗೆ ಒಳಪಡಿಸಿ ಅವರನ್ನು ಕೇವಲ ದುಡಿಯುವ ಯಂತ್ರಗಳಂತೆ ಉಪಯೋಗಿಸಿಕೊಳ್ಳುತ್ತಿದ್ದಾರೆ ಎಂಬ ವಾಸ್ತವ ಸಂಗತಿಯನ್ನು ದಲಿತ ಸಂವೇದನೆಗಳನ್ನು ತೆರೆದು ತೋರಿಸಿಕೊಟ್ಟಿದ್ದಾರೆ. ಹಿಂದಿನ ಭಾರತದ ಒಂದು ರಾಜ್ಯದ ಹಳೆಯ ಸಾಮ್ರಾಜ್ಯಗಳ ನಗರ, ಅವರ ವಂಶೀಕರ ಕತೆಗೋ, ಇತಿಹಾಸಕ್ಕೋ ಸಂಬಂಧಿಸಿದಂತೆ ದೇವಸ್ಥಾನಗಳು, ಅರಮನೆಗಳು, ಪವಿತ್ರ ಸ್ಥಳವೆಂದು ಕರೆಸಿಕೊಳ್ಳುತ್ತಿರುವ ಸಮಾಧಿಗಳು ಅರಸನ ಕೀರ್ತಿಯನ್ನು ಹೇಳುತ್ತವೆ.

ಆದರೆ ಅವುಗಳನ್ನು ನಿರ್ಮಾಣ ಮಾಡಲು ಅನೇಕ ದಲಿತ ಶ್ರಮಿಕರು ಪಟ್ಟ ಸಾವು ನೋವಿನ ಸಂಗತಿಗಳನ್ನು ಅವರ ಕೀರ್ತಿಯನ್ನು ಯಾವ ಸಾಮ್ರಾಜ್ಯದ ಚರಿತ್ರೆಯೂ ಸಾರುವುದಿಲ್ಲ. ಅದು ಅಂದಿನ ಕತೆಯಾದರೂ ಇಂದಿನ ಕಾಲದಲ್ಲೂ ಶ್ರಮಿಕರನ್ನೆ ಬಳಸಿಕೊಂಡು ಅವರ ಬೆವರಿನ ಸಂಪತ್ತಿನ ಮೇಲೆ ಕುಳಿತಿರುವ ಮೇಲ್ವರ್ಗದವರೆಂದು ಕರೆಸಿಕೊಳ್ಳುವ ಉಳ್ಳವರು ಶ್ರಮಿಕರನ್ನು ಶೋಷಣೆ ಮಾಡುತ್ತಿರುವ ಪರಿಯನ್ನು ಈ ಕತೆಯು ಸವಿಸ್ತಾರವಾಗಿ ತಿಳಿಸುತ್ತದೆ. ಒಂದು ಚಿಕ್ಕದಾದ ಚೊಕ್ಕದಾದ ಸಂಸಾರದಲ್ಲಿ ಗಂಡ, ಹೆಂಡತಿ ಇಬ್ಬರೇ ಮಕ್ಕಳುಳ್ಳ ರಾಷ್ಟ್ರದ ಜನನ ನಿಯಂತ್ರಣ ನೀತಿಯನ್ನು ಬದ್ಧವಾಗಿ ಅನುಸರಿಸಿದ ಕುಟುಂಬ. ಒಂದು ಚಿಕ್ಕ ಹಳ್ಳಿಯಲ್ಲಿ ವಾಸಮಾಡಿಕೊಂಡಿದ್ದರು. ಗಂಡನಿಗೆ ನಲವತ್ತು ನಾಲ್ಕು ವರ್ಷ, ಹೆಂಡತಿಗೆ ಇಪ್ಪತ್ತೊಂಬತ್ತು, ಹುಡುಗನಿಗೆ ಹನ್ನೆರಡು ವರ್ಷ, ಹುಡುಗಿಗೆ ಆರು ವರ್ಷಗಳಿದ್ದವು.

ಆ ಚಿಕ್ಕ ಹಳ್ಳಿಯಲ್ಲಿ ಅವರ ಜೀವನ ಸಂತೃಪ್ತಿಯಿಂದ ಬಡತನದಲ್ಲಿದ್ದರೂ ಸಾಗುತ್ತಿತ್ತು. ಒಂದು ದಿನ ಇಡೀ ಕುಟುಂಬ ಬಸ್ಸಿನಲ್ಲಿ ಒಂದು ಹಳೆಯ ನಗರಕ್ಕೆ ಬರುತ್ತದೆ. ಆ ಬಸ್ ನಿಲ್ದಾಣದ ಪಕ್ಕದಲ್ಲಿರುವ ಆಕಾಶದೆತ್ತರದಂತೆ ಕಾಣುತ್ತಿರುವ ಅರಮನೆಯನ್ನು ವೀಕ್ಷಿಸಲು ಈ ಕುಟುಂಬ ಸಾಗುತ್ತದೆ. ಮಕ್ಕಳು ಬೆರಗಾಗಿ ಆ ದೊಡ್ಡ ಭವನವನ್ನು ನೋಡುತ್ತಿರುತ್ತಾರೆ. ತಂದೆಯನ್ನು ಮಗನು ಇದೇನಪ್ಪಾ ಎಂದು ಕೇಳುತ್ತಾನೆ. ಅದಕ್ಕೆ ತಂದೆ ಇದು ಅರಮನೆ ಕಣೋ ನಮ್ಮನ್ನೆಲ್ಲಾ ಆಳುತ್ತಿದ್ದ ಅರಸರು ಇದ್ದ ಮನೆ ಎಂದು ಹೇಳುತ್ತಾನೆ. ಆಗ ಆ ಹುಡುಗ ಇಂಥ ದೊಡ್ಡ ಮನೆಯಲ್ಲಿ ಎಷ್ಟು ರಾಜರಿದ್ದಾರೆಂದು ಕೇಳುತ್ತಾನೆ. ಹುಚ್ಚ ಒಂದು ದೇಶಕ್ಕೆ ಒಬ್ಬನೇ ರಾಜನೆಂದು ಹೇಳುತ್ತಾನೆ. ಆಗ ಆ ಹುಡುಗ ಒಬ್ಬ ರಾಜನಿಗೆ ಇಷ್ಟೊಂದು ದೊಡ್ಡ ಮನೆನಾ...? ಎಂದು ಮರು ಪ್ರಶ್ನೆ ಮಾಡುತ್ತೇನೆ. ರಾಜನಿಗೆ ಹೆಂಡತಿಯರು ಎಷ್ಟೆಂದಾಗ ತಂದೆ ಹೌದು ನೂರಾರು ಜನರಿರುವ ಅಂತಪುರವೇ ಉಂಟೆಂದು ಹೇಳುತ್ತಾನೆ.ರಾಜನ ವಿಷಯವನ್ನು ಬಿಟ್ಟು ಇಡೀ ಕುಟುಂಬವೇ ಸರಸರನೆ ಅರಮನೆಯನ್ನು ನೋಡಲು ಹೆಜ್ಜೆ ಹಾಕುತ್ತದೆ.

ನಂತರ ಮಗನು ತಂದೆಗೆ "ಅಪ್ಪ ಈ ಅರಮನೆಯನ್ನು ರಾಜರೇ ಕಟ್ಟಿದರೇ..? ಯಾಕೆ....? ರಾಜಬೊಕ್ಕಸದಿಂದ ಜನರಿಗೆ ಕೂಲಿಕೊಟ್ಟು ದುಡಿಸಿ ಕಟ್ಟಿಸಿದರು. "ರಾಜಬೊಕ್ಕಸಕ್ಕೆ ಹಣ ಎಲ್ಲಿಂದ

ಬಂತಪ್ಪ...? "ಜನರಿಂದ ತೆರಿಗೆ ಅಂದರೆ ನಾವೆಲ್ಲ ಭೂ ಕಂದಾಯ ಕೋಡ್ತೀವಿ ನೋಡು ಶ್ಯಾನುಭೋಗರಿಗೆ ಅಂಥ ದುಡ್ಡಿನಿಂದ." ಅಂಗಾದ್ರೆ ಇದು ಜನರ ದುಡ್ಡಿನಿಂದ ಕಟ್ಟಿಸಿದ್ದು ಅಂಗಾದ್ರೆ ಮತ್ತೆ ಇದು ಜನರದ್ದೆ ಆಯಿತಲ್ಲ ರಾಜರದ್ದು ಹೇಗಾಯಿತಪ್ಪ"[೨೫] ಎಂದು ಕೇಳಿದಾಗ ತಂದೆಗೆ ಮಾತಿಲ್ಲದಂತಾಗಿ ಇಲ್ಲಿ ಯಾರಾದ್ರೂ ಕೇಳಿಯಾರು ಸುಮ್ಮನಿರು ಎನ್ನುತ್ತಾನೆ. ಆಗ ಮಗನಾಡುವ ಮಾತು ರಾಜ ಬೆವರು ಸುರಿಸಲಿಲ್ಲ, ಇಂಥ ದೊಡ್ಡ ಮನೆ ರಾಜಂದು ಅಂದ್ರೇ ನಮ್ಮ ಪುಸ್ತಕದಲ್ಲಿ ಬಸವಣ್ಣನವರು 'ಕಾಯಕವೇ ಕೈಲಾಸ' ಎಂದು ಹೇಳಿದ್ದರಲ್ಲ ಯಾಕೆಂದು ಪ್ರಶ್ನಿಸುತ್ತಾನೆ. ನಮ್ಮ ಜನರೆಲ್ಲ ಹಸಿವಿನಿಂದ, ಬಡತನದಿಂದ, ಅಜ್ಞಾನದಿಂದ, ಅನಕ್ಷರತೆಯಿಂದ ವಿಮುಕ್ತರಾಗಿ ಜೊತೆಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಯಾವ ಭೀತಿಯಿಲ್ಲದೆ ವ್ಯಕ್ತಪಡಿಸಬೇಕು.

ಅದು ಇಂದಿನ ಕಾಲದಲ್ಲೂ ಸಾಧ್ಯವಾಗುತಿಲ್ಲವೆಂದರೆ ಇದು ದೇಶದ ದುರಂತ ಸಂಗತಿಯಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕೂಡ ಶ್ರಮಿಕರನ್ನು ಉಪಯೋಗಿಸಿಕೊಂಡು ಕಾರ್ಖಾನೆಗಳು ನಡೆಯುತ್ತವೆ. ಆದರೆ ಅದರ ಮಾಲೀಕರು ದುಡಿಯುವ ಜನರನ್ನು ಬಳಸಿಕೊಂಡು ತಾವೇ ಶ್ರೀಮಂತರಾಗುತ್ತಿದ್ದಾರೆ. ಅವರಿಗೆ ಸರಿಯಾದ ದುಡಿಮೆಗೆ ತಕ್ಕ ಬೆಲೆಯನ್ನು ನೀಡುತ್ತಿಲ್ಲ. ಅದರಂತೆ ಕಷ್ಟ ಪಟ್ಟು ದುಡಿದು ರೈತ ಬೆಳೆದ ಬೆಳೆಗೆ ದಲ್ಲಾಳಿಗಳು ಮೋಸದಿಂದ ವಂಚಿಸಿ, ಅವರ ಶ್ರಮಕ್ಕೆ ತಕ್ಕ, ಬೆಳೆಗೆ ತಕ್ಕ ಬೆಲೆ ನಿರ್ಧರಿಸದೆ ತಾವೇ ಶ್ರೀಮಂತರಾಗುತ್ತಿದ್ದಾರೆ. ರಾಜಕೀಯ ವ್ಯಕ್ತಿಗಳು ಸಹ ಬಡವರನ್ನು ಕೇವಲ ತಮ್ಮ ಅಧಿಕಾರದ ಸಿಂಹಾಸನಕ್ಕಾಗಿ ಬಳಸಿಕೊಂಡು ಅವರನ್ನು ಬಡವರನ್ನಾಗಿಯೇ ಮಾಡುತ್ತಿದ್ದಾರೆ. ಎಲ್ಲರಿಗೂ ಬದುಕನ್ನು ಕಟ್ಟಿಸಿಕೊಟ್ಟ ಶ್ರಮಿಕರನ್ನೇ ಇಂದು ಉಳ್ಳವರು ಶೋಷಣೆಯನ್ನು ಮಾಡುತ್ತಿದ್ದಾರೆ. ಶ್ರಮಿಕರು ತಮ್ಮ ಕೊನೆಗಾಲದವರೆಗೆ ಯಾವ ಸುಖಗಳನ್ನು ಕಾಣದೆ, ಸರಿಯಾದ ಅನ್ನ, ಆಹಾರ, ವಸತಿಯ ಮೂಲ ಸೌಕರ್ಯಗಳಿಲ್ಲದೆ ವಂಚಿತರಾಗುತ್ತಾರೆ.

ಶ್ರಮಿಕರ ಶ್ರಮವನ್ನೇ ಬಂಡವಾಳವನ್ನಾಗಿಸಿಕೊಂಡ ಬಂಡವಾಳಶಾಹಿಗಳು ಶ್ರಮಿಕರನ್ನು ಶೋಷಣೆಗೆ ಒಳಪಡಿಸುತ್ತಿದ್ದಾರೆ. ಇಂತಹ ಹತ್ತಾರು ಸಂಗತಿಗಳನ್ನು 'ಒಂದು ಹುಡುಗನಿಗೆ ಬಿದ್ದ ಕನಸು' ಕಥೆಯಲ್ಲಿ ಕಥೆಗಾರರು ವಾಸ್ತವ ಲೋಕವನ್ನು ತೋರಿಸಿಕೊಟ್ಟಿದ್ದಾರೆ. ಅರಮನೆ, ಗುಡಿಸಲು ಎಂಬ ಭೇದ ಅಳಿದು ಸಮಾನತೆಯ ಕನಸು ನನಸಾಗಬೇಕು. ಆ ಹುಡುಗನ ಪ್ರತಿಯೊಂದು ಮಾತಿನಲ್ಲಿ ಇಂದಿಗೂ ದಲಿತ ವರ್ಗದವರು ಪಡುತ್ತಿರುವ ನೋವುಗಳು ತುಂಬಿವೆ. ಅಷ್ಟೇ ಅಲ್ಲದೆ ಅರಮನೆಯ ಕನಸನ್ನು ಕಾಣುತ್ತಿರುವ ದಲಿತರ ವಾಸ್ತವ ಬದುಕಿನ ಚಿತ್ರಣವೂ ಇದೆ. ದಲಿತರು ಬೇಡುತ್ತಿರುವುದು ಕನಸಿನ ಅರಮನೆಯನ್ನಲ್ಲ, ಅವರು ಪಟ್ಟ ಶ್ರಮಕ್ಕೆ ಸರಿಯಾದ ಬೆಲೆ ಸಿಗುವಂತಾಗಬೇಕು. ಅವರಿಗೂ ಕೀರ್ತಿಯಲ್ಲಿ, ಚರಿತ್ರೆಯಲ್ಲೂ ಹಕ್ಕು ಸಿಗಬೇಕು. ಚರಿತ್ರೆಯೆಂದರೆ ಕೇವಲ ಅದು ಉಳ್ಳವರ ಪುಟವಾಗಬಾರದು ಕಾಯಕ ತತ್ವದಡಿಯಲ್ಲಿ ಸಾಗುತ್ತಿರುವ ಶ್ರಮಿಕರ ಜೀವನವು ಅಡಕವಾಗಬೇಕು.

ಶ್ರಮಿಕ ವರ್ಗದವರಿಗೂ ಅವರದೆಯಾದ ನೆಲ, ಜಲ, ಧಾನ್ಯ ಸಿಗಬೇಕು. ಅವರಿಗೂ ಈ ದೇಶದ ಚರಿತ್ರೆಯಲ್ಲಿ ಸಮಾನವಾದ ಹಕ್ಕು ಇದೆ. ಅದನ್ನು ಅವರಿಗೆ ನೀಡಿ ಅವರ ಕನಸನ್ನು ನನಸು

ಮಾಡಬೇಕೆಂಬ ಆಶಯವನ್ನು ಈ ಕಥೆಯು ಅಭಿವ್ಯಕ್ತಪಡಿಸುತ್ತದೆ. 'ಪ್ರಸಾದ' ತಮಿಳು ಸಣ್ಣ ಕತೆಗಳ ಸಂಕಲನವನ್ನು ಡಾ.ಪಾ.ಶ.ಶ್ರೀನಿವಾಸ ರವರು ಕನ್ನಡನುದಾದ ಮಾಡಿರುತ್ತಾರೆ. ಈ ಕಥಾ ಸಂಕಲನದಲ್ಲಿ ತಮಿಳಿನ ಜಯಕಾಂತನ್.ಡಿ ಯವರು ಬರೆದಿರುವ 'ಉಪವಾಸ ವ್ರತ' ಎಂಬ ಕಥೆಯು 'ಸುವರ್ಣ ಕಥಾ ಸಂಕಲನ' ಎಂಬ ಕನ್ನಡ ಕಥಾ ಸಂಕಲನದಲ್ಲಿರುವ ಬೆಸಗರಹಳ್ಳಿ ರಾಮಣ್ಣನವರು ಬರೆದ ಒಂದು ಹುಡುಗನಿಗೆ ಬಿದ್ದ ಕನಸು. ಎಂಬ ಕತೆಯಂತೆ ಕಷ್ಟಪಟ್ಟು ಹಗಲಿರುಳು ದುಡಿಯುತ್ತಿರುವ ಬಡವರ ಶ್ರಮಕ್ಕೆ ಬೆಲೆ ಇಲ್ಲದಿರುವ, ಬಂಡವಾಳಶಾಹಿಗಳು ದಲಿತರಿಗೆ ಮಾಡುತ್ತಿರುವ ಶೋಷಣೆಯನ್ನು ಅಭಿವ್ಯಕ್ತಗೊಳಿಸುತ್ತದೆ. ಕಷ್ಟಪಟ್ಟು ದುಡಿಯುತ್ತಿರುವ ಶ್ರಮವನ್ನು ಬಳಕೆ ಮಾಡಿಕೊಂಡು, ಉಳ್ಳವರು ಆರ್ಥಿಕವಾಗಿ ಸಬಲರಾಗಿ ದುಡಿಯುವವರನ್ನು ಶೋಷಣೆಮಾಡಿ, ಅವರ ಶ್ರಮಕ್ಕೆ ಸರಿಯಾದ ಬೆಲೆಯನ್ನು ನೀಡದೆ ಬಡವರನ್ನಾಗಿಸುತ್ತಾರೆ ಎಂಬುವುದನ್ನು ಈ ಕತೆಯು ನಿರೂಪಿಸುತ್ತದೆ.

ಒಂದು ಕಾರ್ಖಾನೆಯಲ್ಲಿ ದುಡಿಯುತ್ತಿರುವ ಕಾರ್ಮಿಕರು ಆ ಕಾರ್ಖಾನೆಯ ಆರ್ಥಿಕ ಸ್ಥಿತಿಗತಿಯನ್ನು ನಿರ್ಧರಿಸುವ ಶಕ್ತಿವುಳ್ಳವರಾಗಿರುತ್ತಾರೆ. ಅವರ ಬೆವರ ಹನಿಯ ಶ್ರಮದಿಂದಲೇ ಕಾರ್ಖಾನೆಯ ಮಾಲೀಕರು ಬಂಡವಾಳಶಾಹಿಯಾಗಲು ಸಾಧ್ಯವಾಗುತ್ತದೆ. ಹೀಗಿರುವಾಗ ಕಾರ್ಖಾನೆಯ ಮಾಲೀಕರು ಕಾರ್ಮಿಕರ ಶ್ರಮಕ್ಕೆ ಸರಿಯಾದ ಬೆಲೆಯನ್ನು ನೀಡದೆ ಶೋಷಣೆಯನ್ನು ಮಾಡುತ್ತಾರೆ. ಇದರ ಪ್ರತಿಕಾರವಾಗಿ ಕಾರ್ಮಿಕರು ಉಪವಾಸ ವ್ರತವನ್ನು ಹಮ್ಮಿಕೊಳ್ಳುತ್ತಾರೆ. ಆ ಕಾರ್ಖಾನೆಯ ಕೆಲಸವನ್ನು ನಿಲ್ಲಿಸಿ, ಕಾರ್ಖಾನೆಯ ಬಾಗಿಲನ್ನು ಮುಚ್ಚಿ, ತಮ್ಮ ಬೇಡಿಕೆಯ ಹಕ್ಕುಗಳಿಗಾಗಿ ಹೋರಾಟವನ್ನು ನಡೆಸಿದಾಗ ಅದರಿಂದಾಗುವ ಪರಿಣಾಮಗಳನ್ನು ಈ 'ಉಪವಾಸ ವ್ರತ' ಕಥೆಯು ವಿವರಿಸುತ್ತದೆ. ಆಗ ಕಾರ್ಖಾನೆಯ ಮಾಲಿಕರು ಕಾರ್ಮಿಕ-ಕಾರ್ಮಿಕರ ನಡುವೆ ನಡೆಸುವ ಕುಟೀಲ ನೀತಿಯಿಂದ ಅವರ ಸಂಘಟನೆಯನ್ನು ಒಡೆಯುತ್ತಾರೆ.

ಅಷ್ಟೇ ಅಲ್ಲದೆ ಅವರು ಹೇಳಿದಂತೆ ಕೇಳದಿದ್ದಾಗ, ಬೇರೆ ಕಡೆಯಿಂದ ಕಾರ್ಮಿಕರನ್ನು ದುಡ್ಡು ಕೊಟ್ಟು ಕರೆಯಿಸಿ, ಹಳೇ ಕಾರ್ಮಿಕರಿಗೆ ಕೆಲಸವಿಲ್ಲದಂತೆ ಮಾಡುತ್ತಾರೆ. ಬಂಡವಾಳಶಾಹಿಗಳು ತಮ್ಮ ಕುತಂತ್ರ ನೀತಿಯನ್ನು ಅನುಸರಿಸಿ ಕಾರ್ಮಿಕವರ್ಗದವರನ್ನು ಶೋಷಣೆಯಲ್ಲಿ ಬಂಧಿಸುತ್ತಾರೆ. ಒಂದು ಮರ ಕಡಿಯುವ ಕಾರ್ಖಾನೆಯಲ್ಲಿ ಪಾರ್ವತಿ, ಚೆಲ್ಲಯ್ಯ, ಮಾಣಿಕ್ಯ, ಒಟ್ಟು ಐವತ್ತು ಕೂಲಿಕಾರ್ಮಿಕರು ಆ ಕಾರ್ಖಾನೆಯಲ್ಲಿ ದುಡಿಯುತ್ತಿರುತ್ತಾರೆ. ಇವರ ದುಡಿಮೆಗೆ ಸರಿಯಾದ ಬೆಲೆ ಸಿಗದಿರುವುದಕ್ಕೆ ಮುಷ್ಕರವನ್ನು ನಡೆಸಿದಾಗ ಕಾರ್ಖಾನೆಯ ಮಾಲಿಕರು ತನ್ನ ಆಪ್ತ ಕಾಯದರ್ಶಿಯಾದ ವೈದ್ಯನಾಥಯ್ಯರನ್ನು ಕಳುಹಿಸಿ ಮಾತುಕತೆ ನಡೆಸುತ್ತಾರೆ. "ಕೆಲಸಗಾರರು ಕೂಲಿಗಾಗಿ ಶ್ರಮಪಡುವ ಜೀತದಾಳು ಎಂಬ ಪರಿಸ್ಥಿತಿ ಬದಲಾಗಿ ನಾವೂ ಮನುಷ್ಯರು... ಸೋಮಾರಿ ಜನರಿಗಿಂತ ಮೇಲಾದವರು ಎಂದು ಭಾವಿಸಿ ಒಂದಾಗಿ ಸೇರಿ, ಹಕ್ಕನ್ನು ಚಲಾಯಿಸುವ ಕಾಲವಲ್ಲವೇ ಇದು...?"[೨೬] ಎಂದು ಕಾರ್ಮಿಕರು ಮಾಲಿಕರ ಮೇಲೆ ಸಿಡಿದೇಳುತ್ತಾರೆ.

ಏನೇ ಆದರೂ ಕಾರ್ಮಿಕರ ಕಣ್ಣೀರಿಗೆ ಕೊನೆಯಾಗುವುದಿಲ್ಲ. ಮಾಲಿಕರು ಮಾತ್ರ ಅವರ ಶ್ರಮದಿಂದಲೇ ನೆಮ್ಮದಿಯಾಗಿ ಬದುಕುತ್ತಾರೆ. ಇದರಂತೆ ಕನ್ನಡದ ಕತೆಗಾರರಾದ ಬೆಸಗರಹಳ್ಳಿ ರಾಮಣ್ಣನವರು ಬರೆದ 'ಒಂದು ಹುಡುಗನಿಗೆ ಬಿದ್ದ ಕನಸು' ಎಂಬ ಕತೆಯು ದಲಿತರ ಶ್ರಮವನ್ನು ಉಪಯೋಗಿಸಿಕೊಂಡು ಬಂಡವಾಳಶಾಹಿಗಳು ಅರಮನೆಯಲ್ಲಿ ಬದುಕುತ್ತ, ದುಡಿದ ಕೈಗಳಿಗೆ ಗುಡಿಸಲಲ್ಲಿ ಇರುವಂತೆ ಮಾಡಿರುವ ಶೋಷಣೆಯನ್ನು ಅಭಿವ್ಯಕ್ತಗೊಳಿಸುತ್ತದೆ. ಇವೆರಡೂ ಕಥೆಗಳು ದಲಿತರಾದ ಶ್ರಮಜೀವಿಗಳು ಪಡುತ್ತಿರುವ ಸಂಕಟಗಳನ್ನು ಮತ್ತು ಶ್ರಮಕ್ಕೆ ಸರಿಯಾದ ಬೆಲೆ ಸಿಗದಿರುವುದನ್ನು ಖಂಡಿಸುತ್ತ ಅಂಬೇಡ್ಕರವಾದ ಮತ್ತು ಮಾರ್ಕ್ಸವಾದದ ನೆಲೆಯಲ್ಲಿ ದಲಿತ ಸಂವೇದನೆಗಳನ್ನು ನಿರೂಪಿಸುತ್ತವೆ.

ನಾಡೋಜ, ಡಾ.ಮನು.ಬಳಿಗಾರ್ ಮತ್ತು ಡಾ.ಸಣ್ಣರಾಮರವರು ಸಂಪಾದಿಸಿರುವ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ದಲಿತ ಸಾಹಿತ್ಯ ಸಂಪುಟ ಸಣ್ಣ ಕಥೆ' ಎಂಬ ಕಥಾ ಸಂಕಲನದಲ್ಲಿರುವ ಎಸ್.ಆರ್.ಗುರುನಾಥರವರು ಬರೆದಿರುವ 'ಊರನ್ನಾದರೂ ತೊರೆದೇವು ಪ್ರಾಣವನ್ನಾದರೂ ಬಿಟ್ಟೇವು, ಆದರೆ...' ಎಂಬ ಕಥೆಯು ಪ್ರಸ್ತುತವಾಗಿ ದಲಿತರು ತಾವು ಹಿಂದೆ ಆಚರಿಸಿಕೊಂಡು ಬಂದ ಮೌಢ್ಯ ಸಂಪ್ರದಾಯಗಳನ್ನು ತೊರೆದು, ಅನಿಷ್ಟ ಪದ್ಧತಿಗಳನ್ನು ತಿರಸ್ಕರಿಸಿ ಆಧುನಿಕತೆಯ ವಾತಾವರಣದಲ್ಲಿ ವೈಜ್ಞಾನಿಕವಾಗಿ ಆಲೋಚಿಸುವ ಸಾಮಾರ್ಥ್ಯವನ್ನು ಪಡೆದುಕೊಂಡು, ನಗರದ ಸಂಪರ್ಕದಿಂದ ಶಿಕ್ಷಣವನ್ನು ಪಡೆದ ದಲಿತರು ಅರಿತವರಾಗಿ ಮೌಢ್ಯ ಸಂಪ್ರದಾಯಗಳನ್ನು ತಿರಸ್ಕರಿಸುವ ಮತ್ತು ಬಂಡವಾಳಶಾಹಿಗಳ ಒತ್ತಡಕ್ಕೆ ಮಣಿಯದಿರುವ, ಸ್ವತಂತ್ರವಾದ ತಮ್ಮದೆ ಆದ ನೆಲೆಯನ್ನು ಕಂಡುಕೊಳ್ಳುವ ಮಾರ್ಗವನ್ನು ಈ ಕಥೆಯು ಸೂಚಿಸುತ್ತದೆ. ದಲಿತ ಸಮುದಾಯಗಳು ನಗರದ ದಲಿತ ಸಂಘಟನೆಗಳ ಸಂಪರ್ಕದಿಂದ ಆತ್ಮಸ್ಥೈರ್ಯ ಪಡೆದು ತಮ್ಮ ಮೇಲೆ ನಡೆಯುವ ಅನ್ಯಾಯ, ಅತ್ಯಾಚಾರ ಹಾಗೂ ಶೋಷಣೆಯ ವಿರುದ್ಧ ಧ್ವನಿಯೆತ್ತುವ ಶಕ್ತಿಯನ್ನು ಪಡೆದುಕೊಂಡಿವೆ.

ಹಳೆಯ ಜಾಯಿಮಾನದ ಪದ್ಧತಿಗಳನ್ನು ಅನುಸರಿಸದೆ, ಸ್ವತಂತ್ರತೆಯ ಬದುಕನ್ನು ಕಟ್ಟಿಕೊಳ್ಳಲು ಆಲೋಚನೆಮಾಡುವ ಸಾಮಾರ್ಥ್ಯವನ್ನು ಪಡೆದುಕೊಂಡಿದ್ದಾರೆ. ಅಂದಿನ ಕಾಲದಲ್ಲಿ ದಲಿತರು ಉಳ್ಳವರಿಗೆ ಸುಲಭವಾಗಿ ಶೋಷಣೆಗೆ ಒಳಗಾಗಿ, ಅವರು ಹೇಳಿದಂತೆ ಅವರ ರೀತಿ ನೀತಿಗಳಿಗೆ ತಲೆ ಬಗ್ಗಿಸಿಕೊಂಡು ಗುಲಾಮರಂತೆ ನಡೆಯಬೇಕಿತ್ತು. ಅವರ ಮಾತುಗಳನ್ನು ತಳ್ಳಿ ಹಾಕುವಂತಿರಲಿಲ್ಲ. ಆದರೆ ಇಂದು ಸ್ವತಂತ್ರದ ಸ್ವಾಭಿಮಾನದಿಂದ ದಲಿತ ಸಮುದಾಯಗಳು ತಮ್ಮ ಹಕ್ಕುಗಳಿಗಾಗಿ ತಾವೇ ಹೋರಾಟ ಮಾಡಿಕೊಂಡು, ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ಸಮರ್ಥವಾಗಿ ಬದುಕನ್ನು ಮುನ್ನಡೆಸಲು ಪ್ರಯತ್ನಪಡುತ್ತಿದ್ದಾರೆ. ಶಿಕ್ಷಣದ ಫಲದಿಂದ ಬಾಬಾ ಸಾಹೇಬ ಡಾ.ಅಂಬೇಡ್ಕರ್ ರವರ ಪರಿಶ್ರಮದ ಫಲವಾಗಿ ಇಂದು ಸ್ವತಂತ್ರವಾಗಿ ಆಲೋಚಿಸುವ ಶಕ್ತಿಯನ್ನು ದಲಿತ ಸಮುದಾಯಗಳು ಪಡೆದುಕೊಂಡಿವೆ. ಇಂತಹ ಪ್ರಸ್ತುತ ಸಮಾಜದ ಘಟನೆಗಳನ್ನು ಈ ಕಥೆಯು ಕೇಂದ್ರಿಕರಿಸಿದೆ.

'ಊರನ್ನಾದರೂ ತೊರೆದೇವು. ಪ್ರಾಣವನ್ನಾದರೂ ಬಿಟ್ಟೇವು ಆದರೆ... ಎಂಬ ಈ ಕಥೆಯಲ್ಲಿ ಕಥೆಗಾರರು ದಲಿತರು ಅಂದಿನಿಂದ ಇಂದಿನವರೆಗೂ ಉಳ್ಳವರಿಂದ ಅನುಭವಿಸಿಕೊಂಡು ಬಂದಿರುವ ನೋವಿನ ಸಮಸ್ಯೆಗಳನ್ನು ಕುರಿತು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ವಿವರಿಸಿದ್ದಾರೆ. ಮಲ್ಲೇಗೌಡರು ರಾತ್ರಿ ಉಂಡು ಮಲಗುವ ಸಮಯದಲ್ಲಿ ದಲಿತ ಕೇರಿಯ ಜನರನ್ನೆಲ್ಲಾ ಸೇರಿಸುತ್ತಾರೆ. ಒಂದು ಕುರ್ಚಿಯ ಮೇಲೆ ಭರ್ಜರಿಯಾಗಿ ಕುಳಿತುಕೊಂಡು, ದಲಿತರನ್ನು ಕೆಳಗಡೆ ನಿಲ್ಲಿಸಿ, ನಾಲ್ಕೈದು ವರ್ಷಗಳಿಂದ ಊರಿನ ಮಾರೆಮ್ಮನ ಜಾತ್ರೆ ನಡೆದಿಲ್ಲ, ಅದರಿಂದಾಗಿ ಊರೆಗೆಲ್ಲ ಮಳೆ ಇಲ್ಲ ಬೆಳೆ ಕಡಿಮೆಯಾಗಿ ದನಕರುಗಳಿಗೆ ಮೇವು ನೀರಿಲ್ಲದಂತಾಗಿದೆ. ಇದರಿಂದಾಗಿ ಊರಿನ ಜನರಿಗೆಲ್ಲ ತೊಂದರೆಯಾಗಿದೆ. ಊರಿನ ಹಲವಾರು ಎಮ್ಮೆ, ಹಸುಗಳು ಇದ್ದಕ್ಕಿದ್ದಂತೆ ಸತ್ತು ಹೋಗಿದ್ದಾವೆ. ರೋಗ ಹರಡಿ ತೋಟಗಳು ಹಾಳಾದವು, ಅಷ್ಟೇ ಅಲ್ಲ ಮಲ್ಲೆಗೌಡರ ಚಿಕ್ಕ ಹೆಂಡತಿಯೂ ಯಾರೊಂದಿಗೊ ಓಡಿ ಹೋದಳು. ಇದಕ್ಕೆಲ್ಲ ಮಾರಮ್ಮನ ಪರಿಸೆ ಮಾಡಲಾರದ್ದೆ ಕಾರಣವಾಗಿದೆ. ಆದ್ದರಿಂದ ಈ ಸಲ ಜಾತ್ರೆಯನ್ನು ಮಾಡಲೇಬೇಕೆಂದು ಊರಿನ ಮೇಲ್ವರ್ಗದವರ ಗುಂಪು ದಲಿತ ಸಮುದಾಯದವರಿಗೆ ಹೇಳಿದರು.

ಮಲ್ಲೇಗೌಡರು ಸೀಮೆಲೆಲ್ಲಾ ಹೇಗೆ ಮಾಡುತ್ತಾರೋ ಹಾಗೆ ಮಾಡಬೇಕು. ನಾವು ನಿಮಗೆ ಕುರಿ, ಕ್ವಾಣ, ಕೊಡುತ್ತೇವೆ. ನೀವು ಸರಗ ಹಾಕಿ, ಊರ ಮುಂದಲ ಕಸ ಹೊಡೆದು ಸ್ವಚ್ಛ ಮಾಡಬೇಕು. ಕುರಿ, ಕ್ವಾಣ ಕಡಿದು ದೇವಿಗೆ ಅರ್ಪಿಸಬೇಕು. ತಪ್ಪಡಿ, ಉರುಮೆ, ಬಡಿಯಬೇಕು ಇದೇ ನೀತಿ ನಿಯಮಗಳನ್ನು ಹಿಂದಿನಿಂದಲೂ ನಿಮ್ಮವರು ಹೇಗೆ ಮಾಡಿಕೊಂಡು ಬಂದಿರುವರೋ ಹಾಗೆ ನೀವು ಮಾಡಬೇಕು. ನೀವು ಇಲ್ಲದಿದ್ದರೆ ತೊಂದರೆಯನ್ನು ಅನುಭವಿಸಬೇಕಾಗುವುದು ಎಂದು ಎಚ್ಚರಿಕೆಯನ್ನು ನೀಡಿದರು. ಆದರೆ ದಲಿತರ ಸಮುದಾಯದಲ್ಲಿ ತಮ್ಮ ತಮ್ಮಲ್ಲಿಯೇ ಗುಜುಗುಜು ಸದ್ದು ನಡೆಯಿತು. ಕದರ, ಪಾತಲಿಂಗ, ಮುಸುವ, ಸುಂಕಜ್ಜ, ಬಂಗಾರಿ, ಜಡಿಯಾ, ರಾಜ, ದುರುಗೇಶಿ, ಮುಂತಾದವರು ಕುಳಿತಲ್ಲಿಯೇ ಹೊಸಕಾಡಿದರು. ಯಾರೊಬ್ಬರು ಬಾಯಿ ಬಿಚ್ಚಲಿಲ್ಲ. ಆದರೆ ಪರಮೇಶಣ್ಣ ಮೇಲೆದ್ದು ಇದಕ್ಕೆಲ್ಲ ನಾವು ಒಪ್ಪುವುದಿಲ್ಲ.

ನೀವು ಜಾತ್ರೆ ಮಾಡದಿರುವುದಕ್ಕೂ, ಊರಿನ ಸಮಸ್ಯೆಗೂ ಯಾವ ಸಂಬಂಧವೂ ಇರುವುದಿಲ್ಲ. ಇದೆಲ್ಲ ಮೌಢ್ಯತನ ನಾವೆಲ್ಲ ಮೊದಲಿನಂತೆ ಕ್ವಾಣಾನ ಬಲಿಕೊಡುವುದಿಲ್ಲ, ಸರಗ ಹಾಕುವುದಿಲ್ಲ, ಉರುಮೆ ತಪ್ಪಡಿ ಬಡಿಯುವುದಿಲ್ಲವೆಂದು ಹೇಳಿದನು. ಬೇಕಾದರೆ ಬನ್ನಿ ಊರ ಮುಂದಲ ಕಸವನ್ನು ಎಲ್ಲರೂ ಸೇರಿಕೊಂಡು ಹೊಡೆಯೋಣ. ದಲಿತರರೇಕೆ ಮಾತ್ರ ಇಂತಹ ಕೆಲಸವನ್ನು ಮಾಡಬೇಕು, ಊರಿನ ದೇವರ ಸೇವೆಯನ್ನು ಎಲ್ಲರೂ ಸೇರಿಕೊಂಡು ಮಾಡೋಣವೆಂದಾಗ, ಮೇಲ್ವರ್ಗದವರಿಗೂ ಹಾಗೂ ದಲಿತ ಸಮುದಾಯಗಳ ನಡುವೆ ಘರ್ಷಣೆಯಾಗುತ್ತದೆ. ಇದನ್ನು ತಿಳಿದ ಹತ್ತಿದ ನಗರದಿಂದ ಜಿಲ್ಲಾ ಮಟ್ಟದ ದಲಿತ ಮುಂದಾಳುಗಳೂ, ತಹಶೀಲ್ದಾರರೂ,

ಪೋಲೀಸ್‌ರೂ ಬಂದು ಶಾಂತಿ ಸಭೆ ನಡಿಸಿದರು. ಈಗ ಮಾರಮ್ಮನ ಜಾತ್ರೆ ಮಾಡುವುದು ಬೇಡ, ಊರಲ್ಲಿ ಗಲಾಟೆ ಗದ್ದಲ ಆಗದಂತೆ ಮಾತ್ರ ಇರಬೇಕೆಂದು ಶಾಂತಿ ಸಂಧಾನ ಮಾಡಿ ಹೋಗುತ್ತಾರೆ.

ಆದರೆ ಇದರ ಪರಿಣಾಮದಿಂದ ಊರಿನ ಮೇಲ್ವರ್ಗದವರಿಗೆ ದಲಿತ ಸಮುದಾಯದವರಿಗೆ ಪರಸ್ಪರ ದ್ವೇಷದಿಂದ ಕೂಡಿ ಭಿನ್ನ ಮನಸ್ಸಿನವರಾಗುತ್ತಾರೆ. ಇದರಿಂದಾಗಿ ದಲಿತ ಸಮುದಾಯದಲ್ಲಿ ಸ್ವಾಭಿಮಾನದ ಹಠವೂ ಹೆಚ್ಚಾಗುತ್ತದೆ. ಆಗ ಊರಿನ ಮೇಲ್ವರ್ಗದ ಜನರೆಲ್ಲ ಸೇರಿ ನಿರ್ಣಯವನ್ನು ತೆಗೆದುಕೊಂಡು, ದಲಿತರಿಗೆ ಸೊಕ್ಕು ಬಂದಿದೆ, ಅವರನ್ನು ಹಾಗೆ ಬಿಟ್ಟರೆ ಇನ್ನೂ ನಮ್ಮ ಮೇಲೆ ಹಗೆತನ ಸಾಧಿಸುತ್ತಾರೆಂದು "ಕೆಳಗೇರಿಯ ಜನರನ್ನು ಕೂಲಿ ಕೆಲಸಗಳಿಗೆ ಕರೆಯುವುದನ್ನು, ಅಂಗಡಿಗಳಲ್ಲಿ ದಿನಸಿ ಸಾಮಾನುಗಳ ಕೊಡುವುದನ್ನೂ ನಿಲ್ಲಿಸಿದರು. ಮಾರ್ಗ ಮಧ್ಯದ ಹೊಲಗಳಲ್ಲಿ ಅಪ್ಪಿತಪ್ಪಿ ಕಾಲು ಹಾಕಿದರೂ ಹಿಡಿದು ಬಡಿಯಲಾರಂಭಿಸಿದರು. ಇದನ್ನೆಲ್ಲಾ ಹೇಗೆ ಹದ್ದುಬಸ್ತಿಗೆ ತರಬೇಕೆಂಬುದೇ ತಿಳಿಯದೇ ಪರಮೇಶಣ್ಣ ಹಾಗೂ ಮಾಂತಿ ಚಡಪಡಿಸಲಾರಂಭಿಸಿದರು."[೨೭] ಪರಮೇಶಣ್ಣ ಮತ್ತು ಮಾಂತಿ(ಮಹಾಂತೇಶ) ಶಾಲೆಯಲ್ಲಿ ಒಟ್ಟಿಗೆ ಓದಿದವರು.ನಗರದಲ್ಲಿ ಬೆಳೆದವರು ಅಲ್ಲಿ ಸಭೆಸಮಾರಂಭದಲ್ಲಿ ಭಾಗವಹಿಸಿದವರು. ಆಧುನಿಕಕತೆಯನ್ನು ಬಲ್ಲವರು.

ಆದರೆ ಉದ್ಯೋಗ ಸಿಗದೆ ಇರುವುದಕ್ಕಾಗಿ ತಮ್ಮ ಹಳ್ಳಿಗೆ ಬಂದು, ತಮ್ಮ ದಲಿತ ಸಮುದಾಯದವರ ಜೊತೆ ತಮ್ಮ ಹೊಲದ ಕೆಲಸವನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದರು. ಊರಿನ ಇಂತಹ ಪರಿಸ್ಥಿತಿಯನ್ನು ಕಂಡು ಮರುಗಿದರು. ಮುಂದೆ ಏನು ಮಾಡಬೇಕೆಂದು ಚಿಂತಿಸತೊಡಗಿದರು. ಇವರ ನುಡಿಗಳೆಂದರೆ ಆ ದಲಿತ ಸಮುದಾಯದವರಿಗೆ ಬಲು ಗೌರವವಿತ್ತು. ಇವರೇ ಅವರಿಗೆ ಜಾತಿಗೆ ಸಂಬಂಧಿಸಿದ ಕೀಳು ಕೆಲಸ ಮಾಡಬಾರದು, ಮೌಢ್ಯ ಕಂದಾಚಾರಗಳನ್ನು ಆಚರಿಸಬಾರದು, ಕುರಿ ಕ್ವಾಣಾನ ದೇವರ ಹೆಸರಿನಲ್ಲಿ ಬಲಿ ಕೊಡಬಾರದು, ಕೆಳಜಾತಿ ಎಂಬ ಕಾರಣಕ್ಕೆ ಊರ ಮುಂದಲ ಕಸ ಹೊಡೀಬಾರದು ಎಂದು ತಮ್ಮ ಸಮುದಾಯಗಳಿಗೆ ತಿಳುವಳಿಗೆ ನೀಡಿದ್ದರು. ಆದರೆ ಈಗ ಮುಂದೆ ಏನೂ ಮಾಡಬೇಕೆಂದು ಚಿಂತೆಯಲ್ಲಿರುವಾಗಲೆ ದಲಿತ ಸಮುದಾಯದವರೆಲ್ಲರೂ ಸೇರಿಕೊಂಡು, ತಮ್ಮ ತಮ್ಮ ಮನೆ ಬಾಗಿಲುಗಳನ್ನು ಮುಚ್ಚಿಕೊಂಡು, ಮಾರಮ್ಮನ ಜಾತ್ರೆ ಮಾಡಲು ಒಪ್ಪದೆ ನಗರ ಪ್ರದೇಶಗಳಿಗೆ ಹೋಗಿ ಅಲ್ಲಿ ಕೂಲಿ ಕೆಲಸವನ್ನು ಮಾಡಲು ಪ್ರಾರಂಭಿಸುತ್ತಾರೆ. ತಮ್ಮ ಸ್ವಾಭೀಮಾನವನ್ನು, ತಾವು ಹಿಡಿದ ಹಠವನ್ನು ಬಿಟ್ಟು ಕೊಡುವುದಿಲ್ಲ.

ಇದರಿಂದ ಊರಿನ ಗೌಡ ಮಲ್ಲೇಗೌಡರು ಇನ್ನಷ್ಟು ಕೋಪಿತರಾಗುತ್ತಾರೆ. ಕೆಳಗೇರಿಯಲ್ಲಿ ಯಾರೂ ಇರಲಾರದ್ದನ್ನು ತಿಳಿಯುತ್ತಾನೆ. ಆದರೆ ತಪ್ಪಡಿ ಬಡಿಯುವ ತಿಪ್ಪಗ ಮಾತ್ರ ಉಳಿದಿರುತ್ತಾನೆ. ಅವನೊಬ್ಬ ಕುಂಟ ದಿಕ್ಕುದೆಶೆ ಇಲ್ಲದವ ಆದ್ದರಿಂದ ಕೆಳಗೇರಿಯಲ್ಲಿ ಅವನ ವಾಸವಿರುತ್ತದೆ. ಕೊನೆಗೆ ಮಲ್ಲೇಗೌಡರು ಅವನೊಬ್ಬನನನ್ನಾದರೂ ಕರೆದು ತಪ್ಪಡಿ ಬಡಿಸಿ ಊರ ಜಾತ್ರೆ ಮಾಡಬೇಕೆಂದು ನಿರ್ಧರಿಸುತ್ತಾನೆ. ಅವನನ್ನು ಕರೆದು ತಪ್ಪಡಿ ಬಡಿಯಲು ಹೇಳಿದಾಗ ಕೊನೆಗೆ ಆ ತಿಪ್ಪಗ ಆ ಊರಿನ

ದೇವಸ್ಥಾನದ ಬಾಗಿಲಿಗೆ ನೇಣು ಹಾಕಿಕೊಂಡು ಸತ್ತುಹೋಗುತ್ತಾನೆ. ಆದರೆ ಗೌಡರ ಮಾತನ್ನು ಮಾತ್ರ ಕೇಳುವುದಿಲ್ಲ. ಹೀಗೆ ದಲಿತ ಸಮುದಾಯವು ತಾವು ಹಿಂದಿನಿಂದ ಆಚರಿಸಿಕೊಂಡು ಬಂದಂತ ತಮ್ಮೆಲ್ಲಾ ಮೂಢ ಪದ್ಧತಿಗಳನ್ನು ತಿರಸ್ಕರಿಸಿ ಗೌಡರ ವಿರುದ್ಧ ಪ್ರತಿಭಟಿಸುತ್ತಾರೆ.

ಇಲ್ಲಿ ಕಥೆಗಾರರು ಊರಿನ ಗೌಡರು, ದಲಿತ ಸಮುದಾಯಗಳ ಮೇಲೆ ನಡೆಸುವ ದೌರ್ಜನ್ಯದ ಘಟನೆಗಳನ್ನು ದಲಿತರು ಅನುಭವಿಸುವ ನೋವುಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳಿಂದ ಹಿಡಿದಿಟ್ಟಿದ್ದಾರೆ. ಕೇರಳದ ಪ್ರಸಿದ್ದ ಲೇಖಕರಲ್ಲಿ ಒಬ್ಬರಾದ ಚೆರಿಯನ್ ಚೆರಿಯನ್ ರವರು ಬರೆದಿರುವಂತಹ ಕಥೆಗಳನ್ನು ಕೆ.ಕೆ.ನಾಯರ್‌ರವರು 'ಪ್ರೇಮಿಸುವುದು ಎಂಬ ಹಕ್ಕು' ಎಂಬ ಕಥಾ ಸಂಕಲನದ ಮೂಲಕ ಕನ್ನಡಕ್ಕೆ ಅನುವಾದ ಮಾಡಿ ಕೊಟ್ಟಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಇಂದ್ರನೀಲ' ಎಂಬ ಕಥೆಯು ಕನ್ನಡದ ನಾಡೋಜ ಡಾ.ಮನು ಬಳಿಗಾರ್ ಮತ್ತು ಡಾ.ಸಣ್ಣರಾಮರವರು ಸಂಪಾದಿಸಿರುವ 'ದಲಿತ ಸಾಹಿತ್ಯ ಸಂಪುಟ ಸಣ್ಣ ಕಥೆ' ಎಂಬ ಕಥಾ ಸಂಕಲನದಲ್ಲಿರುವ ಎಸ್.ಆರ್.ಗುರುನಾಥರವರು ಬರೆದಿರುವ 'ಊರನ್ನಾದರೂ ತೊರೆದೇವು ಪ್ರಾಣವನ್ನಾದರೂ ಬಿಟ್ಟೇವು, ಆದರೆ......' ಎಂಬ ಕತೆಯಂತೆ ವರ್ಣಪಕ್ಷಪಾತ, ಲಿಂಗ ಪಕ್ಷಪಾತವನ್ನು ಒಳಗೊಂಡಿರುವ ಒಂದು ಶೋಷಣೆಯ ಕಥೆಯಾಗಿರುತ್ತದೆ.

ಕೇರಳದಲ್ಲಿರುವ ದಲಿತರ ವಾಸ್ತವ ಬದುಕಿನ ಚಿತ್ರಣವನ್ನು ತೆಗೆದುಕೊಂಡು ಕಥೆಗಾರರು ಭಿನ್ನವಾದ ಕಥೆಯನ್ನು ಸೃಷ್ಟಿಸಿದ್ದಾರೆ. ಕಥೆಯು ವಾಷಿಂಗ್‌ಟನ್ ನಗರದಲ್ಲಿ ನಡೆಯುತ್ತಿದ್ದರೂ ಅದು ಕೇವಲ ರೂಪಕವಾಗಿ ಬಳಸಿಕೊಂಡು ಕೇರಳದ ದಲಿತ ಸಮುದಾಯದವರ ಸ್ಥಿತಿಗತಿಗಳನ್ನು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಶೋಷಣೆ ಎನ್ನುವುದು ಅದು ಪ್ರತಿಯೊಬ್ಬ ಮನುಷ್ಯನಲ್ಲಿರುವ ಸ್ವಾರ್ಥವಾಗಿದೆ. ತಾನು ಒಬ್ಬನೆ ಚೆನ್ನಾಗಿ ಬದುಕಬೇಕು, ಮತ್ತೊಬ್ಬರಿಗಿಂತ ನಾನೇ ಮೇಲಿರಬೇಕು ಎಂಬ ಒಡೆತನದ ಭಾವನೆಗಳು ಸಮಾಜದಲ್ಲಿ ಕೆಳವರ್ಗದವರನ್ನು ಶೋಷಣೆಯಲ್ಲಿಡುವಂತೆ ಮಾಡಿದೆ. "ಒಬ್ಬ ಸ್ನಾತಕೋತ್ತರ ಪದವೀಧರನಿಗೆ ಇಲ್ಲಿ ಗಾಜಿನ ಚೂರು ಮಾರುವಂಥ ಉದ್ಯೋಗ ಮಾತ್ರ ಸಿಕ್ಕುವದೇನು..? ಕರಿಯನಾಗಿ ಹುಟ್ಟಿದೆ ಮಿಸ್ಟರ್, ಕರಿಯನಾಗಿ ಹುಟ್ಟಿದೆ. ಕರಿಯನು ದುರ್ದೈವಿ, ಅವನಿಗೆ ಯಾವತ್ತೂ ಒಳ್ಳೆಯ ಉದ್ಯೋಗ ಸಿಕ್ಕದು..! ಗಾಜಿನ ಚೂರಿನ ಸೇಲ್ಸಮ್ಯಾನ್ ಆಗಲು ಕೂಡ ಅದೃಷ್ಟ ಬೇಕು." "ನಿಮ್ಮಂಥ ದೈತ್ಯನಿಗೆ ಯಾವ ಕೆಲಸ ತಾನೆ ಸಿಕ್ಕುವುದಿಲ್ಲ...! "ಸಿಕ್ಕುತ್ತೆ ಗಾಡಿ ತಳ್ಳುವ ಕೂಲಿಯವನಾಗಿ, ಫ್ರೀ ಸ್ಟೈಲ್ ಕುಸ್ತಿಯವನಾಗಿ, ಅಲ್ಲದೆ ಬಾಕ್ಸರ್ ಆಗಿ, ಕೂಲಿಗೆ ಖಾಯಂ ಕೆಲಸದ ಭರವಸೆ ಇರುವುದಿಲ್ಲ"[೨೮]

ವರ್ಣಭೇದವು ಮನುಷ್ಯರ ನಡುವೆ ತಾರತಮ್ಯವನ್ನು ಸೃಷ್ಟಿಸಿ ರಾಷ್ಟ್ರವನ್ನು ಅಸಮಾನತೆಯ ನೆಲೆಯಲ್ಲಿ ನಿಲ್ಲಿಸುವಂತೆ ಮಾಡಿದೆ. ದುಡಿಯುವ ಯೋಗ್ಯತೆ ಉಳ್ಳವನಿಗೆ ಯೋಗ್ಯ ಕೆಲಸ ಸಿಗಬೇಕು. ವರ್ಣಭೇದದ ಆಧಾರದ ಮೇಲೆ ರಾಷ್ಟ್ರದಲ್ಲಿ ಕೆಲಸ ಸೃಷ್ಟಿಯಾಗಬಾರದು. ಇದು ದಲಿತರಿಗೆ, ನೊಂದವರಿಗೆ, ಅಸಹಾಯಕರಿಗೆ ಉಳ್ಳವರು ಮಾಡುತ್ತಿರುವ ದೌರ್ಜನ್ಯದ ಶೋಷಣೆಯಾಗಿರುತ್ತದೆ.

ಅದರಂತೆ ಕನ್ನಡದ ದಲಿತ ಕಥೆಗಾರರಾದ ಎಸ್.ಆರ್.ಗುರುನಾಥ ಅವರು ಬರೆದಿರುವ ಕನ್ನಡದ ಕತೆ 'ಊರನ್ನಾದರೂ ತೊರೆದೇವು ಪ್ರಾಣವನ್ನಾದರೂ ಬಿಟ್ಟೇವು, ಆದರೆ... ಎಂಬ ಕಥೆಯು ಉಳ್ಳವರು ದಲಿತರ ಮೇಲೆ ನಡೆಸುತ್ತಿರುವ ದೌರ್ಜನ್ಯದ ಅಸಮಾನತೆಯನ್ನು ಖಂಡಿಸುತ್ತದೆ.

ದಲಿತರಿಗೆ ವರ್ಣವ್ಯವಸ್ಥೆಯ ಅಧಾರದ ಮೇಲೆ ನೀಡುತ್ತಿರುವ, ಕೆಳದರ್ಜೆಯ ಕೆಲಸವನ್ನು ಮಾಡಿಸುವುದರ ವಿರುದ್ಧ ತಮ್ಮ ಧ್ವನಿಯೆತ್ತುವ ದಲಿತರ ಒಳನೋವುಗಳನ್ನು ಈ ಕತೆಯು ಅಭಿವ್ಯಕ್ತಗೊಳಿಸುತ್ತದೆ.ಇವೆರಡೂ ಕತೆಗಳು ದಲಿತರಿಗೆಂದೇ ನಿರ್ಧರಿಸಿ ಕೆಲಸವನ್ನು ಸೃಷ್ಟಿಸುವುದು, ದಲಿತರನ್ನು ಕೀಳಾಗಿ ನೋಡುವುದು, ದಲಿತರೆಂದರೆ ಅವಮಾನ ಮಾಡಿಸಿಕೊಳ್ಳಲೆಂದೇ ಹುಟ್ಟಿದವರೆಂದು ತಿಳಿಯುವುದು ಇವೆಲ್ಲವೂ ದಲಿತರ ಮೇಲೆ ಬಂಡವಾಳಶಾಹಿಗಳು ನಡೆಸುತ್ತಿರುವ ನಿರಂತರದ ಶೋಷಣೆಯಾಗಿರುತ್ತವೆ. ದಲಿತರು ಅನುಭವಿಸುತ್ತಿರುವ ವಾಸ್ತವ ಸಂಗತಿಗಳನ್ನು ಈ ಕಥೆಗಳು ಅಂಬೇಡ್ಕರವಾದದ ನೆಲೆಯಿಂದ ಅನಾವರಣಗೊಳಿಸುತ್ತವೆ.

## ೫.೫. ದೇವದಾಸಿ ಪದ್ಧತಿ ಮತ್ತು ಜಾತಿ-ಭೇದದ ಸಂಘರ್ಷ

ಜಿ.ಎಚ್.ನಾಯಕ್‌ರವರು ಸಂಪಾದಿಸಿರುವ 'ಕನ್ನಡ ಸಣ್ಣ ಕಥೆಗಳು' ಎಂಬ ಕಥಾ ಸಂಕಲನದಲ್ಲಿರುವ ನಿರಂಜನರವರು ಬರೆದಿರುವ 'ಕೊನೆಯ ಗಿರಾಕಿ' ಎಂಬ ಕಥೆಯು ಬಡತನದ ಬೇಗೆಯಲ್ಲಿ ಬೆಂದ ಒಂದು ಹೆಣ್ಣಿನ ಅಸಹಾಯಕ ಸ್ಥಿತಿಯನ್ನು ಚಿತ್ರಿಸುತ್ತದೆ. ಬಂಡವಾಳಶಾಹಿಗಳು ಹೇಗೆ ದಲಿತರ ದೇಹವನ್ನು ಯಂತ್ರದಂತೆ ಬಳಕೆ ಮಾಡಿಕೊಂಡು, ಅಸ್ವಸ್ಥವಾಗಿಸಿ, ಇಡೀ ಜೀವನವನ್ನೇ ನರಕದಲ್ಲಿ ನರಳುಡುವಂತೆ ಮಾಡುತ್ತಾರೆ ಎಂಬುವುದನ್ನು ಈ ಕತೆಯು ನಿರೂಪಿಸುತ್ತದೆ. ಅಬಲೆಯಾದ ಒಂದು ಹೆಣ್ಣು ಈ ಸಾಮಾಜದಲ್ಲಿ ಆತ್ಮ ಸ್ಥೈರ್ಯದಿಂದ ಬದುಕಲು ಸಾಧ್ಯವಿಲ್ಲವೆಂಬುವುದನ್ನು ಸ್ಪಷ್ಟಪಡಿಸುತ್ತದೆ. ದಲಿತ ಸಮುದಾಯದ ಒಂದು ಹೆಣ್ಣನ್ನು ಸಮಾಜ ನೋಡುತ್ತಿರುವ ದೃಷ್ಟಿ ಮತ್ತು ಅಂತಹ ಸ್ಥಿತಿಗೆ ಕಾರಣವಾದ ಅದೇ ಸಮಾಜವನ್ನು ಈ ಕತೆಯು ಟೀಕಿಸುತ್ತದೆ. ಹೆಣ್ಣನ್ನು ಕೇವಲ ಒಂದು ಭೋಗದ ವಸ್ತುವಾಗಿ ಬಳಸಿಕೊಂಡು ಬೀಸಾಕುವುದು ಸ್ವತಂತ್ರ ಭಾರತದ ದೇಶದಲ್ಲಿರುವ ಅತ್ಯಂತ ಕಳಂಕಕಾರಿಕ ಸಂಗತಿಯಾಗಿದೆ. ಅವಳಿಗೆ ಅವಳದೆಯಾದ ಸ್ಥಾನಮಾನಗಳಿವೆ. ಅವಳದೆಯಾದ ಕನಸು ಮನಸುಗಳಿವೆ.

ಅಂತಹ ಒಂದು ಹೆಣ್ಣಿನಿಂದಲೇ ನಾವೆಲ್ಲ ಬಂದವರೆಂಬುವುದನ್ನು ಮರೆತು, ಅಂತಹ ಅಸಹಾಯಕ ದಲಿತ ಹೆಣ್ಣಿನ ದೇಹದ ಮೇಲೆ ಹಿಂಸೆಯನ್ನು ಮಾಡುತ್ತ, ತಮ್ಮ ಕಾಮದಾಹವನ್ನು ಹಿಂಗಿಸಿಕೊಳ್ಳುತ್ತಿರುವ ಬಲಾಢ್ಯ ಮೇಲ್ವರ್ಗದವರನ್ನು ಈ ಕಥೆಯು ಮಾನವೀಯತೆ ಮರೆತ ಮನುಷ್ಯರೆಂದು ಜರಿದು. ದಲಿತರ ಮೇಲೆ ನಿರಂತರ ನಡೆಯುತ್ತಿರುವ ಶೋಷಣೆಯ ಕೂಗನ್ನು ಒತ್ತಿ ಹೇಳುತ್ತದೆ. ಬಡವರನ್ನು ಬಡವರನ್ನಾಗಿಯೇ ನಿರ್ಮಿಸಿದ ಈ ಬುದ್ಧಿವಂತ ಸಮಾಜ. ತನ್ನಂತೆ ಮತ್ತೊಬ್ಬರನ್ನು ಕಾಣುವುದನ್ನು ಮರೆತು. ಮೃಗೀಯ ರೂಪದಲ್ಲಿ ದೌರ್ಜನ್ಯ ಮಾಡುತ್ತಿದ್ದಾನೆ. ಅಸಹಾಯಕರನ್ನು ತಮ್ಮ ಮನಕ್ಕೆ ಬಂದಂತೆ ಉಪಯೋಗಿಸಿಕೊಂಡು. ದಲಿತ ಹೆಣ್ಣು ಮಕ್ಕಳು ತಮ್ಮ

ನೋವಿಗೆ ಕೊನೆಯೇ ಇಲ್ಲವೆಂದು ಕಣ್ಣೀರಿನಲ್ಲಿ ಹುಟ್ಟಿ, ಕಣ್ಣೀರಿನಲ್ಲಿ ಕೊನೆಯಾಗುವ ದುಸ್ಥಿತಿಯನ್ನು ನಿರಂಜನರವರು ತಮ್ಮ ಈ 'ಕೊನೆಯ ಗಿರಾಕಿ' ಎಂಬ ಕತೆಯಲ್ಲಿ ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕವಾಗಿ ಹಿಡಿದಿಟ್ಟಿದ್ದಾರೆ.

ಹೆಣ್ಣಿನ ಸಮಾನತೆಯು ಇಲ್ಲದೆ, ನಿರ್ಭಯವಾಗಿ ಬದುಕಲು ಸಾಧ್ಯವಿಲ್ಲದೆ, ಹಣವಂತರ ಕೈಯಲ್ಲಿ ಬಳಕೆಯ ಬೊಂಬೆಯಂತೆ ತನ್ನನ್ನು ತಾನು ಅರ್ಪಿಸಿಕೊಳ್ಳಬೇಕಾಗಿರುವ ಪರಿಸ್ಥಿತಿಯನ್ನು ಹಾಗೂ ಅಂತಹ ಸ್ಥಿತಿಗೆ ಇಂದಿನ ಆಡಳಿತಾತ್ಮಕ ಕಾನೂನುಗಳು ಸಹಾಯಕ್ಕೆ ಬಾರದೆ ಇರುವುದನ್ನು ಸಂವಿಧಾನದ ಮೂಲಭೂತ ಹಕ್ಕುಗಳ ಉಲ್ಲಂಘನೆಯನ್ನು ಕಂಡು ಕಥೆಗಾರರು ಪ್ರಸ್ತುತ ಸಮಾಜವನ್ನು ಅದರ ರೀತಿ ನೀತಿಗಳನ್ನು ಕಂಡು ಮರುಗಿ, ಬಲಿಷ್ಠರ ದುರ್ವರ್ತನೆಯನ್ನು ತಮ್ಮ ದಲಿತ ಸಂವೇದನೆಗಳ ಮೂಲಕ ಗ್ರಹಿಸಿಕೊಂಡು, ಈ ಕಥೆಯಲ್ಲಿ ಬಂಡವಾಳಶಾಹಿಗಳನ್ನು ಆಳುವ ಅಧಿಕಾರಿಶಾಹಿಗಳನ್ನು ಖಂಡಿಸುತ್ತ, ದಲಿತರ ಮನೋವ್ಯಥೆಯನ್ನು ಈ ಕತೆಯಲ್ಲಿ ಸಂಪೂರ್ಣ ಹಿಡಿದಿಟ್ಟಿದ್ದಾರೆ. 'ಕಾಣಿ' ಎಂಬುವವಳು ಈ ಕತೆಯ ನಾಯಕಿ ಅಥವಾ ಕೇಂದ್ರಬಿಂದು. ಇವಳಿಗೆ ತಂದೆ–ತಾಯಿ, ಅಣ್ಣ, ತಮ್ಮಂದಿರ ಜೊತೆಯಿರುವ ಕುಟುಂಬವಿತ್ತು. ಆದರೆ ಬದುಕಿಗೆ ಬೇಕಾಗಿರುವ ಅನ್ನವಿರಲಿಲ್ಲ. ಇವರ ಕುಟುಂಬ ಚಿಕ್ಕ ಗುಡಿಸಲಿನಲ್ಲಿ ವಾಸವಾಗಿತ್ತು.

ಇವರಿಗೂ ಒಕ್ಕಲುತನಕ್ಕಾಗಿ ಮೊದಲು ಒಂದಿಷ್ಟು ಹೊಲವಿತ್ತು. ಅದನ್ನು ಜಮಿನ್ದಾರರು ಹೆಚ್ಚು ಗೇಣಿ ಕೇಳಿ ಅದನ್ನು ಕೊಡಲು ಸಾಧ್ಯವಾಗದಿದ್ದಾಗ ಆ ಹೊಲವನ್ನು ತಾವು ವಶಪಡಿಸಿಕೊಂಡಿದ್ದರು. ಇದರಿಂದಾಗಿ ಊರಿನಲ್ಲಿ ಬದುಕಲು ಸಾಧ್ಯವಿಲ್ಲದೆ, ನಿರಾಶ್ರಿತರಾಗಿ ಕೂಲಿಯನ್ನು ಮಾಡಿಕೊಂಡು ಬದುಕುತ್ತಿದ್ದರು. ಆದರೆ ಅಲ್ಲಿನ ಬರಗಾಲ ಪರಿಸ್ಥಿತಿಯಿಂದ ಊರಿನವರು ಸರಿಯಾದ ಕೆಲಸ ಕೊಡದೆಯಾದಾಗ, ಮಡಿಕೆ ಕುಡಿಕೆಗಳನ್ನು ಕಟ್ಟಿಕೊಂಡು ತಮ್ಮ ಗುಡಿಸಲೊಂದನ್ನು ಬಿಟ್ಟು ಗುಳೆ ಹೊರಟು ಹೋದರು. ಆ ಸಂಸಾರದಲ್ಲಿ ಹಿರಿಯ ಮಗ ಕೂಲಿಯಾಗುವೆನೆಂದು ಮದರಾಸಿಗೆ ಹೋದನು. ಇದರಲ್ಲಿ ಇನ್ನೊಬ್ಬ ಕಿರಿಯ ಮಗ ತಂದೆ ತಾಯಿಯರ ಜೊತೆ ಜಗಳವಾಡಿ ದೇಶಾಂತರ ಹೊರಟು ಹೋಗುತ್ತಾನೆ. ಆಗ ಬೇರೆ ದಿಕ್ಕಿಲ್ಲದೆ ತಂದೆ–ತಾಯಿಗಳು ಮೂಕಿಯಾದ ಮಗಳನ್ನು ಕಟ್ಟಿಕೊಂಡು ಹೊಟ್ಟೆಪಾಡಿಗಾಗಿ ಊರೂರು ಸುತ್ತಿದರು. ಆ ಮೂಕಿಮಗಳೆ 'ಕಾಣಿ'. ಅವರು ಎಷ್ಟು ಸುತ್ತಿದರೂ ಯಾವ ಕಡೆಯೂ ಒಂದು ಕೆಲಸ ಸಿಗುವುದಿಲ್ಲ. ಹಸಿವಿನಿಂದ ಬೇಡಿ, ಬೇಡಿ ಅದೇ ಅವರಿಗೆ ಜೀವನವಾದಾಗ, ಭಿಕ್ಷೆ ಎತ್ತುವ ಕೆಲಸ ಖಾಯಂವಾಗುತ್ತದೆ.

ಇದರಿಂದಲೇ ಅವರ ಜೀವನದ ಹಸಿವು ಸೀಗುತ್ತಿತ್ತು. 'ಕಾಣಿ' ಹದಿನಾರರ ವಯಸ್ಸಿಗೆ ಬಂದಾಗ ಒಬ್ಬನನ್ನು ಜೊತೆಯಾಗಿ ಮಾಡಿಕೊಂಡು ಕರ್ನಾಟಕದ ರಾಜಧಾನಿಗೆ ಓಡಿ ಬಂದಿರುತ್ತಾಳೆ. ಅವನು ತಮಿಳುನಾಡಿನೊಂದು ಊರಿಂದ ಬಂದವನು. ತಿರುಪೆ ಎತ್ತುವ ಗರೀಬ ಆತ. ಒಂದು ಕೈ ಮೊಂಡು ಇನ್ನೊಂದು ತೋಳಿನಿಂದ ಆಕೆಯನ್ನು ಆತ ಬಳಸಿ ಬರಸೆಳೆದುಕೊಂಡು ಅವಳನ್ನು ಹತ್ತು ದಿನಗಳ ಕಾಲ ಉಪಯೋಗಿಸಿಕೊಂಡು, ರಾತ್ರಿಯೋ ಕಾಣಿಯನ್ನು ಬಿಟ್ಟು ಹೋಗುತ್ತಾನೆ. ಇಲ್ಲಿಗೆ

ಅವಳ ಪ್ರೇಮಾಧ್ಯಾಯ ಕೊನೆಗೊಳ್ಳುತ್ತದೆ. ಇಲ್ಲಿಂದಲೇ ಅವಳ ಜೀವನ ಪ್ರಾರಂಭವಾಗುತ್ತದೆ. ಬೆಳಿಗ್ಗೆ ಎದ್ದು ನೋಡಿದಾಗ ಮೊಂಡು ಕೈಯ ಯುವಕ ಭಿಕ್ಷುಕ ಕಾಣೆಯಾದದ್ದು ತಿಳಿಯಿತು. ಅವನಿಗಾಗಿ ನಗರವನ್ನೆಲ್ಲ ಸುತ್ತಿ ಹುಡುಕಾಡಿದಳು. ಆದರೆ ಅವನು ಎಲ್ಲಿಯೂ ಸಿಗಲಿಲ್ಲ. ಅವನೇ ಅವಳಿಗೆ ಆಧಾರವಾಗಿದ್ದ ಅವನನ್ನು ಕಳೆದುಕೊಂಡ ಮೇಲೆ ತಂದೆ–ತಾಯಿಗಳನ್ನು ಬಿಟ್ಟು ಬಂದಿರುವುದಕ್ಕೆ ಮೂಕಿ ಕಾಣಿಗೆ ತುಂಬಾ ದುಃಖವಾಗುತ್ತದೆ.

ಮೊಂಡು ಕೈಯವನನ್ನು ನಂಬಿಕೊಂಡು ಬಂದಿದ್ದಕ್ಕೆ ಈಗ ಅವಳು ಅನಾಥೆಯಂತೆ ಆಶ್ರಯಕ್ಕೆ ಹುಲ್ಲು ಕಡ್ಡಿಯೂ ಇಲ್ಲದೆ ಹಸಿವಿನಿಂದ ನರಳುತ್ತಿದ್ದಳು. ಆ ದಿನವೆಲ್ಲ ಆ ಮೂಕಿಯ ಕಣ್ಣುಗಳಿಂದ ಬಳಬಳನೆ ಕಣ್ಣೀರು ಸುರಿಯುತ್ತಲೇ ಇತ್ತು. ತನ್ನ ಹೊಟ್ಟೆ ಹಿಸುಕಿಕೊಂಡು, ಗೋಡೆಗೆ ಹಣೆ ಚಚ್ಚಿಕೊಂಡು ಅಳುವಿನಿಂದ ರೋಧಿಸುತ್ತಿದ್ದಳು. ಅವನು ಸಿಗದಿರುವುದಕ್ಕೆ ಅವಳ ಏಕಾಂಗಿತನದ ಜೀವನ ಅವಳನ್ನು ಬಲಿ ತೆಗೆದುಕೊಳ್ಳುವುದರ ಕಡೆ ಕರೆದುಕೊಂಡು ಹೋಗುತ್ತಿತ್ತು. ಅವಳು ಅಷ್ಟೇನು ರೂಪವತಿಯಾಗಿರಲಿಲ್ಲ, ತೆಳ್ಳನೆಯ ಜೀವ ಆದರೆ ವಯಸ್ಸಿಗೆ ಮೀರಿ ಮೈ ತುಂಬಿತ್ತು. ಬರಿಯ ದೇಹ ಮಾಂಸಕ್ಕಾಗಿ ಹಂಬಲಿಸುವವರಿಗೆ ಆಕೆ ಮನದಣಿಸುವ ಊಟವಾಗಿದ್ದಳು. ಆಕೆ ಹಸಿವಿನಿಂದ ನಡೆದು ಹೋಗುತ್ತಿರುವಾಗ ತಿರುಗಿ ನೋಡಿದಳು. ಯಾವನೊಬ್ಬ ಸಿಗರೇಟು ಕುಡಿದುಕೊಂಡು ಹಿಂಬಾಲಿಸುತ್ತಿದ್ದನು. ಅವನು ಅವಳ ಹತ್ತಿರ ಬಂದು ತಿನ್ನಲು ತಿಂಡಿಯ ಪೊಟ್ಟಣವನ್ನು ಕೊಟ್ಟನು.

ಅದನ್ನು ಅವಳು ತೆಗೆದುಕೊಂಡು ಬಿಚ್ಚಿ ಗಬಗಬನೆ ತಿಂದಳು. ಆಗ ಕಾಣಿಯನ್ನು ಕರೆದುಕೊಂಡು ಹೋಗಿ, ಒಂದೆರಡು ದಿನ ಉಪಯೋಗಿಸಿಕೊಂಡು, ನಂತರ ನಾನು ಗಿರಾಕಿಗಳನ್ನು ಕರೆದುಕೊಂಡು ಬರುತ್ತೇನೆ. ನೀನು ಮಾತನಾಡಬೇಡ, ಮೂಕಿಯೆಂದು ಯಾರಿಗೂ ತಿಳಿಯಬಾರದೆಂದು ಕೈ ಸನ್ನೆ ಮೂಲಕ ಹೇಳಿದನು. ಅಲ್ಲಿಂದ ಅವಳಲ್ಲಿ ಪ್ರತಿದಿನ ದೇಹಮಾಂಸ ತಿನ್ನುವ ಗಿರಾಕಿಗಳು ಬರುತ್ತಿದ್ದರು. ಅವರಿಗೆ ಮನಬಂದಂತೆ ಅವಳ ದೇಹವನ್ನು ಹಿಂಸಿಸುತ್ತಿದ್ದರು. ಅದರ ಲಾಭವನ್ನು ಮಾತ್ರ ಅವಳನ್ನು ಕರೆದುಕೊಂಡು ಬಂದವನು ಉಪಯೋಗಿಸುತ್ತಿದ್ದನು. ಕಾಣಿಗೆ ಮಾತ್ರ ತಿನ್ನಲು ಅನ್ನ ಸಿಗುತ್ತಿತ್ತು. ಇದನ್ನು ಬಿಟ್ಟರೆ ಅವಳಿಗೆ ಏನೂ ಅರ್ಥವಾಗುತ್ತಿರಲಿಲ್ಲ. ನಂತರ ಅಲ್ಲಿಯ ಜೀವನ ಸಾಕಾಗಿ ಬೇರೆ ಕಡೆ ಓಡಿ ಹೋಗುತ್ತಾಳೆ. ಅಲ್ಲೊಂದು ಸರ್ಕಲ್‌ನ ಬಳಿ ಕುಳಿತಿರುವಾಗ ಯಾರೊಬ್ಬ ಅವಳನ್ನು ಎಳೆದುಕೊಂಡು ಹೋಗಿ ಪೊದೆಯಲ್ಲಿ ಕಾಣಿಯನ್ನು ದೇಹದಂಡಿಸಿದನು. ಇದಾದ ಮೇಲೆ ಅವಳಿಗೆ ಹಸಿವೆ ಮರೆತು ಹೋಗುತ್ತದೆ. ನೆಮ್ಮದಿ ಇಲ್ಲವಾಗುತ್ತದೆ. ದಿನಾಲು ಸತ್ತು ಬದುಕುವುದೇ ಇವಳ ಜೀವನವಾಗುತ್ತದೆ.

ಮತ್ತೆ ಹಸಿವಿಗಾಗಿ ಅದೇ ಬದುಕು ಎಲ್ಲಿ ಹೋದರೂ ಅವಳನ್ನು ಬಿಡದ ಕಾಮುಕರು, ಅವಳನ್ನು ಉಪಯೋಗಿಸಿಕೊಳ್ಳುತ್ತಾರೆ. ರಾತ್ರಿ ಶಾಲೆಯೊಂದರಲ್ಲಿ ಮಲಗುತ್ತಿರುವಾಗಿ ಅಲ್ಲಿಗೆ ಬಂದ ಕೆಲವು ಪುಂಡರು ಅವಳನ್ನು ಗದರಿಸಿ ಯಾವ ಹಣವನ್ನು ನೀಡದೆ, ಅವಳ ದೇಹದ ಮೇಲೆ ಬಲಾತ್ಕಾರ ಮಾಡುತ್ತಾರೆ. ಅವಳಿಗೆ ಹೊಟ್ಟೆಯ ಅನ್ನದ ಹಸಿವು, ಕಾಮುಕರಿಗೆ ದೇಹದ ಹಸಿವು

ಕೊನೆಗೂ ಇದೆ ವೃತ್ತಿಯಿಂದ ಅವಳ ಜೀವನ ಸಾಗುತ್ತದೆ. ಇದರಿಂದಾಗಿ ಚಳಿ ಜ್ವರಗಳಿಂದ ಅವಳ ದೇಹ ಕ್ಷೀಣಿಸಿ ಅನಾರೋಗ್ಯಕ್ಕೆ ತುತ್ತಾಗುತ್ತಾಳೆ. ದೇಹವೆಲ್ಲ ಕೆಟ್ಟು ಹೋಗುತ್ತದೆ. ಅವಳು ಹಸಿವಿನಿಂದ ನಿಂತಾಗ ಧಾಂಡಿಗ ದೇಹದ ಒಬ್ಬ ಪೋಲಿ ಸ್ವರೂಪದವನು ಅವಳನ್ನು ಸನ್ನೆಮಾಡಿ ಕರೆದುಕೊಂಡು ಹೋಗುತ್ತಾನೆ. ಆದರೆ ಅವಳ ಹತ್ತಿರ ಹೋಗಿ ಅವಳ ಕೊಳೆತ ಶರೀರವನ್ನು ಕಂಡು ಥೂ ಎಂದು ಬಿಟ್ಟು ಹೋಗುತ್ತಿರುವಾಗ "ಕಾಣಿ ಆರ್ತನಾದ ಮಾಡುವಂತೆ ಬಾಯಿ ತೆರೆದಳು. ಆದರೆ ಸ್ವರ ಹೊರಡಲಿಲ್ಲ. ಏಳಬೇಕೆಂದು ಮತ್ತೊಮ್ಮೆ ಪ್ರಯತ್ನಿಸಿದಳು ಸಾಧ್ಯವಾಗಲೇ ಇಲ್ಲ.

ಆತ ಬೇಗ ಬೇಗನೆ ಹೆಜ್ಜೆ ಇಡತೊಡಗಿದ. ಕೊನೆಗೊಮ್ಮೆ ಆಕೆ ತೆವಳಿ ಎದ್ದಳು. ಹೆತ್ತ ಎಳೆಗೂಸನ್ನು ಕಸಿದೊಯ್ಯುವ ಪಾಪಿಯ ಬೆನ್ನಟ್ಟುವಂತೆ ಅವಳು ಓಡಿದಳು 'ಲೊಬೊಲೊಬೊ' ಎಂದಾಕೆ ಬೊಬ್ಬಿಟ್ಟಳು. ಯವವಾ ತಕಕಾ ಆ ಆ ಎಂದು ಚೀರಿದಳಾಕೆ. ಈತ ದುಡ್ಡು ಕೊಡದೆ ಓಡುತ್ತಿದ್ದಾನೆ. ಆಕೆ ತನ್ನ ಭಾಷೆಯಲ್ಲಿ ನ್ಯಾಯ ಮೀರಿವರ್ತಿಸಬೇಡವೆಂದು ಕೇಳುತ್ತಿದ್ದಾಳೆ. ನಾಳೆಯ ಒಂದು ತುತ್ತು ಅನ್ನವನ್ನು ಕಸಿಯಬೇಡವೆಂದು ಮೊರೆಯಿಡುತ್ತಿದ್ದಾಳೆ."[೨೯] ಕಾಣಿಯು ತನ್ನ ಅನಾರೋಗ್ಯದ ಸ್ಥಿತಿಯಲ್ಲಿಯೂ ತನ್ನ ದೇಹವನ್ನು ಹಸಿವಿಗಾಗಿ ಮಾರಿಕೊಳ್ಳಲು ಹೋಗುವ ದುಸ್ಥಿತಿಯ ಕಾರಣವನ್ನು ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ಬಂಡವಾಳಶಾಹಿಗಳು ನಡೆಸುತ್ತಿರುವ ದಲಿತರ ಮೇಲಿನ ಶೋಷಣೆಯನ್ನು ಈ ಕಥೆಯ ಮೂಲಕ ಪ್ರತಿಬಿಂಬಿಸಿದ್ದಾರೆ.

ಕೊನೆಗೆ ಕೊನೆಯ ಗಿರಾಕಿಯಾಗಿ ಬರುವ ಗಿಡುಗ ಅವಳ ಸಾವನ್ನೆ ನೋಡುತ್ತಿರುವುದು, ಅಧಿಕಾರಿಶಾಹಿಗಳು ಮತ್ತು ಬಂಡವಾಳಶಾಹಿಗಳು ದಲಿತರ ಮೇಲೆ ಮಾಡುವ ಆಕ್ರಮಣದ ಆತಂಕಕಾರಿಯ ಸಂಕೇತವಾಗಿ ಕಥೆಗಾರರು ಬಳಸಿಕೊಂಡಿದ್ದಾರೆ. ಸ್ವತಂತ್ರ ಭಾರತದಲ್ಲಿ, ಇನ್ನೂ ವಾಸ್ತವ ಜಗತ್ತಿನಲ್ಲಿ, ದಲಿತ ಹೆಣ್ಣುಮಕ್ಕಳು ಹಸಿವಿನಿಂದ ಬಳಲುತ್ತ ಬಂಡವಾಳಶಾಹಿಗಳ ಕುತಂತ್ರಕ್ಕೆ ಬಲಿಯಾಗಿ, ತಮ್ಮ ದೇಹಗಳನ್ನು ಮಾರಿಕೊಳ್ಳುತ್ತಿರುವುದಕ್ಕೆ ಪ್ರತ್ಯಕ್ಷ ಸಾಕ್ಷಿ ಈ ಕಥೆಯಾಗುತ್ತದೆ. ಕಥೆಗಾರರು ದಲಿತ ಹೆಣ್ಣುಮಕ್ಕಳ ಒಳನೋವಿನ ಸಂವೇದನೆಗಳನ್ನು ಈ ಕಥೆಯು ಬಿತ್ತರಿಸುತ್ತದೆ. "ನನ್ನ ಜೀರಾಳಜ್ಜನ ಕಡುಗತ್ತಿ ಮತ್ತು ಇತರ ಮಲಿಯಾಳಿ ಕಥೆಗಳು" ಎಂಬ ಕಥಾ ಸಂಕಲನವನ್ನು ಪಾರ್ವತಿ ಜಿ.ಐತಾಳರವರು ಕನ್ನಡನುವಾದ ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ ಮಲಿಯಾಳಂ ಲೇಖಕಿಯಾದ ಮಾಧವಿ ಕುಟ್ಟಿ (ಕಮಲಾದಾಸ)ರವರು ಬರೆದಿರುವ 'ಸೋನಾಗಚ್ಚಿ' ಎಂಬ ಕಥೆಯು ಜಿ.ಎಚ್.ನಾಯಕ್‌ರವರು ಸಂಪಾದಿಸಿರುವ 'ಕನ್ನಡ ಸಣ್ಣ ಕಥೆಗಳು' ಎಂಬ ಕಥಾ ಸಂಕಲನದಲ್ಲಿರುವ ನಿರಂಜನರವರು ಬರೆದಿರುವ ಕನ್ನಡದ 'ಕೊನೆಯ ಗಿರಾಕಿ' ಎಂಬ ಕತೆಯಂತೆ ಸಮಾಜದಲ್ಲಿ ಸ್ವತಂತ್ರೆಯಿಂದ ಬಾಳಲು ಸಾಧ್ಯವಾಗಿರುವುದಿಲ್ಲ.

ಬಡತನದಿಂದ ತನ್ನ ಹಸಿವನ್ನು ಹಿಂಗಿಸಿಕೊಳ್ಳುವುದಕ್ಕಾಗಿ ದಲಿತ ಹೆಣ್ಣುಮಕ್ಕಳು ನಿರಾಶ್ರಿತರಾಗಿ. ಬಂಡವಾಳಶಾಹಿಗಳಿಗೆ ತಮ್ಮ ದೇಹವನ್ನು ಮಾರಿಕೊಂಡು, ಬೀದಿಯಲ್ಲಿ ಅಶಕ್ತಳಾಗಿ ಅಲೆದಾಡುವ ವೇಶ್ಯೆಯ ಜೀವನವನ್ನು ಇವೆರಡೂ ಕತೆಗಳು ಚಿತ್ರಿಸುತ್ತವೆ. ಕಲ್ಕತ್ತದಲ್ಲಿರುವ ವೇಶ್ಯಾವಾಟಿಕೆಯ

ಕೇಂದ್ರಬಿಂದುವೇ ಈ 'ಸೋನಾ ಗಚ್ಚಿ' ಈ ಪ್ರದೇಶಕ್ಕೆ ನೂರೂರು ಬಡ ಹೆಣ್ಣುಮಕ್ಕಳು ತಮ್ಮದೆಯಾದ ಬಡತನದ ತೊಂದರೆಯಿಂದ ಸಿಲುಕಿಕೊಂಡು ಈ ನಗರಕ್ಕೆ ಬಂದು ತಮ್ಮ ದೇಹದಿಂದಲೇ ತಮ್ಮ ಬದುಕನ್ನು ನಡೆಸುತ್ತಿರುತ್ತಾರೆ. ಅಂತಹ ಒಂದು ಹೆಣ್ಣೇ 'ಅಮಲಾ' ಇವಳು ಕಲ್ಕತ್ತದ ಸೋನಾಗಚ್ಚಿಯ ವೇಶಾಗೃಹದಲ್ಲಿ ಬಂದು, ತನ್ನ ದುಸ್ಥಿತಿಯಿಂದ ದೇಹವನ್ನು ಮಾರಿಕೊಳ್ಳುತ್ತಿರುತ್ತಾಳೆ. ಇದು ದಲಿತ ಹೆಣ್ಣು ಮಕ್ಕಳಿಗೆ ಬಂಡವಾಳಶಾಹಿಗಳು ಮಾಡುತ್ತಿರುವ ದೈಹಿಕ ಮತ್ತು ಮಾನಸಿಕ ಶೋಷಣೆಯಾಗಿರುತ್ತದೆ. ಅವಳಿರುವಲ್ಲಿಗೆ ಉಳ್ಳವರು ಪ್ರತಿದಿನ ಹತ್ತಾರು ಜನ ಬಂದು, ತಮ್ಮ ಬಯಕೆಗಳನ್ನು ದೈಹಿಕವಾಗಿ ತೀರಿಸಿಕೊಂಡು ಹೋಗುತ್ತಿರುತ್ತಾರೆ.

ಒಂದು ದಿನ ಅಮಲಾಳ ವೇಶ್ಯಾಗೃಹಕ್ಕೆ ಒಬ್ಬ ಶ್ರೀಮಂತ ತನ್ನ ಹೆಂಡತಿಯನ್ನು ಬಿಟ್ಟು ಬರುತ್ತಾನೆ. ಅಲ್ಲಿರುವ ಮುದುಕಿಗೆ ಮೂನ್ನೂರು ರೂಪಾಯಿ ಕೊಟ್ಟು ಅಮಲಾಳ ಕೋಣೆಯೊಳಕ್ಕೆ ಪ್ರವೇಶ ಪಡೆಯುತ್ತಾನೆ. ಆ ದಿನ ರಾತ್ರಿಯೆಲ್ಲ ಅವಳ ತೋಳುಗಳ ಜೊತೆ ಮಲಗಿಕೊಳ್ಳುತ್ತಾನೆ. ಇಲ್ಲಿಗೆ ಬರುವ ಇತರೆ ಗಿರಾಕಿಗಳಂತೆ ಈತನು ಎಂದು ಅಂದುಕೊಳ್ಳುತ್ತಾಳೆ. ಬೆಳಿಗ್ಗೆ ಆತನನ್ನು ಬೀಳ್ಕೋಡುತ್ತಾಳೆ. ಮತ್ತೆ ತನ್ನ ದಿನನಿತ್ಯದ ಅದೇ ವೇಶ್ಯಾಗೃಹದಲ್ಲಿ ಬಂಡವಾಳಶಾಹಿಗಳಿಗೆ ತನ್ನ ದೇಹವನ್ನು ಮಾರಿಕೊಳ್ಳುತ್ತಾಳೆ. ಆದರೆ ಅದರಿಂದ ಅವಳಿಗೆ ಯಾವ ಲಾಭವೂ ಬರುವುದಿಲ್ಲ. ಅವಳ ದುಡಿಮೆಯೆಲ್ಲ ಮಾಲಿಕನಿಗೆ ಸೇರುತ್ತದೆ. ಇಲ್ಲಿಯೂ ಸಹ ಬಂಡವಾಳಶಾಹಿಗಳು ದಲಿತರಗೆ ದೈಹಿಕವಾಗಿ ಮಾಡುತ್ತಿರುವ ಶೋಷಣೆಯಾಗಿರುತ್ತದೆ. ಅವಳಿಗೆ ಅಲ್ಲಿಯ ಜೀವನ ಸಾಕಾಗಿ ಆ ನಗರದ ಕೊಳಚೆ ಪ್ರದೇಶದ ಒಂದು ಗುಡಿಸಲಿನಲ್ಲಿ ವಾಸ ಮಾಡುತ್ತಿರುತ್ತಾಳೆ. ಒಂದು ದಿನ ಆ ಶ್ರೀಮಂತ ವ್ಯಕ್ತಿ ಅಮಲಾಳನ್ನು ಹುಡುಕಿಕೊಂಡು ಅವಳಿರುವ ಗುಡಿಸಲಮುಂದೆ ಬರುತ್ತಾನೆ.

ಆಗ ಅಮಲಾ "ನಾನು ನನ್ನ ವ್ಯಾಪಾರ ನಿಲ್ಲಿಸಿ ಎಷ್ಟೋ ಕಾಲವಾಯಿತು. ನನಗೆ ಕ್ಷಯ ರೋಗ ತಗುಲಿತ್ತು. ನನ್ನ ಎರಡೂ ಪಕ್ಕೆಗಳನ್ನು ಅಪರೇಷನ್ ಮಾಡಿ ತೆಗೆದರು. ಆದರೆ ನಾನು ಈಗಲೂ ಎಡೆಬಿಡದೆ ಕೆಮ್ಮುತ್ತೇನೆ."[೩೦] ನನಗೆ ನೀನು ಯಾರೆಂದು ತಿಳಿಯುವುದಿಲ್ಲ. ನನ್ನಲ್ಲಿ ಈಗ ಯಾರ ನೆನೆಪು ಉಳಿದಿರುದಿಲ್ಲ ಎಂದು ಹೇಳುವ ಅಮಲಾ ಜೀವನದ ಸ್ಥಿತಿಗತಿಗಳು ಮತ್ತು ಕನ್ನಡದ ನಿರಂಜನರವರು ಬರೆದಿರುವ 'ಕೊನೆಯ ಗಿರಾಕಿ' ಎಂಬ ಕತೆಯು ದಲಿತ ಹೆಣ್ಣು ಮಕ್ಕಳು ಅಸಹಾಯಕರಾಗಿ ಬಂಡವಾಳಶಾಹಿಗಳ ಶೋಷಣೆಯಿಂದ ಆರ್ಥಿಕ ಅಸಮಾನತೆ ಹೊಂದಿ, ಬೀದಿಯಲ್ಲಿ ಹಸಿವಿಗಾಗಿ ತಮ್ಮ ದೇಹವನ್ನು ಮಾರಿಕೊಳ್ಳುವ ವೇಶ್ಯೆಯರಂತ ಜೀವನ ಸೃಷ್ಟಿಯಾಗುವುದಕ್ಕೆ ಈ ಸಮಾಜದಲ್ಲಿರುವ ಆರ್ಥಿಕ ಅಸಮಾನತೆ ಮತ್ತು ಬಂಡವಾಳಶಾಹಿಗಳ ಶೋಷಣೆಯೇ ಕಾರಣವಾಗಿದೆ. ಇದನ್ನು ಈ ಎರಡು ಕಥೆಗಳು ಸ್ತ್ರೀವಾದದ ನೆಲೆಯಿಂದ ನಿರೂಪಿಸುತ್ತವೆ.

ಎಚ್.ಎಸ್.ಜೇನಾಳರವರು ಬರೆದಿರುವ 'ಬಹಿಷ್ಕಾರ' ಎಂಬ ಕಥಾ ಸಂಕಲನದಲ್ಲಿರುವ 'ಹೆಬ್ಬಾವಿನ ಹೆಡೆಯ ಕೆಳಗಿನ ನೆರಳು' ಎಂಬ ಕಥೆಯು ದಲಿತರಿರುವ ಒಟ್ಟು ಸ್ಥಿತಿಗಳನ್ನು ಕೇಂದ್ರಿಕರಿಸಿ ಬರೆಯಲ್ಪಟ್ಟಿದೆ. ದಲಿತ ಮಕ್ಕಳಿಗೆ ಸಮರ್ಪಕವಾಗಿ ಸಿಗದಿರುವ ಶಿಕ್ಷಣ ಪದ್ಧತಿ,

ಅದರಿಂದಾಗಿ ಅವರ ಬದುಕು ಜೀತದಾಳಾಗುವ ವೇದನೆಯನ್ನು ಅದರಂತೆ, ಸ್ವಯಂ ಆಗಿ ಯಾವುದೇ ಕೆಲಸ ಮಾಡಿ ಮುಂದೆಬಂದು ಬದುಕಬೇಕೆಂದರೆ, ಎದುರಾಗುವ ಜಾತಿವ್ಯವಸ್ಥೆ ದಲಿತರನ್ನು ಪದೇ ಪದೇ ಕಾಡುತ್ತ, ಒಟ್ಟು ದಲಿತ ಸಮುದಾಯದವರ ಜೀವನ ಚಿತ್ರಣವನ್ನು ತೋರಿಸಿಕೊಡತ್ತ 'ದೇವದಾಸಿ' ಪದ್ಧತಿಗೆ ಕಾರಣಗಳನ್ನು ಹುಡುಕುತ್ತದೆ. ದೇವದಾಸಿ ಪದ್ಧತಿಗೆ ಹಿಂದಿರುವ ಬಂಡವಾಳಶಾಹಿಗಳ ಕುತಂತ್ರವನ್ನು ಬಯಲು ಮಾಡಿ ತೋರಿಸುತ್ತದೆ. ಒಂದು ದಲಿತ ಕುಟುಂಬದಲ್ಲಿ ಜನಿಸಿದ ಹೆಣ್ಣು ಮಗಳು ಅದೇಷ್ಟು ಯಾತನೆಯನ್ನು ಅನುಭವಿಸುತ್ತಾಳೆಂಬುವ ಸ್ತ್ರೀ ಸಂವೇದನೆಗಳ ಅಡಿಯಲ್ಲಿ ಈ ಕಥೆಯು ರಚಿತವಾಗಿದೆ.ಬಡತನದ ಬೇಗೆಯಲ್ಲಿ ಬೆಂದಿರುವ ಹೆಣ್ಣುಮಕ್ಕಳು ತಮಗೆ ಸರಿಯಾದ ಆರ್ಥಿಕ ಭದ್ರತೆಯಿಲ್ಲದಿರುವುದರಿಂದಲೇ ಬಂಡವಾಳಶಾಹಿಗಳಿಂದ ಶೋಷಣೆಗೆ ಒಳಪಡುತ್ತಿದ್ದಾರೆ.

ಅವರೇ ದೇವರ ಹೆಸರಿನಲ್ಲಿ ಸೃಷ್ಟಿಸಿದ 'ದೇವದಾಸಿ' ಎಂಬ ಮಾಯಾಜಾಲ ಪ್ರಪಂಚದಲ್ಲಿ ಹೆಣ್ಣನ್ನು ಬಳಸಿಕೊಂಡು, ಅವರ ದೇಹದ ಮೇಲೆ ತಮ್ಮ ಕಾಮದಾಟವನ್ನು ಆಡಿ, ಮಾನಸಿಕ ವೇದನೆಯಿಂದ ಕೊನೆಗೆ ಬೀದಿಯಲ್ಲಿ ರೋಗಿಯಾಗಿ ನಿಲ್ಲಿಸುವ ಹೆಣ್ಣುಮಕ್ಕಳ ದುಸ್ಥಿತಿಯನ್ನು, ಬಂಡವಾಳಶಾಹಿಗಳು ಹೇಗೆ ದಲಿತರ ಮೇಲೆ ತಮ್ಮ ದೌರ್ಜನ್ಯಗಳನ್ನು ಎಸಗುತ್ತಿದ್ದಾರೆ ಎಂಬುವುದನ್ನು ಈ ಕಥೆಯು ವಿಷದೀಕರಿಸುತ್ತದೆ. ಬಡವರ ಬಾಳಿನ ಜೊತೆ ಅಧಿಕಾರಿಶಾಹಿಗಳು ಸಹ ಹೇಗೆ ತಮ್ಮ ಅಧಿಕಾರದ ಪ್ರಾಬಲ್ಯದಿಂದ ಹೆಣ್ಣುಮಕ್ಕಳನ್ನು ಶೋಷಣೆಗೆ ಒಳಪಡಿಸುತ್ತಾರೆ, ಇಂದು ದಲಿತ ಹೆಣ್ಣುಮಕ್ಕಳ ಸ್ಥಿತಿ ಏನಾಗಿರುತ್ತದೆ, ಮುಂದೆ ಏನಾಗಬೇಕಾಗಿದೆ ಎಂಬುವುದನ್ನು ಈ ಕತೆಯು ವಿಶ್ಲೇಷಣೆಗೈಯುತ್ತದೆ. ಆದ್ದರಿಂದಲೇ ಈ ಕಥೆಗೆ ಗುಲಬುರ್ಗಾ ವಿಶ್ವವಿದ್ಯಾಲಯ ಕಲಬುರಗಿ ಪ್ರಸಾರಾಂಗದಿಂದ ನೀಡುವ, ೨೦೧೮ನೇ ಸಾಲಿನ ರಾಜ್ಯ ಮಟ್ಟದ ಕನ್ನಡ ಕಥಾ ಸ್ಪರ್ಧೆಯಲ್ಲಿ ಬೆಳ್ಳಿಪದಕವನ್ನು ಪಡೆದುಕೊಂಡು, ಗೌರವಕ್ಕೆ ಪಾತ್ರವಾಗಿದೆ. ದಲಿತರ ಮೇಲೆ ನಡೆಯುತ್ತಿರುವ ಈ ನಿರಂತರ ಅತ್ಯಾಚಾರಗಳಿಗೆ ದಲಿತ ಹೆಣ್ಣುಮಕ್ಕಳು ಬಲಿಯಾಗುತ್ತಿದ್ದಾರೆ.

ಅವರ ಬದುಕು ಕಣ್ಣೀರಿನಿಂದ ಕೂಡಿದೆ. ಒಂದು ಹೆಣ್ಣು ಸ್ವತಂತ್ರದಿಂದ, ಸ್ವಾಭಿಮಾನವಾಗಿ, ನಿರ್ಭಯವಾಗಿ ಬದುಕುವ ಸ್ವತಂತ್ರವಿಲ್ಲದಂತಾಗಿದೆ. ಈ ವಾಸ್ತವ ಸಂಗತಿಯ ಘಟನೆಗಳನ್ನಾಧರಿಸಿ ಕಥೆಗಾರರು ದಲಿತ ಮಹಿಳೆಯರ ನಿಜ ಜೀವನದ ಸ್ಥಿತಿಗತಿಗಳನ್ನು ತೋರಿಸಿಕೊಟ್ಟಿದ್ದಾರೆ. 'ದೇವವಾಸಿ' ಎಂಬ ಅನಿಷ್ಟ ಪದ್ಧತಿಯಿಂದಾಗಿ ಅದೆಷ್ಟೋ ಬಡದಲಿತ ಮಹಿಳೆಯರ ಜೀವನದ ಪಾಡು ನರಕಯಾತನೆಯಿಂದ ಕೂಡಿದೆ ಎಂಬುವುದನ್ನು ಕತೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳ ಮೂಲಕ ದಲಿತ ಸಂವೇದನೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಮುದನೂರ ಎಂಬ ಒಂದು ಸುಂದರವಾದ ಹಳ್ಳಿ ಅದು ಜಿಲ್ಲಾ ನಗರಕ್ಕೆ ಸಮೀಪವಾಗಿತ್ತು.ಆದ್ದರಿಂದಲೇ ಆ ಹಳ್ಳಿಯ ಹುಡುಗರೆಲ್ಲ ವಿದ್ಯಾಭ್ಯಾಸಕ್ಕಾಗಿ ನಗರಕ್ಕೆ ಹೋಗುತ್ತಿದ್ದರು. ಓಡಾಟಕ್ಕೆ ಬಸ್ಸುಗಳ ಸಂಚಾರದ ವ್ಯವಸ್ಥೆಯಿತ್ತು. ಇದರಿಂದಾಗಿ ಯಾವುದೇ ತೊಂದರೆಯಾಗುತ್ತಿರಲಿಲ್ಲ. ಆದರೂ ಕಾಲೇಜ್ ಮೆಟ್ಟಿಲುಗಳವರೆಗೆ ವಿದ್ಯಾರ್ಥಿಗಳು ಹೋಗಿದ್ದರು.

ಉನ್ನತ ವ್ಯಾಸಂಗಕ್ಕಾಗಿ ಹೋದವರು ಬಹಳ ಕಡಿಮೆ. ಆದರೂ ಊರಿನಲ್ಲಿ ಶಿಕ್ಷಣದ ಪರಿಸರ ಉಳ್ಳವರಿಗೆ ಚೆನ್ನಾಗಿ ದೊರಕುತ್ತಿತ್ತೆಂದು ಹೇಳಬಹುದು.

ಆದರೆ ಭೀಮನಗರದ ಹುಡುಗರಿಗೆ ತಮ್ಮ ಬಡತನದ ಪರಿಸ್ಥಿತಿಯಿಂದಾಗಿ, ಹೈಸ್ಕೂಲಿನ ವಿದ್ಯಾಭ್ಯಾಸವನ್ನು ಮಧ್ಯದಲ್ಲಿಯೇ ನಿಲ್ಲಿಸಿ ಬಿಟ್ಟಿದ್ದರು. ಶಾಲೆಯ ಓದನ್ನು ಪೂರ್ಣಗೊಳಿಸುವುದು ದಲಿತ ಬಡ ವಿದ್ಯಾರ್ಥಿಗಳಿಗೆ ಕೈ ಮೀರಿದ ವಿಚಾರವೇ ಆಗಿತ್ತು. ಆದ್ದರಿಂದ ದಲಿತ ಮಕ್ಕಳು ತಮ್ಮ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ, ಆ ಹಳ್ಳಿಯ ಗೌಡರ ಚಾಕರಿ ಮಾಡಿಕೊಂಡು ಜೀವನ ನಡೆಸುತ್ತಿದ್ದರು. ಒಟ್ಟಿನಲ್ಲಿ ದಲಿತರ ಮಕ್ಕಳು ಶಿಕ್ಷಣದಿಂದ ವಂಚಿತರಾಗಿ, ಉಳ್ಳವರ ಮನೆಯ ಜಾನುವಾರುಗಳನ್ನು ಮೇಯಿಸಿಕೊಂಡು ಕಾಲಕಳೆಯುತ್ತಿದ್ದರು. ಇದು ದಲಿತ ಮಕ್ಕಳಿಗೆ ಬಂಡವಾಳಶಾಹಿಗಳಿಂದ ಆಗಿರುವ ಶೈಕ್ಷಣಿಕ ಶೋಷಣೆಯಾಗಿರುತ್ತದೆ. ಮುದನೂರನಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ಮಹಿಳಾ ಹೈನುಗಾರಿಕೆ ತರಬೇತಿ ಆಯೋಜಿಸಿ ಅದರ ಕುರಿತು ಚರ್ಚೆ ನಡೆಯುತ್ತಿತ್ತು.

ಆಗ ದಲಿತ ಮಹಿಳೆ ಮರೆಮ್ಮ ಮೇಲೆ ಎದ್ದು, ನಾವು ಎಮ್ಮೆ ತಗೊಂಡು ಹಾಲು ವ್ಯಾಪಾರಕ್ಕೆಂದು ಊರಲ್ಲಿ ಹೋದರೆ, ನಮ್ಮನ್ನು ಕಂಡರೆ ಸಾಕು ಅಷ್ಟು ದೂರ ಸರಿಯುತ್ತಾರೆ. ಇಂತದರಲ್ಲಿ ನಮ್ಮ ಹಾಲನ್ನು ತೆಗೆದುಕೊಳ್ಳಲು ಯಾರು ಮುಂದೆ ಬರುತ್ತಾರೆಂದು ಪ್ರಶ್ನೆ ಮಾಡುತ್ತಾಳೆ. ಇದು ಬಂಡವಾಳಶಾಹಿಗಳು ಮಾಡುತ್ತಿರುವ ದಲಿತರ ಮೇಲೆ ಆರ್ಥಿಕ ಶೋಷಣೆಯನ್ನು ಪ್ರತಿನಿಧಿಸುತ್ತದೆ. ಅಷ್ಟೇ ಅಲ್ಲದೆ ದಲಿತರೆಂದರೆ ಅವರು ಮುಟ್ಟಲು, ಮುಟ್ಟಿಸಿಕೊಳ್ಳಲು ಅಯೋಗ್ಯರಾದವರೆಂಬ ಜಾತಿವ್ಯವಸ್ಥೆಯ ಕಟ್ಟುಪಾಡು ಸಂಪ್ರದಾಯಗಳನ್ನು ತೋರಿಸಿಕೊಟ್ಟು ವರ್ಣವ್ಯವಸ್ಥೆಯನ್ನು ಖಂಡಿಸುತ್ತದೆ. ಚಂದ್ರಕ್ಕ ಎಂಬ ದೇವದಾಸಿ ಆದ್ರೂ, ಯಾವ ಹೆಂಡತಿಯರಿಗೂ ಕಡಿಮೆ ಇಲ್ಲದಂಗೆ ಇದ್ದೇವೆ. ಆದರೆ ನನ್ನ ಜೊತೆಗೆ ಇರುವವನಿಗೆ ತನ್ನದೆಯಾದ ಮನೆ ಹೆಂಡತಿ, ಮಕ್ಕಳು, ಅಪ್ಪ, ಅವ್ವ, ಬಂಧು ಬಳಗ ಎಲ್ಲಾ ಇದ್ದಾರೆ.

ನಮ್ಮ ಸಲುವಾಗಿ ಅವರನ್ನೆಲ್ಲ ಬಿಟ್ಟು ನಮ್ಮ ಮನೆಗೆ ಬಂದರೆ, ಅವರನ್ನು ಮನಿಯಿಂದ, ಜಾತಿಯಿಂದ, ಸಮಾಜದಿಂದಲೇ ಹೊರಗಿಡುತ್ತಾರೆ. ನಮಗೆ ಬದುಕು ಕೊಟ್ಟವರಿಗೆ ಅಂತ ಸ್ಥಿತಿ ಬರುವುದು ಬೇಡ, ನಮ್ಮ ಮಕ್ಕಳಿಗೆ ಅಪ್ಪ ಅಂತ ಅವರ ಹೆಸರಿಲ್ಲದಿದ್ದರೂ, ನಮಗೆ ಬದುಕು ಕೊಟ್ಟಿದ್ದಾರಲ್ಲ, ನಮಗೆ ಅಷ್ಟೇ ಸಾಕು. ಊರಿಗೆಲ್ಲ ಗೊತ್ತು ನಮ್ಮ ದೇವವಾಸಿಯ ಮಕ್ಕಳು, ಯಾವ ಯಾವ ಗೌಡರ ಮಕ್ಕಳೆಂದು ಹೇಳುವ ಅವಳ ಮಾತಿನಲ್ಲಿ ಬಡತನದ ಅಭಾವವೇ ತುಂಬಿಕೊಂಡಿದೆ. ಕಾರಣ ಅವರು ದೇವವಾಸಿಯಾಗಿ ತಮ್ಮ ದೇಹವನ್ನು ಮತ್ತೊಬ್ಬರಿಗೆ ಆಹಾರವಾಗಿ ನೀಡುತ್ತಿರುವುದು, ಅವರ ಹೊಟ್ಟೆಯ ಆಹಾರ ಸಮಸ್ಯೆಯೇ ಆಗಿದೆ ಎಂಬುವುದನ್ನು ಕಥೆಗಾರರು ನೇರವಾಗಿ ವಾಸ್ತವ ಸತ್ಯವನ್ನು ಬಿಚ್ಚಿಡುತ್ತ ದಲಿತ ಹೆಣ್ಣು ಮಕ್ಕಳ ಸ್ಥಿತಿಯನ್ನು ಅರ್ಥೈಸಿದ್ದಾರೆ. ರಮೇಶ, ಕುಸುಮಾ, ಚಂದ್ರಮ್ಮ, ಪರಿಮಳರವರು ಈ ದೇವದಾಸಿಯರ ಹಿನ್ನೆಲೆಯನ್ನು ಅವರ ಆ ಪರಿಸ್ಥಿತಿಗೆ ಕಾರಣವಾಗುವ ಅಂಶಗಳನ್ನು ಚರ್ಚಿಸುತ್ತದೆ.

ದಲಿತ ಹೆಣ್ಣು ಮಕ್ಕಳ ಜೀವನದ ಪುಟಗಳನ್ನು ತೆರೆಯುತ್ತಾರೆ. ಮೇಲ್ವರ್ಗದ ಸಮಾಜ ಧರ್ಮದ ಹೆಸರಿನಲ್ಲಿ ಮುಕ್ತ ಲೈಂಗಿಕತೆಯಲ್ಲಿ ಕೆಳವರ್ಗದ ಹೆಣ್ಣುಮಕ್ಕಳನ್ನು ಬಳಸಿಕೊಂಡು ಶೋಷಣೆ ಮಾಡುತ್ತಾರೆ. ಆದರೆ ಆ ದಲಿತ ಬಡ ಹೆಣ್ಣುಮಕ್ಕಳು ಅದೇ ನಮ್ಮ ಬದುಕೆಂದು ನಂಬಿಕೊಂಡ ಸ್ಥಿತಿಯು ತುಂಬಾ ವಿಷಾದಕರ ಸಂಗತಿಯಾಗಿದೆ. ದಮನಿತರು ತಾವು ನೋವು, ತೊಂದರೆಗಳನ್ನು ಅನುಭವಿಸಿಕೊಂಡು ಮೇಲ್ವರ್ಗದವರಿಗೆ ನೆಮ್ಮದಿ ನೀಡುವುದನ್ನೇ ತಮ್ಮ ಸೇವೆಯೆಂದು, ಅವರಿಗಿರುವ ಸ್ಥಿತಿಯು ಅವರನ್ನು ಆ ರೀತಿ ಮಾಡುತ್ತದೆ. ಮೈಸೂರ ಒಡೆಯರ ಆಳ್ವಿಕೆಯಿಂದಲೇ ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡುವುದಕ್ಕಾಗಿ ಹಲವಾರು ಕಾನೂನುಗಳು ರೂಪಗೊಂಡವು. ೧೯೮೨ ರಲ್ಲಿ ದೇವದಾಸಿ ಸಂಪೂರ್ಣ ನಿಷೇಧ ಕಾಯ್ದೆಯು ಕರ್ನಾಟಕ ರಾಜ್ಯಕ್ಕಾಗಿಯೇ ಸೀಮಿತಗೊಂಡು ಪ್ರಾರಂಭವಾಯಿತು. ಇದು ಜಾರಿಗೊಂಡು ೩೮ ವರ್ಷಗಳು ಕಳೆಯುತ್ತ ಬಂದರೂ, ಈ ದೇವದಾಸಿ ಪದ್ಧತಿಯು ಇನ್ನೂ ಜೀವಂತವಾಗಿದೆ.

ಯಲ್ಲಮ್ಮ, ಹುಲಿಗೆಮ್ಮ, ಭಾಗಮ್ಮ, ಮಾರಮ್ಮ, ಚಂದ್ರಮ್ಮ, ಮಾಯಮ್ಮ, ಇವರಲ್ಲದೇ ಹನುಮಂತ, ಖಂಡೋಬಾ, ಸಿದ್ದೇಶ್ವರ ಇವರ ಹೆಸರಲ್ಲಿ ಮುತ್ತು ಕಟ್ಟುವುದು ಅಂದರೆ ದೇವದಾಸಿ ಪದ್ಧತಿಯು ನಿಂತಿರುವುದಿಲ್ಲ. ಇಂದಿಗೂ ಕೊಪ್ಪಳ ಜಿಲ್ಲೆಯ ಹಿರೇಸಿಂಧೋಗಿ ಗ್ರಾಮದಲ್ಲಿ ಮಾದರ ಸಮುದಾಯದ ಸುಮಾರು ೨೦೦ ಕುಟುಂಬಗಳಲ್ಲಿ ಹುಟ್ಟಿದ ಹೆಣ್ಣು ಮಕ್ಕಳಿಗೆ ಮದುವೆಯಾಗಿಲ್ಲ. ಅವರೆಲ್ಲ ಯುಗಾದಿಯ ದಿನದಂದು ಮುರಸಿದ್ಧ ದೇವರ ಹೆಸರಿನಲ್ಲಿ ದೇವದಾಸಿಯನ್ನಾಗಿ ಮಾಡುತ್ತಾರೆ. ಇದು ವಿಚಿತ್ರವಾದರೂ ಸತ್ಯ. ಸರಕಾರಿ ಅಧಿಕಾರಿಗಳ ಕಣ್ಣು ತಪ್ಪಿಸಿ ಈ ಪದ್ಧತಿ ಮುನ್ನಡೆಯುತ್ತಿರುವುದಕ್ಕೆ ಬಂಡವಾಳಶಾಹಿಗಳ ಕುತಂತ್ರವೇ ಕಾರಣವಾಗಿರುತ್ತದೆ. ಅಲ್ಲದೇ ದಲಿತ ಹೆಣ್ಣುಮಕ್ಕಳ ಕುಟುಂಬಗಳಲ್ಲಿರುವ ಬಡತನವೂ ಕಾರಣವಾಗಿದೆ. ಇದೊಂದು ಯಜಮಾನಿಕೆಯ ಸೃಷ್ಟಿಯಾಗಿರುತ್ತದೆ. ಇದರ ಹಿಂದೆ ಹಿರಿಯ ದೇವದಾಸಿಯರ ಕೈವಾಡವೂ ಇರುತ್ತದೆ. ಅದೆಷ್ಟೋ ದಲಿತ ಬಡ ಹೆಣ್ಣುಮಕ್ಕಳನ್ನು ತಲೆಹಿಡುಕರು ದೇವದಾಸಿಯನ್ನಾಗಿ ಮಾಡಿ, ಪುಣೆ-ಮುಂಬಯಿ ನಗರಗಳ ವೇಶ್ಯಾಗೃಹಗಳಿಗೆ ಸಾಗಿಸುತ್ತಿದ್ದಾರೆ.

ಇದೊಂದು ಉದ್ಯಮಿಯಾಗಿ ಮಾಡಿಕೊಂಡ ಬಂಡವಾಳಶಾಹಿಗಳು ದಲಿತರ ಬಡ ಹೆಣ್ಣುಮಕ್ಕಳ ಜೀವನವನ್ನು ಸರ್ವನಾಶ ಮಾಡುತ್ತಿದ್ದಾರೆ. ಕೆಲವು ಘರ್‌ವಾಲಿಗಳು ದೇವದಾಸಿ ಮಾಡುವುದಾಗಿ ಹೇಳಿ, ತಮ್ಮ ಬಳಿಯಿರುವ ಹುಡುಗಿಯರಿಗೆ ಶೋಷಣೆಯನ್ನು ಮಾಡುತ್ತಾರೆ. ೧೦-೧೨ ವರ್ಷದ ಹುಡುಗಿಯರನ್ನು ಅದ್ಯಾವುದೋ ಮೂಲದಿಂದ ಕರೆಯಿಸಿಕೊಂಡು, ತಮ್ಮ ಲೈಂಗಿಕ ಜೀತಕ್ಕೆ ಇಟ್ಟುಕೊಳ್ಳುತ್ತಾರೆ. ಅದೇನು ಅರಿಯದ ಆ ಮುಗ್ಧ ಬಡ ಜೀವಿಗಳು ಅತ್ತು ಕರೆದು, ಚೀರಾಡಿ, ಹಾರಾಡಿ ಕಡೆಗೊಂದು ದಿನ ಅದೇ ಕೆಲಸಕ್ಕೆ ಬಗ್ಗಿಕೊಳ್ಳವಂತೆ ಮಾಡುವುದು ದಲಿತ ಹೆಣ್ಣು ಮಕ್ಕಳಿಗಿರುವ ಅಸಹಾಯಕ ಜೀವನವನ್ನು ತೋರಿಸುತ್ತದೆ. ಅಂತಹ ಬಡ ಹೆಣ್ಣುಮಕ್ಕಳನ್ನು ತಾವು ವ್ಯಾಪಾರ ರೂಪದಲ್ಲಿ ಬಳಸಿಕೊಂಡು, ಅವರ ದೇಹದಿಂದ ಬಂಡವಾಳಶಾಹಿಗಳು ಬಲಿಷ್ಠರಾಗುತ್ತಾರೆ.

ಆದರೆ ಆ ದಲಿತ ಹೆಣ್ಣುಮಕ್ಕಳು ಮುಂದೊಂದಿನ ನಿರಾಶ್ರಿತರಾಗಿ ಬಂದು, ಬೀದಿಯಲ್ಲಿ ನಿಂತು ಯಾರೂ ಮುಟ್ಟದ ಹಾಗೆ ರೋಗಿಗಳಾಗಿ ಸಾವನ್ನಪ್ಪುತ್ತಾರೆ.ಇದು ದಲಿತ ಹೆಣ್ಣುಮಕ್ಕಳ ಜೀವನದ ವಾಸ್ತವದ ಕಹಿಸತ್ಯವಾಗಿರುತ್ತದೆ. ಅದೇಷ್ಟೋ ದಲಿತ ದೇವವಾಸಿ ಹೆಣ್ಣುಮಕ್ಕಳು ತಮ್ಮ ದೇಹ ಸಂಪರ್ಕದಿಂದಾಗಿ 'ಸಿಫಿಲಿಸ್' 'ಗೋನ್ಹೋರಿಯಾ', 'ಕ್ಷಯ', 'ಏಡ್ಸ್' ರೋಗಗಳಿಗೆ ಬಲಿಯಾಗುತ್ತಿದ್ದಾರೆ. ದಲಿತ ಹೆಣ್ಣುಗಳನ್ನು ಲೈಂಗಿಕವಾಗಿ, ಆರ್ಥಿಕವಾಗಿ ಶೋಷಣೆಯನ್ನು ಮಾಡುತ್ತಿದ್ದಾರೆ. ಪೋಲೀಸರು ಬೇಕೆಂದಂತೆ ದಲಿತ ಹೆಣ್ಣುಮಕ್ಕಳನ್ನು ಹಿಂಸಿಸುತ್ತಾರೆ. ಬಂದಂತ ಬಂಡವಾಳಶಾಹಿಗಳು ತಮ್ಮ ಮನ ಬಂದಂತೆ ವರ್ತಿಸುತ್ತಾರೆ. ಇವೆಲ್ಲವುಗಳ ಮಧ್ಯೆ ಅವಳ ಸ್ಥಿತಿ ಏನಾಗಿರಬೇಕು. ಅಷ್ಟೆ ಅಲ್ಲದೆ "ಮುಂಬೈನ ಟಿ, ಆಯ್, ಎಸ್.ಎಸ್.ನ ಸಮಾಜಕಾರ್ಯ ವಿದ್ಯಾರ್ಥಿಗಳು ನಡೆಸಿದ ಅಧ್ಯಯನದ ಪ್ರಕಾರ (೨೦೧೩-೨೦೧೪ರಲ್ಲಿ) ಕೆಳವರ್ಗದ ಮೇಲೆ ನಡೆಯುತ್ತಿರುವ ಅತ್ಯಾಚಾರಗಳು, ಕೆಳವರ್ಗದ ಯುವತಿಯರನ್ನು ಪ್ರೀತಿಯ ಹೆಸರಿನಲ್ಲಿ ಮೋಸ ಮಾಡಿ ಬಸಿರು ಮಾಡುವುದು.

ಇದರಿಂದ ಸಮುದಾಯದ ಹಿರಿಯರು ಮೇಲ್ವರ್ಗದ ಜನರೊಡನೆ ಹೋರಾಟ ನಡೆಸಲಾಗದೇ ವಿಧಿಯಾಟ ಅಂದುಕೊಂಡು ಬಸಿರಾದ ಮಗಳಿಗೆ ಮುತ್ತುಕಟ್ಟಿ ದೇವವಾಸಿ ಮಾಡುವುದು ಮರ್ಯಾದೆ ಉಳಿಸಿಕೊಳ್ಳಲು ಕಂಡುಕೊಂಡ ದಾರಿಯಾಗಿದೆ."[೩೧] ಹೀಗೆ ದಲಿತ ಹೆಣ್ಣುಮಕ್ಕಳ ಇಂತಹ ಹೀನಾಯ ಸ್ಥಿತಿಗೆ ಆಳುವ ಅಧಿಕಾರಿಶಾಹಿವರ್ಗದವರು ಮತ್ತು ಮೇಲ್ವರ್ಗದವರೆಂದು ಕರೆಯಿಸಿಕೊಂಡಿರುವ ಬಂಡವಾಳಶಾಹಿಗಳು, ಪುರೋಹಿತಶಾಹಿಗಳು ಸೃಷ್ಟಿಸಿದ ವರ್ಣವ್ಯವಸ್ಥೆಯ ಮಾದರಿಯಲ್ಲಿರುವ ಮೌಢ್ಯ ಸಂಪ್ರದಾಯಗಳಿಂದ ದಲಿತ ಬಡ ಸಮುದಾಯದ ಮೇಲೆ ನಿರಂತವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಅಷ್ಟೇ ಅಲ್ಲದೆ ದೈಹಿಕವಾಗಿ, ಮಾನಸಿಕವಾಗಿ ಶೋಷಣೆಯನ್ನು ಮಾಡುತ್ತಿದ್ದಾರೆ. ಇಂತವರ ದಮನಿತರ ಧ್ವನಿಯಾಗಿ ಕಥೆಗಾರರು ತಮ್ಮ ಸೂಕ್ಷ್ಮ ಸಂವೇದನೆಗಳನ್ನು ದಲಿತ ಹೆಣ್ಣುಮಕ್ಕಳ ಸ್ಥಿತಿಗತಿಗಳನ್ನು ಅದಕ್ಕೆ ಕಾರಣವಾಗುವ, ಪರಿಣಾಮ ಬೀರುವ ಅಂಶಗಳನ್ನು ಈ ಕಥೆಯ ಮೂಲಕ ದಲಿತ ಸಂವೇದನೆಗಳನ್ನು ತೋರಿಸಿಕೊಟ್ಟಿದ್ದಾರೆ.

ದಲಿತರ ಈ ನೋವಿಗೆ ಹೆಣ್ಣುಮಕ್ಕಳ ಕಣ್ಣೀರಿನ ಕೂಗಿಗೆ ಸ್ವತಂತ್ರತೆಯನ್ನು ಹುಡುಕುತ್ತ, ಹೋರಾಟದ ಪಥದಲ್ಲಿ ಸಮಾನತೆಯನ್ನು ಸಾಧಿಸುವ ಧ್ಯೇಯವನ್ನು ಈ ಕಥೆಯು ಒಳಗೊಂಡಿರುತ್ತದೆ. ದಲಿತ ಸಂವೇದನೆಗಳಿಗೆ ಕನ್ನಡಿ ಹಿಡಿದಂತೆ ಈ ಕಥೆಯು ಘಟನೆಗಳ ಮೂಲಕ ದಲಿತರು ನೋವುಗಳನ್ನು ವಾಸ್ತವದ ರೀತಿಯಲ್ಲಿ ನಿರೂಪಿಸುತ್ತದೆ. ಓಲ್ಗಾ ಎನ್ನುವ ಕಾವ್ಯನಾಮದಿಂದ ಸುಪರಿಚಿತರಾಗಿರುವ ಆಂಧ್ರದ ಪ್ರಸಿದ್ಧ ಲೇಖಕಿ ಪೋಪೂರಿ ಲಲಿತಕುಮಾರಿ ಅವರ ಕಥೆಗಳನ್ನು 'ರಾಜಕೀಯ ಕತೆಗಳು' ಎಂದು ಜಿ.ವೀರಭದ್ರಗೌಡರವರು ಕನ್ನಡನುವಾದವನ್ನು ಮಾಡಿದ್ದಾರೆ. ಈ ಕಥಾ ಸಂಕಲನದಲ್ಲಿರುವ 'ಅಯೋನಿ' ಕಥೆಯು ಕನ್ನಡದ ಎಚ್.ಎಸ್.ಬೇನಾಳರವರು ಬರೆದಿರುವ 'ಬಹಿಷ್ಕಾರ' ಎಂಬ ಕಥಾ ಸಂಕಲನದಲ್ಲಿರುವ 'ಹೆಬ್ಬಾವಿನ ಹೆಡೆಯ ಕೆಳಗಿನ ನೆರಳು' ಎಂಬ ಕತೆಯಂತೆ ಬಡತನದ ಹಸಿವಿನಿಂದ ವೇಶ್ಯೆಯಾಗಿರುವ ದಲಿತ ಹೆಣ್ಣುಮಕ್ಕಳ ಯಾತನೆಯ

ಜೀವನವನ್ನು ತೋರಿಸಿಕೊಡುತ್ತದೆ. ಹೆಣ್ಣಾಗಿ ಹುಟ್ಟಿರುವುದರಿಂದ ಮತ್ತೊಬ್ಬರ ದೌರ್ಜನ್ಯದಿಂದ ದೈಹಿಕ ಹಿಂಸೆಯ ನರಕವನ್ನು ಅನುಭವಿಸಬೇಕು.

ಹೆಣ್ಣಾಗಿ ಹುಟ್ಟಿದ ತಪ್ಪಿಗಾಗಿ ಬಡತನ, ಹಸಿವಿನಿಂದ ಬಳಲಬೇಕಾಗುತ್ತದೆ. ಹೆಣ್ಣಾಗಿ ಹುಟ್ಟಿದ ತಪ್ಪಿಗಾಗಿ ಸಮಾಜದಲ್ಲಿ ಪ್ರತಿಕ್ಷಣದಲ್ಲೂ ಭಯವನ್ನು ಹೊತ್ತುಕೊಂಡು ಜೀವಿಸಬೇಕಾಗುತ್ತದೆ. ಹೆಣ್ಣಾಗಿ ಹುಟ್ಟಿದ ತಪ್ಪಿಗಾಗಿ ಇಡೀ ಜೀವನದ ಬಾಳನ್ನು ಕತ್ತಲ್ಲಲ್ಲಿ ಕಳೆಯಬೇಕಾಗುತ್ತದೆ. ಆದ್ದರಿಂದ ನಾನು ಹೆಣ್ಣಾಗಿ ಹುಟ್ಟಬಾರದೆಂಬ ಹೆಣ್ಣಿನ ಒಳಲೋಕದ ಜೀವನದಲ್ಲಿ ಅದೆಷ್ಟೋ ಹೇಳಲಾಗದ ನರಕಯಾತನೆಗಳು ತುಂಬಿವೆ ಎಂಬುವುದನ್ನು ಈ ಕತೆಯು ವಿಷದೀಕರಿಸುತ್ತದೆ. ಒಂದು ಹೆಣ್ಣು ಸಮಾಜದಲ್ಲಿ ಬದುಕಬೇಕೆಂದರೆ ಎಲ್ಲಿ ನೋಡಿದರು ಬಲಿಷ್ಠ ಪುರುಷ ಸಮಾಜ ನೋಡುತ್ತಿರುವ ನೋಟವೇ ಬೇರೆಯಾಗಿರುತ್ತದೆ. ಹೆಣ್ಣಿನ ಜೀವನ ಅದ್ಯಾವುದೋ ಕಾರಣಗಳಿಗಾಗಿ ತನ್ನ ದೇಹದಿಂದ ಬದುಕುವ ಹೀನಾಯ ಸ್ಥಿತಿ ಬಂದು ವೇಶ್ಯೆಯಾಗಿ ಬಾಳಬೇಕಾದ ಸಂದಿಗ್ಧ ಪರಿಸ್ಥಿತಿ ಉಂಟಾಗಿರುತ್ತದೆ.

ಇದನ್ನೇ ಹೆಣ್ಣಿನ ಜೀವನಕ್ಕೆ ಬಂಡವಾಳಶಾಹಿಗಳು ತಮ್ಮ ಸ್ವಾರ್ಥ ಸಾಧನೆಗಾಗಿ ತಮ್ಮ ದೈಹಿಕ ಸುಖಕ್ಕಾಗಿ ನಿರ್ಮಿಸಿಕೊಂಡಿದ್ದಾರೆ. ಅದಕ್ಕಾಗಿ ಈ ಕತೆಯಲ್ಲಿ ಕಥೆಗಾರ್ತಿಯು "ನನಗೆ ಮಾತ್ರ ತಕ್ಷಣ ಅಯೋನಿಯಾಗಬೇಕೆನಿಸುತ್ತದೆ. ನನ್ನ ಬಯಕೆ ಅಸಹ್ಯವಾಗಿದೆಯೆಂದು, ಒಳ್ಳೆಯದಲ್ಲವೆಂದು ನೀವು ಅಂದುಕೊಳ್ಳುತ್ತಿದ್ದರೆ, ಮೊದಲು ಈ ಹಿಂಸೆಯನ್ನು ನಿಲ್ಲಿಸಿ. ಸಣ್ಣ ಸಣ್ಣ ಹುಡುಗಿಯರನ್ನು ಅವರ ಯೋನಿಗಾಗಿ ಎತ್ತಿಕೊಂಡು ಬರುವ ನಾಗರ ಹಾವುಗಳನ್ನು ತಿವಿದು ತಿವಿದುಕೊಲ್ಲಿರಿ. ಈ ವ್ಯಾಪಾರವನ್ನು ನಿಲ್ಲಿಸಿ ಅದು ಕೈಲಾಗದೆ ನನ್ನನ್ನು ನೋಡಿ ನೀವು ಅಸಹ್ಯಪಡುವಿರಿ ಯಾಕೆ ನನ್ನ ಕಥೆ ಅಸಹ್ಯವಾಗಿದೆ ಎನ್ನುವಿರಿ"[೩೨] ಎಂದು ಪ್ರಶ್ನಿಸುತ್ತಿರುವುದು ಸಮಂಜಸವಾಗಿರುತ್ತದೆ. ದಲಿತ ಹೆಣ್ಣು ಮಕ್ಕಳನ್ನು ಬಂಡವಾಳಶಾಹಿಗಳು ತಮ್ಮಲ್ಲಿರುವ ಹಣದ ಪ್ರಾಬಲ್ಯದಿಂದ ಹೆಣ್ಣುಗಳನ್ನು ಸರಕುಗಳೆಂದು ಭಾವಿಸಿಕೊಂಡು, ತಮ್ಮ ಮನಬಂದಂತೆ ಅತ್ಯಾಚಾರವನ್ನು ಮಾಡುತ್ತಿದ್ದಾರೆ.

ದಲಿತ ಸ್ತ್ರೀಯರ ಆರ್ಥಿಕ ಶೋಷಣೆಯಿಂದಾಗಿ, ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದಕ್ಕಾಗಿ, ವೇಶ್ಯಾವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅದರಂತೆ ಎಚ್.ಎಸ್.ಬೇನಾಳರವರು ಬರೆದಿರುವ ಕನ್ನಡ ಕತೆಯಾದ 'ಹೆಬ್ಬಾವಿನ ಹೆಡೆಯ ಕೆಳಗಿನ ನೆರಳು' ಕತೆಯಲ್ಲಿ ದಲಿತ ಹೆಣ್ಣುಮಕ್ಕಳು ಬಂಡವಾಳಶಾಹಿಗಳ ಶೋಷಣೆಯಿಂದ ವೇಶ್ಯಾವೃತ್ತಿಯಲ್ಲಿ ತಮ್ಮ ಜೀವನವನ್ನು ಯಾತನೆಯಲ್ಲಿ ಕಳೆಯುತ್ತಿರುವುದನ್ನು ಚಿತ್ರಿಸಿದ್ದಾರೆ. ಜಾತಿವ್ಯವಸ್ಥೆ ನಿರ್ಮಿಸಿದ 'ದೇವದಾಸಿ' ಪದ್ಧತಿಯು, ಉಳ್ಳವರು ತಮ್ಮ ಸ್ವಹಿತಕ್ಕಾಗಿ ದಲಿತರ ದೇಹವನ್ನು ಶೋಷಿಸಲೆಂದೇ ಮಾಡಿಕೊಂಡ ಅತ್ಯಾಚಾರದ ಸಂಗತಿಗಳಾಗಿವೆ. ಇದನ್ನೇ ಈ ಎರಡು ಕತೆಗಳು ಬಡ ಹೆಣ್ಣುಮಕ್ಕಳು ವೇಶ್ಯಾವೃತ್ತಿಯಿಂದ ಪಡುತ್ತಿರುವ ನೋವುಗಳನ್ನು ಸ್ತ್ರೀವಾದದ ನೆಲೆಯಿಂದ ಅಭಿವ್ಯಕ್ತಗೊಳಿಸುತ್ತವೆ.

ಮಂಜು ಕೋಡಿಉಗನೆರವರು ಬರೆದಿರುವ 'ಜೆಟ್ಟಬೇಗೆ' ಎಂಬ ಕಥಾ ಸಂಕಲದಲ್ಲಿರುವ 'ನೀ ಬೆರಸುವ ಭೇದ' ಎಂಬ ಕಥೆಯು ಜಾತಿವ್ಯವಸ್ಥೆಯನ್ನು ಕುರಿತು ಪ್ರತಿಪಾದಿಸುತ್ತದೆ. ಸಮಾಜದಲ್ಲಿ

ನೆಲೆಗೊಂಡಿರುವ ಬ್ರಾಹ್ಮಣ, ವೈಶ್ಯ, ಕ್ಷತ್ರೀಯ, ಶೂದ್ರರೆಂಬ ವರ್ಣವ್ಯವಸ್ಥೆಯು ಮನುಷ್ಯ ಕುಲವನ್ನೇ ಮಾನಸಿಕವಾಗಿ ಹಿಬ್ಬಾಗ ಮಾಡಿ ಅಸಮಾನತೆಯನ್ನು ಉಂಟುಮಾಡಲು ಕಾರಣವಾಗಿರುತ್ತದೆ. ಈ ವರ್ಣವ್ಯವಸ್ಥೆಯಲ್ಲಿರುವ ಶ್ರೇಷ್ಠ-ಕನಿಷ್ಟಎಂಬ ಭೇದ ಭಾವಗಳಿಂದಲೇ ಸಾಮಾಜಿಕ ವ್ಯವಸ್ಥೆಯಲ್ಲಿ ಶಾಂತಿ ಇಲ್ಲದಂತಾಗಿದೆ. ಪ್ರತಿಯೊಂದು ಜೀವಿಯೂ ದೇವರ ಕೃಪೆಯಿಂದ ಉತ್ಪತ್ತಿಯಾಗಿ ಎಲ್ಲರಿಗೂ ಸಮಾನವಾಗಿ, ಸ್ವತಂತ್ರವಾಗಿ ಬದುಕಲು ಹಕ್ಕು ಇದೆ ಎಂಬುವುದನ್ನು ಮರೆತು ಮನುಷ್ಯರನ್ನು ಮನುಷ್ಯರಂತೆ ಕಾಣದೆ, ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗಿ ಬಲಿಷ್ಠರು ದಲಿತರಿಗೆ ಶೋಷಣೆಯನ್ನು ಮಾಡುತ್ತಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ದಲಿತರನ್ನು ದೂರಸರಿಸಿ ಸಮಾನತೆಯ ತತ್ವವನ್ನೇ ಮರೆತು, ಮನುಷ್ಯ ಮನುಷ್ಯರಲ್ಲಿ ದ್ವೇಷ ಉಂಟಾಗಲೂ ಈ ವರ್ಣವ್ಯವಸ್ಥೆಯೇ ಕಾರಣಿಭೂತವಾಗಿರುತ್ತದೆ.

ಧರ್ಮ, ಜಾತಿ ಹೆಸರಿನಲ್ಲಿ ಮನುಷ್ಯನ ಮೇಲೆ ಶೋಷಣೆ ನಡೆಯುತ್ತಿದೆ. ಒಬ್ಬರು ಮೇಲ್ವರ್ಗದವರು, ಮತ್ತೊಬ್ಬ ಕೆಳವರ್ಗದವರೆಂದು ವಿಭಾಗಿಸಿ ಒಬ್ಬರು ಮತ್ತೊಬ್ಬರನ್ನು ಸ್ಪರ್ಶಿಸಬಾರದು ಎಂಬ ಭೇದದಿಂದ ಜನ ಮಾನಸದಲ್ಲಿ ಪ್ರೇಮ ಇಲ್ಲದಂತಾಗಿದೆ. ಒಂದು ಧರ್ಮ ಕಟ್ಟಳೆಗಳಲ್ಲಿ ಜಾತಿ ಹೆಸರು ಸೇರಿಸಿ, ಅದನ್ನೇ ಬಂಡವಾಳವನ್ನಾಗಿಸಿಕೊಂಡು ರಾಜಕೀಯ ಮಾಡಲು ಸಹ ಈ ಜಾತಿವ್ಯವಸ್ಥೆಯೇ ಕಾರಣವಾಗಿದೆ. ಹೀಗಿರುವಾಗ ಮನುಷ್ಯನಿಂದ ಸೃಷ್ಟಿಯಾದ ಈ ಜಾತಿವ್ಯವಸ್ಥೆ ಮನುಷ್ಯನನ್ನೇ ಅವಮಾನಿಸುತ್ತದೆ ಎಂಬುವುದನ್ನು ಮರೆತು, ದಲಿತರೆಂಬ ಕೆಳವರ್ಗದವರನ್ನು ಊರಿನಿಂದ ದೂರಸರಿಸಿ ಅವರ ಉಪಯೋಗವನ್ನು ಮಾತ್ರ ತೆಗೆದುಕೊಂಡು, ಮತ್ತೆ ಬಳಕೆ ವಸ್ತುಗಳಂತೆ ಅವರನ್ನು ಬಿಸಾಕುತ್ತಿರುವ ಸವರ್ಣಿಯರು ಈ ಜಾತಿ ವ್ಯವಸ್ಥೆಯನ್ನೆ ನಂಬಿಕೊಂಡು ಮನುಷ್ಯತ್ವವನ್ನು ಮರೆತುಬಿಟ್ಟಿದ್ದಾರೆ.

ಜಾತಿಯ ಹೆಸರಿನಲ್ಲಿ ದಲಿತರಿಗೆ ಶೋಷಣೆಯನ್ನು ಮಾಡಿ, ಮೇಲ್ವರ್ಗದವರು ಅನ್ಯಾಯ ಮಾಡುತ್ತಿದ್ದಾರೆ. ತಮ್ಮ ಹೃದಯಲ್ಲಿರುವ ಮಾನವೀಯ ತತ್ವಗಳನ್ನು ಕೇವಲ ಮಾತಿನಲ್ಲಿ ಬಳಸುತ್ತಾರೆ. ಆದರೆ ತಮ್ಮ ಕರ್ಮದ ಜೀವನದಲ್ಲಿ ಅಳವಡಿಸಿಕೊಳ್ಳಲಾರದೆ, ದಲಿತರ ಸಮುದಾಯಗಳನ್ನು ಕೇರಿಗಳೆಂದು ಗುರುತಿಸಿ, ಊರಿನಾಚೆ ಇಟ್ಟು ಅವರನ್ನು ಅವರ ನೆರಳನ್ನು ಮುಟ್ಟಿಸಿಕೊಳ್ಳುವುದಿಲ್ಲ. ಅವರು ನಮ್ಮಂತೆ ಮನುಷ್ಯರೆಂಬುವುದನ್ನು ಮರೆತು, ಕೇವಲ ಮೂಕ ಪ್ರಾಣಿಗಳಂತೆ ಬಳಸಿಕೊಳ್ಳುತ್ತ, ಅವರಿಗೆ ಸಾಮಾಜಿಕ ಸ್ಥಾನ ಮಾನಗಳಿಂದ ವಂಚಿತರನ್ನಾಗಿಸಿ, ಸರ್ಕಾರದ ಕಾನೂನುಗಳನ್ನು ಪಾಲಿಸದೆ, ಕೇವಲ ತಲೆಯಲ್ಲಿ ಜಾತಿಯನ್ನು ತುಂಬಿಕೊಂಡು ಎದೆಯಲ್ಲಿ ಪ್ರೇಮವನ್ನು ಮರೆತುಬಿಟ್ಟಿದ್ದಾರೆ. ಇಂತಹ ಪ್ರೇಮ ಮತ್ತು ಜಾತಿಯ ಸಾಮೀಪ್ಯವನ್ನು ಕುರಿತು ಅವೆರಡರ ಭೇದದಿಂದ ಹೃದಯ ಶೂನ್ಯವಾಗುವುದನ್ನು 'ಸೀ ಬೆರಸುವ ಭೇದ' ಕಥೆಯು ವಿವರಿಸುತ್ತದೆ. ಜಾತಿ ಅಳಿದು ಪ್ರೇಮವಾಗಬೇಕೆಂಬ ಸಂದೇಶವನ್ನು ಸಹ ಈ ಕಥೆಯು ನೀಡುತ್ತದೆ.

ಹರೆಯದ ಪಕ್ವಕಾಲ ಬಂದಾಗ ಎದೆಯಲ್ಲಿ ಪ್ರೇಮ ಮೂಡುತ್ತದೆ. ಆಗ ಆ ಎಳೆಯದರಲ್ಲಿ ಯಾವ ಜಾತಿ ಭೇದಗಳು ಇರುವುದಿಲ್ಲ. ಪ್ರೇಮದಲ್ಲಿದ್ದವರ ಹೃದಯ ತನ್ನದೆಯಾದ ಪ್ರಪಂಚದಲ್ಲಿ ನೂರಾರು ಕನಸುಗಳನ್ನು ಕಟ್ಟಿಕೊಂಡು, ರೆಕ್ಕೆಬಿಚ್ಚಿ ಆಕಾಶದೆತ್ತರಕ್ಕೆ ಹಗಲು ರಾತ್ರಿಗಳ ಅರಿವಿಲ್ಲದೆ ಹಾರುಡುತ್ತಿರುತ್ತದೆ. ಇದು ಪ್ರತಿಯೊಬ್ಬರಿಗೂ ಜೀವನದಲ್ಲೊಮ್ಮೆ ಬಂದು ಹೋಗುವ ಸುಗ್ಗಿ. ಹೀಗೆ ಈ ಕಥೆಯಲ್ಲಿ ಮಹೇಶನೆಂಬ ದಲಿತ ನಾಯಕನಿಗೂ, ಮೇಲ್ವರ್ಗದ ಗೌರಿಗೂ ಪ್ರೇಮಾಂಕುರವಾಗಿರುತ್ತದೆ. ಇವರಿಬ್ಬರೂ ಚಿಕ್ಕವರಿಂದ ಆಟವಾಡುತ್ತ ಬೆಳೆದುಕೊಂಡಿರುತ್ತಾರೆ. ನಂತರ ಅವರು ವಯಸ್ಸಿಗೆ ಬಂದ ಮೇಲೆ, ಸ್ನೇಹ ಪ್ರೇಮವಾಗಿ ಪರಿವರ್ತನೆಯಾಗಿರುತ್ತದೆ. ಮೇಲ್ವರ್ಗದ ದೇವಪ್ಪನ ಮಗಳು ಗೌರಿ. ಅವನ ಮಗಳ ಜೊತೆಗೆ ಮಹೇಶ ಸಲುಗೆಯಿಂದ ವರ್ತಿಸುವುದನ್ನು ಕಂಡು, ದೇವಪ್ಪ ಮಹೇಶನಿಗೆ ಒಂದೆರಡು ಸಲ ಹೊಡೆದಿರುತ್ತಾನೆ. ಇದನ್ನು ತಿಳಿದ ಗೌರಿ ಮಹೇಶನಿಗೆ ಸಾಂತ್ವನ ಹೇಳುತ್ತಾಳೆ. ಹೀಗೆ ಅವರಿಬ್ಬರ ಪ್ರೇಮ ಹೃದಯದಲ್ಲಿ ನರ್ತನ ಮಾಡಿರುತ್ತದೆ.

ಆದರೆ ಕೇಲವು ದಿನಗಳ ನಂತರ ಮಹೇಶನನ್ನು ಗೌರಿಯು ಕಣ್ಣೆತ್ತಿ ನೋಡುವುದಿಲ್ಲ. ಮಾತನಾಡಿಸುವುದಿಲ್ಲ. ಅವಳ ಸ್ನೇಹಿತೆ ಚಿತ್ರಳಿಂದ ಗೌರಿಯು ಮಹೇಶನನ್ನು ಮರೆತಿರುವ ವಿಷಯ ತಿಳಿಯುತ್ತದೆ. ಅಂದಿನಿಂದ ಮಹೇಶ ಭಗ್ನಪ್ರೇಮಿಯಾಗಿ ತಾನೊಬ್ಬನೆ ಮಾತನಾಡುತ್ತ ಅಲೆದಾಡುತ್ತಾನೆ. ಒಂದು ದಿನ, ತನ್ನ ಸ್ನೇಹಿತನಾದ ವಿನಯನಿಗೆ ನಡೆದ ಸಂಗತಿಗಳನ್ನು ಹೇಳುತ್ತಾನೆ. ಆಗ ಅವನು ಗೌರಿಗೆ ನಿನ್ನ ಮೇಲೆ ನಿಜವಾದ ಪ್ರೇಮವಿತ್ತೊ ಇಲ್ಲವೊ ಯಾರಿಗೆ ಗೊತ್ತು, ಹಾಗೂ ಈಗ ಅವಳು ಇರುವ ಸಂಧಿಗ್ಧ ಸ್ಥಿತಿ ಹೇಗಿದೆ ಏನು..? ಎಲ್ಲ ತಪ್ಪುಗಳನ್ನು ಗೌರಿಯ ಮೇಲೆ ಹಾಕಬೇಡವೆಂದು ವಿನಯ ತನ್ನ ಸ್ನೇಹಿತ ಮಹೇಶನಿಗೆ ಹೇಳುತ್ತಾನೆ. ಆಗ ಮಹೇಶನು ಇಲ್ಲ ಅವಳು ಚಿಕ್ಕವಳಿರುವಾಗ ಅವಳಿಗೆ ನನ್ನ ಜಾತಿಯ ಬಗ್ಗೆ ತಿಳಿದಿರಲಿಲ್ಲ. ನನ್ನದು ಕೆಳಜಾತಿ ಎಂಬ ಕಾರಣಕ್ಕಾಗಿ ಈಗ ನನ್ನನ್ನು ಮರೆತು ಬಿಟ್ಟಿದ್ದಾಳೆ. ಅದೇ ನನಗೆ ಒಂದು ಉನ್ನತವಾದ ಹುದ್ದೆ ಇದ್ದು, ನನ್ನಲ್ಲಿ ಎಲ್ಲ ಸಂಪತ್ತುಗಳಿದ್ದಿದ್ದರೆ ಗೌರಿ ತನ್ನ ಜಾತಿ ಸಂಪ್ರದಾಯಗಳನ್ನು ಮರೆತು ನನ್ನಲ್ಲಿಗೆ ಬರುತ್ತಿದ್ದಳು.

ನನ್ನ ಪ್ರೇಮವೈಫಲ್ಯಕ್ಕೆ ಗೌರಿ ಮನಸ್ಥಿತಿಯ ಬದಲಾವಣೆಗೆ ಜಾತಿಯೇ ಕಾರಣವಾಗಿರುತ್ತೆಂದು ಮಹೇಶ ತನ್ನ ಸ್ನೇಹಿತ ವಿನಯನಲ್ಲಿ ಹಂಚಿಕೊಳ್ಳುತ್ತಾನೆ. ಅವಳು ನನ್ನ ಮರೆತು ಬದುಕಬಹುದು, ನನ್ನಿಂದ ಮಾತ್ರ ಅವಳನ್ನು ಮರೆತು ಬದುಕಲು ಸಾಧ್ಯವಿಲ್ಲ. ಅವಳಿಗೆ ಬೇಕಾಗಿರುವುದು ಧರ್ಮ, ಜಾತಿ, ಸಂಪತ್ತುಗಳಾದರೆ, ನನಗೆ ಬೇಕಾಗಿರುವುದು ಪ್ರೇಮ ಮಾತ್ರ "ಮರದಿಂದ ಮರ ಹುಟ್ಟುವ, ಮನುಷ್ಯರಿಂದ ಮನುಷ್ಯ ಹುಟ್ಟುವ ಸಹಜತೆಗೆ ಯಾವ ಧರ್ಮವೂ, ಯಾವ ಜಾತಿಯು ನಿರ್ಬಂಧ ಹೇರುವುದಿಲ್ಲ. ಈ ಸತ್ಯವನ್ನು ತಾತ್ವಿಕವಾಗಿ ಒಪ್ಪಿಕೊಳ್ಳುವ ಮನುಸ್ಸುಗಳಿಲ್ಲ. "ಜಾತಿ ಧರ್ಮದ ಗೋಡೆ, ಪ್ರೀತಿಯ ಹಗೆ' ಎನ್ನುತ್ತೀಯಾ, ಬೇರೆ ದಾರಿಯೇ ಇಲ್ಲ ನಾನು ಸರ್ಕಾರದ ಒಂದು ದೊಡ್ಡ ಹುದ್ದೆಯಲ್ಲಿದ್ದು, ಕುರೂಪನಾಗಿದ್ದರೂ, ನನ್ನ ಜಾತಿಯನ್ನು ಗಣಿಸದೆ ಪ್ರೀತಿಯ ನೆಪವೊಡ್ಡಿ ಮದುವೆಯಾಗಲೂ ಅವಳೇ ಮುಂದೆ ಬರುತ್ತಿದ್ದಳು. ಈಗ ನಾನು ಏನೂ ಅಲ್ಲದ ಕಾರಣನನ್ನ

ಜಾತಿಯನ್ನು ಮುಂದೊಡ್ಡಿ ತಿರಸ್ಕರಿಸಿದ್ದಾಳೆ."[೩೩] ಎಂದು ದಲಿತ ಯುವಕ ಮಹೇಶ ತನ್ನ ಸ್ನೇಹಿತ ವಿನಯನಲ್ಲಿ ಹೇಳುತ್ತಾನೆ. ಜಾತಿಯ ಸ್ವಭಾವ ಅವಳಿಗೆ ಅಪ್ಪನಿಂದ ರಕ್ತಗತವಾಗಿ ಇದೆ. ಆದರೆ ನನಗೆ ಅದು ಈಗ ಕಾಣಿಸುತ್ತದೆ ಎಂದು ಹೇಳುತ್ತಾನೆ.

ಭೂಮಿಗೆ ಜಾತಿ ಇಲ್ಲದಿದ್ದರೂ ಅಳತೆಯುಂಟಲ್ಲಾ ಎಂಬ ಸ್ವಭಾವ ಅವನದು. ನಮ್ಮ ವಿಷಯ ತಿಳಿದು ದೇವಪ್ಪ ನಿಂತಲ್ಲಿ, ಕುಂತಲ್ಲಿ, ಕಂಡಲ್ಲಿ, ವಿಷ ಕಾರುತ್ತಿದ್ದನು. ಅದಕ್ಕೆ ಕಾರಣನನ್ನ ಕೆಳ ಜಾತಿಯೇ ಕಾರಣವಾಗಿತ್ತು. ಈ ಜಾತಿವ್ಯವಸ್ಥೆ ಅಳಿಯಬೇಕಾದರೆ ಅಂತರ್ಜಾತಿಯ ವಿವಾಹಗಳು ಏರ್ಪಡಬೇಕು. ಆದರೆ ಕೆಳಜಾತಿಯವರನ್ನು ಮುಟ್ಟಿಸಿಕೊಳ್ಳಲಾರದವರು, ಇನ್ನೂ ತಮ್ಮ ಮನೆತುಂಬಿಸಿಕೊಂಡು ಮದುವೆಯಾಗಲು ಬಿಡುತ್ತಾರೆಯೇ...? ಜಾತಿಯ ಬೀಜ ಕೊಳೆತು ಪ್ರೇಮದ ಹೂಹೃದಯ ಅರಳಿದಾಗ ಮಾತ್ರ ಇದು ಸಾಧ್ಯ.ಇದು ಕೇವಲ ಸರ್ಕಾರದ ನಿಯಮಗಳಿಂದ, ಕಾನೂನುಗಳಿಂದ ಸಾಧ್ಯವಿಲ್ಲ. ಜನರ ಮನಸ್ಸಿನಲ್ಲಿ ತಿಳುವಳಿಕೆ ತುಂಬಿ, ಮನಸ್ಸುಗಳು ಬದಲಾಗಬೇಕಾಗಿದೆ.

ಸಾಮಾಜಿಕ ಸಮಾನತೆಗೆ ಅಂತರ್ಜಾತಿ ಮದುವೆ ನಡೆಯಬೇಕೆಂಬ ಆಶಯವನ್ನು ಈ ಕಥೆಯು ಒಳಗೊಂಡಿರುತ್ತದೆ. ಅಷ್ಟೇ ಅಲ್ಲದೆ, ದಲಿತ ಕುಲದಲ್ಲಿ ಹುಟ್ಟಿದವರ ಒಳಸಂವೇದನೆಗಳನ್ನು ಇದು ಚೆಲ್ಲುತ್ತದೆ. ಮನುಷ್ಯ ತನ್ನ ಅನುಕೂಲಕ್ಕೆ ತಕ್ಕಂತೆ ಮಾಡಿಕೊಂಡ ವರ್ಣವ್ಯವಸ್ಥೆ ಬದಲಾಗಿ, ಆಧುನಿಕ ಪ್ರಪಂಚದಲ್ಲಿ ಸಮಾನತೆಯ ಸಹಭಾಗಿತ್ವದಿಂದ ಸರ್ವರ ಜೀವನ ನಡೆಯಬೇಕು. ಪ್ರೇಮ ಎಲ್ಲರ ಎದೆಯ ದೇವರಾಗಬೇಕು. ಅದರಂತೆ ಎಲ್ಲರೂ ಪ್ರೀತಿಸಿ ಗೌರವಗಳಿಂದ ಕಾಣಬೇಕು. ದಲಿತ ಸಮುದಾಯದವರು ಪಡುತ್ತಿರುವ ನೋವುಗಳು ಮಾಯವಾಗಬೇಕು. ಅವರು ಎಲ್ಲರಂತೆ ಮನುಷ್ಯರೆಂಬ ಭಾವ ಬಂದು ವರ್ಣವ್ಯವಸ್ಥೆ ಅಳಿದು, ಪ್ರೇಮವ್ಯವಸ್ಥೆ ನಿರ್ಮಾಣವಾಗಬೇಕು. ಇದೇ ಈ ಕಥೆಯ ಆಶಯದೊಂದಿಗೆ, ದಲಿತರ ಸಂವೇದನೆಗಳನ್ನು ತಮ್ಮ ಸೂಕ್ಷ್ಮ ಅನುಭವಗಳ ಮೂಲಕ ಕಥೆಗಾರರು ಹೊರಹಾಕಿದ್ದಾರೆ.

ಶ್ರೀಮತಿ ಜಯಲಲಿತರವರು ಸಂಪಾದನೆ ಮತ್ತು ಅನುವಾದ ಮಾಡಿದಂತಹ 'ಬಾಗಿಲು' (ಈ ಹೊತ್ತಿನ ತಮಿಳು ಕಥೆಗಳು) ಎಂಬ ಕಥಾ ಸಂಕಲನದಲ್ಲಿ ದೇವಿ ಭಾರತಿಯವರು ಬರೆದಂತ 'ಬಲಿ' ಎಂಬ ಕಥೆಯು ಕನ್ನಡದ ಮಂಜು ಕೋಡಿಉಗನೆರವರು ಬರೆದಿರುವ 'ಬೆಟ್ಟ ಬೇಗೆ' ಎಂಬ ಕಥಾ ಸಂಕಲನದಲ್ಲಿರುವ 'ನೀ ಬೆರಸುವ ಭೇದ' ಎಂಬ ಕಥೆಯಂತೆ, ಸಮಾಜದಲ್ಲಿ ಪುರೋಹಿತಶಾಹಿಗಳು ಬೇರೂರಿಸಿದ ಜಾತಿವ್ಯವಸ್ಥೆಯನ್ನು ಕುರಿತು ಪ್ರತಿಪಾದಿಸುತ್ತದೆ. ಈ ವರ್ಣವ್ಯವಸ್ಥೆಯಲ್ಲಿರುವ ಬ್ರಾಹ್ಮಣ, ವೈಶ್ಯ, ಕ್ಷತ್ರೀಯ, ಶೂದ್ರರೆಂಬ ಭೇದಭಾವವೂ ಸಮಾಜದಲ್ಲಿ ಮನುಷ್ಯ – ಮನುಷ್ಯರ ನಡುವೆ ಅಸಮಾನತೆಯನ್ನು ಸೃಷ್ಟಿಸಿ, ಸಮಾಜದಲ್ಲಿ ಒಂದು ವರ್ಗ ಮೇಲು, ಮತ್ತೊಂದು ಕೀಳು ಎಂಬ ಕಲ್ಪನೆಯಿಂದ ಅಶಾಂತಿ ತಂದು, ಜಾತಿಯ ಹೆಸರಿನಲ್ಲಿ ಮನುಷ್ಯತ್ವವನ್ನು ಕಳೆದುಕೊಂಡು ಒಂದು ವರ್ಗಕ್ಕೆ ಶೋಷಣೆಯನ್ನು ಮಾಡುತ್ತಿದೆ. ಇದರಿಂದಾಗಿ ಮಾನವರಲ್ಲಿ ಪ್ರೇಮ ಬೆಸುಗೆ ಇಲ್ಲದೆ, ಒಡೆದ ಮನಸ್ಸುಗಳಲ್ಲಿ ಬದುಕುತ್ತಿದ್ದಾರೆ.

ಯಾವುದೋ ಕಾಲದಲ್ಲಿ, ಯಾವುದೋ ಕಾರಣಕ್ಕಾಗಿ ಸೃಷ್ಟಿಯಾದ ವರ್ಣವ್ಯವಸ್ಥೆಯು ತನ್ನ ತಳಪಾಯದಲ್ಲಿ ಅಸ್ಪೃಶ್ಯತೆಯ ಅಸಮಾದಾನವನ್ನು ಹುಟ್ಟಿಸಿದೆ. ಇದರಿಂದಾಗಿ ಮೇಲ್ವರ್ಗದವರು ಕೆಳವರ್ಗದರೆಂದು ಭೇದವಾಗಿ ಮನುಷ್ಯ ಮನುಷ್ಯರ ನಡುವೆ ಅಂತರ ಏರ್ಪಟ್ಟಿದೆ. ಇದಕ್ಕೆಲ್ಲ ಜಾತಿ ಎಂಬ ವಿಷ ಬೀಜವೇ ಕಾರಣವಾಗಿರುತ್ತದೆ ಎಂಬುವುದನ್ನೇ ಈ 'ಬಲಿ' ಎಂಬ ಕಥೆಯು ತನ್ನ ಸಂವೇದನೆಗಳ ಮೂಲಕ ಅಭಿವ್ಯಕ್ತಗೊಳಿಸುತ್ತದೆ. "ನಮ್ಮ ಉಸಿರು ಸಹಾ ಸೋಕಬಾರದೆಂದು, ನೀವು ಭಾವಿಸಿದ್ದಿರಿ. ಸತ್ತ ಎತ್ತಿನ ಮಾಂಸವನ್ನು ತಿನ್ನುವ ನಮ್ಮ ಎಂಜಲು ಭೂಮಿಗೆ ತಾಕಿದರೆ ಮೈಲಿಗೆಯಾಗುತ್ತದೆಂದು, ನಿಮ್ಮ ಶಾಸ್ತ್ರಗಳಲ್ಲಿ ಹೇಳಿರುವುದರಿಂದ ನಾವು ಕುತ್ತಿಗೆಗೆ ಮಣ್ಣಿನ ಮಡಿಕೆಗಳನ್ನು ತೂಗುಹಾಕಿಕೊಂಡು ನಡೆದದ್ದು, ಆ ಗುಲಾಮತನದ ಸಂಕೇತವನ್ನು ಭಿಕ್ಷಾಪಾತ್ರೆಯ ಹಾಗೆ ಹೊತ್ತು ತಿರುಗಿದ್ದ, ವನ್ಯಪಶುಗಳಂತೆ ಬದುಕಿದ ಆ ದಿನಗಳ ಬಗ್ಗೆ ನನ್ನ ತಾತ ಸಾಕಷ್ಟು ಹೇಳಿದ್ದಾರೆ.ಆ ಶಾಸ್ತ್ರಗಳೆಲ್ಲಾ ನಿಮ್ಮ ಪೂರ್ವಜರಿಂದ ಬರೆಯಲ್ಪಟ್ಟಿದ್ದು."[೩೪] ಹೀಗೆಂದು ಒಬ್ಬ ಬ್ರಾಹ್ಮಣ ಹುಡುಗಿ, ವೇಶ್ಯೆಯಾಗಿ ಸಿಕ್ಕ ಸಂದರ್ಭದಲ್ಲಿ, ದಲಿತ ಯುವಕನೊಬ್ಬ ಅವಳ ಅಸಹಾಯಕ ಸ್ಥಿತಿಯನ್ನು ನೋಡುವುದಿಲ್ಲ.

ಅವಳ ಮೇಲೆ ಸೇಡು ತೀರಿಸಿಕೊಳ್ಳಲು ಮಾತನಾಡುವ ಎಲ್ಲಾ ಹಿಂಸೆಗಳ ಹಿಂದೆ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ.ಕನ್ನಡದ ಮಂಜು ಕೋಡಿಉಗನೆ ಯವರು ಬರೆದಿರುವ 'ನೀ ಬೆರೆಸುವ ಭೇದ' ಕಥೆಯಲ್ಲಿಯೂ ನಾಯಕನ ಪ್ರೇಮವೈಫಲ್ಯಕ್ಕೆ ಜಾತಿವ್ಯವಸ್ಥೆಯೇ ಕಾರಣವಾಗಿರುತ್ತದೆ. ಈ ಜಾತಿ ವ್ಯವಸ್ಥೆಯಿಂದ ಮನುಷ್ಯನ ಮನಸ್ಸುಗಳು ಬೆರೆಯದಿರುವುದಕ್ಕೆ ಕಾರಣವಾಗಿದೆ ಎಂಬುವುದನ್ನು ಈ ಎರಡು ಕತೆಗಳು ದಲಿತ ಸಂವೇದನೆಯ ನೆಲೆಯಲ್ಲಿ, ಜಾತಿವ್ಯವಸ್ಥೆಯ ಸೂತಕವನ್ನು ಕುರಿತು ಅಭಿವ್ಯಕ್ತಗೊಳಿಸುತ್ತವೆ. ಈ ಜಾತಿಯಲ್ಲಾದ ಭೇದ ಮನಸ್ಸುಗಳನ್ನು ಅಗಲಿಸಿ ಬೆಂಕಿಯ ಮಳೆಯನ್ನು ಸುರಿಸುತ್ತಿದೆ. ಇದರಿಂದಾಗಿ ದಲಿತವರ್ಗದರು ಈ ಜಾತಿಯ ಸೃಷ್ಟಿಯಿಂದಲೇ ಶೋಷಣೆಯನ್ನು ಅನುಭವಿಸುತ್ತಿದ್ದಾರೆ ಎಂಬುವುದನ್ನು ಈ ಕಥೆಗಳು ಅಂಬೇಡ್ಕರವಾದದ ನೆಲೆಯಿಂದ ನಿರೂಪಿಸುತ್ತವೆ.

## ಅಡಿ ಟಿಪ್ಪಣಿಗಳು

೧. ದೇವನೂರ ಮಹದೇವ – ಎಲ್ಲಾ ಕಥೆ ಕಾದಂಬರಿಗಳು ದೇವನೂರ ಮಹದೇವ–ಪು.ಸಂ– ೪೦.

೨. ಕಮಲಾದಾಸ್(ಮೂ) / ಕೆ.ಕೆ.ಗಂಗಾಧರನ್(ಅ) – ಡಾ.ಕಮಲಾದಾಸ್‌ರವರ ಸಮಗ್ರ ಕಥೆಗಳ ಸಂಪುಟ–೧ – ಪು.ಸಂ– ೨೦೦.

೩. ಡಾ.ಮೊಗಳ್ಳಿ ಗಣೇಶ – ಮೊಗಳ್ಳಿ ಕಥೆಗಳು – ಪು.ಸಂ – ೩೫೩ ಮತ್ತು ೩೫೪.

೪. ತಮಿಳವನ್ (ಮೂ) / ಕೆ. ನಲ್ಲತಂಬಿ (ಅ) – ಹತ್ತು ತಮಿಳು ಕಥೆಗಳು – ಪು.ಸಂ– ೯೫.

೫. ಅರವಿಂದ ಮಾಲಗತ್ತಿ – ಸುವರ್ಣ ಕಥಾ ಸಂಕಲನ – ಪು.ಸಂ– ೫೩೯.

೬. ಪಾಲಗುಮ್ಮಿ ಪದ್ಮರಾಜು (ಮೂ) / ಆರ್ವಿಯಸ್ ಸುಂದರಂ (ಅ) – ಬಿರುಗಾಳಿ – ಪು.ಸಂ– ೧೮೪.

೭. ಪಿ. ಲಂಕೇಶ್ – ಶತಮಾನದ ಸಣ್ಣ ಕಥೆಗಳು – ಪು.ಸಂ – ೨೭೮.

೮. ಶರಣಕುಮಾರ ಲಿಂಬಾಳೆ (ಮೂ) / ಮಹೆಬೂಬ್ ಇಮಾಮಸಾಬ ಜಿಡ್ಡೆ (ಅ) – ಸದಾ ಪ್ರವಹಿಸುವ ಕಥೆಗಳು – ಪು.ಸಂ – ೫೦.

೯. ಎಚ್.ಎಸ್. ಬೇನಾಳ – ಬಹಿಷ್ಕಾರ – ಪು.ಸಂ – ೪೧.

೧೦. ಡಾ. ಬಾಬೂರಾವ್ ಗಾಯಕವಾಡ್ (ಮೂ) / ಡಾ. ವಿಜಯಾ.ಆರ್.ಕಾಂಬಳೆ (ಅ) – ಮನುಷ್ಯರನ್ನು ಹುಡುಕುತ್ತ – ಪು.ಸಂ–೧೩.

೧೧. ಜಡೇಕುಂಟೆ ಮಂಜುನಾಥ – ನವಲೇಖನ ಕನ್ನಡ ಕಥೆಗಳು – ಪು.ಸಂ–೧೧೨.

೧೨. ಶರಣಕುಮಾರ ಲಿಂಬಾಳೆ (ಮೂ) / ಡಾ. ಪ್ರಮೀಳಾ ಮಾಧವ್ (ಅ) ಅಸ್ಪೃಶ್ಯ(ಕಥಾ ಸಂಕಲನ) – ಪು.ಸಂ– ೨೭.

೧೩. ಹಳೆಮನೆ ರಾಜಶೇಖರ – ಸುವರ್ಣ ಕಥಾ ಸಂಕಲನ – ಪು.ಸಂ – ೭೦೯.

೧೪. ನೀಲಪದ್ಮನಾಭನ್ (ಮೂ) / ಶೇಷನಾರಾಯಣ (ಅ) – ತಮಿಳು ಕಥಾ ಸೌರಭ–ಪು.ಸಂ – ೧೨೧.

೧೫. ಜಿ.ಪಿ. ಬಸವರಾಜು – ಬೆತ್ತಲೆಯ ಬೆಳಕನುಟ್ಟು (ಕಥಾ ಸಂಕಲನ) - ಪು.ಸಂ– ೧೩೬.

೧೬. ಶ್ರೀ ಪವಣ್ಣನ್ (ಮೂ) / ಬಿ.ಎಸ್. ಖೂಬಾ (ಅ) – ಕಥಾ ಭಾರತಿ – ಪು.ಸಂ– ೦೭.

೧೭. ಹನುಮಂತ ಹಾಲಗೇರಿ – ನವಲೇಖನ ಕನ್ನಡ ಕಥೆಗಳು – ಪು.ಸಂ– ೧೨.

೧೮. ರಾಸಾನಿ (ಮೂ) / ಟಿ.ಡಿ. ರಾಜಣ್ಣ ತಗ್ಗಿ (ಅ) – ರಾಸಾನಿ ಕಥೆಗಳು – ಪು.ಸಂ– ೧೧೪.

೧೯. ಈಶ್ವರಚಂದ್ರ – ಶತಮಾನದ ಸಣ್ಣ ಕಥೆಗಳು – ಪು.ಸಂ– ೪೪೦.

೨೦. ಜಯಕಾಂತನ್ (ಮೂ) / ಎಚ್.ವಿ. ನಾರಾಯಣ (ಅ) – ಜಯಕಾಂತನ್ ಅವರ ಕಥೆಗಳು – ಪು.ಸಂ– ೨೯.

೨೧. ಕುಂ. ವೀರಭದ್ರಪ್ಪ – ಬರೀ ಕಥೆಯಲ್ಲೋ ಅಣ್ಣಾ ಕುಂ.ವೀ. ಕಥೆಗಳು – ಪು.ಸಂ– ೩೭೮

೨೨. ರಾವೂರಿ ಭರಧ್ವಾಜ (ಮೂ) / ಎಚ್.ಎಸ್. ಸುಜಾತ (ಅ) – ಜೀವನ ಸಮರ (ನೊಂದವರ ಸತ್ಯ ಕಥೆಗಳು) – ಪು.ಸಂ– ೯೭.

೨೩. ಡಾ. ಚೆನ್ನಣ್ಣ ವಾಲೀಕಾರ – ಸಮಗ್ರ ಕಥಾ ಸಂಪುಟ ಡಾ. ಚನ್ನಣ್ಣ ವಾಲೀಕಾರ–ಪು.ಸಂ.–೨೩೩

೨೪. ಸಿ.ಎಸ್. ರಾವು (ಮೂ) / ವೀರಭದ್ರ (ಅ) – ತೆಲುಗು ಕಥಾ ಸಂಕಲನ – ಪು.ಸಂ– ೧೦೭

೨೫. ಬೆಸಗರಹಳ್ಳಿ ರಾಮಣ್ಣ – ಸುವರ್ಣ ಕಥಾ ಸಂಕಲನ – ಪು.ಸಂ– ೧೮೯

೨೬. ಜಯಕಾಂತನ್ ಡಿ. (ಮೂ) / ಡಾ.ಪಾ.ಶ. ಶ್ರೀನಿವಾಸ (ಅ) – ಪ್ರಸಾದ (ತಮಿಳು ಸಣ್ಣ ಕಥೆಗಳ ಸಂಕಲನ)– ಪು.ಸಂ – ೪೯

೨೭. ಎಸ್.ಆರ್. ಗುರುನಾಥ – ದಲಿತ ಸಾಹಿತ್ಯ ಸಂಪುಟ – ಪು.ಸಂ – ೬೯

೨೮. ಚೆರಿಯನ್, ಚೆರಿಯನ್ (ಮೂ) / ಕೆ.ಕೆ. ನಾಯರ್ (ಅ) – ಪ್ರೇಮಿಸುವುದು ಎಂಬ ಹಕ್ಕು – ಪು.ಸಂ – ೧೫೯

೨೯. ನಿರಂಜನ – ಕನ್ನಡ ಸಣ್ಣ ಕಥೆಗಳು – ಪು.ಸಂ – ೧೨೦

೩೦. ಕಮಲಾದಾಸ್ (ಮೂ) / ಪಾರ್ವತಿ ಜಿ. ಐತಾಳ್ (ಅ) – ನನ್ನ ಚೀರಾಳಜ್ಜನ ಕಡುಗತ್ತಿ ಮತ್ತು ಇತರೆ ಮಲಿಯಾಳಿ ಕಥೆಗಳು – ಪು.ಸಂ – ೮೯

೩೧. ಎಚ್.ಎಸ್. ಬೇನಾಳ – ಬಹಿಷ್ಕಾರ(ಕಥಾ ಸಂಕಲನ) – ಪು.ಸಂ – ೩೪

೩೨. ಓಲ್ಗಾ (ಮೂ) / ಜಿ. ವೀರಭದ್ರಗೌಡ (ಅ) – ರಾಜಕೀಯ ಕಥೆಗಳು – ಪು.ಸಂ – ೫೭

೩೩. ಮಂಜು ಕೋಡಿಉಗನೆ – ಬೆಟ್ಟಬೇಗೆ – ಪು.ಸಂ– ೮೮

೩೪. ದೇವಿ ಭಾರತಿ (ಮೂ) / ಜಯಲಲಿತ (ಅ)–ಬಾಗಿಲು (ಈ ಹೊತ್ತಿನ ತಮಿಳು ಕಥೆಗಳು)– ಪು.ಸಂ–೯೪

ಅಧ್ಯಾಯ : ಆರು

# ಅಧ್ಯಯನದ ಫಲಿತಗಳು

ಬಡತನವೇ ಬದುಕಾಗಿರುವ ತಳವರ್ಗದವರ ಪರಿಸ್ಥಿತಿಗಳ ಸುತ್ತ ಸುತ್ತಿದ್ದು ದಲಿತ ಸಾಹಿತ್ಯವಾಗಿದೆ. ಇದು ವಾಸ್ತವದ ಗ್ರಹಿಕೆಯಿಂದ ದಲಿತರು ಪಡುತ್ತಿರುವ ಅಸಮಾನತೆಯ ನೋವುಗಳನ್ನು ಅಭಿವ್ಯಕ್ತಿಸುತ್ತದೆ.ಇದರಿಂದಾಗಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ತನ್ನದೇ ಆದ ಒಂದು ವಿಶಿಷ್ಟ ಸ್ಥಾನವನ್ನು ಉಳಿಸಿ ಬೆಳೆಸಿಕೊಂಡು ದಲಿತ ಸಾಹಿತ್ಯ ಬೆಳೆಯುತ್ತಿದೆ. ಸತ್ಯವನ್ನು ಶೋಧಿಸಿ ಜಗತ್ತಿಗೆ ಒಂದು ಹೊಸ ಲೋಕವನ್ನು ಪರಿಚಯಮಾಡಿಕೊಟ್ಟಿರುತ್ತದೆ. ನೊಂದವರ, ಅತಂತ್ರರ, ಶೋಷಿತರ ಕುರಿತು ತನ್ನ ಸಂವೇದನೆಗಳನ್ನು ಹಂಚಿಕೊಂಡು ಸಾಮಾಜಿಕ ಸಮಾನತೆಯ ಜಾಗೃತಿಯನ್ನು ಮೂಡಿಸಿರುತ್ತದೆ. ಬದುಕುವ ಹಕ್ಕನ್ನು ದಲಿತರಿಗೆ ಅರ್ಥೈಸಿಕೊಟ್ಟಿರುವ ಇಂತಹ ದಲಿತ ಸಾಹಿತ್ಯ ಕೃಷಿಗಳು ಕನ್ನಡ, ತೆಲುಗು, ಮಲಿಯಾಳಿ, ತಮಿಳು, ಮರಾಠಿ ಭಾಷೆಯಲ್ಲಿ ಮೂಡಿಬಂದ ಕಥಾ ಸಾಹಿತ್ಯದ ಆಯ್ದ ಕಥೆಗಳನ್ನು ನನ್ನ ಸಂಶೋಧನೆಗೆ ಒಳಪಡಿಸಿದ್ದೇನೆ. ಅವುಗಳಿಂದ ಹೊರಹೊಮ್ಮಿದ ಫಲಿತಗಳು ಈ ಕೆಳಕಂಡಂತೆ ನನ್ನನುಭವಕ್ಕೆ ತಿಳಿದುಬಂದಿರುತ್ತವೆ.

* ಅಂಬೇಡ್ಕರ್, ಕಾರ್ಲಮಾರ್ಕ್ಸ, ಲೋಹಿಯ, ಲೆನಿನ್, ಫೆಮಿನಿಸಂ ಚಿಂತನೆಗಳಿಂದ ಪ್ರಭಾವಿತರಾಗಿ ಅವರ ಸಿದ್ಧಾಂತದ ವಿಚಾರಧಾರೆಗಳನ್ನು ತಮ್ಮ ಕಥೆಗಳ ಮೂಲಕ ಇಲ್ಲಿನ ಕತೆಗಾರರು ದಲಿತ ಸಂವೇದನೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.
* ಕನ್ನಡ ಕತೆಗಳು ಮತ್ತು ಅನುವಾದಿತ ಕಥೆಗಳನ್ನು ತೌಲನಿಕವಾಗಿ ಅಧ್ಯಯನ ನಡೆಸಿದಾಗ ಕಥೆಗಳ ಸ್ವರೂಪ ಭಿನ್ನವಾದರೂ, ಕಥೆಗಾರರಲ್ಲಿರುವ ದಲಿತ ಒಳಸಂವೇದನೆಗಳು ಒಂದೇ ಆಗಿರುತ್ತವೆ.
* ಮಾನವತಾವಾದವನ್ನು ಪ್ರತಿಪಾದಿಸಿ ಕತೆಗಾರರು ಸಮಾಜದಲ್ಲಿರುವ ಅಸ್ಪೃಶ್ಯತೆ, ಅಸಮಾನತೆ, ದಲಿತರ ಮೇಲೆ ನಡೆಸುತ್ತರುವ ಶೋಷಣೆಗಳನ್ನು ಕುರಿತು ತಮ್ಮ ಚಿಂತನೆಗಳನ್ನು ಮಂಡಿಸಿದ್ದಾರೆ.
* ಶೋಷಣೆ, ಹಸಿವು, ಅಸಮಾನತೆಯ ಸಂಕಟಗಳಿಂದ ತುಂಬಿರುವ ಸಮಾಜವನ್ನು ಇಲ್ಲಿರುವ ತೆಲುಗು, ತಮಿಳು, ಮಲಿಯಾಳಂ, ಮರಾಠಿ ಹಾಗೂ ಕನ್ನಡ ಕಥೆಗಳು ತೋರಿಸಿಕೊಡುತ್ತವೆ.

* ದಲಿತ ಮತ್ತು ಬಂಡಾಯ ಚಳುವಳಿಗಳು ದಲಿತ ಸಂವೇದನೆಯ ಬರಹಗಳಿಗೆ ಸ್ಫೂರ್ತಿ ನೀಡಿರುವುದು ಹಾಗೂ ದಲಿತರು ಸಮಾನತೆಯಿಂದ ಬದುಕಬೇಕೆಂಬ ಹೋರಾಟದ ಮುಖಗಳು ಕಥೆಗಾರರಿಂದ ಕಾಣುತ್ತವೆ.

* ತೆಲುಗು ಮತ್ತು ತಮಿಳು ಕಥೆಗಳಲ್ಲಿರುವ ಜಮಿಂದಾರಿ ಪದ್ಧತಿಯು ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿರುವ ಭೂಹೀನ ದಲಿತರ ನೋವಿನ ಕೂಗುಗಳನ್ನು ತಿಳಿಸಿಕೊಡುತ್ತವೆ.

* ಆರ್ಥಿಕ ಶೋಷಣೆಗೆ ಒಳಗಾದವರಿಗೆ ನ್ಯಾಯವನ್ನು ಒದಗಿಸುವ ಸಲುವಾಗಿ ಕಥೆಗಾರರು ತಮ್ಮ ಬರವಣಿಗೆಯಿಂದ ಬಂಡವಾಳಶಾಹಿಗಳ ವಿರುದ್ಧ ಹೋರಾಟವನ್ನು ಮಾಡುತ್ತಿದ್ದಾರೆ.

* ಮಹಾರಾಷ್ಟ್ರದಲ್ಲಿರುವ ದಲಿತ ಹೋರಾಟದ ಸಂಘಟನೆಯ ಸಾಹಿತ್ಯವು ದಲಿತರ ಸಾಮಾಜಿಕ ಬದಲಾವಣೆಯ ಜಾಗೃತಿಯನ್ನು ಮೂಡಿಸಲು ಕಾರಣವಾಗಿರುವುದು ಈ ಕಥಾಲೋಕದಿಂದ ತಿಳಿದುಬರುತ್ತದೆ.

* ಕೇರಳದಲ್ಲಿರುವ ದಲಿತ ಸಾಹಿತ್ಯವು ಮಾರ್ಕ್ಸವಾದದ ನೆಲೆಯಿಂದ ರೂಪಿತಗೊಂಡು ಬಂಡವಾಳಶಾಹಿಗಳಿಂದ ಬಡವರು ಶೋಷಣೆಗಳಿಗೆ ಬಲಿಯಾಗುತ್ತಿರುವುದನ್ನು ಕಥೆಗಳ ಮೂಲಕ ನಿರೂಪಿಸುತ್ತಿದೆ.

* ದಲಿತ ಸಂಘಟನೆಗಳ ಪ್ರಭಾವದಿಂದ ಆಂಧ್ರಪ್ರದೇಶದಲ್ಲಿ ಹೋರಾಟದ ಚಳುವಳಿಗಳು ಸಾಹಿತ್ಯ ಲೋಕವನ್ನು ಪ್ರವೇಶಿಸಿ ಸಮಾನತೆಗಾಗಿ ಕ್ರಾಂತಿಗೆ ಕಾರಣವಾಗಿರುವುದು ಕಂಡುಬರುತ್ತದೆ.

* ಇಲ್ಲಿರುವ ಕಥೆಗಳು ಕೇವಲ ಕಥೆಯಾಗಿರದೆ ಅಂದರೆ ಕಲ್ಪನೆಯಿಂದ ಕೂಡಿರದೆ ವಾಸ್ತವದ ಸಾಮಾಜಿಕ ಸ್ಥಿತಿಗಳನ್ನು ತಿಳಿಸಿಕೊಡುತ್ತವೆ.

* ಕನ್ನಡ ಅನುವಾದಿತ ಕಥೆಗಳ ಚಾರಿತ್ರಿಕ ಸಮೀಕ್ಷೆಯಿಂದ ಬ್ರಿಟಿಷ್ ಮಿಷನರಿಗಳ ಕೊಡುಗೆ ಭಾರತೀಯ ಸಾಹಿತ್ಯದ ಮೇಲೆ ಎಷ್ಟಿದೆಯೆಂಬುದು ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ಭಾರತೀಯ ಪ್ರಾಂತ್ಯಗಳ ನಡುವೆ ಹಿಂದಿನಿಂದಿರುವ ಸಂಬಂಧಗಳು ಅದರ ಮಹತ್ವ ಚಾರಿತ್ರಿಕ ನೆಲೆಯಿಂದ ಗೊತ್ತಾಗುತ್ತದೆ.

* ವೇಶ್ಯಾ ಪದ್ಧತಿ, ಅತ್ಯಾಚಾರ, ಆರ್ಥಿಕ ಶೋಷಣೆಯಿಂದ ದಲಿತ ಮಹಿಳೆಯರು ಪಡುತ್ತಿರುವ ಮಾನಸಿಕ ಮತ್ತು ದೈಹಿಕ ಸಂಕಟಗಳನ್ನು ಈ ಕಥೆಗಳು ತೋರಿಸಿಕೊಟ್ಟಿವೆ.

* ಜಾತಿವ್ಯವಸ್ಥೆ ಮತ್ತು ಜೀತ ಪದ್ಧತಿಯಿಂದ ನೊಂದ ದಲಿತರ ಬದುಕಿನ ಚಿತ್ರಣವನ್ನು ಹೃದಯಸ್ಪರ್ಶಿಯಾಗಿ ಕಥೆಗಾರರು ಇಲ್ಲಿ ದಲಿತ ಸಂವೇದನೆಗಳನ್ನು ಹಿಡಿದಿಟ್ಟಿದ್ದಾರೆ.

* ಬಂಡವಾಳಶಾಹಿಗಳು ಮತ್ತು ಪುರೋಹಿತಶಾಹಿಗಳಿಂದ ದಲಿತ ವರ್ಗದವರ ಬದುಕು ನಲುಗಿದ ಸ್ಥಿತಿಯನ್ನು ಮತ್ತು ದಲಿತ ಮಹಿಳಾ ಮನೋವ್ಯಥೆಯನ್ನು ಈ ಕತೆಗಳು ಅಭಿವ್ಯಕ್ತಿಸುತ್ತವೆ.

# ಸಮಾರೋಪ

ತನ್ನನ್ನೂ ತಾನು ಸ್ವಾಭಿಮಾನದಿಂದ ಸ್ವತಂತ್ರವಾಗಿ ತಲೆಯನ್ನೆತ್ತಿಕೊಂಡು ಬದುಕಲು ಸಾಧ್ಯವಾಗದಂತಹ ಸ್ಥಿತಿಯಲ್ಲಿ, ಅಸಹಾಯಕವಾಗಿ ಅವಮಾನಗಳನ್ನು ಅನುಭವಿಸಿಕೊಂಡು ಮಾನವ ಸಮಾಜದಲ್ಲಿ ಶೋಷಣೆಗಳ ಸರಮಾಲೆಗಳನ್ನೊತ್ತುಕೊಂಡು, ಬಡತನದ ಹಸಿವಿನಲ್ಲಿ ಬೆಂದು ತನ್ನ ಬದುಕನ್ನು ಅಸಮಾನತೆಯ ರಕ್ತಕಣ್ಣೀರನ್ನು ಉಣ್ಣುತ್ತಿರುವ, ಈ ಸಮಾಜದ ಕಟ್ಟಕಡೆಯ ವ್ಯಕಿಯಾದ ದಲಿತ, ಬಲಿಷ್ಠರ ಬಲಿತನಕ್ಕೆ ಒಳಗಾಗಿರುವ ದಲಿತ ಸಂವೇದನೆಗಳನ್ನು ಈ ಕನ್ನಡ ಅನುವಾದಿತ ಕಥೆಗಳು ಅನಾವರಣಗೊಳಿಸುತ್ತವೆ. ದಲಿತ ಲೇಖಕರ ವಿಚಾರಧಾರೆಗಳು ಈ ಕಥೆಗಳಲ್ಲಿ ಪಂಜಿನ ಉರಿಯಂತೆ ಪ್ರಜ್ವಲಿಸುತ್ತವೆ. ಅದರ ಬೆಳಕು ಪ್ರತಿಭಟನೆಯ ಸೂಚಕವಾಗಿ ನೊಂದವರಿಗೆ, ದಮನಿತರಿಗೆ ಸಮಾನತೆಯನ್ನು ಸಾಧಿಸುವ ಭರವಸೆಯ ಬದುಕನ್ನು ಕಟ್ಟಿಕೊಡುತ್ತವೆ. ಬ್ರಾಹ್ಮಣಿಕೆಯ ಸೋಂಕಿನಿಂದ ಪಾರಾಗುವ ಬಿಡುಗಡೆಯ ದಾರಿಯನ್ನು ತೋರಿಸುತ್ತವೆ.

ಅಂಬೇಡ್ಕರ್‌ರವರ ವಿಚಾರಧಾರೆಗಳಿಂದ ಪ್ರಭಾವಿತರಾಗಿ ಸಮಾಜದಲ್ಲಿ ಬೇರೂರಿರುವ ಶಾಸ್ತ್ರ, ಪುರಾಣ, ಸಂಪ್ರದಾಯಗಳ ಮೌಢ್ಯತೆಗಳನ್ನು ಮರುಶೋಧಿಸುತ್ತವೆ. ಲೇಖಕರಿಗೆ ಇಲ್ಲಿ ಬರಹವು ಒಂದು ಸಂಘರ್ಷದ ಅಸ್ತ್ರವಾಗಿ ಅಥವಾ ಅದುವೇ ಅವರ ಸಮರಕಲೆಯಾಗಿ ಮೈಗೂಡಿಸಿಕೊಂಡು ಶೋಷಣೆಗೆ ಒಳಪಟ್ಟ ದಲಿತರ ಪರವಾಗಿ ಸಾಮಾಜಿಕ ಸಮಾನತೆಯ ಸಮರವನ್ನು ಮುನ್ನಡೆಸಲು ಈ ಕಥೆಗಳು ಒಂದು ಸೈದ್ಧಾಂತಿಕ ಸ್ಪಷ್ಟ ಧೋರಣೆಗಳಿಂದ ಕೆಂಡದುಂಡೆಗಳಾಗಿ, ದಮನಿತರ ಧ್ವನಿಯಾಗಿ ಪುರೋಹಿತಶಾಹಿಗಳ ಮತ್ತು ಬಂಡವಾಳಶಾಹಿಗಳ ವಿರುದ್ಧ ಹಕ್ಕುಗಳ ಆಂದೋಲನವನ್ನು ನಡೆಸುತ್ತವೆ. ಪ್ರಸ್ತುತ ಸಮಾಜದಲ್ಲಿ ದಲಿತರಿಗೆ ಎದುರಾಗುವ ಸವಾಲು ಮತ್ತು ಸಮಸ್ಯೆಗಳ ಮೇಲೆ ಈ ಕಥೆಗಳು ಲೇಖಕರ ಸಂವೇದನೆಗಳ ಮೂಲಕ ಬೆಳಕನ್ನು ಚೆಲ್ಲುತ್ತವೆ. ದಲಿತರಿಗಾಗಿರುವ ಶೋಷಣೆಯ ಮೂಲವನ್ನು ಶೋಧಿಸುತ್ತವೆ. ಡಾ.ಬಿ.ಆರ್. ಅಂಬೇಡ್ಕರ್, ಕಾರ್ಲ್‌ಮಾರ್ಕ್ಸ್, ಲೋಹಿಯ, ಲೆನಿನರವರ ಚಿಂತನೆಗಳ ನೆಲೆಯಲ್ಲಿ ಈ ಕಥೆಗಳು ರೂಪುಗೊಂಡು, ವಾಸ್ತವ ಸಮಾಜದಲ್ಲಿ 'ಸಮಾನತೆ'ಯನ್ನು ಸಾಧಿಸಲೆಂದೇ ಇಲ್ಲಿನ ಈ ದಲಿತ ಲೇಖಕರು ಕಥೆಗಳ ಮೂಲಕ ತಮ್ಮ ತಮ್ಮ ಚಿಂತನೆಗಳನ್ನು ಮಂಡಿಸಿದ್ದಾರೆ.

ಸಮಾಜದಲ್ಲಿ ಬದುಕುವ ಪ್ರತಿಯೊಬ್ಬರು ಸಮಾನರು. ಅವರಿಗೆಲ್ಲ ಸಮಾನವಾದ ಮೂಲಭೂತ ಸೌಕರ್ಯಗಳು ಸಿಗುವಂತಾಗಬೇಕು. ಯಾರೂ ಮತ್ತೊಬ್ಬರಿಂದ ಶೋಷಣೆಗೆ ಒಳಪಡದೆ ಅವರು ಸಂವಿಧಾನದ ಮೂಲಭೂತ ಹಕ್ಕುಗಳಿಂದ ಸ್ವಾಭಿಮಾನದ ಸ್ವತಂತ್ರತೆಯ ಬದುಕನ್ನು ಪಡೆದುಕೊಳ್ಳಬೇಕು. ಇದು ಈ ಎಲ್ಲಾ ಕಥೆಗಳಲ್ಲಿರುವ ಮೂಲ ಉದ್ದೇಶವಾಗಿರುತ್ತದೆ. "ಜಗತ್ತಿನ ಎಲ್ಲಾ ವಿದ್ಯಮಾನಗಳ ಬಾಗಿಲು ತೆಗೆಯುವ ಬಹುದೊಡ್ಡ ಬೀಗದ ಕೈ ಎಂದರೆ ಅಧಿಕಾರ." ಎಂದು ಅಂಬೇಡ್ಕರ್ ರವರು ಹೇಳಿದ್ದು ಸತ್ಯವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ದಲಿತರು ತಮ್ಮ ಅಕ್ಷರದರಿವಿನಿಂದ ಅಧಿಕಾರವನ್ನು ಪಡೆದುಕೊಳ್ಳುವಂತಾಗಬೇಕು. ಅದರಿಂದಲೇ ಸಮಾನತೆ ಸಾಧಿಸಿ ಆರ್ಥಿಕ ಸಬಲತೆಯನ್ನು ಪಡೆದುಕೊಳ್ಳಬೇಕು. ನೋವು, ಅಪಮಾನ, ನಿಂದನೆಗಳಿಂದ ಮುಕ್ತರಾಗಿ ಬಹುತ್ವದ ಭಾರತದಲ್ಲಿ ಐಕ್ಯತೆಯಿಂದ ಬದುಕಬೇಕು. ಅದರಿಂದ ಆರ್ಥಿಕ ಅಭಿವೃದ್ಧಿ ಸಾಧಿಸಬೇಕು. ದಲಿತರಿಗೆ ಸಮಾನತೆ ಸಿಗುವುದೇ ದೇಶದ ಅಭಿವೃದ್ಧಿಯಾಗಿದೆ. ದಲಿತರು ಸ್ವತಂತ್ರತೆಯಿಂದ, ನಿರ್ಭೀತರಾಗಿ ಸಮಾಜದಲ್ಲಿ ಸಹಬಾಳ್ವೆಯಿಂದ ಸಮಾನವಾಗಿ ಬೆರೆತುಕೊಳ್ಳಬೇಕು. ಇಂತಹ ಆಶಯಗಳೊಂದಿಗೆ ದಲಿತ ಲೇಖಕರು ಈ ಕಥೆಗಳ ಮೂಲಕ ದಲಿತ ಸಂವೇದನೆಗಳನ್ನು ಪ್ರತಿಪಾದಿಸುತ್ತ ದಲಿತರ ವೇದನೆಗಳನ್ನೇ ಇಲ್ಲಿ ಕಥೆಗಳನ್ನಾಗಿಸಿದ್ದಾರೆ. "ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ" ಎಂಬ ಈ ನನ್ನ ಸಂಶೋಧನಾ ಮಹಾಪ್ರಬಂಧದಲ್ಲಿ ೧೮ನೇ ಶತಮಾನದಲ್ಲಿ ಕರ್ನಾಟಕಕ್ಕೆ ಬಂದ ಬ್ರಿಟಿಷ್ ಮಿಷನರಿಗಳಿಂದ ಇಲ್ಲಿಯವರೆಗೆ ಕನ್ನಡಕ್ಕೆ ಅನುವಾದಗೊಂಡಿರುವ ತೆಲುಗು, ತಮಿಳು, ಮಲಿಯಾಳಿ, ಮರಾಠಿ ಕಥೆಗಳನ್ನು ಮತ್ತು ಕನ್ನಡದ ದಲಿತ ಕಥೆಗಳನ್ನು ಆಯ್ದುಕೊಂಡು ಅವುಗಳಲ್ಲಿರುವ 'ದಲಿತ ಸಂವೇದನೆ'ಗಳನ್ನು ಅಧ್ಯಯನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆಗಳನ್ನು ಸಿದ್ಧಪಡಿಸಿಕೊಂಡಿದ್ದೇನೆ. ಅದರಂತೆ ಎರಡನೆಯ ಅಧ್ಯಾಯದಲ್ಲಿ ಬ್ರಿಟಿಷ್ ಮಿಷನರಿಗಳಿಂದ ಇಲ್ಲಿವರೆಗೆ ಕನ್ನಡಕ್ಕೆ ಅನುವಾದಗೊಂಡಿರುವ ತೆಲುಗು, ತಮಿಳು, ಮಲಿಯಾಳಿ, ಮತ್ತು ಮರಾಠಿ ಕನ್ನಡ ಅನುವಾದಿತ ಕಥೆಗಳ ಚರಿತ್ರೆಯನ್ನು ಕುರಿತು ಅವಲೋಕನ ಮಾಡಿರುತ್ತೇನೆ.ಮೂರನೇ ಅಧ್ಯಾಯಯವಾದ 'ಕನ್ನಡ ಅನುವಾದಿತ ಕಥೆಗಳು : ದಲಿತ ಸಂವೇದನೆ'ಯಲ್ಲಿ ತೆಲುಗು, ತಮಿಳು, ಮಲಿಯಾಳಿ, ಮರಾಠಿಯಿಂದ ಕನ್ನಡನುವಾದ ಕಥೆಗಳಲ್ಲಿ 'ದಲಿತ ಸಂವೇದನೆ'ಯನ್ನು ಅಧ್ಯಯನ ಮಾಡಲಾಗಿದೆ. ಇದು ಅಧ್ಯಯನದ ಪ್ರಮುಖ ಅಧ್ಯಾಯವಾಗಿರುತ್ತದೆ.

ಈ ಮೇಲಿನ ನಾಲ್ಕು ಭಾಷೆಯ ಪ್ರಮುಖ ಲೇಖಕರಾದ ಪಾಲಗುಮ್ಮಿ ಪದ್ಮರಾಜು, ಜಯಕಾಂತನ್, ವಾಸುದೇವನ್ ನಾಯರ್, ರಾವೂರಿ ಭರಧ್ವಾಜ, ಪೊನ್‌ಕುನ್ನಂ ವರ್ಕಿ, ಅಶೋಕಮಿತ್ರನ್, ಮುಕುಂದನ್, ಸಿ.ಎಸ್.ರಾವು, ಶ್ರೀ ಪವಣ್ಣನ್, ರಾಸಾನಿ, ಶರಣಕುಮಾರ ಲಿಂಬಾಳೆ, ಮಾರಿ ಅರವಷಿ, ಚೆರಿಯನ್ ಚೆರಿಯನ್, ತಮಿಳವನ್, ಅರ್ಷಾದ್ ಬತೇರಿ, ಪುಲಿಯಾನ್ ಪರಮೇಶ್ವರ್ ಪಿಳ್ಳೆ ಮುಂತಾದವರು ಬರೆದಿರುವ ಕನ್ನಡನುವಾದದ ಕಥೆಗಳಲ್ಲಿ ದಲಿತ ಸಂವೇದನೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಈ ಕಥೆಗಳು ಕೂಲಿಜನಗಳ ಸಂಕಷ್ಟಗಳನ್ನು ಕುರಿತು, ಸ್ಮಶಾನದಲ್ಲಿ ಬಂದ ಹೆಣಗಳನ್ನು ಮಣ್ಣು ಮಾಡಿ ಅನ್ನ ಕಾಣುವವನ ದುಸ್ಥಿತಿ, ಬರಗಾಲದ ಸಂದರ್ಭದಲ್ಲಿ ಬಡವರು ಪಡುತ್ತಿರುವ ಹಸಿವಿನ ವೇದನೆ, ಬಡವರಿಗೆ ಜೀವರಿನ ಬೆಲೆ ಸಿಗದಿರುವುದು, ಬಡರೈತನು ಮಳೆ ನಂಬಿಕೊಂಡು ಬದುಕನ್ನು ನಡೆಸಬೇಕಾದಾಗ ಆತ ಅನುಭವಿಸುವ ತೊಂದರೆಗಳು, ನಿರಾಶ್ರಿತರ ಕುಟುಂಬವು

ಹಸಿವಿನಿಂದ ನರಳಾಡುವ ಬಗೆಯನ್ನು, ಸಾಮಾನ್ಯ ಬೀದಿಕೂಲಿಗಳು ಅನುಭವಿಸುತ್ತಿರುವ ತೊಂದರೆಗಳು, ಜೀತವನ್ನಾಗಿಟ್ಟುಕೊಂಡು ಜಮಿನ್ದಾರರು ನಡೆಸುವ ದೌರ್ಜನ್ಯಗಳು, ಬಡತನದಿಂದ ಮೂಲಭೂತ ಸೌಕರ್ಯಗಳಿಂದ ವಂಚಿತರಾದ ದಲಿತರ ಬದುಕನ್ನು, ಅನ್ನಕ್ಕಾಗಿ ಸತ್ತ ಹೆಣವನ್ನೇ ಕಾಯುತ್ತ ಕುಳಿತಿರುವವನ ಶೋಚನಿಯ ಸ್ಥಿತಿ, ಕೆಳ ವರ್ಗದವರ ಮೇಲೆ ಮೇಲ್ವರ್ಗದವರು ನಡೆಸುತ್ತಿರುವ ಅನ್ಯಾಯ, ವರ್ಣವ್ಯವಸ್ಥೆಯಿಂದಾಗಿ ದಲಿತರು ಅವಮಾನದಿಂದ ಅನುಭವಿಸುತ್ತಿರುವ ಜಾತಿ ವ್ಯವಸ್ಥೆ, ಶ್ರೇಷ್ಠ–ಕನಿಷ್ಟ ಎಂಬ ಭಾವನೆಯಿಂದಾದ ಸಾಮಾಜಿಕ ಅಶಾಂತಿ, ಅಸ್ಪೃಶ್ಯತೆಯ ಅವಮಾನ, ಬಂಡವಾಳಶಾಹಿಗಳಿಂದಾದ ದಲಿತರಿಗೆ ಆರ್ಥಿಕ ಶೋಷಣೆ, ವರ್ಗಭೇದ–ವರ್ಣಭೇದಗಳಿಂದಾಗಿ ದಲಿತರ ಸಾಮಾಜಿಕ ಸ್ಥಾನ ಮಾನಗಳು, ದಲಿತರ ಅಸಹಾಯಕ ಸ್ಥಿತಿಯನ್ನು ತಿಳಿದ ಉಳ್ಳವರು ಮಾಡುವ ಹಿಂಸಾತ್ಮಕ ಚಟುವಟಿಕೆಗಳು, ದಲಿತರಿಗೆ ಸಿಗದಿರುವ ಮೂಲಭೂತ ಹಕ್ಕುಗಳು ಇತ್ಯಾದಿಗಳಿಂದ ದಲಿತರು ಪಡುತ್ತಿರುವ ಮಾನಸಿಕ ಮತ್ತು ದೈಹಿಕ ಶೋಷಣೆಯ ಹಿಂಸೆಗಳನ್ನು ಕುರಿತು ಈ ಕಥೆಗಳು ತಮ್ಮ ಸಂವೇದನೆಯನ್ನು ಅಭಿವ್ಯಕ್ತಿಸುತ್ತವೆ.

ನಾಲ್ಕನೆಯ ಅಧ್ಯಾಯವು 'ಕನ್ನಡ ಅನುವಾದಿತ ಕಥೆಗಳು : ಮಹಿಳಾ ಸಂವೇದನೆ' ಎಂಬುದಾಗಿದ್ದು ಇದರಲ್ಲಿ ದಲಿತ ಮಹಿಳೆಯರ ತಲ್ಲಣವನ್ನು ಅಭಿವ್ಯಕ್ತಿಸಿದ ತೆಲುಗು, ತಮಿಳು, ಮಲಿಯಾಳಿ, ಮರಾಠಿ ಅನುವಾದಿತ ಕಥೆಗಳನ್ನು ಅಧ್ಯಯನ ಮಾಡಲಾಗಿರುತ್ತದೆ. ಈ ಭಾಷೆಗಳ ಲೇಖಕರಾದ ಕಮಲಾದಾಸ್, ಓಲ್ಗಾ, ರಾಜಾಜಿ, ಮಹಾದೇವ್ ಮೋರೆ, ಪಲಮನೆಯ ಬಾಲಾಜಿ, ಸಿತಾರಾ ಎಸ್, ಶರಣಕುಮಾರ ಲಿಂಬಾಳೆ, ಛಾಸು, ಮಾಮಾ ವರೇರಕರ, ಜಯಕಾಂತನ್ ಡಿ, ಪುನತ್ತಿಲ್ ಕುಂಞಬ್ದುಲ್, ಕುಪ್ಪಲಿ ಪದ್ಮ, ಅಶೋಕ ಮಿತ್ರನ್, ಬಾಬೂರಾವ್ ಬಾಗೂಲ, ಲಕ್ಷ್ಮಣ ಗಾಯಕವಾಡ್ ಮುಂತಾದವರು ಬರೆದಿರುವ ಮಹಿಳಾ ಸಂವೇದನೆವುಳ್ಳ ಕಥೆಗಳನ್ನು ನನ್ನ ಸಂಶೋಧನಾ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ಈ ಕಥೆಗಳು ದಲಿತ ಮಹಿಳೆಯರು ಸಾಮಾಜಿಕ ಅಸಮಾನತೆಯಿಂದ ತನ್ನ ಬಡತನದ ಹಸಿವನ್ನು ಹಿಂಗಿಸಿಕೊಳ್ಳುವದಕ್ಕಾಗಿ ವೇಶ್ಯಾವೃತ್ತಿಯ ಚಟುವಟಿಕೆಗಳಲ್ಲಿ ಭಾಗಿಯಾಗುವುದನ್ನು, ಮಹಿಳೆಯರನ್ನು ಕೇವಲ ಅವರ ದೇಹವನ್ನು ಭೋಗದ ಸರಕುಯೆಂದು ತಿಳಿದುಕೊಂಡು ಅತ್ಯಾಚಾರವನ್ನು ಮಾಡುವುದು, ಮಹಿಳೆಯು ಸ್ವತಂತ್ರತೆಯಿಂದ ಬದುಕುವುದಕ್ಕೆಂದು ಹೋದ ಕಡೆ ಅವಳನ್ನು ಕಾಣುವ ಕಾಮದ ಕಣ್ಣುಗಳನ್ನು, ಮಹಿಳೆಯನ್ನು ಶೋಷಿಸಲೆಂದೇ ದೇವದಾಸಿ ಪದ್ಧತಿಯನ್ನು ದಲಿತರ ಮೇಲೆ ಮೌಢ್ಯಾಚಾರಗಳನ್ನು ಹೇರುವುದು, ದಲಿತ ಮಹಿಳೆಯರನ್ನು ಸ್ವತಂತ್ರವಾಗಿ ಸ್ವಾಭಿಮಾನದಿಂದ ಬದುಕಲು ಬಂಡವಾಳಶಾಹಿಗಳು ಬಿಡದಿರುವುದು, ಬಡತನದ ಹಸಿವಿನಿಂದ ತನ್ನ ದೇಹವನ್ನು ದಲಿತ ಮಹಿಳೆಯರು ವ್ಯಾಪಾರದಂತೆ ಮಾಡಿಕೊಳ್ಳುವುದು, ಅನಾಥೆಯಾದ ಮಹಿಳೆಯನ್ನು ಅಸ್ಪೃಶ್ಯತೆಯ ಕಾರಣದಿಂದ ಕುಟುಂಬದಿಂದ ಬಹಿಷ್ಕರಿಸುವುದು, ದಲಿತ ಮಹಿಳೆಯರೆಂದರೆ ಮಸಿಬಟ್ಟೆಯಂತೆ ಉಪಯೋಗಿಸಿಕೊಂಡು ಬಿಸಾಕುವುದು, ದಲಿತ ಮಹಿಳೆಯರಲ್ಲಿರುವ ಅಕ್ಷರದರಿವಿನ

ಕೊರತೆಯಿಂದ ಮೋಸ ವಂಚನೆಯನ್ನು ಮಾಡುವುದು, ದಲಿತ ಮಹಿಳೆಯರ ಆರ್ಥಿಕ ಅಭದ್ರತೆಯನ್ನು ಅರಿತ ಉಳ್ಳವರು ಅವರ ಮೇಲೆ ಮಾಡುವ ಶೋಷಣೆಗಳನ್ನು ಇಲ್ಲಿರುವ ಕಥೆಗಳೆಲ್ಲ ದಲಿತ ಮಹಿಳಾ ಸಂವೇದನೆಯ ನೆಲೆಯಲ್ಲಿ ಅಭಿವ್ಯಕ್ತಗೊಂಡಿರುತ್ತವೆ.

ಅದರಂತೆ ಐದನೆಯ ಅಧ್ಯಾಯದಲ್ಲಿ ಕನ್ನಡದ ಶ್ರೇಷ್ಠ ಕಥೆಗಾರರಾದ ದೇವನೂರ ಮಹದೇವ, ಮೊಗಳ್ಳಿ ಗಣೇಶ್, ಅರವಿಂದ ಮಾಲಗತ್ತಿ, ಕುಂ.ವೀರಭದ್ರಪ್ಪ, ಚನ್ನಣ್ಣ ವಾಲೀಕಾರ್, ಬೆಸಗರಹಳ್ಳಿ ರಾಮಣ್ಣ, ಪಿ.ಲಂಕೇಶ್, ಹಳೇಮನೆ ರಾಜಶೇಖರ್, ಎಚ್.ಎಸ್. ಬೇನಾಳ್ ಮುಂತಾದವರು ಬರೆದಿರುವ ಕನ್ನಡ ದಲಿತ ಕಥೆಗಳಲ್ಲಿರುವ ದಲಿತ ಸಮುದಾಯದ ಸಂವೇದನೆಯ ನೆಲೆಗಳಿಗೂ ಇತರೆ ಭಾಷೆಗಳ ಲೇಖಕರಾದ ಕಮಲಾದಾಸ್, ತಮಿಳವನ್, ಪಾಲಗುಮ್ಮಿ ಪದ್ಮರಾಜು, ರಾವೂರಿ ಭರಧ್ವಾಜ, ಶರಣಕುಮಾರ ಲಿಂಬಾಳೆ, ಓಲ್ಗಾ, ಜಯಕಾಂತನ್, ಬಾಬೂರಾವ್ ಗಾಯಕ್‌ವಾಡ್, ರಾಸಾನಿ, ನೀಲಪದ್ಮನಾಭನ್, ಚೆರಿಯನ್ ಚೆರಿಯನ್, ಶ್ರೀ ಪವಣ್ಣನ್ ಮುಂತಾದವರ ಕಥೆಗಳಲ್ಲಿರುವ ದಲಿತ ಸಂವೇದನೆಗಳಿಗೆ ಇರುವ ಸಂವೇದನೆಯ ಸ್ವರೂಪ ಅದರ ತಾತ್ವಿಕತೆಯನ್ನು ತೌಲನಿಕವಾಗಿರಚಿಸಿಕೊಳ್ಳಲಾಗಿದೆ.

ಆರನೇಯ ಅಧ್ಯಾಯದಲ್ಲಿ ಇಡೀ ನನ್ನ ಸಂಶೋಧನಾ ಪ್ರಬಂಧದ ಒಟ್ಟು ಅಧ್ಯಯನದ ಫಲಶೃತಿಯನ್ನು ವಿವರಿಸಿದ್ದೇನೆ. ಭಾರತದ ಸ್ವತಂತ್ರ ಸಂವಿಧಾನಾತ್ಮಕ ಆಡಳಿತ ವ್ಯವಸ್ಥೆಯಲ್ಲಿ ಎಪ್ಪತ್ನಾಲ್ಕು ವರ್ಷಗಳು ಕಳೆದರೂ ದಲಿತರಿಗೆ ಇನ್ನೂ ಬದುಕಲು ಸ್ವತಂತ್ರ ಸಿಗದೆ, ಶೋಷಣೆಯ ಬಲೆಯಲ್ಲಿ ನರಳಾಡುತ್ತಿರುವುದು ನೋವಿನ ಸಂಗತಿಯಾಗಿದೆ. ಇಂತಹ ಬರಹಗಾರರ ಕಥೆಗಳ ಸಂವೇದನೆಯಿಂದ ರಾಷ್ಟ್ರದಲ್ಲಿರುವ ಅಸಮಾನತೆಯ ವ್ಯವಸ್ಥೆ ಬದಲಾಗಬೇಕಾಗಿದೆ. ದಲಿತರು ಸ್ವಾಭಿಮಾನದಿಂದ ಸಮಾನತೆಯ ಬದುಕನ್ನು ಹೊಂದಿ, ಭಾರತೀಯ ಸಂವಿಧಾನದ ಆಶಯಗಳನ್ನು ನೆರವೇರಿಸಬೇಕಾಗಿದೆ. ದಲಿತರಿಂದಲೇ ದೇಶ ಬಲಿಷ್ಠವಾಗಲು ಸಾಧ್ಯ. ದಲಿತರ ಏಳಿಗೆಯನ್ನು ಸಾಧಿಸುವುದೇ ಸರಕಾರದ ಸಾಧನೆಯಾಗಬೇಕು.

# ಅಭ್ಯಾಸ ಗ್ರಂಥಗಳು


೧. ಅಖಿಲನ್ (ಸಂ)/ಶೇಷ ನಾರಾಯಣ (ಅ)–ತಮಿಳು ಕಥಾ ಸೌರಭ – ಸಾಹಿತ್ಯ ಅಕಾಡಮಿ ನವ ದೆಹಲಿ – ೨೦೦೦.

೨. ಅಚ್ಯುತ ಭಾಗವತ (ಸಂ) / ಲ.ಜಿ. ಬೇಂದ್ರೆ (ಅ) – ಮರಾಠಿ ಸಣ್ಣ ಕಥೆಗಳ ಕಣಜ – ಸಾಹಿತ್ಯ ಅಕಾಡಮಿ ನವ ದೆಹಲಿ – ೧೯೭೫.

೩. ಅರವಿಂದ ಮಾಲಗತ್ತಿ – ಸುವರ್ಣ ಕಥಾ ಸಂಕಲನ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೦೬.

೪. ಅಶೋಕ ಮಿತ್ರನ್ (ಮೂ) / ತಮಿಳ್ ಸೆಲ್ವಿ (ಅ) – ಅಶೋಕ ಮಿತ್ರನ್ ಅವರ ಕಥೆಗಳು – ಕರ್ನಾಟಕ ಅನುವಾದ ಸಾಹಿತ್ಯ ಅಕಾಡಮಿ ಬೆಂಗಳೂರು – ೨೦೦೭.

೫. ಅರ್ಷಾದ್ ಬತೇರಿ (ಮೂ) / ಪಾರ್ವತಿ ಜಿ. ಐತಾಳ್ (ಅ) – ಭೂಮಿಯಷ್ಟು ಬದುಕು – ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು –೨೦೧೩.

೬. ಆನಂದ ತೇಲ್‌ತುಂಬ್ಡೆ – ಅಂಬೇಡ್ಕರೋತ್ತರ ದಲಿತ ಸಂಘರ್ಷ – ಚಿಂತನಾ ಪುಸ್ತಕ ಪ್ರಕಾಶನ ಬೆಂಗಳೂರು – ೨೦೦೯.

೭. ಇಲ್ಲಿಂದಲ ಸರಸ್ವತಿದೇವಿ (ಮೂ) / ವೇಣುಗೋಪಾಲ್ (ಅ) – ಸ್ವರ್ಣಕಮಲಗಳು – ಸಾಹಿತ್ಯ ಅಕಾಡಮಿ ನವ ದೆಹಲಿ – ೨೦೦೪.

೮. ಓಲ್ಗಾ (ಮೂ) / ಜಿ. ವೀರಭದ್ರ ಗೌಡ (ಅ) – ರಾಜಕೀಯ ಕಥೆಗಳು – ಸೃಷ್ಟಿ ಪಬ್ಲಿಕೇಷನ್ಸ ವಿಜಯನಗರ ಬೆಂಗಳೂರು – ೨೦೧೦.

೯. ಕಮಲಾದಾಸ್ (ಮೂ) / ಕೆ.ಕೆ. ಗಂಗಾಧರನ್ (ಅ) – ಡಾ. ಕಮಲಾದಾಸ್ ರವರ ಸಮಗ್ರ ಕಥೆಗಳು ಸಂಪುಟ –೧ – ಹೇಮಂತ ಸಾಹಿತ್ಯ ಪ್ರಕಾಶನ ಬೆಂಗಳೂರು – ೨೦೧೩.

೧೦. ಕಮಲಾದಾಸ್ (ಮೂ) / ಪಾರ್ವತಿ ಜಿ. ಐತಾಳ್ (ಅ) – ನನ್ನ ಚೀರಾಳಜ್ಜನ ಕಡುಗತ್ತಿಮತ್ತು ಇತರ ಮಲಿಯಾಳಿ ಕಥೆಗಳು – ಶ್ರೀನಿವಾಸ್ ಪುಸ್ತಕ ಪ್ರಕಾಶನ ಬೆಂಗಳೂರು– ೨೦೧೨

೧೧. ಕಮಲಾದಾಸ್ (ಮೂ) / ಕೆ.ಕೆ. ಗಂಗಾಧರನ್ (ಅ) – ಕಮಲಾದಾಸ್ ಕಥೆಗಳು – ಲಂಕೇಶ ಪ್ರಕಾಶನ ಬಸವನ ಗುಡಿ ಬೆಂಗಳೂರು – ೨೦೦೯.

೧೨. ಕಮಲಾದಾಸ್ (ಮೂ) / ಸುಬ್ರಮಣ್ಯ (ಅ) – ಕೌದಿ ಮತ್ತು ಇತರ ಅನುವಾದಿತ ಕಥೆಗಳು – ಗೋಮಿನಿ ಪ್ರಕಾಶನ ಶಾಂತಿ ನಗರ ತುಮಕೂರು – ೨೦೧೮.

೧೩. ಕರೀಗೌಡ ಬೀಚನಹಳ್ಳಿ (ಸಂ) / ಶ್ರೀ ಕೃಷ್ಣ ಭಟ್ ಅರ್ತಿಕಜೆ (ಅ) – ಮಲಿಯಾಳಂ ಸಣ್ಣ ಕಥೆಗಳು – ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೦೪.

೧೪. ಕಾರ್ಲಮಾರ್ಕ್ಸ – ಶೋಷಣೆಯ ಮೂಲ – ಕ್ರಿಯಾ ಪ್ರಕಾಶನ ಬೆಂಗಳೂರು – ೨೦೧೩.

೧೫. ಕುಂಞಬ್ದುಲ್ ಪುನತ್ತಿಲ್ (ಮೂ) – ವೆಂ. ಗೋಪಾಲಕೃಷ್ಣ (ಅ) – ಕಂದರ (ಆಯ್ದ ಮಲಿಯಾಳಂ ಕಥೆಗಳು) – ವಿದ್ಯಾಗಿರಿ ಪ್ರಕಾಶನ ಗೌರಿ ಬಿದನೂರು – ೧೯೮೩.

೧೬. ಗಣೇಶ್ ಮೊಗಳ್ಳಿ – ಮೊಗಳ್ಳಿ ಕಥೆಗಳು–ಸಪ್ನ ಬುಕ್ ಹೌಸ್ ಗಾಂಧೀನಗರ ಬೆಂಗಳೂರು – ೨೦೦೮.

೧೭. ಗಣೇಶ್ ಮೊಗಳ್ಳಿ – ದೇಸಿ ಕಥನ– ಅರುಹು ಕುರುಹು ಪ್ರಕಾಶನ ಮೈಸೂರು– ೨೦೧೬.

೧೮. ಗಣೇಶ್ ಮೊಗಳ್ಳಿ – ದಲಿತರು ಮತ್ತು ಜಾಗತೀಕರಣ – ಪ್ರಸಾರಾಂಗ ಕ.ವಿ.ವಿ. ಹಂಪಿ – ೧೯೯೯.

೧೯. ಗಂಗಾಧರ್ ಗಾಡಗೀಳ (ಮೂ) – ಚಂದ್ರಕಾಂತ್ ಪೋಕಳೆ (ಅ) – ಗಾಡಗೀಳರ ಆಯ್ದ ಕಥೆಗಳು – ವಿನ್‌ಷಾ ಎಂಟರ್ ಪ್ರೈಸಸ್ ಬೆಂಗಳೂರು – ೨೦೦೩.

೨೦. ಗಿರೀಶ್ ಜಕಾಪುರೆ (ಸಂ) / ಗಿರೀಶ್ ಚಂದ್ರಕಾಂತ್ ಜಕಾಪುರೆ (ಅ) – ಸದಾ ಪ್ರವಹಿಸುವ ಕಥೆಗಳು – ಸೃಷ್ಟಿ ಪಬ್ಲಿಕೇಷನ್ಸ್ ವಿಜಯನಗರ ಬೆಂಗಳೂರು – ೨೦೧೯.

೨೧. ಗಿರೀಶ್ ಜಕಾಪುರೆ (ಸಂ) / ಮಹೆಬೂಬ್ ಇಮಾಮ್ ಸಾಬ್ ಜಿಡ್ಡೆ (ಅ) – ಸದಾ ಪ್ರವಹಿಸುವ ಕಥೆಗಳು – ಸೃಷ್ಟಿ ಪಬ್ಲಿಕೇಷನ್ಸ್ ವಿಜಯನಗರ ಬೆಂಗಳೂರು – ೨೦೧೯.

೨೨. ಗುಪ್ತನ್ ನಾಯರ್ ಎಸ್. (ಸಂ) / ಕೆ.ಕೆ. ನಾಯರ್ (ಅ) – ಆಯ್ದ ಮಲಿಯಾಳಂ ಸಣ್ಣ ಕಥೆಗಳು – ಸಾಹಿತ್ಯ ಅಕಾಡಮಿ ನವ ದೆಹಲಿ – ೧೯೯೬.

೨೩. ಗುರುನಾಥ ಎಸ್.ಆರ್. – ದಲಿತ ಸಾಹಿತ್ಯ ಸಂಪುಟ ಸಣ್ಣ ಕಥೆ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೧೯.

೨೪. ಗುರುನಾಥ ಎಸ್.ಆರ್. – ಶೋಷಿತ ಜಗತ್ತು – ನವಕರ್ನಾಟಕ ಪ್ರಕಾಶನ ಬೆಂಗಳೂರು – ೨೦೧೫.

೨೫. ಚಂದ್ರಶೇಖರ್ ಟಿ.ಆರ್. – ದಲಿತ ಅಧ್ಯಯನ – ಪ್ರಸಾರಾಂಗ ಕ.ವಿ.ವಿ. ಹಂಪಿ – ೨೦೦೫.

೨೬. ಚನ್ನಸ್ವಾಮಿ ಸೋಸಲೆ ಎನ್. – ಅಂಬೇಡ್ಕರವಾದ ಮತ್ತು ಪ್ರಸ್ತುತ ದಲಿತರು – ಸಪ್ನಬುಕ್ ಹೌಸ್ ಬೆಂಗಳೂರು – ೨೦೧೨.

೨೭. ಚೆನ್ನಣ್ಣ ವಾಲೀಕಾರ – ಸಮಗ್ರ ಕಥಾ ಸಂಪುಟ ಡಾ. ಚೆನ್ನಣ್ಣ ವಾಲೀಕಾರ – ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲಬರ್ಗಾ – ೨೦೦೩.

೨೮. ಚೆರಿಯನ್ ಚೆರಿಯನ್ (ಮೂ) / ಕೆ.ಕೆ. ನಾಯರ್ (ಅ) – ಪ್ರೇಮಿಸುವುದು ಎಂಬ ಹಕ್ಕು – ಸುಮಂತ ಪ್ರಕಾಶನ ಉಪ್ಪಿನ ಕೋಟೆ ಬ್ರಹ್ಮಾವರ (ಉಡುಪಿ) – ೨೦೦೧.

೨೯. ಭಾಸು (ಮೂ) / ಸೊಂದಲಗೆರೆ ಲಕ್ಷ್ಮೀಪತಿ (ಅ) – ಶ್ರೇಷ್ಠ ಅನುವಾದಿತ ಕಥೆಗಳು – ಕಾವ್ಯಕಲಾ ಪ್ರಕಾಶನ ವಿಜಯ ನಗರ ಬೆಂಗಳೂರು – ೨೦೧೫.

೩೦. ಜಯಕಾಂತನ್ ಡಿ. (ಮೂ) / ಡಾ.ಪಾ.ಶ. ಶ್ರೀನಿವಾಸ್ (ಅ) – ಪ್ರಸಾದ (ತಮಿಳು ಸಣ್ಣ ಕಥೆಗಳ ಸಂಕಲನ) – ಪ್ರಿಯದರ್ಶಿನಿ ಪ್ರಕಾಶನ ಹಂಪಿನಗರ ಬೆಂಗಳೂರು – ೨೦೦೭.

೩೧. ಜಯಕಾಂತನ್ (ಮೂ) / ಡಿ. ಜಯಕಾಂತನ್ (ಸಂ) – ಜಯಕಾಂತನ್ ಅವರ ಕಥೆಗಳು – ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಹೊಸ ದೆಹಲಿ – ೧೯೭೩.

೩೨. ಜಯಪ್ರಕಾಶ್ ಬಂಜಗೆರಿ (ಸಂ) / ಮಾಸ್ತಿ ಕೃಷ್ಣಪ್ಪ (ಅ) – ಮೊರಸುನಾಡು ಕಥೆಗಳು – ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡ ಭವನ ಬೆಂಗಳೂರು – ೨೦೧೭.

೩೩. ಜವರಯ್ಯ ಮ.ನ.– ಅಂಬೇಡ್ಕರ ಶೂದ್ರ ಮತ್ತು ಮಹಿಳೆಯರು – ಬಹುಜನ ಮಧ್ಯಮ ಕೇಂದ್ರ ಮೈಸೂರು – ೨೦೧೦.

೩೪. ತಮಿಳ ವನ್ (ಮೂ) – ಕೆ. ನಲ್ಲತಂಬಿ (ಅ) – ಹತ್ತು ತಮಿಳು ಕಥೆಗಳು – ಲಂಕೇಶ್ ಪ್ರಕಾಶನ ಬೆಂಗಳೂರು – ೨೦೧೬.

೩೫. ದಿವಾಕರ್ ಎಸ್. (ಸಂ) – ಪಿ. ಲಂಕೇಶ್ – ಶತಮಾನದ ಸಣ್ಣ ಕಥೆಗಳು – ಪ್ರೀಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು – ೨೦೧೧.

೩೬. ದಿವಾಕರ್ ಎಸ್. (ಸಂ) – ಈಶ್ವರ ಚಂದ್ರ – ಶತಮಾನದ ಸಣ್ಣ ಕಥೆಗಳು – ಪ್ರೀಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು – ೨೦೧೧.

೩೭. ದೇವಿ ಭಾರತಿ (ಮೂ) / ಶ್ರೀಮತಿ ಜಯಲಲಿತ (ಅ) – ಬಾಗಿಲು (ಈ ಹೊತ್ತಿನ ತಮಿಳಿ ಕಥೆಗಳು) – ಅಭಿನವ ಪ್ರಕಾಶನ ಬೆಂಗಳೂರು – ೨೦೦೭.

೩೮. ನಾಮದೇವ್ ಕಾಂಬಳೆ (ಮೂ) – ಡಿ.ಎಸ್. ಚೌಗತಿ (ಅ) – ನಿನ್ನ ಮೇಲೆ ಸಿಟ್ಟಿಲ್ಲ ಮಾಯೀ –ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ ಚಿತ್ರದುರ್ಗ – ೨೦೦೧.

೩೯. ನಾಗರಾಜ ಡಿ.ಆರ್. – ಉರಿ ಚಮ್ಮಾಳಿಗೆ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೧೫.

೪೦. ನಾಗೇಶ್ ನ. – ಕರ್ನಾಟಕ ಹಿಂದುಳಿದವರ ಮೀಸಲಾತಿ – ಪ್ರೆಸ್ ಕ್ಲಬ್ ಪ್ರಕಾಶನ ಬೆಂಗಳೂರು – ೨೦೧೨.

೪೧. ನಿರಂಜನ (ಮೂ) / ಜಿ.ಎಚ್. ನಾಯಕ್ (ಸಂ) – ಕನ್ನಡ ಸಣ್ಣ ಕಥೆಗಳು – ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಹೊಸ ದೆಹಲಿ – ೨೦೧೮.

೪೨. ಪದ್ಮ ಕುಪ್ಪಲಿ (ಮೂ) / ಗುರುಮೂರ್ತಿ ಪೆಂಡಕೂರು (ಅ) – ಅನುವಾದ ಕಥಾಂಜಲಿ – ಯುವಕರ ಸಂಘ ರಾಮನಗರ ಹಗರಿ ಬೊಮ್ಮನ ಹಳ್ಳಿ – ೨೦೦೮.

೪೩. ಪದ್ಮರಾಜು ಪಾಲಗುಮ್ಮಿ (ಮೂ) / ಆರ್ಬ್ವಿಯಸ್ ಸುಂದರಂ (ಅ) – ಬಿರುಗಾಳಿ –ಸಾಹಿತ್ಯ ಅಕಾಡಮಿ ನವ ದೆಹಲಿ – ೨೦೦೦.

೪೪. ಪವಣ್ಣನ್ ಶ್ರೀ (ಮೂ) / ಬಿ.ಎಸ್. ಖೂಬಾ (ಅ) –ಕಥಾ ಭಾರತಿ – ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಗುಲಬರ್ಗಾ – ೨೦೦೮.

೪೫. ಪೋನ್ ಕುನ್ನಂ ವರ್ಕಿ (ಮೂ) / ಕೆ.ಎಸ್. ಕರುಣಾಕರನ್ (ಅ) – ಮಲಿಯಾಳಂ ಕಥೆಗಳು – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೧೯೭೨.

೪೬. ಬಸವರಾಜು ಜಿ.ಪಿ. – ಬೆತ್ತಲೆಯ ಬೆಳಕನುಟ್ಟು (ಕಥಾ ಸಂಕಲನ) – ಅಹರ್ನಿಶಿ ಪ್ರಕಾಶನ ಶಿವಮೊಗ್ಗ – ೨೦೧೫.

೪೭. ಬಾಬೂರಾವ್ ಗಾಯಕ್‌ವಾಡ್ (ಮೂ) / ವಿಜಯ ಆರ್.ಕಾಂಬಳೆ (ಅ) – ಮನುಷ್ಯರನ್ನು ಹುಡುಕುತ್ತ – ಲಡಾಯಿ ಪ್ರಕಾಶನ ಗದಗ – ೨೦೧೦.

೪೮. ಬಾಬೂರಾವ್ ಬಾಗೂಲ (ಮೂ) / ಚಂದ್ರಕಾಂತ್ ಪೋಕಳೆ (ಅ) –ನಾನು ಜಾತಿ ಕದ್ದಾಗ – ವಸಂತ ಪ್ರಕಾಶನ ಜಯನಗರ ಬೆಂಗಳೂರು – ೨೦೧೭.

೪೯. ಮಹದೇವ ಮೋರೆ (ಮೂ) / ಚಂದ್ರಕಾಂತ್ ಪೋಕಳೆ (ಅ) – ಆಧುನಿಕ ಮರಾಠಿ ಕಥೆಗಳು – ಭಾಗ್ಯಲಕ್ಷ್ಮೀ ಪ್ರಕಾಶನ ಬನಶಂಕರಿ ಬೆಂಗಳೂರು – ೨೦೦೬.

೫೦. ಮರಾಠೆ ಹ.ಮೊ. (ಮೂ) / ರತ್ನಾಕರ ಶೆಟ್ಟಿ (ಅ) – ಮರಾಠಿ ಕಥಾ ಸಂಹಿತೆ – ಸಪ್ನ ಬುಕ್ ಹೌಸ್ ಗಾಂಧಿನಗರ ಬೆಂಗಳೂರು – ೨೦೧೩.

೫೧. ಮಹದೇವ ದೇವನೂರ – ಎಲ್ಲ ಕಥೆ ಕಾದಂಬರಿಗಳು ದೇವನೂರ ಮಹದೇವ – ಅಭಿನವ ಪ್ರಕಾಶನ ವಿಜಯನಗರ ಬೆಂಗಳೂರು – ೨೦೧೫

೫೨. ಮಂಜು ಕೋಡಿಉಗನೆ – ಬೆಟ್ಟ ಬೇಗೆ –ಜೋಳಿಗಿ ಪ್ರಕಾಶನ ಚಾಮರಾಜ ನಗರ – ೨೦೧೬.

೫೩. ಮಹೇಶ್ ಸಿ.ಕೆ. – ದಲಿತ ಚರಿತ್ರೆ ಮತ್ತು ಬುದ್ಧಧರ್ಮ – ವಿಮೋಚನಾ ಪ್ರಕಾಶನ ಚಿತ್ರದುರ್ಗ – ೨೦೦೬.

೫೪. ಮಾರಿ ಅರವಷಿ (ಮೂ) / ಡಿ.ಎನ್. ಶ್ರೀನಾಥ (ಅ) – ಇಪ್ಪತ್ತು ಭಾರತೀಯ ಕಥೆಗಳು – ಸಿರಿಗನ್ನಡ ಪುಸ್ತಕ ಮನೆ ಶಿವಮೊಗ್ಗ – ೨೦೧೨.

೫೫. ಮುಕುಂದನ್ ಎಮ್. (ಮೂ) / ಕೆ.ಕೆ. ಗಂಗಾಧರನ್ (ಅ) – ಗೌರಿ (ಮಲಯಾಳಂ ಕಥಾ ಸಂಕಲನ) – ಕ್ರೈಸ್ಟ್ ಯುನಿವರ್ಸಿಟಿ ಕನ್ನಡ ಸಂಘ ಬೆಂಗಳೂರು – ೨೦೧೧.

೫೬. ಮುನಿ ವೆಂಕಟಪ್ಪ ವಿ. – ದಲಿತ ಚಳುವಳಿ ಚರಿತ್ರೆ – ರಚನಾ ಪ್ರಕಾಶನ ಮೈಸೂರು – ೨೦೧೨.

೫೭. ಮೋಹನ್ ಕುಂಟಾರ್ – ಅನುವಾದ ಸಾಹಿತ್ಯ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು – ೨೦೧೫.

೫೮. ರಂಗನಾಥನ್ ಮ. (ಮೂ) / ತಮಿಳ್ ಸೆಲ್ವಿ (ಅ) – ಮ. ರಂಗನಾಥನ್ ಕಥೆಗಳು – ಡಾ.ಎಮ್. ಭೈರೇಗೌಡ ಪ್ರಗತಿ ಗ್ರಾಫಿಕ್ಸ್ ಬೆಂಗಳೂರು – ೨೦೧೩.

೫೯. ರಾಜಶೇಖರ ಹಳೇಮನೆ – ಸುವರ್ಣ ಕಥಾ ಸಂಕಲನ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೦೬.

೬೦. ರಾವೂರಿ ಭರಧ್ವಾಜ (ಮೂ) / ಎಚ್.ಎಸ್.ಸುಜಾತ (ಅ) – ಜೀವನ ಸಮರ (ನೊಂದವರ ಸತ್ಯ ಕಥೆಗಳು) – ಸಾಹಿತ್ಯ ಅಕಾಡಮಿ ನವ ದೆಹಲಿ – ೨೦೦೦.

೬೧. ರಾಮಣ್ಣ ಬೆಸಗರ ಹಳ್ಳಿ – ಸುವರ್ಣ ಕಥಾ ಸಂಕಲನ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು – ೨೦೦೬.

೬೨. ರಾಸಾನಿ (ಮೂ) / ಟಿ.ಡಿ. ರಾಜಣ್ಣ ತಗ್ಗಿ (ಅ) – ರಾಸಾನಿ ಕಥೆಗಳು – ಧಾತ್ರಿ ಪುಸ್ತಕ ಮಾಲೆ ನಾಗರಬಾವಿ ಬೆಂಗಳೂರು – ೨೦೦೮.

೬೩. ವಾಸುದೇವನ್ ನಾಯರ್ (ಮೂ) / ಮೋಹನ್ ಕುಂಟಾರ್ (ಅ) – ವಾಸುದೇವನ್ ನಾಯರ್ ಕಥೆಗಳು – ಇಳಾ ಪ್ರಕಾಶನ ಬೆಂಗಳೂರು – ೨೦೦೧.

೬೪. ವಿಜಯಶ್ರೀ ಸಬರದ (ಸಂ) – ಆಧುನಿಕ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ ಸಂಪುಟ –೨ ಸಣ್ಣ ಕಥೆ – ಪ್ರಸಾರಾಂಗ ಕರ್ನಾಟಕ ರಾಜ್ಯ ಮಹಿಳಾ ವಿಶ್ವ ವಿದ್ಯಾಲಯ ವಿಜಾಪುರ – ೨೦೧೩.

೬೫. ವಿಜಯಕುಮಾರ್ ಸಿಗರನ ಹಳ್ಳಿ / ಬೂದಿಯಾಗದ ಕೆಂಡ – ಅಹರ್ನಿಶಿ ಪ್ರಕಾಶನ ಶಿವಮೊಗ್ಗ– ೨೦೧೫.

೬೬. ವೀರಭದ್ರಪ್ಪ ಕುಂ. – ಬರೀ ಕಥೆಯಲ್ಲೊ ಅಣ್ಣಾ ಕುಂ.ವೀ. ಕಥೆಗಳು – ಸಪ್ನ ಬುಕ್ ಹೌಸ್ ಬೆಂಗಳೂರು – ೨೦೧೦.

೬೭. ವೀರಯ್ಯ ಡಿ.ಎಸ್. – ದಲಿತ ಚಿಂತನೆ – ಪಿತಾಮಹ ಪ್ರಕಾಶನ ಬೆಂಗಳೂರು – ೨೦೧೦.

೬೮. ವೆಂಕಟ ಸುಬ್ಬಯ್ಯ (ಸಂ) / ಲಿಂಗದೇವರು ಹಳೇಮನೆ (ಅ) – ತಮಿಳು ಕಥಾ ಸಂಕಲನ –ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ ಬೆಂಗಳೂರು – ೧೯೮೮.

೬೯. ವೆಂಕಟ ಸುಬ್ಬಯ್ಯ ಜಿ. (ಸಂ) / ವೀರಭದ್ರ (ಅ) – ತೆಲುಗು ಕಥಾ ಸಂಕಲನ – ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ ಬೆಂಗಳೂರು – ೧೯೮೮.

೭೦. ವೇಣು ಜುಜ್ಜುರಿ (ಮೂ) – ದೇವಕಪಿ ನಾ ಧನಪಾಲ (ಅ) – ತಣ್ಣೀರ ಬಟ್ಟೆಯ ಬಿಸಿ – ಕನಸು ಮನಸು ನನಸು ಪ್ರಕಾಶನ ನೆಲವಾಗಿಲು ಹೊಸಕೋಟೆ ತಾ. ಬೆಂಗಳೂರು ಗ್ರಾ. ಜಿ. – ೨೦೧೪.

೭೧. ಶರಣಕುಮಾರ ಲಿಂಬಾಳೆ (ಮೂ) / ಪ್ರಮೀಳಾ ಮಾಧವ್ (ಅ) – ಅಸ್ಪೃಶ್ಯ (ಕಥಾ ಸಂಕಲನ) – ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಬೆಂಗಳೂರು – ೨೦೧೮.

೭೨. ಶರಣಕುಮಾರ ಲಿಂಬಾಳೆ (ಮೂ) / ಪ್ರಮೀಳಾ ಮಾಧವ್ (ಅ) _ ದಲಿತ ಬ್ರಾಹ್ಮಣ – ಅಹರ್ನಿಶಿ ಪ್ರಕಾಶನ ವಿದ್ಯಾನಗರ ಶಿವಮೊಗ್ಗ – ೨೦೧೩.

೭೩. ಶ್ರೀರಾಮನ್ ಸಿ.ವಿ. (ಮೂ) / ಅಶೋಕ ಕುಮಾರ (ಅ) – ಸಿ.ವಿ. ರಾಮನ್ ಕಥೆಗಳು – ಸಾಹಿತ್ಯ ಅಕಾಡಮಿ ನವ ದೆಹಲಿ – ೨೦೦೫.

೭೪. ಸಾಯಿನಾಥ ಪಿ. (ಮೂ) / ಜಿ.ಎನ್. ಮೋಹನ್ (ಅ) – ದಲಿತರು ಬರುವರು ದಾರಿಬಿಡಿ – ಬಹುರೂಪಿ ಪ್ರಕಾಶನ ಬೆಂಗಳೂರು – ೨೦೧೮.

೭೫. ಸಿತಾರ ಎಸ್. (ಮೂ) / ಪಾರ್ವತಿ ಜಿ. ಐತಾಳ್ (ಅ) – ಮಲಿಯಾಳದ ಪ್ರಸಿದ್ಧ ಪೆಣ್ ಕಥೆಗಳು – ದೇಶಿ ಪುಸ್ತಕ ಪ್ರಕಾಶನ ವಿಜಯನಗರ ಬೆಂಗಳೂರು – ೨೦೧೬.

೭೬. ಸಿತಾರ ಎಸ್. (ಮೂ) / ಪಾರ್ವತಿ ಜಿ. ಐತಾಳ್ (ಅ) – ಮಲಿಯಾಳದ ಮಹಿಳಾ ಕಥನ –ದೇಶಿ ಪುಸ್ತಕ ವಿಜಯನಗರ ಬೆಂಗಳೂರು – ೨೦೧೮.

೭೭. ಸಿದ್ಧರಾಮಯ್ಯ ಎಸ್.ಜಿ. (ಸಂ) – ಹನುಮಂತ ಹಾಲಗೇರಿ – ನವಲೇಖನ ಕನ್ನಡ ಕಥೆಗಳು – ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಹೊಸದೆಹಲಿ – ೨೦೧೬.

೭೮. ಸಿದ್ಧರಾಮಯ್ಯ ಎಸ್.ಜಿ. (ಸಂ) – ಜಡೇ ಕುಂಟೆ ಮಂಜುನಾಥ – ನವಲೇಖನ ಕನ್ನಡ ಕಥೆಗಳು – ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಹೊಸದೆಹಲಿ – ೨೦೧೬.

೭೯. ಸಿಂಪಿಗೇರ ಪಿ.ಎಸ್.– ದಲಿತರ ಒಡಲ ಕಿಚ್ಚು – ಹಂಸ ಪ್ರಕಾಶನ ಬೆಂಗಳೂರು – ೨೦೧೬.

೮೦. ಸುಮಲತಾ ಆಕಳವಾಡಿ – ಮಹಿಳಾ ಬದುಕಿನ ಮಜಲುಗಳು–ಸಿದ್ಧರಾಮೇಶ್ವರ ಅಕ್ಷರ ಪ್ರಕಾಶ ಕೊಪ್ಪಳ– ೨೦೦೭.

೮೧. ಸುಮಿತ್ರಬಾಯಿ ಬಿ.ಎನ್. – ಸ್ತ್ರೀ ವಾದ – ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು – ೨೦೦೬.

೮೨. ಸೋಮ ಸುಂದರಂ ಮಿ.ಪಾ. (ಸಂ)/ ಶೇಷ ನಾರಾಯಣ್ (ಅ) – ಕಥಾ ಭಾರತಿ ತಮಿಳು ಕಥೆಗಳು – ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ಹೊಸದೆಹಲಿ – ೧೯೭೧.

೮೩. ಹಣಮಂತ್ರಾಯ ಬೇನಾಳ (ಎಚ್.ಎಸ್. ಬೇನಾಳ) – ಬಹಿಷ್ಕಾರ (ಕಥಾ ಸಂಕಲನ) – ಸಹನಾ ಪ್ರಕಾಶನ ಕಲಬುರಗಿ – ೨೦೧೮.

* * * *

